ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ
# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಉತ್ತರಖಂಡ—ನಾಲ್ಕನೆಯ ಭಾಗ

(೧೨೬--೧೮೮ ಅಧ್ಯಾಯಗಳು)



ಅನುವಾದಕ:

**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ**

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು:

ಶ್ರೀ ಹನುಮಾನ್ ಪ್ರೆಸ್

೧೯೬೫

॥ ಶ್ರೀಃ ॥

–X–

# ಮುನ್ನುಡಿ



ಶ್ರೀ ಪದ್ಮಮಹಾಪುರಾಣದ ಉತ್ತರಖಂಡವನ್ನು ಓದುಗರ ಅನುಕೂಲಕ್ಕಾಗಿ ಭಾಗಗಳಾಗಿ ವಿಂಗಡಿಸುತ್ತಿದ್ದೇನೆಂದು ವಿಜ್ಞಾಪಿಸಿಕೊಂಡಿದ್ದೆನಷ್ಟೆ. ಅದರಂತೆ ಈಗ ೧೨೬ ನೇ ಅಧ್ಯಾಯದಿಂದ ೧೮೮ ನೇ ಅಧ್ಯಾಯದವರೆಗೆ ಈ ನಾಲ್ಕನೆಯ ಭಾಗವನ್ನು ವಿಂಗಡಿಸಿದ್ದೇನೆ.

ಇದರಲ್ಲಿ ಮೊದಲು ವಿಷ್ಣುಭಕ್ತಿಯ ಲಕ್ಷಣವೂ, ಅವನಲ್ಲಿ ಭಕ್ತಿಯಿಲ್ಲದಿದ್ದರೆ ಉಂಟಾಗುವ ತೊಂದರೆಯೂ ನಿರೂಪಿತವಾಗಿದೆ. ಆ ಸ್ವಾಮಿಯನ್ನು ಸ್ಮರಿಸುವ ರೀತಿ ಆ ಸ್ಮರಣೆಯಿಂದ ಆಗುವ ಪ್ರಯೋಜನಗಳು ವಿವರಿಸಲ್ಪಟ್ಟಿವೆ.

ಅನಂತರ ಜಂಬೂದ್ವೀಪದ ಶ್ರೇಷ್ಠತೆಯನ್ನೂ, ಅದರಲ್ಲಿರುವ ತೀರ್ಥಗಳ ಮಹಿಮೆಯನ್ನೂ ವಿವರಿಸುತ್ತಾ, ಸಾಭ್ರಮತಿ (ಸಬರಮತಿ) ನದಿಯುದ್ದಕ್ಕೂ ಇರುವ ಕ್ಷೇತ್ರಗಳನ್ನೂ, ಅವುಗಳಲ್ಲಿ ಯಾವ ಯಾವ ಕಾಲದಲ್ಲಿ ಸ್ನಾನ ಮಾಡಬೇಕು? ಹಾಗೆ ಸ್ನಾನ ಮಾಡಿದುದರಿಂದ ಪ್ರಯೋಜನವೇನು? ಆ ಪ್ರಯೋಜನ ಹೊಂದಿದವರು ಯಾರು? ಎಂಬಿವುಗಳೆಲ್ಲವೂ ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ.

ಈ ರೀತಿಯಾಗಿ ಸಾಭ್ರಮತಿಯು ಹುಟ್ಟುವ ಜಾಗದಿಂದ ಹಿಡಿದು ಸಮುದ್ರವನ್ನು ಸೇರುವವರೆವಿಗೂ ಇರುವ ತೀರ್ಥಗಳು ವರ್ಣಿತವಾಗಿವೆ. ಈ ತೀರ್ಥಗಳ ವರ್ಣನೆಯನ್ನು ನೋಡಿದರೆ, "ಇವುಗಳಲ್ಲೊಂದನ್ನೂ ಉಪಯೋಗಿಸಿಕೊಳ್ಳದೆ ಬಿಡಬಾರದು" ಎಂದು ಮನಸ್ಸಿಗೆ ಬಾರದಿರಲಾರದು.

ಪ್ರಸಿದ್ಧವಾದ ಮಹಾಭಾರತದಲ್ಲಿ ಕೌರವ ಪಾಂಡವರಿಗೆ ಮಹಾಯುದ್ಧವು ನಡೆದುದು ವರ್ಣಿತವಾಗಿದೆಯಷ್ಟೆ! ಅದರಲ್ಲಿ ಅರ್ಜುನನು ಕೌರವನನ್ನು ಕೊಲ್ಲಲು ಹಿಂದೆಗೆದಾಗ "ಮಯೈವ ನಿಹತಾಃ ಪೂರ್ವಂ" "ನಿಮಿತ್ತ ಮಾತ್ರಂ ಭವ ಸವ್ಯಸಾಚಿ" ಇತ್ಯಾದಿ ವಾಕ್ಯಗಳನ್ನು ಹೇಳುತ್ತ ಶ್ರೀ ಕೃಷ್ಣನು ಪ್ರಸಿದ್ಧವಾದ ಗೀತಾಶಾಸ್ತ್ರವನ್ನು ಉಪದೇಶಿಸಿ ತನ್ನ ವಿಶ್ವರೂಪವನ್ನು ತೋರಿಸಿರುವನು.

ಆ ಗೀತೆಯ ಮಹತ್ವವೆಂಥಾದ್ದು ಎಂಬಂಶವನ್ನು ವಿಮರ್ಶಿಸಿ, ಅದರ ಒಂದೊಂದು ಅಧ್ಯಾಯವೂ ಅಮೂಲ್ಯವಾದುದೆಂದು ಹೇಳುತ್ತಾ, ಅವುಗಳಿಗೆ ಒಂದೊಂದು ಕಥೆಯನ್ನು ಹೇಳುತ್ತಾ, ಅದನ್ನು ದೃಢಪಡಿಸಿ ಈ ಗೀತೆಯ ಹದಿನೆಂಟು ಅಧ್ಯಾಯಕ್ಕೂ, ಹದಿನೆಂಟು ಕಥೆಗಳನ್ನು ಉದಾಹರಿಸಿ ಪ್ರಯೋಜನವನ್ನು ವಿವರಿಸಿದ್ದಾನೆ ಇದರಿಂದ ಗೀತೆಯು ಎಷ್ಟು ಉಪಯುಕ್ತವಾದುದು ! ಅದನ್ನು ನಿತ್ಯವೂ ಪಾರಾಯಣ ಮಾಡಲೇಬೇಕೆಂಬುದು ದೃಢೀಕೃತವಾಗುತ್ತದೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ಜನಸಾಮಾನ್ಯರಿಗೂ ಜ್ಞಾನಾಮೃತಪಾನವು ಸುಲಭದಲ್ಲಿ ದೊರಕುವಂತೆ ಲೋಕೋಪಕಾರಮಾಡುತ್ತಲಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಎಸ್ ಐ.** ಮಹಾಪ್ರಭುಗಳವರಿಗೆ ಭಗವಂತನು ಆಯುರಾರೋಗ್ಯ ಸತ್ಸಂತಾನಗಳನ್ನು ಕೊಟ್ಟು ಕಾಪಾಡಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು, ಅನುವಾದಕ,
15—12—1945 **ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



# ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ನಾಲ್ಕನೆಯ ಭಾಗದ
## ವಿಷಯಾನುಕ್ರಮಣಿಕೆ.



ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ





|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಡ್ವಿಂಶತ್ಯಧಿಕಶತತಮೋऽಧ್ಯಾಯಃ ||



|| ಶ್ರೀಪಾರ್ವತ್ಯುವಾಚ ||

**ಶ್ರುತಂ ಕಾರ್ತಿಕಮಾಹಾತ್ಮ್ಯಂ ವಿಶೇಷೇಣ ಮಯಾ ವಿಭೋ ।**
**ಅಧುನಾ ಶ್ರೋತುಮಿಚ್ಛಾಮಿ ಮುಕ್ತಿದಂ ಕರ್ಮ ಚೋತ್ತಮಂ || ೧ ||**

**ಶ್ರೇಷ್ಠಾ ಭಕ್ತಿಸ್ತು ಕಾ ಪ್ರೋಕ್ತಾ ವದ ವಿಶ್ವೇಶ್ವರ ಪ್ರಭೋ ।**
**ಯೇನ ವಿಜ್ಞಾನಮಾತ್ರೇಣ ನರಾಸ್ಸುಖಮವಾಪ್ನುಯುಃ || ೨ ||**

---

## ನೂರ ಇಪ್ಪತ್ತಾರನೆಯ ಅಧ್ಯಾಯವು



೧. ಶ್ರೀ ಪಾರ್ವತಿಯು ಹೇಳಿದಳು–ಎಲೈ ಸ್ವಾಮಿಯೆ! ಕಾರ್ತಿಕ ಮಹಿಮೆಯನ್ನು ನಿನ್ನಿಂದ ಈಗ ಕೇಳಿದೆನು. ಈಗ ಉತ್ತಮವಾದ ಮುಕ್ತಿಯನ್ನು ಕೊಡುವ ಬೇರೆಯ ಧರ್ಮವನ್ನು ಕೇಳಲು ಇಚ್ಛಿಸುತ್ತೇನೆ.

೨. ಎಲೈ ವಿಶ್ವೇಶ್ವರನೇ! ಯಾವುದನ್ನು ಭಕ್ತಿಯೆಂದು ಕರೆಯುತ್ತಾರೆ? ಯಾವುದನ್ನು ತಿಳಿಯುವುದರಿಂದಲೇ ಮನುಷ್ಯರು ಸುಖವನ್ನು ಹೊಂದುತ್ತಾರೆ? ಅದನ್ನು ಹೇಳು.

॥ ಮಹಾದೇವ ಉವಾಚ ॥

ತಲ್ಲೀನಚಿತ್ತಸ್ಸಪುಮನ್ಸ್ಯಾ ಭಕ್ತಿಃ ಪರಮಾ ಮತೌ ।
ದಯಾ ಧರ್ಮಪರೋ ನಿತ್ಯಂ ವಿಷ್ಣುಧರ್ಮೇಷು ತತ್ಪರಃ ॥ ೩ ॥

ಫಲಮೂಲಜಲಾಹಾರೀ ಶಂಖಚಕ್ರಪ್ರಧಾರಕಃ ।
ತ್ರಿಕಾಲಂ ಪೂಜಯೇದ್ವಿಷ್ಣುಂ ಸಾ ಭಕ್ತಿಸ್ಸಾತ್ವಿಕೀ ಮತಾ ॥ ೪ ॥

ಉತ್ತಮಾ ಸಾತ್ವಿಕೀ ಪ್ರೋಕ್ತಾ ರಾಜಸೀ ಚೈವ ಮಧ್ಯಮಾ ।
ಕನಿಷ್ಠಾ ತಾಮಸೀ ಚೈವ ತ್ರಿವಿಧಾ ಸಾ ಪ್ರಕೀರ್ತಿತಾ ॥ ೫ ॥

ಶ್ರೀಹರೌ ತು ಪ್ರಕರ್ತವ್ಯಾ ಮುಕ್ತಿಕಾಮಫಲೇಪ್ಸುಭಿಃ ।
ಅಹಂಕಾರೇಣ ರೂಪೇಣ ದಂಭಮಾತ್ಸರ್ಯಮೇವ ಚ ॥ ೬ ॥

ಯೇ ಕುರ್ವಂತಿ ಜನಾ ಭಕ್ತಿಂ ತಾಮಸೀ ಸಾಹುದಾಹೃತಾ ।
ಪರಸ್ಯೋತ್ಸಾದನಾರ್ಥಾಯ ದಂಭಮುದ್ದಿಶ್ಯ ಚಾಥ ವಾ ॥ ೭ ॥

---

೩. ಮಹಾದೇವನು ಹೇಳಿದನು-ಯಾವನು ಕೆಲಸಮಾಡುತ್ತಿರುವಾಗ ಅದರಲ್ಲಿಯೇ ನಟ್ಟಿರುವ ಮನಸ್ಸುಳ್ಳವನಾಗುತ್ತಾನೆಯೋ ಅದೇ ಭಕ್ತಿಯೆಂದು ಎನಿಸುತ್ತದೆ. ಅವನು ದಯೆ ಧರ್ಮಗಳನ್ನು ಬಲ್ಲವನಾಗಿ ವಿಷ್ಣುಧರ್ಮದಲ್ಲಿ ಆಸಕ್ತನಾಗಿರಬೇಕು.

೪. ಹಣ್ಣು ಗಡ್ಡೆ ನೀರನ್ನೇ ಆಹಾರವಾಗಿ ಉಪಯೋಗಿಸುತ್ತ ಶಂಖ ಚಕ್ರಗಳನ್ನು ಧರಿಸಿಕೊಂಡು ಮೂರುಹೊತ್ತು ವಿಷ್ಣುವನ್ನು ಪೂಜಿಸುತ್ತಿದ್ದರೆ ಅದೇ ಸಾತ್ವಿಕವಾದ ಭಕ್ತಿಯು.

೫. ಭಕ್ತಿಯನ್ನು ಉತ್ತಮ ಮಧ್ಯಮ ಕನಿಷ್ಠಗಳೆಂದು ಮೂರು ಬಗೆಯನ್ನಾಗಿ ವಿಂಗಡಿಸಬಹುದು. ಸಾತ್ವಿಕ ಭಕ್ತಿಯು ಉತ್ತಮವಾದುದು. ರಾಜಸೀ ಭಕ್ತಿಯು ಮಧ್ಯಮವು. ತಾಮಸೀ ವೃತ್ತಿಯು ಕನಿಷ್ಠವು.

೬-೧೦. ಮುಕ್ತಿಯನ್ನು ಅಪೇಕ್ಷಿಸುವವರು ಹರಿಯಲ್ಲಿ ಭಕ್ತಿಯನ್ನಿಡಬೇಕು. ಅಹಂಕಾರವನ್ನು ಹೊಂದಿ ಇತರರು ನೋಡಲು ದಂಭಾಚಾರವನ್ನು ಮಾಡುತ್ತ ಇಲ್ಲವೇ ಪರರ ಮೇಲಿನ ಅಸೂಯೆಯಿಂದ ಹರಿಭಕ್ತಿಯನ್ನು ತೋರಿಸುತ್ತ ಬಂದರೆ ಆ ಭಕ್ತಿಯು ತಾಮಸೀ ಭಕ್ತಿಯು. ಇತರರನ್ನು ನಾಶಮಾಡಲು ಉದ್ದೇಶಪಟ್ಟಾಗಲೀ ಬೂಟಾಟಿಕೆಯಿಂದಾಗಲೀ ದೇವರಲ್ಲಿ

**ಯಾ ಭಕ್ತಿಃ ಕ್ರಿಯತೇ ದೇವೇ ತಾಮಸೀ ಸಾತ್ರ ಕೀರ್ತಿತಾ ।**
**ವಿಷಯಾನ್ಪ್ರತಿಸಂಧಾಯ ಯಶ ಐಶ್ವರ್ಯಮೇವ ಚ ॥ ೮ ॥**

**ಅರ್ಚಾದಾವರ್ಚಯೇದ್ಯೋ ಮಾಂ ಪೃಥಗ್ಭಾವಸ್ಸ ರಾಜಸಃ ।**
**ಕರ್ಮಕ್ಷಯಾರ್ಥೇ ಕರ್ತವ್ಯಾ ಬ್ರಾಹ್ಮಣೈರ್ಜ್ಞಾನತತ್ಪರೈಃ ॥ ೯ ॥**

**ವಿಷ್ಣೋರ್ಹ್ಯಾತ್ಮಾರ್ಪಣೇ ಬುದ್ಧಿಃ ಸಾ ಭಕ್ತಿಸ್ಸಾತ್ವಿಕೀ ಮತಾ ।**
**ಅತೋ ವೈ ಸರ್ವಥಾ ದೇವಿ ಸಂಸೇವ್ಯಃ ಸರ್ವದಾ ಹರಿಃ ॥ ೧೦ ॥**

**ತಾಮಸೇನೈವ ಭಾವೇನ ತಾಮಸತ್ವಂ ಹಿ ಲಭ್ಯತೇ ।**
**ರಾಜಸತ್ವಂ ರಾಜಸೇನ ಸಾತ್ವಕೇನ ತು ಸಾತ್ವಿಕಂ ॥ ೧೧ ॥**

**ವೇದಾಧ್ಯಾಯರತಶ್ಶ್ರೀವರ್ಮಾ ರಾಗದ್ವೇಷವಿವರ್ಜಿತಃ ।**
**ಶಂಖಚಕ್ರಧರೋ ವಿಪ್ರಃ ಸರ್ವದಾ ಶುಚಿರುಚ್ಯತೇ ॥ ೧೨ ॥**

---

ಭಕ್ತಿಯನ್ನು ತೋರಿಸಿದರೆ ಅದು ತಾಮಸೀ ಭಕ್ತಿಯು. ವಿಷಯಗಳನ್ನು ಉದ್ದೇಶಿಸಿಯಾಗಲಿ ಎಂದರೆ ತನಗೆ ಬೇಕಾದ ಮಕ್ಕಳ ಆರೋಗ್ಯ ಅವರಿಗೆ ಆಯುಸ್ಸುಗಳನ್ನು ಕುರಿತಾಗಲಿ ಐಶ್ವರ್ಯವನ್ನು ಹೊಂದಬೇಕೆಂದು ಆಗಲಿ ಸ್ವಾಮಿಯನ್ನು ಉದ್ದೇಶಿಸಿ ಪೂಜಿಸಿದರೆ ಆ ಭಕ್ತಿಯು ರಾಜಸಿ ಎನಿಸುತ್ತದೆ. ತನ್ನ ಹಿಂದಿನ ಜನ್ಮದ ಕರ್ಮದ ನಾಶಕ್ಕೋಸ್ಕರವಾಗಿ ಜ್ಞಾನಿಗಳಾದವರು ವಿಷ್ಣುವಿನಲ್ಲಿ ಮನಸ್ಸಿಟ್ಟು ಮಾಡುವ ಭಕ್ತಿಯು ಸಾತ್ವಿಕೀ ಎಂದೆನಿಸುತ್ತದೆ. ಆದ್ದರಿಂದಲೇ ಸರ್ವಪ್ರಕಾರದಿಂದಲೂ ಸರ್ವಕಾಲದಲ್ಲಿಯೂ ಆ ಹರಿಯನ್ನು ಸೇವಿಸಬೇಕು.

೧೧. ತಾಮಸ ಸ್ವಭಾವದಿಂದ ಮನುಷ್ಯನು ತಾಮಸ ಭಾವವನ್ನೂ ರಾಜಸತ್ವದಿಂದ ರಾಜಸ ಭಾವವನ್ನೂ ಸಾತ್ವಿಕ ಭಾವದಿಂದ ಸಾತ್ವಿಕ ಭಾವವನ್ನೂ ಹೊಂದುತ್ತಾನೆ.

೧೨. ವೇದಾಧ್ಯಯನ ಮಾಡುತ್ತ ಶುಚಿಯಾಗಿ ಕಾಮಕ್ರೋಧ ದ್ವೇಷಗಳನ್ನು ಬಿಟ್ಟು ಶಂಖಚಕ್ರಗಳನ್ನು ಧರಿಸಿರುವ ಬ್ರಾಹ್ಮಣನು ಯಾವಾಗಲೂ ಶುಚಿ ಎನ್ನಿಸಿಕೊಳ್ಳುತ್ತಾನೆ.

ಕರ್ಮಕಾಂಡಪ್ರವೃತ್ತೋ ಯಃ ಸರ್ವದಾ ವಿಷ್ಣುನಿಂದಕಃ ।
ನಿಂದಕಸ್ತಜ್ಜನಾನಾಂ ಚ ಮಹಾಚಂಡಾಲ ಉಚ್ಯತೇ ॥ ೧೩ ॥

ವೇದಾಧ್ಯಾಯರತಾ ನಿತ್ಯಂ ನಿತ್ಯಂ ವೈ ಯಜ್ಞಯಾಜಕಾಃ ।
ಅಗ್ನಿಹೋತ್ರರತಾ ನಿತ್ಯಂ ವಿಷ್ಣುಧರ್ಮಪರಾಙ್ಮುಖಾಃ ॥
ನಿಂದಂತಿ ವಿಷ್ಣುಭಕ್ತಾಂಶ್ಚ ವೇದಾಬಾಹ್ಯಾಃ ಸುರೇಶ್ವರೀ ॥ ೧೪ ॥

ಕುರ್ವಂತಿ ಶಾಂತಿಂ ವಿಬುಧಾಃ ಪ್ರಹೃಷ್ಟಾಃ
ಕ್ಷೇಮಂ ಪ್ರಕುರ್ವಂತಿ ಪಿತಾಮಹಾದ್ಯಾಃ ।
ಸ್ವಸ್ತಿ ಪ್ರಯಚ್ಛಂತಿ ಮುನೀಂದ್ರಮುಖ್ಯಾಃ
ಗೋವಿಂದಭಕ್ತಿಂ ವಹತಾಂ ನರಾಣಾಂ ॥ ೧೫ ॥

ಶುಭಾ ಗ್ರಹಾ ಭೂತಪಿಶಾಚಯುಕ್ತಾ
ಬ್ರಹ್ಮಾದಯೋ ದೇವಗಣಾಃ ಪ್ರಸನ್ನಾಃ ।
ಲಕ್ಷ್ಮೀಃ ಸ್ಥಿರಾ ತಿಷ್ಠತಿ ಮಂದಿರೇ ಚ
ಗೋವಿಂದಭಕ್ತಿಂ ವಹತಾಂ ನರಾಣಾ ॥ ೧೬ ॥

---

೧೩. ಕರ್ಮಕಾಂಡದಲ್ಲಿ ಹೇಳಿರುವಂತೆ ಕರ್ಮಗಳನ್ನು ಮಾಡುತ್ತ ವಿಷ್ಣುವನ್ನೂ ವಿಷ್ಣುವಿನ ಭಕ್ತರನ್ನೂ ನಿಂದಿಸುವವನು ಮಹಾಚಾಂಡಾಲನೆನಿಸಿ ಕೊಳ್ಳುತ್ತಾನೆ.

೧೪. ಎಲೈ ಪಾರ್ವತಿಯೇ! ಯಾವಾಗಲೂ ವೇದಾಧ್ಯಯನ ಮಾಡುತ್ತಿದ್ದರೂ ಯಾವಾಗಲೂ ಯಜ್ಞಯಾಗಗಳನ್ನು ಮಾಡುತ್ತಿದ್ದರೂ ಅಗ್ನಿಹೋತ್ರವನ್ನು ಬಿಡದೆ ಮಾಡುತ್ತಿದ್ದರೂ ಅವನು ವಿಷ್ಣು ಧರ್ಮದಲ್ಲಿ ವಿಮುಖನಾಗಿ ವಿಷ್ಣುಭಕ್ತರನ್ನು ನಿಂದಿಸುತ್ತಿದ್ದರೆ ಅವನನ್ನು ವೇದಬಾಹ್ಯನೆಂದು ತಿಳಿಯಬೇಕು.

೧೫. ಗೋವಿಂದನಲ್ಲಿ ಭಕ್ತಿಯನ್ನು ಹೊಂದಿರುವ ಮನುಷ್ಯನಿಗೆ ದೇವತೆಗಳು ಶಾಂತಿಯನ್ನೂ ಪಿತಾಮಹಾದಿಗಳು ಕ್ಷೇಮವನ್ನೂ ಮುನೀಂದ್ರರು ಶಾಂತಿಯನ್ನೂ ಮಾಡುತ್ತಾರೆ.

೧೬. ಗೋವಿಂದನಲ್ಲಿ ಭಕ್ತಿಯನ್ನು ಇಟ್ಟಿರುವವರಿಗೆ ಗ್ರಹಗಳೂ ಭೂತಪಿಶಾಚಗಳೂ ಶುಭವನ್ನುಂಟುಮಾಡುತ್ತವೆ. ಬ್ರಹ್ಮನೇ ಮೊದಲಾದ ದೇವತೆಗಳು ಪ್ರಸನ್ನರಾಗುತ್ತಾರೆ. ಲಕ್ಷ್ಮಿಯು ಯಾವಾಗಲೂ ಮನೆಯಲ್ಲಿಯೇ ಇರುತ್ತಾಳೆ.

ಗಂಗಾ ಗಯಾ ನೈಮಿಷಪುಷ್ಕರಾಣಿ
ಕಾಶೀಪ್ರಯಾಗಃ ಕುರುಜಾಂಗಲಾನಿ ।
ತಿಷ್ಠಂತಿ ದೇಹೇ ಕೃತಭಕ್ತಿಪೂರ್ವಂ ।
ಗೋವಿಂದಭಕ್ತಿಂ ವಹತಾಂ ನರಾಣಾಂ || ೧೭ ||

ಏವಮಾರಾಧಯೇದ್ವಿದ್ವಾನ್ ಭಗವಂತಂ ಶ್ರೀಯಾ ಸಹ ।
ಕೃತಕೃತ್ಯೋಭವೇನ್ನಿತ್ಯಂ ಸ ವಿಪ್ರೋ ನಾತ್ರ ಸಂಶಯಃ || ೧೮ ||

ಕ್ಷತ್ರಿಯೋ ವಾಥ ವೈಶ್ಯೋ ವಾ ಶೂದ್ರೋ ವಾ ಸುರಸತ್ತಮೇ ।
ಭಕ್ತಿಂ ಕುರ್ವನ್ವಿಶೇಷೇಣ ಮುಕ್ತಿಂ ಯಾತಿ ನ ಸಂಶಯಃ || ೧೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ
ಸಂವಾದೇ ವಿಷ್ಣು ಭಕ್ತಿ ಮಹಿಮ ಕಥನಂ ನಾಮ
ಷಡ್ವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೭. ಗೋವಿಂದನಲ್ಲಿ ಭಕ್ತಿಯುಳ್ಳವರ ದೇಹದಲ್ಲಿ ಗಂಗೆ ಗಯೆ ನೈಮಿಷ ಪುಷ್ಕರ ಕಾಶಿ ಪ್ರಯಾಗ ಕುರುಜಾಂಗಲ ಇವು ಭಕ್ತಿಯಿಂದ ಇರುತ್ತವೆ.

೧೮. ಈ ರೀತಿಯಾಗಿ ಜ್ಞಾನಿಯಾದವನು ಲಕ್ಷ್ಮಿಯೊಡನೆ ಕೂಡಿದ ಆ ಭಗವಂತನನ್ನು ಆರಾಧಿಸಿದರೆ ಕೃತಕೃತ್ಯನಾಗುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ.

೧೯. ಎಲೈ ಪಾರ್ವತಿಯೇ ! ಕ್ಷತ್ರಿಯನಾಗಲೀ ವೈಶ್ಯನಾಗಲಿ ಶೂದ್ರನೇ ಆಗಲೀ ಯಾರೇ ಆಗಲಿ ವಿಷ್ಣುವಿನಲ್ಲಿ ಭಕ್ತಿಯನ್ನಿಟ್ಟರೆ ಅವನು ಮುಕ್ತಿಯನ್ನು ಹೊಂದುತ್ತಾನೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ವಿಷ್ಣು ಭಕ್ತಿ ಮಹಿಮ ಕಥನ ಎಂಬ
ನೂರ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಪಾರ್ವತ್ಯುವಾಚ ॥

ಸಾಲಗ್ರಾಮಶಿಲಾ ಶುದ್ಧಾ ಮೂರ್ತಯಸ್ಸನ್ತಿ ಭೂತಳೇ ।
ತಾಸಾಂ ಚೈವ ತು ಮೂರ್ತೀನಾಂ ಪೂಜನೇ ಕತಿಧಾ ಸ್ಮೃತಾಃ ॥ ೧ ॥

ಬ್ರಾಹ್ಮಣೈಃ ಕತಿ ಪೂಜ್ಯಾಸ್ತಾಃ ಕ್ಷತ್ರಿಯೈರ್ವಾ ಸುರೇಶ್ವರ ।
ವೈಶ್ಯೈರ್ವಾಽಪಿ ಕಥಂ ಶೂದ್ರೈಃ ಸ್ತ್ರೀಭಿರ್ವಾಽಪಿ ಸಮಾದಿಶ ॥ ೨ ॥

---

## ನೂರ ಇಪ್ಪತ್ತೇಳನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು-ಶುದ್ಧವಾಗಿರುವ ಸಾಲಿಗ್ರಾಮ ಮೂರ್ತಿಗಳು ಲೋಕದಲ್ಲಿ ಅನೇಕವಾಗಿವೆಯಷ್ಟೆ! ಆ ಮೂರ್ತಿಗಳನ್ನು ಪೂಜಿಸುವುದರಲ್ಲಿ ಎಷ್ಟು ವಿಧಗಳಿವೆ ?

೨. ಬ್ರಾಹ್ಮಣರು ಯಾವುದನ್ನು ಪೂಜೆಮಾಡಬೇಕು ? ಕ್ಷತ್ರಿಯರು ಯಾವುದನ್ನು ಪೂಜೆಮಾಡಬೇಕು ? ವೈಶ್ಯರು ಯಾವುದನ್ನು ಪೂಜೆಮಾಡಬೇಕು ? ಶೂದ್ರರೂ ಹೆಂಗಸರೂ ಯಾವುದನ್ನು ಪೂಜಿಸಬೇಕು ? ಎಂಬುದನ್ನು ಹೇಳು.

|| ಮಹಾದೇವ ಉವಾಚ ||

ಸಾಲಗ್ರಾಮಶಿಲಾ ಪುಣ್ಯಾ ಪವಿತ್ರಾ ಧರ್ಮಕಾರಿಣೀ ।
ಯಸ್ಯಾ ದರ್ಶನಮಾತ್ರೇಣ ಬ್ರಹ್ಮಹಾ ಶುದ್ಧ್ಯತೇ ನರಃ || ೩ ||

ತದ್ಗೃಹಂ ಸರ್ವತೀರ್ಥಾನಾಂ ಪ್ರವರಂ ಶ್ರುತಿನೋದಿತಂ ।
ಯತ್ರೇಯಂ ಸರ್ವದಾ ಮೂರ್ತಿಃ ಸಾಲಗ್ರಾಮಮಯೀ ಶುಭಾ || ೪ ||

ಬ್ರಾಹ್ಮಣೈಃ ಪಂಚ ಪೂಜ್ಯಾಸ್ತಾಶ್ಚತಸ್ರಃ ಕ್ಷತ್ರಿಯೈಸ್ತಥಾ ।
ವೈಶ್ಯೈಶ್ಚತಿ ಸಸ್ಸಂಪೂಜ್ಯಾ ಏಕಾ ಶೂದ್ರೇಣ ಯತ್ನತಃ || ೫ ||

ತಸ್ಯಾಃ ಪೂಜನಮಾತ್ರೇಣ ಶೂದ್ರೋ ಮುಕ್ತಿಮವಾಪ್ನುಯಾತ್ ।
ಅನೇನ ಕ್ರಮಯೋಗೇಣ ಯೇ ನರಾಃ ಪೂಜಯಂತಿ ವೈ || ೬ ||

ಭೋಗಾನ್ಸರ್ವಾಂಸ್ತು ತೇ ಭುಕ್ತ್ವಾ ಯಾನ್ತಿ ವಿಷ್ಣೋಸ್ಸನಾತನಂ ।
ಇಯಂ ಸಾ ಮಹತೀ ಮೂರ್ತಿಃ ಸರ್ವದಾ ಪಾಪಹಾರಿಣೀ || ೭ ||

---

೩. ಮಹಾದೇವನು ಹೇಳಿದನು–ಸಾಲಗ್ರಾಮ ಶಿಲೆಯು ಪುಣ್ಯಪ್ರದವಾದುದು. ಪವಿತ್ರವಾದುದು. ಧರ್ಮವನ್ನು ಕೊಡತಕ್ಕದ್ದು. ಅದನ್ನು ನೋಡುವುದರಿಂದಲೇ ಬ್ರಹ್ಮಹತ್ಯೆ ಮಾಡಿದವನೂ ಕೂಡ ಶುದ್ಧನಾಗುತ್ತಾನೆ

೪. ಆ ಸಾಲಗ್ರಾಮವಿರುವ ಮನೆಯು ಎಲ್ಲಾ ತೀರ್ಥಗಳಲ್ಲಿಯೂ ಶ್ರೇಷ್ಠವಾದುದೆಂದು ವೇದದಲ್ಲಿಯೇ ಹೇಳಿದೆ. ಆ ಮನೆಯು ಅಂತಹ ಪವಿತ್ರವಾಗುತ್ತದೆ.

೫. ಬ್ರಾಹ್ಮಣರು ಐದು ಬಗೆಯಾದುದನ್ನೂ ಕ್ಷತ್ರಿಯರು ನಾಲ್ಕು ಬಗೆಯಾದುದನ್ನೂ ವೈಶ್ಯರು ಮೂರು ಬಗೆಯಾದುದನ್ನೂ ಶೂದ್ರರು ಒಂದು ಬಗೆಯಾದುದನ್ನೂ ಪೂಜಿಸಬೇಕು.

೬. ಆ ಸಾಲಗ್ರಾಮದ ಶಿಲೆಯನ್ನು ಪೂಜೆಮಾಡಿದರೆ ಶೂದ್ರನೂ ಮುಕ್ತಿಯನ್ನು ಹೊಂದುತ್ತಾನೆ. ಈ ರೀತಿಯಾದ ಕ್ರಮದಿಂದ ಜನರು ಸಾಲಗ್ರಾಮವನ್ನು ಪೂಜಿಸಬೇಕು.

೭. ಹಾಗೆ ಪೂಜಿಸಿದವರು ಭೋಗಗಳೆಲ್ಲವನ್ನೂ ಅನುಭವಿಸಿ ಸನಾತನವಾದ ವಿಷ್ಣುವಿನ ಪದವಿಯನ್ನು ಅನುಭವಿಸುತ್ತಾರೆ. ಈ ಸಾಲಗ್ರಾಮವೆಂಬುದು ಬಹು ಉತ್ತಮವಾದ ಮೂರ್ತಿಯು. ಎಲ್ಲಾ ಪಾಪಗಳನ್ನೂ ಹಾಳುಮಾಡುತ್ತದೆ.

ಕೈವಲ್ಯಫಲದಾ ದೇವಿ ಜಾಯತೇ ಪೂಜನೇನ ಸಾ ।
ತತ್ರ ಗಂಗಾ ಚ ಯಮುನಾ ಗೋದಾವರೀ ಸರಸ್ವತೀ ॥ ೮ ॥

ತಿಷ್ಠತ್ಯೇಷಾ ಶಿಲಾ ಯತ್ರ ಸರ್ವಂ ತತ್ರ ನ ಸಂಶಯಃ ।
ಕಿಮತ್ರ ಬಹುನೋಕ್ತೇನ ಭೂಯೋ ಭೂಯೋ ವರಾನನೇ ॥ ೯ ॥

ಪೂಜನಂ ಮನುಜೈಸ್ಸಮ್ಯಕ್ಕರ್ತವ್ಯಂ ಮುಕ್ತಿಮಿಚ್ಛುಭಿಃ ।
ಭಕ್ತಿಭಾವೇನ ದೇವೇಶಿ ಯೇಽರ್ಚಯಂತಿ ಜನಾರ್ದನಂ ॥ ೧೦ ॥

ತೇಷಾಂ ದರ್ಶನಮಾತ್ರೇಣ ಬ್ರಹ್ಮಹಾ ಶುದ್ಧ್ಯತೇ ಜನಃ ।
ದಾಸಭಾವೇನ ಯಶ್ಶೂದ್ರಃ ಸ್ವರ್ಚನಂ ಕುರುತೇ ಸದಾ ॥ ೧೧ ॥

ತಸ್ಯ ಪುಣ್ಯಂ ನ ಜಾನಾತಿ ಬ್ರಹ್ಮಾ ಚಾಪಿ ಸುರೇಶ್ವರಃ ।
ದಾಸಭಾವೇನ ಯೋ ವಿಪ್ರೋ ಹರಿಮರ್ಚಯತೇ ಸದಾ ॥ ೧೨ ॥

---

೮–೯. ಈ ಸಾಲಗ್ರಾಮವನ್ನು ಪೂಜಿಸಿದರೆ ಕೈವಲ್ಯವನ್ನು ಕೊಡುತ್ತದೆ. ಈ ಸಾಲಗ್ರಾಮವಿರುವ ಕಡೆಯಲ್ಲಿಯೇ ಗಂಗೆ ಯಮುನೆ ಗೋದಾವರಿ ಸರಸ್ವತಿ ಎಲ್ಲವೂ ಇರುತ್ತವೆ. ಎಲೈ ಪಾರ್ವತಿಯೇ! ಬಹಳ ಹೇಳುವುದರಿಂದೇನು ?

೧೦–೧೧. ಮುಕ್ತಿಯನ್ನು ಅಪೇಕ್ಷಿಸುವವರು ಈ ಸಾಲಗ್ರಾಮವನ್ನು ಚೆನ್ನಾಗಿ ಪೂಜೆಮಾಡಬೇಕು. ಭಕ್ತಿಯಿಂದ ಯಾರು ಈ ಸಾಲಗ್ರಾಮವನ್ನು ಪೂಜಿಸುತ್ತಾರೆಯೋ ಅವರ ದರ್ಶನಮಾತ್ರದಿಂದಲೇ ಬ್ರಹ್ಮಹತ್ಯೆ ಹೋಗುತ್ತದೆ. ದಾಸಭಾವದಿಂದ ಯಾವ ಶೂದ್ರನು ಆ ಸಾಲಗ್ರಾಮವನ್ನು ಪೂಜಿಸುತ್ತಾನೆಯೋ ಅವನ ಪುಣ್ಯವನ್ನು ಸುರೇಶ್ವರನಾದ ಬ್ರಹ್ಮನೂ ತಿಳಿಯನು.

೧೨. ದಾಸಭಾವದಿಂದ ಯಾವ ಬ್ರಾಹ್ಮಣನು ಪೂಜಿಸುವನೋ ಅವನು ನೂರು ಜನ್ಮಗಳವರೆಗೂ ಇಪ್ಪತ್ತೊಂದು ತಲೆಗಳನ್ನು ಉದ್ಧರಿಸುತ್ತಾನೆ.

ಏಕವಿಂಶತ್ಕುಲಂ ತೇನ ತಾರಿತಂ ಶತಜನ್ಮಸು ।
ಶಂಖಚಕ್ರಾಂಕಿತೋ ಯಸ್ತು ವಿಪ್ರಃ ಪೂಜನಮಾಚರೇತ್ || ೧೩ ||

ಪೂಜಿತಂ ತು ಜಗತ್ಸರ್ವಂ ತೇನ ವಿಷ್ಣುಪ್ರಪೂಜನಾತ್ ।
ಪಿತರಸ್ಸಂವದಂತ್ಯೇತತ್ಕುಲೇಸ್ಮಾಕಂ ತು ವೈಷ್ಣವಾಃ || ೧೪ ||

ಯೇ ಸ್ಯುಸ್ತೇಸ್ಮಾನ್ಸಮುದ್ಧೃತ್ಯ ನಯಂತೇ ವಿಷ್ಣುಮಂದಿರಂ ।
ಸ ಏವ ದಿವಸೋ ಧನ್ಯೋ ಧನ್ಯಾ ಮಾತಾಥ ಬಾಂಧವಾಃ || ೧೫ ||

ಪಿತಾ ತಸ್ಯ ಚ ವೈ ಧನ್ಯೋ ಯಸ್ತು ವಿಷ್ಣುಂ ಸಮರ್ಚಯೇತ್ ।
ಸರ್ವೇ ಧನ್ಯತಮಾ ಜ್ಞೇಯಾ ವಿಷ್ಣುಭಕ್ತಿಪರಾಯಣಾಃ || ೧೬ ||

ತೇಷಾಂ ದರ್ಶನಮಾತ್ರೇಣ ಮಹಾಪಾಪಾತ್ಪ್ರಮುಚ್ಯತೇ ।
ಉಪಪಾತಕಾನಿ ಸರ್ವಾಣಿ ಮಹಾಂತಿ ಪಾತಕಾನಿ ಚ || ೧೭ ||

---

೧೩. ಶಂಖ ಚಕ್ರಗಳನ್ನು ಧರಿಸಿಕೊಂಡು ಯಾವ ಬ್ರಾಹ್ಮಣನು ವಿಷ್ಣುವನ್ನು ಪೂಜಿಸುತ್ತಾನೆಯೋ ಆ ಪೂಜೆಯಿಂದ ಜಗತ್ತೇ ಪೂಜೆ ಹೊಂದಿದಂತೆ ಆಗುತ್ತದೆ.

೧೪. ಪಿತೃಗಳೂ ಕೂಡ ತಮ್ಮ ವಂಶದಲ್ಲಿ ವೈಷ್ಣವನಾದವನು ಹುಟ್ಟಿ ವಿಷ್ಣು ಪೂಜೆಯನ್ನು ಮಾಡಿ ನಮ್ಮನ್ನೂ ವೈಷ್ಣವ ಪದವನ್ನು ಹೊಂದಿಸುತ್ತಾನೆಯೋ ? ಎಂಬುದಾಗಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುವರು.

೧೫–೧೬. ಯಾವನು ಯಾವ ದಿವಸ ವಿಷ್ಣುವನ್ನು ಪೂಜಿಸುತ್ತಾನೆಯೋ ಆ ದಿನವೇ ಧನ್ಯವಾದುದು. ಅವನ ತಾಯಿ, ತಂದೆ, ಬಾಂಧವರೆಲ್ಲರೂ ವಿಷ್ಣು ಭಕ್ತಿಯುಳ್ಳವನ ಕಡೆಯುವರೆಲ್ಲರೂ ಧನ್ಯರೆಂದೇ ತಿಳಿ.

೧೭–೧೮. ಆ ವೈಷ್ಣವರ ದರ್ಶನದಿಂದ ಮಹಾಪಾಪಗಳೂ ಉಪಪಾತಕಗಳೂ ಎಲ್ಲವೂ ಹೋಗುತ್ತವೆ. ಮತ್ತೆ ಯಾವ ಬಗೆಯಾದ ಪಾಪಗಳಿವೆಯೋ

ತಾನಿ ಸರ್ವಾಣಿ ನಶ್ಯಂತಿ ವೈಷ್ಣವಾನಾಂ ಚ ದರ್ಶನಾತ್ ।
ಪಾವಕಾ ಇವ ದೀಪ್ಯಂತೇ ವಿಷ್ಣುಪೂಜಾ ರತಾ ನರಾಃ ॥ ೧೮ ॥

ವಿಮುಕ್ತಾಸ್ಸರ್ವಪಾಪೇಭ್ಯೋ ಮೇಘೇಭ್ಯ ಇವ ಚಂದ್ರಮಾಃ ।
ಆರ್ದ್ರಂ ಶುಷ್ಕಂ ಲಘು ಸ್ಥೂಲಂ ವಾಙ್ಮನಃಕರ್ಮಭಿಃ ಕೃತಂ ॥ ೧೯ ॥

ಮಹಾಪಾಪಾನಿ ನಶ್ಯಂತಿ ವೈಷ್ಣವಾನಾಂ ಸಮರ್ಚನಾತ್ ।
ಪ್ರಮಾದಿಕಂ ಚ ಯತ್ಪಾಪಂ ಜ್ಞಾನಾಜ್ಞಾನಕೃತಂ ಚ ಯತ್ ॥ ೨೦ ॥

ತತ್ಸರ್ವಂ ನಾಶಮಾಯಾತಿ ವೈಷ್ಣವೈಸ್ಸಹ ಭಾಷಣಾತ್ ।
ನಿಷ್ಪಾಪಾಸ್ತ್ರಿದಿವಂ ಯಾಂತಿ ಪಾಪಿಷ್ಠಾ ಯಾಂತಿ ಶುದ್ಧತಾಂ ॥ ೨೧ ॥

ದರ್ಶನಾದೇವ ಸಾಧೂನಾಂ ಸತ್ಯಂ ತುಭ್ಯಂ ಮಯೋದಿತಂ ।
ಸಂಸಾರಕರ್ದಮಾಲೇಪಪ್ರಕ್ಷಾಳನವಿಶಾರದಃ ।
ಪಾವನಃ ಪಾವನಾನಾಂ ಚ ವಿಷ್ಣುಭಕ್ತೋ ನ ಸಂಶಯಃ ॥ ೨೨ ॥

---

ಅವೆಲ್ಲವೂ ಹೋಗುತ್ತವೆ. ವಿಷ್ಣುವನ್ನು ಪೂಜಿಸುವ ಮನುಷ್ಯರು ಬೆಂಕಿಯಂತೆ ಬೆಳಗುತ್ತಾರೆ. ಪಾಪಗಳಿಂದ ಬಿಡಲ್ಪಟ್ಟವರಾಗಿ ಮೇಘದಿಂದ ಮುಕ್ತನಾದ ಚಂದ್ರನಂತೆ ಇರುತ್ತಾರೆ.

೧೯. ಆರ್ದ್ರ, ಶುಷ್ಕ, ಲಘು, ಸ್ಥೂಲವಾದ ಪಾಪಗಳೂ ಮನಸ್ಸು ಮಾತು ದೇಹಗಳಿಂದ ಮಾಡಿದ ಪಾಪಗಳೂ ಮಹಾಪಾಪಗಳೂ ಕೂಡ ಈ ವಿಷ್ಣುಭಕ್ತರ ಪೂಜೆಯಿಂದಲೇ ಹೋಗುತ್ತವೆ

೨೦ ಪ್ರಮಾದದಿಂದ ಮಾಡಿದ ಪಾಪವೂ ಜ್ಞಾನಾಜ್ಞಾನದಿಂದ ಮಾಡಿದ ಪಾಪವೂ ಮಹಾಪಾಪಗಳೂ ಕೂಡ ಈ ವಿಷ್ಣುಭಕ್ತರ ಪೂಜೆಯಿಂದಲೇ ಹೋಗುತ್ತವೆ.

೨೧–೨೨. ಪಾಪವಿಲ್ಲದವರು ಸ್ವರ್ಗಕ್ಕೆ ಹೋಗುತ್ತಾರೆ. ಪಾಪಿಗಳು ಶುದ್ಧರಾಗುತ್ತಾರೆ. ಈ ಸಾಧು ದರ್ಶನವೆಂಬುದು ಇಷ್ಟು ಉತ್ತಮವಾದುದು. ಇದು ಸತ್ಯವು. ನಿನಗೆ ನಾನು ಹೇಳಿದ್ದೇನೆ. ಈ ವಿಷ್ಣುಭಕ್ತನು ಸಂಸಾರವೆಂಬ ಕೆಸರನ್ನು ಬಳಿದುಕೊಂಡಿರುವುದಕ್ಕೆ ತೊಳೆಯುವುದರಲ್ಲಿ ಗಟ್ಟಿಗನು. ಪಾವನಗಳಿಗೂ ಪಾವನನು. ಇದರಲ್ಲಿ ಸಂಶಯವಿಲ್ಲ.

|| ಶ್ರೀಮಹಾದೇವ ಉವಾಚ ||

ಪ್ರತ್ಯಹಂ ವಿಷ್ಣುಭಕ್ತಾ ಯೇ ಸ್ಮರಂತಿ ಮಧುಸೂಧನಂ ।
ತೇ ತು ವಿಷ್ಣುಮಯಾ ಜ್ಞೇಯಾ ವಿಷ್ಣುಸ್ತೇ ವೈ ನ ಸಂಶಯಃ || ೨೩ ||

ನವನೀಲಘನಶ್ಯಾಮಂ ನಳಿನಾಯತಲೋಚನಂ ।
ಶಂಖಚಕ್ರಗದಾಪದ್ಮಧರಂ ಪಿತಾಂಬರಾವೃತಂ || ೨೪ ||

ಕೌಸ್ತುಭೇನ ವಿರಾಜಂತಂ ವನಮಾಲಾಧರಂ ಹರಿಂ ।
ಉಲ್ಲಸತ್ಕುಂಡಲಜ್ಯೋತಿಃ ಕಪೋಲವದನಶ್ರಿಯಾ || ೨೫ ||

ವಿರಾಜಿತಂ ಕಿರೀಟೇನ ವಲಯಾಂಗದನೂಪುರೈಃ ।
ಪ್ರಸನ್ನವದನಾಂಭೋಜಂ ಚತುರ್ಬಾಹುಂ ಶ್ರಿಯಾನ್ವಿತಂ || ೨೬ ||

ಏವಂ ಧ್ಯಾಯಂತಿ ಯೇ ವಿಷ್ಣುಂ ಭಕ್ತಿಯುಕ್ತಾಶ್ಚ ಪಾರ್ವತಿ ।
ತೇ ವಿಪ್ರಾ ವಿಷ್ಣುರೂಪಾಶ್ಚ ವೈಷ್ಣವಾಸ್ತೇ ನ ಸಂಶಯಃ || ೨೭ ||

---

೨೩. ಶ್ರೀ ಮಹಾದೇವನು ಹೇಳಿದನು—ಯಾವ ವಿಷ್ಣುಭಕ್ತರು ಪ್ರತಿ ದಿನವೂ ವಿಷ್ಣುವನ್ನೇ ಸ್ಮರಿಸುತ್ತಿರುವರೋ ಅವರು ವಿಷ್ಣುವಿನ ರೂಪವುಳ್ಳವರು ಎಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

೨೪–೨೬. ಹೊಸದಾದ ನೀಲಮೇಘದಂತೆ ಕಪ್ಪಾದ ಕಮಲದಂತೆ ದೀರ್ಘವಾದ ಕಣ್ಣುಳ್ಳ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿರುವ ಪೀತಾಂಬರ ವನ್ನುಟ್ಟಿರುವ ಕೌಸ್ತುಭದಿಂದ ಪ್ರಕಾಶಿಸುವ ವನಮಾಲೆಯೆಂಬ ಮಾಲೆಯನ್ನು ಹಾಕಿಕೊಂಡಿರುವ ಹರಿಯನ್ನು ಧ್ಯಾನಮಾಡಬೇಕು. ಕರ್ಣಾಭರಣದ ಕಾಂತಿಯಿಂದ ಬೆಳಗುವ ಕಪೋಲಗಳುಳ್ಳ ಕಿರೀಟದಿಂದ ಪ್ರಕಾಶಿಸುವ ಕೈಬಳೆ ಕಾಲುಕಡಗಗಳನ್ನು ಹಾಕಿಕೊಂಡಿರುವ ಸಂತೋಷದಿಂದಿರುವ ಮುಖವುಳ್ಳ ನಾಲ್ಕು ತೋಳುಗಳಿಂದ ಪ್ರಕಾಶಿಸುವ ಸಂಪತ್ತಿನಿಂದ ಕೂಡಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೨೭. ಯಾರು ಭಕ್ತಿಯಿಂದ ಈ ರೀತಿಯಾಗಿರುವ ವಿಷ್ಣುವನ್ನು ಧ್ಯಾನಿಸುತ್ತಾರೆಯೋ ಅವರು ವಿಷ್ಣುರೂಪರಾದ ವೈಷ್ಣವರು. ಸಂಶಯವಿಲ್ಲ.

**ತೇಷಾಂ ದರ್ಶನಮಾತ್ರೇಣ ಭಕ್ತ್ಯಾ ವಾ ಭೋಜನೇನ ವಾ ।**
**ಪೂಜನೇನ ಚ ದೇವೇಶಿ ವೈಕುಂಠಂ ಲಭತೇ ಧ್ರುವಂ ॥ ೨೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಲಗ್ರಾಮ ಶಿಲಾ ಪೂಜನ ಮಾಹಾತ್ಮ್ಯಂ ನಾಮ ಸಪ್ತವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೨೮. ಅವರ ದರ್ಶನದಿಂದಲೂ ಅವರಿಗೆ ಭಕ್ತಿಯಿಂದ ಭೋಜನ ಮಾಡಿಸುವುದರಿಂದಲೂ ಅವರನ್ನು ಪೂಜಿಸುವುದರಿಂದಲೂ ವೈಕುಂಠವು ಸಿಕ್ಕುತ್ತದೆ. ಇದು ನಿಶ್ಚಯವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಲಗ್ರಾಮ ಶಿಲಾ ಪೂಜನ ಮಹಿಮ ಎಂಬ ನೂರ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀಪಾರ್ವತ್ಯು ವಾಚ ॥

**ಅನಂತವಾಸುದೇವಸ್ಯ ಕೀದೃಶಂ ಸ್ಮರಣಂ ಸ್ಮೃತಂ ।**
**ಯಚ್ಛ್ರುತ್ವಾ ನ ಪುನರ್ಮೋಹಂ ಪ್ರಾಪ್ನುಯಾನ್ಮಾನವಃ ಕ್ವಚಿತ್ ॥ ೧ ॥**

॥ ಮಹಾದೇವ ಉವಾಚ ॥

**ದೃಷ್ಟ್ವಾ ತತ್ವೇನ ದೇವೇಶಿ ಸ್ಮರಾಮ್ಯೇನಂ ತು ನಿತ್ಯಶಃ ।**
**ತೃಷಾತುರೋ ಯಥೈವಾಂಭಃ ತದ್ವದ್ವಿಷ್ಣುಂ ಸ್ಮರಾಮ್ಯಹಂ** ॥ ೨ ॥

---

### ನೂರ ಇಪ್ಪತ್ತೆಂಟನೆಯ ಅಧ್ಯಾಯವು



೧. ಶ್ರೀ ಪಾರ್ವತಿಯು ಹೇಳಿದಳು–ಎಲೈ ಶಿವನೇ ! ಅನಂತರೂಪನಾದ ವಾಸುದೇವನ ಸ್ಮರಣೆಯು ಯಾವ ರೂಪವಾದುದು ? ಅದನ್ನು ಕೇಳಿದರೇನೇ ಮಾನವನು ಮೋಹವನ್ನು ಹೊಂದುವುದಿಲ್ಲವಷ್ಟೆ ? ಅದನ್ನು ಹೇಳು.

೨. ಮಹಾದೇವನು ಹೇಳಿದನು–ಎಲೈ ಪಾರ್ವತಿಯೇ ! ನಾನು ಆ ಸ್ವಾಮಿಯ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಂಡು ಇದ್ದೇನೆ. ಬಾಯಾರಿದವನು ನೀರನ್ನು ಯಾವ ರೀತಿಯಿಂದ ಏಕಾಗ್ರತೆಯಿಂದ ಸ್ಮರಿಸುವನೋ ಹಾಗೆ ನಾನು ಆ ಸ್ವಾಮಿಯನ್ನು ಸ್ಮರಿಸುತ್ತೇನೆ.

ಹಿಮೇಽನಾಕುಲಿತಂ ವಿಶ್ವಂ ಸ್ಮರತ್ಯಗ್ನಿಂ ಯಥಾ ತಥಾ ।
ಸ್ಮರಂತಿ ಸತತಂ ವಿಷ್ಣುಂ ಪಿತೃದೇವರ್ಷಿಮಾನವಾಃ ॥ ೩ ॥

ಪತಿವ್ರತಾ ಯಥಾ ನಾರೀ ಪತಿಂ ಸ್ಮರತಿ ನಿತ್ಯಶಃ ।
ತಥಾ ಸ್ಮರಾಮಿ ದೇವೇಶಿ ವಿಷ್ಣುಂ ವಿಶ್ವೇಶ್ವರೇಶ್ವರಂ ॥ ೪ ॥

ಭಯಾರ್ತಶ್ಶರಣಂ ಯದ್ವದರ್ಥಲೋಭೀ ಯಥಾ ಧನಂ ।
ಪುತ್ರಕಾಮೋ ಯಥಾ ಪುತ್ರಂ ತಥಾ ವಿಷ್ಣುಂ ಸ್ಮರಾಮ್ಯಹಂ ॥ ೫ ॥

ದೂರಸ್ಥೋಽಪಿ ಯಥಾ ಗೇಹಂ ಚಾತಕೋ ಜಲದಂ ಯಥಾ ।
ಬ್ರಹ್ಮವಿದ್ಯಾಂ ಬ್ರಹ್ಮವಿದಸ್ತಥಾ ವಿಷ್ಣುಂ ಸ್ಮರಾಮ್ಯಹಂ ॥ ೬ ॥

ಹಂಸಾ ಮಾನಸಮಿಚ್ಛಂತಿ ಋಷಯಃ ಸ್ಮರಣಂ ಹರೇಃ ।
ಭಕ್ತಾಶ್ಚ ಭಕ್ತಿಮಿಚ್ಛಂತಿ ತಥಾ ವಿಷ್ಣುಂ ಸ್ಮರಾಮ್ಯಹಂ ॥ ೭ ॥

---

೩. ಚಳಿಯಿಂದ ತೊಂದರೆಪಡುತ್ತಿರುವ ಜನರು ಅಗ್ನಿಯನ್ನು ಸ್ಮರಿಸುವಂತೆ, ಪಿತೃಗಳೂ, ದೇವತೆಗಳೂ, ಮನುಷ್ಯರೂ, ಋಷಿಗಳೂ ಆ ಸ್ವಾಮಿಯನ್ನೇ ಯಾವಾಗಲೂ ಸ್ಮರಿಸುವರು.

೪. ಪತಿವ್ರತೆಯಾದ ಹೆಂಗಸು ಗಂಡನನ್ನು ಹೇಗೆ ಸ್ಮರಿಸುತ್ತಾಳೆಯೋ ಅದೇ ರೀತಿಯಲ್ಲಿ ವಿಶ್ವೇಶ್ವರನಾದ ವಿಷ್ಣುವನ್ನು ನಾನು ಸ್ಮರಿಸುತ್ತೇನೆ.

೫. ಭಯದಿಂದ ಕೂಡಿದವನು ರಕ್ಷಣೆಯನ್ನೂ, ಧನ ಬೇಕಾದವನು ಧನವನ್ನೂ, ಮಕ್ಕಳು ಬೇಕಾದವನು ಮಕ್ಕಳನ್ನೂ ಹೇಗೆ ಆತುರದಿಂದ ಅಪೇಕ್ಷಿಸುತ್ತ ಸ್ಮರಿಸುವರೋ ಹಾಗೆ ನಾನು ವಿಷ್ಣುವನ್ನು ಸ್ಮರಿಸುತ್ತೇನೆ.

೬. ದೂರದಲ್ಲಿರತಕ್ಕವನು ಮನೆಯನ್ನೂ, ಚಾತಕವು ಮೇಘವನ್ನೂ, ಬ್ರಹ್ಮವಿದ್ಯೆಯನ್ನು ಬಲ್ಲವನು ಬ್ರಹ್ಮವಿದ್ಯೆಯನ್ನೂ ಸ್ಮರಿಸುವಂತೆ ನಾನು ವಿಷ್ಣುವನ್ನು ಸ್ಮರಿಸುತ್ತೇನೆ.

೭. ಹಂಸಗಳು ಮಾನಸಸರೋವರವನ್ನೂ, ಋಷಿಗಳು ಹರಿಸ್ಮರಣೆಯನ್ನೂ ಭಕ್ತರು ಭಕ್ತಿಯನ್ನೂ ಅಪೇಕ್ಷಿಸಿ ಸ್ಮರಿಸುವಂತೆ ನಾನು ವಿಷ್ಣುವನ್ನು ಸ್ಮರಿಸುತ್ತೇನೆ.

ವೈಷ್ಣವಾಶ್ಚ ಯಥಾ ಭಕ್ತಿಂ ಪಶವಶ್ಚ ಯಥಾ ತೃಣಂ ।
ಧರ್ಮಮಿಚ್ಛಂತಿ ವೈ ಸಂತಃ ತಥಾ ವಿಷ್ಣುಂ ಸ್ಮರಾಮ್ಯಹಂ ॥ ೮ ॥

ಯಥಾ ವ್ಯಸನಿನೋ ಮಾರಂ ತಥಾ ವಿಷ್ಣುಂ ಸ್ಮರಾಮ್ಯಹಂ ।
ಪ್ರಾಣಿನಾಂ ವಲ್ಲಭೋ ದೇಹೋ ಯತ್ರ ಆತ್ಮಾವತಿಷ್ಠತೇ ॥ ೯ ॥

ಆಯುರ್ವಾಂಛಂತಿ ವೈ ಜೀವಾಃ ತಥಾ ವಿಷ್ಣುಂ ಸ್ಮರಾಮ್ಯಹಂ ।
ಭ್ರಮರಾಶ್ಚ ಯಥಾ ಪುಷ್ಪಂ ಚಕ್ರವಾಕಾ ದಿವಾಕರಂ ॥ ೧೦ ॥

ಯಥಾತ್ಮವಲ್ಲಭಾ ಭಕ್ತಿಂ ತಥಾವಿಷ್ಣುಂ ಸ್ಮರಾಮ್ಯಹಂ ।
ಅಂಧೇನಾಕುಲಿತಾ ಲೋಕಾ ದೀಪಂ ವಾ ಛಂತಿ ವೈ ತಥಾ ॥ ೧೧ ॥

ತಥೈವ ಪುರುಷಾ ಲೋಕೇ ಸ್ಮರಣಂ ಕೇಶವಸ್ಯ ಚ ।
ಯಥಾ ಶ್ರಮಾರ್ತಾ ವಿಶ್ರಾಮಂ ನಿದ್ರಾಂ ವ್ಯಸನಿನೋ ಯಥಾ ॥ ೧೨ ॥

ಯಥಾಲಸ್ಯೋಜ್ಝಿತಾ ವಿದ್ಯಾಂ ತಥಾ ವಿಷ್ಣುಂ ಸ್ಮರಾಮ್ಯಹಂ ।
ಮಾತಂಗಾಃ ಪಾರ್ವತೀಂ ಭೂಮಿಂ ಸಿಂಹಾ ವನಗಜಾದಿಕಂ ॥ ೧೩ ॥

---

೮. ವೈಷ್ಣವರು ಭಕ್ತಿಯನ್ನೂ, ಹಸುಗಳು ಹುಲ್ಲನ್ನೂ, ಸತ್ಪುರುಷರು ಧರ್ಮವನ್ನೂ ಸ್ಮರಿಸುವಂತೆ ನಾನು ಆ ಸ್ವಾಮಿಯನ್ನು ಸ್ಮರಿಸುತ್ತೇನೆ.

೯–೨೧. ಕಾಮಿಗಳು ಕಾಮನನ್ನು ಸ್ಮರಿಸುವಂತೆ ನಾನು ವಿಷ್ಣುವನ್ನು ಸ್ಮರಿಸುತ್ತೇನೆ. ಆತ್ಮನು ವಾಸಮಾಡುವ ದೇಹವು ಪ್ರಾಣಿಗಳಿಗೆ ಬಹು ಇಷ್ಟವಾದುದು. ಆದ್ದರಿಂದ ಅವರು ಆಯುಸ್ಸನ್ನು ಯಾವಾಗಲೂ ಸ್ಮರಿಸುತ್ತಾರೆ. ಅದರಂತೆ ನಾನೂ ವಿಷ್ಣುವನ್ನು ಸ್ಮರಿಸುತ್ತೇನೆ. ಭ್ರಮರಗಳು ಹೂವನ್ನೂ, ಚಕ್ರವಾಕಗಳು ಸೂರ್ಯನನ್ನೂ, ಆತ್ಮನಲ್ಲಿ ಪ್ರೀತಿಯುಳ್ಳವರು ಭಕ್ತಿಯನ್ನೂ ಅಪೇಕ್ಷಿಸುವಂತೆ ನಾನು ವಿಷ್ಣುವನ್ನು ಸ್ಮರಿಸುತ್ತೇನೆ. ಕತ್ತಲೆಯಿಂದ ತೊಂದರೆಪಡುತ್ತಿರುವ ಜನರು ದೀಪವನ್ನು ಅಪೇಕ್ಷಿಸುವಂತೆ ಜನರು ಕೇಶವನನ್ನು ಸ್ಮರಿಸಬೇಕು. ಶ್ರಮದಿಂದ ಕೂಡಿದವರು ವಿಶ್ರಾಂತಿಯನ್ನೂ, ಕಷ್ಟಪಟ್ಟವರು ನಿದ್ದೆಯನ್ನೂ, ಸೋಮಾರಿತನವಿಲ್ಲದವರು ವಿದ್ಯೆಯನ್ನೂ ಸ್ಮರಿಸುವಂತೆಯೇ ನಾನು ವಿಷ್ಣುವನ್ನು ಸ್ಮರಿಸುತ್ತೇನೆ. ಆನೆಗಳು ಪರ್ವತಪ್ರದೇಶವನ್ನೂ, ಸಿಂಹಗಳು ಕಾಡಾನೆ ಮುಂತಾದುವುಗಳನ್ನೂ

ತಥೈವ ಸ್ಮರಣಂ ವಿಷ್ಣೋಃ ಕರ್ತವ್ಯಂ ಪಾಪಭೀರುಭಿಃ
ಸೂರ್ಯಕಾಂತರವೇರ್ಯೋಗಾದ್ವಹ್ನಿಸ್ತತ್ರ ಪ್ರಜಾಯತೇ || ೧೪ ||

ಏವಂ ವೈ ಸಾಧುಸಂಯೋಗಾದ್ಧರೌ ಭಕ್ತಿಃ ಪ್ರಜಾಯತೇ ।
ಶೀತರಶ್ಮಿಶಿಲಾ ಯದ್ವಚ್ಚಂದ್ರಯೋಗಾದಪಸ್ಸ್ರವೇತ್ || ೧೫ ||

ಏವಂ ವೈಷ್ಣವಸಂಯೋಗಾದ್ಭಕ್ತಿರ್ಭವತಿ ಶಾಶ್ವತೀ ।
ಕುಮುದ್ವತೀ ಯಥಾ ಸೋಮಂ ದೃಷ್ಟ್ವಾ ಪುಷ್ಪಂ ವಿಕಾಶತೇ || ೧೬ ||

ತದ್ವದ್ದೇವೇ ಕೃತಾ ಭಕ್ತಿರ್ಮುಕ್ತಿದಾ ಸರ್ವದಾ ನೃಣಾಂ ।
ಯಥಾ ನಳಸ್ಯ ಸಂತ್ರಸ್ತಾ ಭ್ರಮರೀ ಸ್ಮರಣಂ ಚರೇತ್ || ೧೭ ||

ತೇನ ಸ್ಮರಣಯೋಗೇನ ನಳಸಾರೂಪ್ಯತಾಮಿಯಾತ್ ।
ಗೋಪೀಭಿರ್ಜಾರಬುದ್ಧ್ಯಾ ಚ ವಿಷ್ಣೋಶ್ಚ ಸ್ಮರಣಂ ಕೃತಂ || ೧೮ ||

ತಾಶ್ಚ ಸಾಯುಜ್ಯತಾಂ ನೀತಾಸ್ತಥಾ ವಿಷ್ಣುಂ ಸ್ಮರಾಮ್ಯಹಂ ।
ಕೇಪಿ ವೈ ದುಷ್ಟಭಾವೇನ ಚ್ಛದ್ಮಭಾವೇನ ಕೇಚನ || ೧೯ ||

---

ಸ್ಮರಿಸುವಂತೆ ಪಾಪಭೀರುಗಳು ವಿಷ್ಣುವಿನ ಸ್ಮರಣೆಯನ್ನು ಮಾಡಬೇಕು. ಸೂರ್ಯಕಾಂತಶಿಲೆ, ಸೂರ್ಯ ಇವರ ಸಂಬಂಧದಿಂದ ಬೆಂಕಿಯು ಹುಟ್ಟುವಂತೆ ಸಾಧುಗಳ ಸಂಬಂಧದಿಂದ ಹರಿಯಲ್ಲಿ ಭಕ್ತಿಯು ಹುಟ್ಟುತ್ತದೆ. ಚಂದ್ರಕಾಂತಶಿಲೆಯು ಚಂದ್ರನ ಸಂಬಂಧದಿಂದ ನೀರನ್ನು ಸುರಿಸುವಂತೆ ವೈಷ್ಣವರ ಸಂಭಂಧದಿಂದ ವಿಷ್ಣುವಿನಲ್ಲಿ ಶಾಶ್ವತವಾದ ಭಕ್ತಿಯು ಹುಟ್ಟುತ್ತದೆ. ನೈದಿಲೆ ಗಿಡವು ಚಂದ್ರನನ್ನು ನೋಡಿ ತನ್ನ ಹೂವನ್ನು ಹೇಗೆ ಪ್ರಕಾಶಗೊಳಿಸುವುದೋ ಹಾಗೆ ದೇವನಲ್ಲಿ ಮಾಡಿದ ಭಕ್ತಿಯು ಮುಕ್ತಿಯನ್ನು ಕೊಡುತ್ತದೆ. ನಳವೆಂಬ ಹುಳುವಿಗೆ ಹೆದರಿಕೊಂಡು ಭ್ರಮರವು ಅದನ್ನೇ ಸ್ಮರಿಸುತ್ತ- ಆ ನಳದ ರೀತಿಯನ್ನೇ ಹೊಂದುತ್ತದೆ. ಗೋಪಿಯರಿಂದ ಜಾರನೆಂಬ ಬುದ್ಧಿಯಿಂದ ವಿಷ್ಣುವಿನ ಸ್ಮರಣೆಯು ಮಾಡಲ್ಪಟ್ಟಿತು. ಆದ್ದರಿಂದ ಅವರೆಲ್ಲರೂ ಸ್ವಾಮಿಯ ಸಾಯುಜ್ಯವನ್ನು ಹೊಂದಿದರು. ಹಾಗೆಯೇ ನಾನು ವಿಷ್ಣುವನ್ನು ಸ್ಮರಿಸುತ್ತೇನೆ. ಅವನ ಸಾಯುಜ್ಯವನ್ನು ಹೊಂದುತ್ತೇನೆ. ಕೆಲವರು ದುಷ್ಟರೂಪವಾದ

**ಕೇ ಚಾಪಿ ಲೋಭಭಾವೇನ ನಿಸ್ಸ್ಪೃಹಾಶ್ಚೈವ ಕೇಚನ ।**
**ಭಕ್ತ್ಯಾ ವಾ ಸ್ನೇಹಭಾವೇನ ದ್ವೇಷಭಾವೇನ ವಾ ಪುನಃ　　॥ ೨೦ ॥**

**ಕೇಽಪಿ ಸ್ವಾಮಿತ್ವಭಾವೇನ ಬುದ್ಧ್ಯಾ ವಾ ಬುದ್ಧಿಪೂರ್ವಕಂ ।**
**ಯೇನ ಕೇನಾಪಿ ಭಾವೇನ ಚಿಂತಯಂತಿ ಜನಾರ್ದನಂ　　॥ ೨೧ ॥**

**ಇಹ ಲೋಕೇ ಸುಖಂ ಭುಕ್ತ್ವಾ ಯಾಂತಿ ವಿಷ್ಣೋಸ್ಸನಾತನಂ ।**
**ಅಹೋ ವಿಷ್ಣೋಶ್ಚ ಮಾಹಾತ್ಮ್ಯಮದ್ಭುತಂ ಲೋಮಹರ್ಷಣಂ　॥ ೨೨ ॥**

**ಯದೃಚ್ಛಯಾಪಿ ಸ್ಮರಣಂ ತ್ರಿಧಾ ಮುಕ್ತಿಪ್ರದಾಯಕಂ ।**
**ನ ಧನೇನ ಸಮೃದ್ಧೇನ ನ ವೈ ವಿಪುಲಯಾ ಧಿಯಾ　　॥ ೨೩ ॥**

**ಏಕೇನ ಭಕ್ತಿಯೋಗೇನ ಸಮೀಪೇ ದೃಶ್ಯತೇ ಕ್ಷಣಾತ್ ।**
**ಸಾನ್ನಿಧ್ಯೇಽಪಿ ಸ್ಥಿತೋ ದೂರೇ ನೇತ್ರಯೋರಂಜನಂ ಯಥಾ　　॥ ೨೪ ॥**

---

ಅಭಿಪ್ರಾಯದಿಂದಲೂ ಕೆಲವರು ಕಪಟದಿಂದಲೂ, ಕೆಲವರು ಆಶೆಯಿಂದಲೂ, ಕೆಲವರು ಏನೂ ಬೇಕಿಲ್ಲದೆ ನಿರಾಶೆಯಿಂದಲೂ ಸ್ವಾಮಿಯನ್ನು ಸ್ಮರಿಸುತ್ತಾರೆ. ಭಕ್ತಿಯಿಂದಾಗಲೀ, ಸ್ನೇಹದಿಂದಾಗಲಿ, ದ್ವೇಷದಿಂದಾಗಲೀ, ಸ್ವಾಮಿಯೆಂಬ ಭಾವನೆಯಿಂದಲಾಗಲೀ, ಬುದ್ಧಿಯಿದ್ದೇ ಆಗಲಿ ಅವನ ಮೇಲಿನ ಬುದ್ಧಿ ಇಲ್ಲದೇನೇ ಆಗಲಿ ಯಾವ ರೀತಿಯಾದ ಭಾವನೆಯಿಂದಲೇ ಆಗಲಿ ಆ ಸ್ವಾಮಿಯಾದ ಜನಾರ್ದನನನ್ನು ಸ್ಮರಿಸುತ್ತಾರೆ.

೨೨. ಅವರೆಲ್ಲರೂ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಅನಂತರ ವಿಷ್ಣುವಿನಲ್ಲಿ ಸೇರಿಹೋಗುತ್ತಾರೆ. ವಿಷ್ಣುವಿನ ಮಹಿಮೆಯೆಂಬುದು ಆಶ್ಚರ್ಯಕರವಾದುದು. ಕೇಳಿದರೆ ರೋಮಾಂಚವಾಗುತ್ತದೆ.

೨೩–೨೪. ವಿಷ್ಣುವನ್ನು ಕಾರಣವಿಲ್ಲದೆ ಸ್ಮರಿಸಿದರೂ ಕೂಡ ಮೇಲೆ ಹೇಳಿದ ಮೂರು ರೀತಿಯಿಂದ ಮುಕ್ತಿಯನ್ನು ಕೊಡುತ್ತಾನೆ. ಹೆಚ್ಚಾದ ಧನದಿಂದಲಾಗಲಿ ಅಥವಾ ಹೆಚ್ಚಾದ ಬುದ್ಧಿಯಿಂದಲೇ ಆಗಲಿ ವಿಷ್ಣುವು ಸಿಕ್ಕುವುದಿಲ್ಲ. ಭಕ್ತಿಭಾವ ಒಂದರಿಂದಲೇ ಆ ಸ್ವಾಮಿಯನ್ನು ಹತ್ತಿರದಲ್ಲಿಯೇ ಕಾಣಬಹುದು. ಕಣ್ಣಿಗೆ ಅಂಜನವನ್ನು ಹಾಕಿಕೊಂಡರೆ ಹತ್ತಿರದಲ್ಲಿರುವ ಪದಾರ್ಥವೂ ದೂರವಾಗಿ ಕಾಣುವಂತೆ, ದೇವರು ಸಮೀಪದಲ್ಲಿಯೇ ಇದ್ದರೂ

ಭಕ್ತಿಯೋಗೇನ ದೃಶ್ಯೇತ ಭಕ್ತೈಶ್ಚೈವ ಸನಾತನಃ ।
ಇದಂ ತತ್ವಮಿದಂ ತತ್ವಂ ಮೋಹಿತೋ ದೇವಮಾಯಯಾ ॥ ೨೫ ॥

ಭಕ್ತಿತತ್ವಂ ಯದಾ ಪ್ರಾಪ್ತಂ ತತ್ವಂ ವಿಷ್ಣುಮಯಂ ತದಾ ।
ಇಂದ್ರಾದ್ಯೈರಮೃತಂ ಪ್ರಾಪ್ತಂ ಸುಖಾರ್ಥೇ ಶೃಣು ಸುಂದರಿ ॥ ೨೬ ॥

ತಥಾಪಿ ದುಃಖಿತಾಸ್ತೇ ವೈ ಭಕ್ತ್ಯಾ ವಿಷ್ಣೋರ್ಯಯಾ ವಿನಾ ।
ಭಕ್ತಿಮೇವಾಮೃತಂ ಪ್ರಾಪ್ಯ ಪುನರ್ದುಃಖಂ ನ ಚಾಪ್ನುಯಾತ್ ॥ ೨೭ ॥

ವೈಕುಂಠಾಖ್ಯಾಂ ಪದಂ ಪ್ರಾಪ್ಯ ಮೋದತೇ ವಿಷ್ಣುಸನ್ನಿಧೌ ।
ವಾರಿ ತ್ಯಕ್ತ್ವಾ ಯಥಾ ಹಂಸಃ ಪಯಃ ಪಿಬತಿ ನಿತ್ಯಶಃ ॥ ೨೮ ॥

ಏವಂ ಧರ್ಮಾನ್ಪರಿತ್ಯಜ್ಯ ವಿಷ್ಣೋರ್ಭಕ್ತಿಂ ಸಮಾಶ್ರಯೇತ್ ।
ತೋಯಂ ಬದ್ಧ್ವಾ ತು ವಸ್ತ್ರೇಣ ಕೃತಂ ಕಾರ್ಯಂ ಕಥಂ ಭವೇತ್ ॥ ೨೯ ॥

---

ದೂರವಾಗಿ ಕಾಣುತ್ತಾನೆ. ಈ ಸ್ವಾಮಿಯು ಭಕ್ತರ ಭಕ್ತಿಯೊಂದರಿಂದಲೇ ಕಾಣಲು ಸಾಧ್ಯನು ಇದು ತತ್ವವು. ಇದು ತತ್ವವು. ಎಂದು ಜನರು ದೇವಮಾಯೆಯಿಂದ ಅಜ್ಞಾನವನ್ನು ಹೊಂದಿದ್ದಾರೆ.

೨೬. ಭಕ್ತಿ ತತ್ವವನ್ನು ಹೊಂದಿದ ಕೂಡಲೇ, ಆಗಲೇ ವಿಷ್ಣುಮಯವಾದ ತತ್ವವು ಸಿಕ್ಕುವುದು. ಇಂದ್ರನೇ ಮುಂತಾದ ದೇವತೆಗಳು ಸುಖಕ್ಕೋಸ್ಕರ ಅಮೃತವನ್ನು ಹೊಂದಿದರು.

೨೭. ಹಾಗೆ ಆ ದೇವತೆಗಳು ಅಮೃತವನ್ನು ಹೊಂದಿದರೂ ವಿಷ್ಣುವಿನಲ್ಲಿ ಭಕ್ತಿಯಿಲ್ಲದ್ದರಿಂದ ದುಃಖಿತರಾದರು. ಭಕ್ತಿಯೆಂಬ ಅಮೃತವನ್ನು ಹೊಂದಿದವರು ಮತ್ತೆ ದುಃಖವನ್ನು ಹೊಂದುವುದಿಲ್ಲ.

೨೮–೪೦. ಹಾಗೆ ಭಕ್ತಿ ಮಾಡಿದವನು ವೈಕುಂಠವನ್ನು ಹೊಂದಿ ವಿಷ್ಣು ಸನ್ನಿಧಿಯಲ್ಲಿ ಸುಖಿಸುತ್ತಾನೆ. ಹಂಸವು ಹಾಲು ನೀರುಗಳ ಬೆರಕೆಯಲ್ಲಿ ನೀರನ್ನು ಬಿಟ್ಟು ಹಾಲನ್ನು ಕುಡಿಯುವಂತೆ ಧರ್ಮಗಳನ್ನು ಬಿಟ್ಟು ಭಕ್ತಿಯೊಂದನ್ನೇ ಆಶ್ರಯಿಸಬೇಕು. ಬಟ್ಟೆಯಲ್ಲಿ ನೀರನ್ನು ಕಟ್ಟಿ ಕೆಲಸವನ್ನು ಮಾಡುತ್ತೇನೆಂದರೆ ಆ ನೀರು ಹೇಗೆ ತಾನೇ ನಿಂತೀತು ? ಈ ದೇಹವನ್ನು ಹೊಂದಿ ಭಕ್ತಿಯನ್ನು

ಪ್ರಾಪ್ಯ ದೇಹಂ ವಿನಾ ಭಕ್ತಿಂ ಕ್ರಿಯತೇ ಸ ವೃಥಾಶ್ರಮಃ ।
ವಿಷ್ಣುಭಕ್ತಿಂ ವಿನಾ ಧರ್ಮಾನುಪದಿಶಂತಿ ಯೇ ಜನಾಃ ॥ ೩೦ ॥

ತೇ ಪತಂತಿ ಸದಾ ಘೋರೇ ನರಕೇ ನಾತ್ರ ಸಂಶಯಃ ।
ಬಾಹುಭ್ಯಾಂ ಸಾಗರಂ ತರ್ತುಂ ಯದ್ವನ್ಮೂರ್ಖೋಽಭಿವಾಂಛತಿ ॥ ೩೧ ॥

ಸಂಸಾರಸಾಗರಂ ತದ್ವದ್ವಿಷ್ಣುಭಕ್ತಿಂ ವಿನಾ ನರಃ ।
ವಿಷ್ಣುಭಕ್ತಿಂ ಚ ಲಕ್ಷಂತಿ ಕರ್ಮಣಾ ಯಾತ್ಯತೇ ಯದಿ ॥ ೩೨ ॥

ಅಕಿಂಚನಃ ಸ್ಪೃಹಾಯುಕ್ತೋ ಮೇರೌ ಧತ್ತೇ ಯಥಾ ಸ್ಪೃಹಾಂ ।
ವಿಷ್ಣುಭಕ್ತೌ ತಥಾ ದೇವಿ ಮಯಾ ಹಿ ಕ್ರಿಯತೇ ಸ್ಪೃಹಾ ॥ ೩೩ ॥

ಜನ್ಮಾಂತರೇ ಹಿ ಸಾ ಭಕ್ತಿರ್ಮಾಮುಕೀ ಹ ಕರೋತಿ ಹಿ ।
ವಹ್ನಿರ್ಯಥೈವ ಸ್ವಲ್ಪೋಽಪಿ ದಹತೇ ವಿವಿಧಂ ವನಂ ॥ ೩೪ ॥

ತದ್ವದ್ದೇವೇ ತು ಸಾ ಭಕ್ತೀ ರೇಣುಮಾತ್ರಾ ಕೃತಾ ಯಥಾ ।
ಶತೈಶ್ಚ ಶ್ರೂಯತೇ ಭಕ್ತಿಃ ಸಹಸ್ರೈರಪಿ ಬುಧ್ಯತೇ ॥ ೩೫ ॥

---

ಹೊಂದದಿದ್ದರೆ ಅವನು ಸುಮ್ಮನೆ ಕಷ್ಟಪಡುತ್ತಾನೆ. ವಿಷ್ಣುವಿನಲ್ಲಿ ಭಕ್ತಿಯನ್ನಿಡದೆ ಆ ಜನರು ಉಪದೇಶ ಮಾಡಲು ಹೋಗಿ ಉಪದೇಶ ಮಾಡಿದರೆ ಅವರು ಯಾವಾಗಲೂ ನರಕದಲ್ಲಿಯೇ ಬೀಳುವರು ಸಂಶಯವಿಲ್ಲ. ವಿಷ್ಣುಭಕ್ತಿಯಿಲ್ಲದವನು ಸಂಸಾರವನ್ನು ದಾಟಲು ಅಥವಾ ಮೋಕ್ಷವನ್ನು ಹೊಂದಲು ಅಪೇಕ್ಷಿಸಿದರೆ ಅದು ಮೂರ್ಖನು ತೋಳುಗಳಿಂದ ಸಮುದ್ರವನ್ನು ದಾಟಲು ಅಪೇಕ್ಷಿಸಿದಂತಾಗುವುದು. ಕರ್ಮದಿಂದಲೇ ವಿಷ್ಣುಭಕ್ತಿಯು ಉಂಟಾಗುತ್ತದೆ ಎಂದು ಭಾವಿಸಿದರೆ ಅದು ಹಣವಿಲ್ಲದ ಬಡವನು ಆಸೆಯಿಂದ ಮೇರುವಿನಲ್ಲಿ ಆಸೆಪಟ್ಟಂತೆ ಆಗುತ್ತದೆ. ಎಲೈ ದೇವಿಯೆ! ವಿಷ್ಣುವಿನ ಭಕ್ತಿಯಲ್ಲಿ ನಾನು ಆಸೆಯುಳ್ಳವನಾಗಿದ್ದೇನೆ. ಆ ಸ್ವಾಮಿಯಲ್ಲಿ ಜನ್ಮಾಂತರದಲ್ಲಿ ನನಗಿದ್ದ ಭಕ್ತಿಯು ಈಗ ಹಾಗೆ ಮಾಡುತ್ತದೆ. ಬೆಂಕಿಯು ಸ್ವಲ್ಪವಾಗಿದ್ದರೂ ನಾನಾವಿಧವಾದ ಕಾಡುಗಳನ್ನು ಹೇಗೆ ಸುಡುತ್ತದೆಯೋ ಹಾಗೆ ದೇವರಲ್ಲಿ ಮಾಡಿದ ಭಕ್ತಿಯು ಸ್ವಲ್ಪವಿದ್ದರೂ ಬಹುವಾದ ಪಾಪಗಳನ್ನು ನಾಶಮಾಡುತ್ತದೆ ಸಾವಿರಾರು ಜನರು ಭಕ್ತಿಯ ವಿಷಯವನ್ನು ಕೇಳುತ್ತಾರೆ ಅವರಲ್ಲಿ ನೂರು ಜನರು ಭಕ್ತಿಯ

ತೇಷಾಂ ಮಧ್ಯೇ ತು ದೇವೇಶಿ ಭಕ್ತೋ ಹ್ಯೇಕಃ ಪ್ರಜಾಯತೇ ।
ಬುದ್ಧಿಂ ಪರೇಷಾಂ ದಾಸ್ಯಂತಿ ಲೋಕೇ ಬಹುವಿಧಾ ಜನಾಃ ॥ ೩೬ ॥

ಸ್ವಯಮಾಚರತೇ ಸೋಽಪಿ ನರಃ ಕೋಟಿಷು ದೃಶ್ಯತೇ ।
ಪೂಜಯಾ ಹಸ್ಯತೇ ಭಕ್ತಿಃ ಜಪೇನ ಪರಿಹಾಸ್ಯತೇ ॥ ೩೭ ॥

ಏವಂ ಭಾವೋ ಹಿ ದೇವೇಶಿ ಭಕ್ತಿಸ್ತೇನೈವ ಗೃಹ್ಯತೇ ।
ಸಾಗರೇ ಚ ಯಥಾ ಪೋತಃ ಕೂಪೇ ದ್ರೋಣೋಪವೇಶನಂ ॥ ೩೮ ॥

ಯಸ್ಯ ಭಾವೋ ಹಿ ತದ್ವಚ್ಚ ಭಕ್ತಿಸ್ಸಾ ತೇನ ಗೃಹ್ಯತೇ ।
ಮೂಲೇ ಸಿಕ್ತಸ್ಯ ವೃಕ್ಷಸ್ಯ ಪತ್ರಂ ಶಾಖಾ ಪ್ರದೃಶ್ಯತೇ । ॥ ೩೯ ॥

ಭಜನಾದೇವ ಭೋ ದೇವಿ ಫಲಮಗ್ರೇ ಪ್ರತಿಷ್ಠಿತಂ
ಪಾನೀಯಹಾರಿಣಾ ಯದ್ವದ್ಘಟೇ ಚಿತ್ತಂ ಪ್ರದೀಯತೇ । ॥ ೪೦ ॥

---

ವಿಷಯವನ್ನು ತಿಳಿದುಕೊಳ್ಳುತ್ತಾರೆ. ಆ ನೂರು ಜನರಲ್ಲಿ ಎಲ್ಲೋ ಒಬ್ಬನು ಭಕ್ತನಾಗುತ್ತಾನೆ. ಪರರಿಗೆ ಬುದ್ಧಿ ಹೇಳುವ ಜನರು ಲೋಕದಲ್ಲಿ ಅನೇಕರಿದ್ದಾರೆ. ಅವರಲ್ಲಿ ತಾವು ಹೇಳುವಂತೆ ಆಚರಿಸುವವರನ್ನು ಕೋಟಿ ಜನರಲ್ಲಿ ಒಬ್ಬನನ್ನು ನೋಡಬಹುದು. ಎಲೈ ಪಾರ್ವತಿಯೆ ! ಪೂಜೆಮಾಡುವುದರಿಂದ ಭಕ್ತಿಯು ಸ್ವಲ್ಪ ಹುಟ್ಟುತ್ತದೆ. ಜಪ ಮಾಡುವುದರಿಂದ ಸ್ವಲ್ಪ ವಿಸ್ತಾರವಾಗುತ್ತದೆ. ಇದೇ ರೀತಿಯಾಗಿ ಮಾಡುತ್ತಿದ್ದರೆ ಭಕ್ತಿಯೆಂಬುದು ಹುಟ್ಟುತ್ತದೆ. ಸಮುದ್ರದಲ್ಲಿ ಓಡಾಡುವ ಹಡಗಿನಂತೆಯೂ, ಕೊಳಗಳಲ್ಲಿ ಓಡಾಡುವ ದೋಣಿಯಂತೆಯೂ ಯಾವನಿಗೆ ಭಾವವು ಯಾವ ರೀತಿಯಾಗಿರುತ್ತದೆಯೋ ಆ ರೀತಿಯಲ್ಲಿ ಭಕ್ತಿಯು ಅವನಿಂದ ಗ್ರಹಿಸಲ್ಪಡುತ್ತದೆ. ಮರಗಿಡಗಳ ಬುಡಕ್ಕೆ ನೀರು ಹಾಕಿದರೆ ಅವು ಮೇಲುಗಡೆಯಲ್ಲಿ ಎಲೆ ಹೂ ಕಾಯಿ ಹಣ್ಣುಗಳನ್ನು ಬಿಡುತ್ತವೆ. ಅದರಂತೆ ಸ್ವಾಮಿಯನ್ನು ಭಜಿಸುತ್ತಿದ್ದರೆ ಉತ್ತರೋತ್ತರ ಎಂದರೆ ಎಷ್ಟೋ ದಿವಸಗಳ ಮೇಲೆ ಫಲವು ಸಿಕ್ಕುತ್ತದೆ. ನೀರನ್ನು ತೆಗೆದುಕೊಂಡು ಹೋಗಬೇಕೆನ್ನುವವನು ಬಿಂದಿಗೆಯಲ್ಲಾಗಲಿ ಗಡಿಗೆಯಲ್ಲಾಗಲಿ ಮನಸ್ಸನ್ನಿಡುವಂತೆ ಸ್ವಾಮಿಯಾದ ಹರಿಯಲ್ಲಿ ಮನಸ್ಸನ್ನಿಟ್ಟರೆ ಅವನಿಗೆ ಮೋಕ್ಷವು ಲಭಿಸುತ್ತದೆ.

ತದ್ವದ್ದೇವೇ ಹರೌ ಚಿತ್ತಂ ಧೃತ್ವಾ ಮೋಕ್ಷಮವಾಪ್ನುಯಾತ್ ।
ಶೈಶವೇ ಚ ಯಥಾ ಮಾತಾ ಗುಡಂ ಸ್ತೋಕಂ ದದಾತಿ ವೈ ॥ ೪೧ ॥

ಪುನರ್ಯಾಚತಿ ವೈ ಬಾಲೋ ಗುಡಂ ವೈ ಲೋಭಕಾರಣಾತ್ ।
ನೀರೇ ನೀರಂ ಯಥಾ ಕ್ಷಿಪ್ತಂ ದುಗ್ಧೇ ದುಗ್ಧಂ ಘೃತಂ ಘೃತೇ ॥ ೪೨ ॥

ತದ್ವದ್ಭೇದಂ ನ ಪಶ್ಯಂತಿ ವಿಷ್ಣುಭಕ್ತಿಪ್ರಸಾದತಃ ।
ಭಾನುಸ್ಸರ್ವಗತೋ ಯದ್ವದ್ವಹ್ನಿಸ್ಸರ್ವಗತೋ ಯಥಾ ॥ ೪೩ ॥

ಭಕ್ತಿಸ್ಥಿತಸ್ತಥಾ ಭಕ್ತೈಃ ಕರ್ಮಭಿರ್ನೈವ ಬಾಧ್ಯತೇ ।
ಅಜಾಮಿಳಃ ಸ್ವಧರ್ಮಂ ಚ ತ್ಯಕ್ತ್ವಾ ಪಾಪಮಥಾಚರತ್ ॥ ೪೪ ॥

ಪುತ್ರಂ ನಾರಾಯಣಂ ಸ್ಮೃತ್ವಾ ಭಕ್ತಿಂ ವೈ ಪ್ರಾಪ್ತವಾನ್ಧ್ರುವಂ ।
ದಿವಾರಾತ್ರೌ ಚ ಯೇ ಭಕ್ತಾ ನಾಮಮಾತ್ರೋಪಜೀವಿನಃ ॥ ೪೫ ॥

ವೈಕುಂಠವಾಸಿನಸ್ತೇ ವೈ ತತ್ರ ವೇದಾ ಹಿ ಸಾಕ್ಷಿಣಃ ।
ಅಶ್ವಮೇಧಾದಿಯಜ್ಞಾನಾಂ ಫಲಂ ಸ್ವರ್ಗೇಽಪಿ ದೃಶ್ಯತೇ ॥ ೪೬ ॥

---

೪೧–೪೮. ಚಿಕ್ಕತನದಲ್ಲಿ ತಾಯಿಯಾದವಳು ಮಕ್ಕಳಿಗೆ ಒಂದು ಚೂರು ಬೆಲ್ಲವನ್ನು ಕೊಡುತ್ತಾಳೆ. ಆ ಆಸೆಯಿಂದ ಆ ಹುಡುಗನು ಮತ್ತೆ ಆ ಬೆಲ್ಲವನ್ನು ಕೇಳುತ್ತಾನೆ. ನೀರಿನ ಜೊತೆಗೆ ನೀರನ್ನೂ ಹಾಲಿನ ಜೊತೆಗೆ ಹಾಲನ್ನೂ ತುಪ್ಪದ ಜೊತೆಗೆ ತುಪ್ಪವನ್ನೂ ಹಾಕಿದರೆ ವ್ಯತ್ಯಾಸವು ಗೊತ್ತಾಗದಿರುವಂತೆ ವಿಷ್ಣು ಭಕ್ತಿಯನ್ನು ಹೊಂದಿದವರು ಪ್ರಪಂಚದಲ್ಲಿ ಭೇದವನ್ನೇ ತಿಳಿಯುವುದಿಲ್ಲ. ಸೂರ್ಯನು ಪ್ರಪಂಚವೆಲ್ಲವನ್ನೂ ಆವರಿಸುವಂತೆಯೂ ಅಗ್ನಿಯು ಎಲ್ಲಾ ಕಡೆಯಲ್ಲಿಯೂ ಇರುವಂತೆಯೂ ಭಕ್ತಿಯುಳ್ಳವನಿಗೆ ಕರ್ಮಗಳು ಬಾಧಿಸುವುದಿಲ್ಲ. ಅಜಾಮಿಳನು ತನ್ನ ಕರ್ಮಗಳೆಲ್ಲವನ್ನೂ ಬಿಟ್ಟುಬಿಟ್ಟು ಪಾಪವನ್ನೇ ಮಾಡುತ್ತಿದ್ದನು. ನಾರಾಯಣನೆಂಬ ಹೆಸರುಳ್ಳ ಮಗನನ್ನು ಸ್ಮರಿಸಿಕೊಂಡು ಆ ಸ್ವಾಮಿಯಲ್ಲಿ ಭಕ್ತಿಯನ್ನು ಹೊಂದಿದನು. ಹಗಲು ರಾತ್ರಿಗಳಲ್ಲಿಯೂ ಕೂಡ ಆ ಸ್ವಾಮಿಯಲ್ಲಿ ಭಕ್ತಿಯನ್ನಿಟ್ಟುಕೊಂಡು ಅವನ ನಾಮಸ್ಮರಣೆಯನ್ನೇ ಮಾಡುತ್ತಿರುವವರು ವೈಕುಂಠದಲ್ಲಿ ವಾಸಮಾಡುತ್ತಾರೆ. ಇದಕ್ಕೆ ವೇದಗಳೇ ಸಾಕ್ಷಿಗಳು. ಅವುಗಳಲ್ಲಿ ಹಾಗೆ ಹೇಳಿದೆ. ಅಶ್ವಮೇಧವೇ ಮುಂತಾದ ಯಜ್ಞಗಳ ಫಲವು

ತತ್ಫಲಂ ತು ಸಮಗ್ರಂ ವೈ ಭುಕ್ತ್ವಾ ವೈ ಸಂಪತನ್ತಿ ನ ।
ವಿಷ್ಣುಭಕ್ತಾಸ್ತಥಾ ದೇವಿ ಭುಕ್ತ್ವಾ ಭೋಗಾನ್ ಹ್ಯನೇಕಶಃ ॥ ೪೭ ॥

ವೈಕುಂಠಂ ಪ್ರಾಪ್ಯ ನೋ ತೇಷಾಂ ಪುನರಾಗಮನಂ ಕದಾ ।
ವಿಷ್ಣುಭಕ್ತಿಃ ಕೃತಾ ಯೇನ ವಿಷ್ಣುಲೋಕೇ ವಸತ್ಯಸೌ ॥ ೪೮ ॥

ದೃಷ್ಟೋ ಹ್ಯಂತೋ ಹಿ ನೋ ತಸ್ಯ ವಿಷ್ಣುಭಕ್ತಿಪ್ರಸಾದತಃ ।
ಗ್ರಾವಾಣೋ ಜಲಮಧ್ಯಸ್ಥಾ ಜಲಂ ಪಾರ್ಶ್ವೇ ನ ವಿದ್ಯತೇ ॥ ೪೯ ॥

ವಿನಾ ಜಲಂ ಸೋಮಕಾಂತಿರ್ವಿಷ್ಣುಭಕ್ತಸ್ಯ ಮಾನಸಂ ।
ದರ್ದುರೋ ವಸತೇ ನೀರೇ ಷಟ್ಪದೋ ಹಿ ವನಾಂತರೇ ॥ ೫೦ ॥

ಗಂಧಂ ವೇತ್ತಿ ಕುಮುದ್ವತ್ಯಾ ಭಕ್ತ್ಯಾ ಭಕ್ತಸ್ತಥಾ ಹರಿಂ ।
ಗಂಗಾತಟೇ ವಸಂತ್ಯೇಕೇ ಏಕೇ ವೈ ಶತಯೋಜನಂ ॥ ೫೧ ॥

---

ಸ್ವರ್ಗದಲ್ಲಿ ಸಿಕ್ಕುತ್ತದೆ. ಅವುಗಳ ಫಲವನ್ನು ಅನುಭವಿಸಿದನಂತರ ಅವರು ಕೆಳಕ್ಕೆ ಬೀಳುವುದಿಲ್ಲವೇ ! ಬಿದ್ದೇ ಬೀಳುತ್ತಾರೆ. ವಿಷ್ಣುಭಕ್ತನು ತನ್ನ ಭಕ್ತಿಯ ಫಲದಿಂದ ವೈಕುಂಠವನ್ನು ಹೊಂದಿ ಅಲ್ಲಿಯೇ ಭೋಗಗಳನ್ನು ಅನುಭವಿಸುತ್ತ ಇರುವನೇ ಹೊರತು ಮತ್ತೆ ಕೆಳಗೆ ಬೀಳುವುದಿಲ್ಲ. ಅವನು ವಿಷ್ಣುವಿನಲ್ಲಿ ಭಕ್ತಿಯನ್ನಿಟ್ಟು ಭಜಿಸಿದುದರಿಂದ ವಿಷ್ಣುಲೋಕದಲ್ಲಿಯೇ ವಾಸಿಸುತ್ತಾನೆ.

೪೯—೫೫. ವಿಷ್ಣುವಿನಲ್ಲಿರುವ ಭಕ್ತಿಯ ಪ್ರಸಾದದಿಂದ ಅವನಿಗೆ ಸುಖಕ್ಕೆ ಕೊನೆಯೇ ಇರುವುದಿಲ್ಲ. ಅವನು ಕೆಳಕ್ಕೂ ಬರುವಂತೆಯೇ ಇಲ್ಲ. ಎಷ್ಟೋ ಕಲ್ಲುಗಳು ನೀರಿನ ಮಧ್ಯದಲ್ಲಿಯೇ ಇರುತ್ತವೆ. ಆದರೆ ಅವು ನೀರನ್ನು ಕುಡಿಯುವುದೇ ಇಲ್ಲ. ಚಂದ್ರಕಾಂತ ಶಿಲೆಯು ನೀರಿನಲ್ಲಿಲ್ಲದಿದ್ದರೂ ನೀರನ್ನು ಸುರಿಸುತ್ತದ ಹಾಗೆಯೇ ವಿಷ್ಣುಭಕ್ತನ ಮನಸ್ಸು ಚಂದ್ರಕಾಂತಶಿಲೆಯು. ಕಪ್ಪೆಯು ನೀರಿನಲ್ಲಿಯೇ ವಾಸಮಾಡುತ್ತದೆ. ದುಂಬಿಯು ಎಲ್ಲಿಯೋ ಕಾಡಿನಲ್ಲಿ ವಾಸಮಾಡುತ್ತದೆ. ಆದರೆ ಆ ದೂರದಲ್ಲಿರುವ ಭ್ರಮರವು ನೈದಿಲೆಯ ವಾಸನೆಯನ್ನು ತಿಳಿಯುವಂತೆ ಹತ್ತಿರದಲ್ಲಿರುವ ಈ ಕಪ್ಪೆಗೆ ಗೊತ್ತಾಗುವುದೇ ಇಲ್ಲ. ಅದರಂತೆ ಭಕ್ತನು ಎಲ್ಲಿದ್ದರೂ ಹರಿಯನ್ನು ತಿಳಿಯುತ್ತಾನೆ. ಕೆಲವರು ಗಂಗೆಯ ದಡದಲ್ಲಿಯೇ ವಾಸಮಾಡುತ್ತಾರೆ. ಮತ್ತೆ ಕೆಲವರು ನೂರಾರು

**ಕಶ್ಚಿದ್ಗಂಗಾಫಲಂ ವೇತ್ತಿ ವಿಷ್ಣುಭಕ್ತಿಂ ಪರಸ್ತಥಾ ।**
**ಕರ್ಪೂರಾಗರುಭಾರಂ ಹಿ ಉಷ್ಟ್ರೋ ವಹತಿ ನಿತ್ಯಶಃ ॥ ೫೨ ॥**

**ಮಧ್ಯಗಂಧಂ ನ ಜಾನಾತಿ ತಥಾ ವಿಷ್ಣುಬಹಿರ್ಮುಖಃ ।**
**ಮೃಗಾಃ ಶಾಲಂ ಹಿ ಜಿಘ್ರಂತಿ ಕಸ್ತೂರೀಗಂಧಮಿಚ್ಛವಃ ॥ ೫೩ ॥**

**ಸ್ವನಾಭಿಸ್ಥಂ ನ ಜಾನಂತಿ ತಥಾ ವಿಷ್ಣುಬಹಿರ್ಮುಖಾಃ ।**
**ಉಪದೇಶೋ ಹಿ ಮೂರ್ಖಾಣಾಂ ಯಥಾ ವೈ ನಗನಂದಿನಿ ॥ ೫೪ ॥**

**ತಥೈವ ಚಾನ್ಯಭಕ್ತಾನಾಮುಪದೇಶೋ ನಿರರ್ಥಕಃ ।**
**ಅಹಿನಾ ಚ ಪಯಃ ಪೀತಂ ತತ್ಪಯೋ ಹಿ ವಿಷಾಯತೇ ॥ ೫೫ ॥**

**ತಥೈವ ಚಾನ್ಯಭಕ್ತಾನಾಮುಪದೇಶೋ ವಿಷಾಯತೇ ।**
**ಚಕ್ಷುರ್ವಿನಾ ಯಥಾ ದೀಪಂ ಯಥಾ ದರ್ಪಣಮೇವ ಚ ॥ ೫೬ ॥**

---

ಯೋಜನ ದೂರದಲ್ಲಿ ವಾಸಿಸುತ್ತಾರೆ. ಅವರಲ್ಲಿ ದೂರದಲ್ಲಿರುವವನು ಯಾವನೋ ಒಬ್ಬನು ಗಂಗೆಯ ಫಲವನ್ನೂ ತಿಳಿದಿರುತ್ತಾನೆ. ಹಾಗೆಯೇ ವಿಷ್ಣು ಭಕ್ತಿಯನ್ನೂ ತಿಳಿದಿರುವವನು ಎಲ್ಲಿಯೋ ಒಬ್ಬನಿರುತ್ತಾನೆ. ಒಂಟೆಯು ಪಚ್ಚಕರ್ಪೂರ ಅಗುರುಗಳನ್ನು ನಿತ್ಯವೂ ಹೊರುತ್ತದೆ. ಅವರೊಳಗೆ ಸುವಾಸನೆಯನ್ನು ಅದು ತಿಳಿಯುವುದಿಲ್ಲ. ಅಂತೆಯೇ ವಿಷ್ಣುವಿನಲ್ಲಿ ಆಸೆಯಿಲ್ಲದವನು ಅವನು ಭಕ್ತಿಯನ್ನು ತಿಳಿಯುವುದಿಲ್ಲ. ಕಸ್ತೂರಿ ಗಂಧದ ವಾಸನೆಯನ್ನು ವಾಸಿಸಬೇಕೆಂದೆನ್ನುವ ಕಸ್ತೂರಿ ಮೃಗಗಳು ಸಾಲದ (ಮತ್ತಿ) ಮರದ ವಾಸನೆಯನ್ನು ನೋಡಿ ಸಂತೋಷಪಡುತ್ತವೆ. ಆದರೆ ತಮ್ಮ ಹೊಕ್ಕಳಿನಲ್ಲಿರುವುದನ್ನು ತಿಳಿಯಲಾರವು ಅಂತೆಯೇ ವಿಷ್ಣು ಬಹಿರ್ಮುಖನು ವಿಷ್ಣುವನ್ನು ತಿಳಿಯಲಾರನು. ಎಲೈ ಪಾರ್ವತಿಯೆ ! ಮೂರ್ಖರಿಗೆ ಉಪದೇಶ ಮಾಡುವುದು ಹೇಗೆ ನಿರರ್ಥಕವೋ ಹಾಗೆ ಬೇರೆ ದೇವರಲ್ಲಿ ಭಕ್ತರಾದವರಿಗೆ ಉಪದೇಶಮಾಡುವುದು ಸಾರ್ಥಕವಾಗುವುದಿಲ್ಲ. ಹಾವು ಹಾಲನ್ನು ಕುಡಿದರೆ ಆ ಹಾಲು ಹೇಗೆ ಅದರಲ್ಲಿ ವಿಷವಾಗಿ ಪರಿಣಮಿಸುತ್ತದೆಯೋ ಹಾಗೆ ಬೇರೆ ದೇವರಲ್ಲಿ ಭಕ್ತಿಯುಳ್ಳವರಿಗೆ ಉಪದೇಶವು ವಿಷವಾಗಿ ಪರಿಣಮಿಸುತ್ತದೆ.

೫೬–೬೦. ಕಣ್ಣಿಲ್ಲದಿದ್ದರೆ ದೀಪವೂ ಕನ್ನಡಿಯೂ ಹೇಗೆ ಉಪಯೋಗವಿಲ್ಲವೋ ಹಾಗೆ ವಿಷ್ಣುವಿನಲ್ಲಿ ಆಸಕ್ತಿಯಿಲ್ಲದವರು ಆ ಸ್ವಾಮಿಯ ಹತ್ತಿರದಲ್ಲಿದ್ದರೂ

ಸಮೀಪಸ್ಥಂ ನ ಪಶ್ಯಂತಿ ತಥಾ ವಿಷ್ಣುಂ ಬಹಿರ್ಮುಖಾಃ ।
ಪಾವಕೋ ಹಿ ಯಥಾ ಧೂಮ್ರೈರ್ಯಥಾದರ್ಶೋ ಮಲೇನ ಚ ॥ ೫೭ ॥

ಯಥೋಲ್ಬೇನಾವೃತೋ ಗರ್ಭೋ ದೇಹೇ ಕೃಷ್ಣಸ್ತಥಾವೃತಃ ।
ದುಗ್ಧೇ ಸರ್ಪಿಸ್ಸ್ಥಿತಂ ಯದ್ವತ್ತಿಲೇ ತೈಲಂ ತು ಸರ್ವದಾ ॥ ೫೮ ॥

ಚರಾಚರೇ ತಥಾ ವಿಷ್ಣುಃ ದೃಶ್ಯತೇ ನಗನಂದಿನಿ ।
ಏಕಸೂತ್ರೇ ಮಣಿಗಣಾ ಧಾರ್ಯಂತೇ ಬಹವೋ ಯಥಾ ॥ ೫೯ ॥

ಏವಂ ಬ್ರಹ್ಮಾದಯೋ ಹೀಹ ಸಂಪ್ರೋತಾ ವಿಷ್ಣುಚಿನ್ಮಯೇ ।
ಯಥಾ ಕಾಷ್ಠೇ ಸ್ಥಿತೋ ವಹ್ನಿರ್ಮಥನಾದೇವ ದೃಶ್ಯತೇ ॥ ೬೦ ॥

ಏವಂ ಸರ್ವಗತೋ ವಿಷ್ಣುಃ ಧ್ಯಾನಾದೇವ ಪ್ರದೃಶ್ಯತೇ ।
ಆದಿರೇಕೋ ಭವೇದ್ದೀಪಸ್ತಸ್ಮಾಜ್ಜಾತಾಃ ಸಹಸ್ರಶಃ ॥ ೬೧ ॥

ಏವಮೇಕಸ್ಥಿತೋ ವಿಷ್ಣುಃ ಸರ್ವಂ ವ್ಯಾಪ್ಯ ಜಗತ್ಪ್ರಯೇ ।
ಯಥಾ ಸೂರ್ಯೋದಯೇ ಜ್ಯೋತಿಃ ಪುಷ್ಕರೇ ತಿಷ್ಠತೇ ಸದಾ ॥ ೬೨ ॥

---

ಅವನನ್ನು ನೋಡಲಾರರು. ಬೆಂಕಿಯು ಹೊಗೆಯಿಂದಲೂ ಕನ್ನಡಿಯು ಕೊಳೆಯಿಂದಲೂ ಗರ್ಭದಲ್ಲಿರುವ ಮಕ್ಕಳು ಉಲ್ಬವೆಂಬ ಚರ್ಮದ ಚೀಲದಿಂದಲೂ ಆವರಿಸಿಕೊಂಡಿರುವಂತೆ ಪ್ರಪಂಚದಲ್ಲಿ ಕೃಷ್ಣನು ಆವರಿಸಿಕೊಂಡಿರುವನು ಹಾಲಿನಲ್ಲಿ ತುಪ್ಪವೂ ಎಳ್ಳಿನಲ್ಲಿ ಎಣ್ಣೆಯೂ ಸೇರಿಕೊಂಡಿರುವಂತೆ ಚರಾಚರಗಳಲ್ಲಿ ವಿಷ್ಣುವು ಸೇರಿಕೊಂಡಿರುತ್ತಾನೆ. ಒಂದೇ ದಾರದಲ್ಲಿ ಅನೇಕ ಮಣಿಗಳನ್ನು ಪೋಣಿಸಿರುವಂತೆ ವಿಷ್ಣು ಚಿನ್ಮಯದಲ್ಲಿ ಬ್ರಹ್ಮಾದಿಗಳೆಲ್ಲರೂ ಸೇರಿಕೊಂಡಿದ್ದಾರೆ. ಸೌದೆಯುಲ್ಲಿರುವ ಬೆಂಕಿಯನ್ನು ಕಡೆತದಿಂದ ಹೇಗೆ ಕಾಣಬಹುದೂ ಹಾಗೆ ಎಲ್ಲಕಡೆಯಲ್ಲಿಯೂ ಇರುವ ವಿಷ್ಣುವನ್ನು ಧ್ಯಾನದಿಂದ ಕಾಣಬಹುದು.

೬೧–೬೫. ಮೊದಲು ಒಂದು ದೀಪವಿದ್ದು ಅದರಿಂದ ಸಾವಿರಾರು ದೀಪಗಳನ್ನು ಹತ್ತಿಸಿಕೊಂಡು ಎಲ್ಲಾ ಕಡೆಯಲ್ಲೂ ಇಡುತ್ತೇವೆ ಎಂದರೆ ದೀಪವು ಬೇರೆ ಬೇರೆಯಾದರೂ ಒಂದೇ ಆಯಿತು. ಅದರಂತೆ ವಿಷ್ಣುವು ಒಬ್ಬನಾದರೂ ಅನೇಕ ರೀತಿಯಿಂದ ಜಗತ್ತನ್ನೇ ವ್ಯಾಪಿಸಿಕೊಂಡಿರುತ್ತಾನೆ. ಸೂರ್ಯೋದಯ ಕಾಲದಲ್ಲಿ ಆಕಾಶದಲ್ಲಿರುವ ಸೂರ್ಯನ ಕಾಂತಿಯು ಆ ಆಕಾಶದಲ್ಲಿರುವ ಮೋಡದ

ದೃಶ್ಯತೇ ಬಹುಧಾ ನೀರೇ ಲೋಕೇ ವಿಷ್ಣುಸ್ತಥಾ ಹಿ ಸಃ |
ಮಾರುತಃ ಪ್ರಕೃತಿಸ್ಥೋಽಪಿ ನಾನಾಗಂಧವಹಸ್ಸದಾ || ೬೩ ||

ಈಶ್ವರಸ್ಸರ್ವಜೀವಸ್ಥೋ ಭುಂಕ್ತೇ ಪ್ರಕೃತಿಜಾನ್ಗುಣಾನ್ |
ಶರ್ಕರಾವಿಷಸಂಯೋಗಾನ್ನೀರಂ ಭವತಿ ಯಾದೃಶಂ || ೬೪ ||

ಸ ಭೂತ್ವಾ ತಾದೃಶೋ ಹ್ಯಾತ್ಮಾ ಕರ್ಮಣಾ ಫಲಮಶ್ನುತೇ |
ಉರ್ವೀ ಚ ನೀರಸಂಯೋಗಾನ್ನಾನಾವೃಕ್ಷಾ ತು ಜಾಯತೇ || ೬೫ ||

ಪ್ರಕೃತೇರ್ಗುಣಸಂಯೋಗಾನ್ನಾನಾಯೋನಿಷು ಜಾಯತೇ |
ಗಜೇ ವೈ ಮಶಕೇ ಚೈವ ದೇವೇ ವಾ ಮಾನುಷೇಽಪಿ ವಾ || ೬೬ ||

ನಾಧಿಕೋ ನ ಚ ವೈ ನ್ಯೂನೋ ದೃಷ್ಟೋ ದೇಹೇ ಸ ನಿಶ್ಚಲಃ |
ಬ್ರಹ್ಮಾದಿಸ್ತಂಬಪರ್ಯಂತಾ ಯೇ ಚಾತ್ರ ಭುವಿ ಜನ್ತವಃ || ೬೭ ||

ತೇಷು ಸರ್ವೇಷು ದೃಶ್ಯೇತ ಜಲೇ ಚಂದ್ರಮಸೋ ಯಥಾ |
ಸಚ್ಚಿದಾನಂದಸ್ಸ ಶಿವಃ ಸ ಮಹೇಶೋ ಹಿ ದೃಶ್ಯತೇ || ೬೮ ||

---

ನೀರಿನಲ್ಲಿ ಅನೇಕ ಬಣ್ಣಗಳನ್ನು ಹೊಂದಿ ಹೇಗೆ ಕಾಣುತ್ತದೆಯೋ ಹಾಗೆ ವಿಷ್ಣುವು ಈ ಜಗತ್ತಿನಲ್ಲಿ ಅನೇಕ ರೀತಿಯಾಗಿ ಕಾಣುತ್ತಾನೆ. ವಾಯುವು ವಾಸನೆಗಳನ್ನು ಹೊಂದದೆ ಇರುವುದಾಗಿದ್ದರೂ ಬಗೆ ಬಗೆಯಾದ ವಾಸನೆಗಳನ್ನು ತರುವಂತೆ ಎಲ್ಲಾ ಜೀವರಲ್ಲಿಯೂ ವಿಷ್ಣುವು ಇದ್ದುಕೊಂಡು ತನ್ನ ಸ್ವಭಾವವಲ್ಲದ ಒಗೆ ಬಗೆಯ ಗುಣಗಳನ್ನು ಅನುಭವಿಸುತ್ತಾನೆ. ಸಕ್ಕರೆ ಮತ್ತು ನೀರು ಇವುಗಳ ಸಂಬಂಧದಿಂದ ಒಂದು ಬಗೆಯಾದ ನೀರಾಗುವಂತೆ ತನ್ನ ಕರ್ಮದಿಂದ ಆತ್ಮನು ಆ ಕರ್ಮಕ್ಕೆ ಹೇಳಿರುವ ರೀತಿಯುವನಾಗಿ ಆ ಫಲವನ್ನು ಅನುಭವಿಸುತ್ತಾನೆ. ಭೂಮಿಯು ನೀರಿನ ಸಂಬಂಧದಿಂದ ನಾನಾಮರಗಳಾಗಿ ಹುಟ್ಟುವಂತೆ ಆತ್ಮನು ಪ್ರಕೃತಿಯ ಗುಣ ಸಂಬಂಧದಿಂದ ನಾನಾ ಬಗೆಯಾದ ಜನ್ಮಗಳಲ್ಲಿ ಹುಟ್ಟುತ್ತಾನೆ.

೬೬–೭೦. ಆನೆಯಲ್ಲಾಗಲಿ ಸೊಳ್ಳೆಯಲ್ಲಾಗಲಿ ದೇವತೆಗಳಲ್ಲಾಗಲಿ ಮನುಷ್ಯರಲ್ಲಾಗಲಿ ತಾನು ಆಶ್ರಯಿಸಿರುವ ದೇಹದಲ್ಲಿ ಆತ್ಮನು ನಿಶ್ಚಲನಾಗಿದ್ದುಕೊಂಡು ಹೆಚ್ಚು ಕಡಿಮೆಯನ್ನು ಹೊಂದದೆ ಇರುತ್ತಾನೆ. ಬ್ರಹ್ಮನು ಮೊದಲುಗೊಂಡು ಸಣ್ಣ ಕಡ್ಡಿಯವರೆಗೂ ಪ್ರಪಂಚದಲ್ಲಿ ಎಷ್ಟು ಜಂತುಗಳಿವೆಯೋ ಅವೆಲ್ಲವುಗಳಲ್ಲಿಯೂ ಆತ್ಮನು ನೀರಿನಲ್ಲಿ ಚಂದ್ರನು ಎಲ್ಲ ಕಡೆಯಲ್ಲಿಯೂ ಬೇರೆ ಬೇರೆಯಾಗಿ ಕಾಣುವಂತೆ ಕಾಣಿಸುತ್ತಾನೆ. ಆ ಸ್ವಾಮಿಯು ಸಚ್ಚಿದಾನಂದ

ಸ ವೈ ವಿಷ್ಣುಸ್ತಥಾ ಪ್ರೋಕ್ತಃ ಸೋಽಹಂ ಸರ್ವಗತೋ ಯಥಾ ।
ವೇದಾಂತವೇದ್ಯಸ್ಸರ್ವೇಶಃ ಕಾಲಾತೀತೋ ಹ್ಯನಾಮಯಃ ॥ ೬೯ ॥

ಏವಂ ಮಾಂ ವೇತ್ತಿ ಯೋ ದೇವಿ ಸ ಭಕ್ತೋ ನಾತ್ರ ಸಂಶಯಃ ।
ಏಕೋ ಹಿ ಬಹುಧಾ ಜ್ಞೇಯೋ ಬಹುಧಾಪ್ಯೇಕ ಏವ ಸಃ ॥ ೭೦ ॥

ನಾಮರೂಪವಿಭೇದೇನ ಜಲ್ಪ್ಯತೇ ಬಹುಧಾ ಭುವಿ ।
ಚಕ್ಷುಷಾ ನ ರವೇಃ ಜ್ಯೋತಿರ್ಭಾನುನಾ ಚಕ್ಷುರೇಧತೇ ॥ ೭೧ ॥

ಪರಮಾತ್ಮಾ ತಥಾ ಚಾತ್ಮಾ ಪ್ರತಿದೇಹಂ ತು ಸರ್ವದಾ ।
ಘಟೇ ಘಟೇ ಯಥಾಕಾಶಃ ತಸ್ಮಿನ್ಭಗ್ನೇ ತಥಾ ಸ್ಥಿತಃ ॥ ೭೨ ॥

ರೂಪೇ ರೂಪೇ ತಥಾತ್ಮಾ ಹಿ ಭಗ್ನೇ ತಸ್ಮಿನ್ ಸುನಿಶ್ಚಲಃ ।
ಯಥಾ ಕಾಷ್ಠಮಯಂ ರೂಪಂ ಪತತೇ ಪ್ರಭುಣಾ ವಿನಾ ॥ ೭೩ ॥

---

ನಾಗಿಯೂ ಮಂಗಳಕರನಾಗಿಯೂ ಕಾಣುತ್ತಾನೆ. ಅವನೇ ವಿಷ್ಣುವೆನ್ನಿಸಿಕೊಳ್ಳುತ್ತಾನೆ. ಅವನು ಎಲ್ಲ ಕಡೆಗಳಲ್ಲಿಯೂ ಇರುವನು. ಆ ಸ್ವಾಮಿಯನ್ನು ವೇದಾಂತದಿಂದ ತಿಳಿಯಲು ಸಾಧ್ಯವು. ಕಾಲಕ್ಕೆ ಅಧೀನನಲ್ಲ. ರೋಗಾದಿಗಳಿಗೆ ಸಿಲುಕದವನು. ಈ ರೀತಿಯಾದವನನ್ನು ಯಾವನು ತಿಳಿಯುತ್ತಾನೆಯೋ ಅವನೇ ಭಕ್ತನು. ಇದರಲ್ಲಿ ಸಂಶಯವಿಲ್ಲ. ಅವನು ಒಬ್ಬನಾಗಿದ್ದರೂ ಅನೇಕನಾಗಿರುತ್ತಾನೆ. ಬಹಳ ರೂಪವುಳ್ಳವನಾದರೂ ಒಬ್ಬನೇ ಆಗಿರುತ್ತಾನೆ. ಒಬ್ಬನೇ ಆದರೂ ಹೆಸರು ಆಕಾರಗಳ ಭೇದದಿಂದ ಅನೇಕ ರೀತಿಯಾದವನೆಂದು ಲೋಕದಲ್ಲಿ ಹೇಳುತ್ತಾರೆ.

೭೧–೭೫. ನಮ್ಮ ಕಣ್ಣಿನ ಬೆಳಕಿನಿಂದ ಸೂರ್ಯನ ಬೆಳಕು ಹೆಚ್ಚುವುದಿಲ್ಲ. ಸೂರ್ಯನ ಬೆಳಕಿನಿಂದ ಕಣ್ಣಿನ ಬೆಳಕು ಹೆಚ್ಚುತ್ತದೆ. ಪರಮಾತ್ಮನೂ ಆತ್ಮನೂ ಒಂದೇ ದೇಹದಲ್ಲಿದ್ದುಕೊಂಡು ಯಾವಾಗಲೂ ಇರುತ್ತಾರೆ. ಹಾಗೆ ಪರಮಾತ್ಮನಿಂದ ಆತ್ಮನು ವೃದ್ಧಿ ಹೊಂದುತ್ತಾನೆ. ಪ್ರತಿಯೊಂದೊಂದು ಘಟ (ಗಡಿಗೆ) ದಲ್ಲಿಯೂ ಒಂದೊಂದು ಆಕಾಶವು ಬೇರೆ ಬೇರೆಯಾಗಿರುತ್ತವೆ. ಅವುಗಳು ಒಡೆದು ಹೋಗುತ್ತಲೂ ಆಕಾಶವೆಲ್ಲಾ ಒಂದೇ ಆಗುತ್ತವೆ. ಅದರಂತೆ ಪ್ರತಿಯೊಂದು ರೂಪವೆನ್ನಿಸಿಕೊಳ್ಳುವ ಆತ್ಮದಲ್ಲಿಯೂ ಆತ್ಮನಿರುತ್ತಾನೆ. ಆ ರೂಪವು ಹೋದಮೇಲೆ ಒಬ್ಬನೇ ಆತ್ಮನು ನಿಶ್ಚಲನಾಗಿರುತ್ತಾನೆ. ಕಾಪಾಡುವವರು ಇಲ್ಲದ್ದರಿಂದ ಮರದ ವಿಕಾರವಾದ ರೂಪವು ಬಿದ್ದುಹೋಗುವಂತೆ ಕ್ರಿಮಿ

ಕ್ರಿಮಿಮೇದೋಮಯೋ ದೇಹೋ ಭ್ರಶ್ಯತೇ ಚಾತ್ಮನಾ ವಿನಾ ।
ಹೇಮ್ನೋ ಭವಂತಿ ವರ್ಣಾಶ್ಚ ವಹ್ನಿನಾ ಯಾಂತಿ ಪೂರ್ವವತ್ || ೭೪ ||

ತದ್ವಜ್ಜೀವಾಃ ಪ್ರಪದ್ಯಂತೇ ಭಕ್ತ್ಯಾ ವೈ ಪೂರ್ವರೂಪತಾಂ ।
ಸುಘನೇನಾವೃತಂ ಸೂರ್ಯಂ ಮೂಢೋ ಮನ್ಯೇತ ನಿಷ್ಪ್ರಭಂ || ೭೫ ||

ತಥಾಜ್ಞಾನಧಿಯೋ ಮೂಢಾ ಜಾನಂತಿ ನ ತಮೀಶ್ವರಂ ।
ನಿರ್ವಿಕಲ್ಪಂ ನಿರಾಕಾರಂ ವೇದಾಂತೈಃ ಪರಿಪಠ್ಯತೇ || ೭೬ ||

ನಿರಾಕಾರಾಚ್ಚ ಸಾಕಾರಂ ಸ್ವೇಚ್ಛಯಾ ಚ ಪ್ರಕಾಶತೇ ।
ತಸ್ಮಾತ್ಸಂಜಾತಮಾಕಾಶಂ ನಿಶ್ಶಬ್ದಂ ಗುಣವರ್ಜಿತಂ || ೭೭ ||

ಆಕಾಶಾನ್ಮಾರುತೋ ಜಾತಃ ಸಶಬ್ದಂ ಚ ತದಾಽಭವತ್ ।
ತಸ್ಮಾತ್ಪ್ರಜಾಯತೇ ಜ್ಯೋತಿಃ ಜ್ಯೋತಿಷಶ್ಚಾಭವಜ್ಜಲಂ || ೭೮ ||

---

ಮೇದಸ್ಸುಗಳಿಂದ ಕೂಡಿದ ಈ ದೇಹವು ಆತ್ಮವಿಲ್ಲದಿದ್ದರೆ ಬಿದ್ದುಹೋಗುತ್ತದೆ. ಚಿನ್ನವು ಬೇರೆ ಬೇರೆ ಬಣ್ಣವಾಗಿದ್ದರೂ ಬೆಂಕಿಗೆ ಹಾಕಿ ಕಾಯಿಸಿದ ಮೇಲೆ ಮೊದಲನೇ ರೂಪವನ್ನೇ ಹೊಂದುತ್ತದೆ. ಅದರಂತೆಯೇ ಜೀವನು ಸ್ವಾಮಿಯಲ್ಲಿರುವ ಭಕ್ತಿಯಿಂದ ಮೊದಲನೆಯ ರೂಪವನ್ನು ಹೊಂದುತ್ತಾನೆ ಮೂಢನಾದವನು ಮೇಘದಿಂದ ಮುಚ್ಚಿದ ಸೂರ್ಯನನ್ನು ಪ್ರಕಾಶವಿಲ್ಲದವನೆಂದು ತಿಳಿಯುತ್ತಾನೆ. ಅದರಂತೆಯೇ ಅಜ್ಞಾನಿಯಾದ ಮೂಢನು ಈಶ್ವರನನ್ನು ತಿಳಿಯಲಾರನು.

೭೬-೮೦. ಆ ಸ್ವಾಮಿಯು ಆಕಾರವಿಲ್ಲದವನೆಂದೂ ಬೇರೆಯ ರೀತಿಯಿಲ್ಲದವನೆಂದೂ ವೇದಾಂತದಲ್ಲಿ ಹೇಳಿದೆ. ಆ ನಿರಾಕಾರದಿಂದಲೇ ಆಕಾರವುಳ್ಳವಿಕೆಯು ಆ ಸ್ವಾಮಿಯ ಸ್ವೇಚ್ಛೆಯಿಂದಲೇ ಪ್ರಕಾಶಿಸುತ್ತದೆ. ಮೊದಲು ಆ ಸ್ವಾಮಿಯಿಂದ ಆಕಾಶವು ಹುಟ್ಟಿತು. ಅದು ಗುಣವನ್ನು ಹೊಂದದೆ ನಿರ್ಗುಣವಾಗಿದ್ದಿತು. ಶಬ್ದವು ಕೂಡ ಇರಲಿಲ್ಲ. ಅನಂತರ ಆ ಆಕಾಶದಿಂದ ಗಾಳಿಯು ಹುಟ್ಟಿತು. ಆಗ ಆಕಾಶವು ಶಬ್ದವುಳ್ಳದ್ದಾಗಿ ಆಯಿತು. ಆ ಗಾಳಿಯಿಂದ ಜ್ಯೋತಿಸ್ಸು ಹುಟ್ಟಿತು. ಅನಂತರ ಆ ಜ್ಯೋತಿಸ್ಸಿನಿಂದ ನೀರು ಹುಟ್ಟಿತು. ಆ ನೀರಿನಲ್ಲಿ ಹಿರಣ್ಯಗರ್ಭನು

ತಜ್ಜಲೇ ರುಕ್ಮಗರ್ಭಶ್ಚ ವಿರಾಡ್ವೈ ವಿಶ್ವರೂಪಧೃತ್ ।
ತಸ್ಯ ನಾಭಿಸರೋಜೇ ಚ ಬ್ರಹ್ಮಾಂಡಾನಾಂ ಚ ಕೋಟಯಃ ॥ ೭೯ ॥

ಪ್ರಕೃತಿಃ ಪುರುಷಸ್ತಸ್ಮಾನ್ನಿರ್ಭಿನ್ನಂ ತು ತ್ರಿಧಾ ಜಗತ್ ।
ತಯೋರ್ದ್ವಯೋಶ್ಚ ಸಂಯೋಗಾತ್ತತ್ತ್ವಯೋಗೋಽಭ್ಯಜಾಯತ ॥ ೮೦ ॥

ಸಾತ್ತ್ವಿಕೀ ವಿಷ್ಣುಸಂಭೂತಿಃ ಬ್ರಹ್ಮಾ ವೈ ರಾಜಸಃ ಸ್ಮೃತಃ ।
ಶಿವಸ್ತು ತಾಮಸಃ ಪ್ರೋಕ್ತಃ ಏಭಿಸ್ಸರ್ವಂ ಪ್ರಕೀರ್ತಿತಃ ॥ ೮೧ ॥

ಏಷಾ ಬ್ರಾಹ್ಮೀ ಸ್ಥಿತಿರ್ಲೋಕೇ ಕರ್ಮಬೀಜಾನುಸಾರತಃ ।
ತಥಾ ಸಂಹರತೇ ವಿಷ್ಣುಃ ಸರ್ವಲೋಕಾನಶೇಷತಃ ॥ ೮೨ ॥

ತಿಷ್ಠತ್ಯಸೌ ತದಾ ತತ್ರ ಭಗವಾನ್ವಿಷ್ಣುರವ್ಯಯಃ ।
ಏವಂ ಸರ್ವಗತೋ ವಿಷ್ಣುರಾದಿಮಧ್ಯಾನ್ತ ಏವ ಚ ॥ ೮೩ ॥

---

ಹುಟ್ಟಿದನು ಅವನು ವಿರಾಟ್‌ಸ್ವರೂಪನು. ವಿಶ್ವರೂಪನು. ಅವನ ನಾಭಿಕಮಲದಲ್ಲಿ ಕೋಟಿ ಬ್ರಹ್ಮಾಂಡಗಳು ಹುಟ್ಟಿದುವು. ಆ ಬ್ರಹ್ಮಾಂಡದಲ್ಲಿ ಆ ಸ್ವಾಮಿಯಿಂದ ಪ್ರಕೃತಿಯೂ ಪುರುಷನೂ ಹುಟ್ಟಿದರು. ಅದರಿಂದ ಸಾತ್ವಿಕ, ರಾಜಸ, ತಾಮಸಗಳೆಂದು ಈ ಪ್ರಪಂಚವು ಮೂರು ಬಗೆಯಾಯಿತು. ಮತ್ತು ಆ ಪ್ರಕೃತಿ ಪುರುಷರ ಸಂಬಂಧದಿಂದ ಈ ತತ್ವಯೋಗವೂ ಹುಟ್ಟಿತು.

೮೧. ಆ ತತ್ವಯೋಗಗಳು ಸಾತ್ವಿಕ, ರಾಜಸ, ತಾಮಸಗಳೆಂದು ಮೂರು ಬಗೆಯು. ವಿಷ್ಣುವು ಸಾತ್ವಿಕಸ್ವರೂಪನು. ಬ್ರಹ್ಮನು ರಾಜಸಸ್ವರೂಪನು. ಶಿವನು ತಾಮಸಸ್ವರೂಪನು. ಈ ಮೂರರಿಂದಲೇ ಪ್ರಪಂಚವು ತುಂಬಿಕೊಂಡಿರುವುದು.

೮೨. ಕರ್ಮಗಳ ಬೀಜಾನುಸಾರದಿಂದ ಬ್ರಹ್ಮನು ಸೃಷ್ಟಿಸುತ್ತಾನೆ. ಅಂತೆಯೇ ವಿಷ್ಣುವು ಸರ್ವಲೋಕಗಳನ್ನೂ ಸಂಹರಿಸುತ್ತಾನೆ.

೮೩. ಆಯಾ ಸೃಷ್ಟಿಸಿದ ಪದಾರ್ಥಗಳಲ್ಲಿಯೇ ಅವ್ಯಯನಾದ ವಿಷ್ಣುವು ತಾನೂ ಇರುತ್ತಾನೆ. ಈ ರೀತಿಯಾಗಿ ಆದಿ, ಮಧ್ಯ, ಅಂತ್ಯಗಳಲ್ಲಿಯೂ ಎಲ್ಲರಲ್ಲಿಯೂ ಯಾವಾಗಲೂ ಆ ವಿಷ್ಣುವಿರುತ್ತಾನೆ.

**ಅವಿದ್ಯಯಾ ನ ಜಾನಂತಿ ಲೋಕಾ ನ್ವೈ ಕರ್ಮನಿಶ್ಚಿತಾಃ ।**
**ವರ್ಣೋಚಿತಾನಿ ಕರ್ಮಾಣಿ ಯಃ ಕಾಲೇಷು ಪ್ರಕಾರಯೇತ್ ॥ ೮೪ ॥**

**ತತ್ಕರ್ಮ ವಿಷ್ಣು ದೈವತ್ಯಂ ನ ಹಿ ಗರ್ಭಸ್ಯ ಕಾರಣಂ ।**
**ವೇದಾಂತಶಾಸ್ತ್ರಂ ಮುನಿಭಿಃ ಸರ್ವದೈವ ವಿಚಾರ್ಯತೇ ॥ ೮೫ ॥**

**ಬ್ರಹ್ಮಜ್ಞಾನಮಿದಂ ದೇಹಂ ಯತ್ತ್ವಹಂ ಪರಿಕೀರ್ತಯೇ ।**
**ಶುಭಾಶುಭಸ್ಯ ಕಾರ್ಯಂ ಚ ಕಾರಣಂ ಮನ ಏವ ಹಿ ॥ ೮೬ ॥**

**ಮನಸಾ ಶುದ್ಧ್ಯತೇ ಸರ್ವಂ ತದಾ ಬ್ರಹ್ಮಸನಾತನಂ ।**
**ಮನ ಏವ ಸದಾ ಬಂಧುರ್ಮನ ಏವ ಸದಾ ರಿಪುಃ ॥ ೮೭ ॥**

**ಮನಸಾ ತಾರಿತಾಃ ಕೇಚಿನ್ಮನಸಾ ಪಾತಿತಾಶ್ಚ ಕೇ ।**
**ಮಧ್ಯೇ ಸರ್ವಪರಿತ್ಯಾಗೀ ಬಾಹ್ಯೇ ಕರ್ಮ ತಥಾಚರನ್ ॥ ೮೮ ॥**

---

೮೪. ಅವರವರ ಕರ್ಮದಲ್ಲಿ ಆಸಕ್ತರಾದ ಜನರು ಅವಿದ್ಯೆಯಿಂದ ಅತನನ್ನು ತಿಳಿಯುವುದಿಲ್ಲ. ಆ ಸ್ವಾಮಿಯು ಆ ವರ್ಣಕ್ಕೆ ಯೋಗ್ಯವಾದ ಕೆಲಸವನ್ನು ನಿಯಮಿಸಿರುವುದರಿಂದ ಅವರು ಆ ರೀತಿಯಲ್ಲಿ ತಿಳಿಯರು.

೮೫. ವಿಷ್ಣುವೇ ದೇವರಾಗಿ ಉಳ್ಳ ಕರ್ಮಗಳು ಗರ್ಭದಲ್ಲಿ ಹುಟ್ಟುವುದಕ್ಕೆ ಕಾರಣಗಳಾಗುವುದಿಲ್ಲ. ಆದ್ದರಿಂದಲೇ ಮುನಿಗಳು ವೇದಾಂತ ಶಾಸ್ತ್ರವನ್ನು ಯಾವಾಗಲೂ ಚರ್ಚಿಸುತ್ತಿರುತ್ತಾರೆ.

೮೬. ನಾನು ಎಂದೆನಿಸಿಕೊಳ್ಳುವ ಈ ದೇಹವೇ ಬ್ರಹ್ಮಜ್ಞಾನ ರೂಪವಾದುದು. ಒಳ್ಳೆಯದು ಕೆಟ್ಟದ್ದು ಈ ಕೆಲಸಗಳಿಗೆ ಮನಸ್ಸೇ ಕಾರಣವು.

೮೭. ಮನಸ್ಸಿನಿಂದಲೇ ಎಲ್ಲವೂ ಶುದ್ಧವಾಗುತ್ತವೆ. ಆಗಲೇ ಸನಾತನ ನಾದ ಬ್ರಹ್ಮನು ತಿಳಿಯುವನು. ಮನಸ್ಸೇನೇ ಯಾವಾಗಲೂ ಬಂಧುವು. ಮನಸ್ಸೇನೇ ಯಾವಾಗಲೂ ಶತ್ರುವು.

೮೮. ಎಷ್ಟೋ ಜನರು ಮನಸ್ಸಿನಿಂದಲೇ ಉದ್ಧಾರವಾಗಿದ್ದಾರೆ. ಆ ಮನಸ್ಸಿನಿಂದಲೇ ಎಷ್ಟೋ ಜನರು ನಾಶವಾಗಿದ್ದಾರೆ. ಮಧ್ಯದಲ್ಲಿ ಬಾಹ್ಯ ಕರ್ಮಗಳನ್ನು ಮಾಡುತ್ತ ಎಲ್ಲ ಸಂಗವನ್ನೂ ಬಿಟ್ಟಿರುತ್ತಾನೆ.

ಏವಮೇವ ಕೃತಂ ಕರ್ಮ ದೃಶ್ಯತೇ ಗಜದಂತವತ್ ।
ಆಕಲ್ಪಂ ಕರ್ಮ ಕುರ್ವಂಸ್ತು ಕುರ್ವನ್ನಪಿ ನ ಲಿಪ್ಯತೇ ॥ ೮೯ ॥

ಪದ್ಮಪತ್ರಂ ಯಥಾ ನೀರಲೇಶೈರಪಿ ನ ಲಿಪ್ಯತೇ ।
ಅಗ್ನಿರಗ್ನೌ ಯಥಾ ಕ್ಷಿಪ್ತೋ ಮುಕ್ತ್ಯಾ ಚ ಕಿಂ ಪ್ರಯೋಜನಂ ॥ ೯೦ ॥

ಯದಾ ಭಕ್ತಿರಸೋ ಜ್ಞಾತೋ ನ ಮುಕ್ತೀ ರೋಚತೇ ತದಾ ।
ಯೋಗೈರಷ್ಟವಿಧೈರ್ವಿಷ್ಣುರ್ನ ಪ್ರಾಪ್ಯಶ್ಚೇಹ ಜನ್ಮನಿ ॥ ೯೧ ॥

ಭಕ್ತ್ಯಾ ವಾ ಪ್ರಾಪ್ಯತೇ ವಿಷ್ಣುಃ ಸರ್ವದಾ ಸುಲಭೋ ಭವೇತ್ ।
ವೇದಾಂತ್ಯೈಃ ಪ್ರಾಪ್ಯತೇ ಜ್ಞಾನಂ ಜ್ಞಾನೇನ ಜ್ಞೇಯಮೇವ ಚ ॥ ೯೨ ॥

---

೮೯. ಈ ರೀತಿಯಾಗಿ ಮಾಡಿದ ಕರ್ಮಗಳು ಕಪ್ಪಾದ ಆನೆಯಲ್ಲಿ ಬೆಳ್ಳಗಿರುವ ದಂತವು ಎದ್ದು ಕಾಣುವಂತೆ ಹುಟ್ಟಿ ಕಾಣುತ್ತವೆ. ಜ್ಞಾನಿಯಾದವನು ಯುಗಪರ್ಯಂತವಾಗಿಯೂ ಕರ್ಮವನ್ನು ಮಾಡಿದರೂ ಅದರಿಂದ ಲೇಪವನ್ನು ಹೊಂದುವುದಿಲ್ಲ.

೯೦. ಪದ್ಮದ ಎಲೆಯ ಮೇಲೆ ನೀರು ಬಿದ್ದರೆ ಆ ನೀರಿನ ಲೇಶವೂ ಕೂಡ ಆ ಎಲೆಗೆ ಅಂಟಿಕೊಳ್ಳುವುದಿಲ್ಲ. ಬೆಂಕಿಯನ್ನು ಬೆಂಕಿಯಲ್ಲಿ ಹಾಕಿದರೆ ಅದರಿಂದ ಪ್ರಯೋಜನವೇನು ? ಅದರಂತೆ ಮುಕ್ತಿಯಿಂದ ಪ್ರಯೋಜನವಿಲ್ಲ.

೯೧. ಭಕ್ತಿಯನ್ನು ತಿಳಿದು ಅದನ್ನು ಆಚರಿಸುತ್ತಿದ್ದರೆ ಮುಕ್ತಿಯು ರುಚಿಸುವುದೇ ಇಲ್ಲ. ಭಕ್ತಿಯನ್ನು ಬಿಟ್ಟು ಎಂಟು ಬಗೆಯಾದ ಯೋಗಗಳನ್ನು ಮಾಡಿದರೂ ಕೂಡ ವಿಷ್ಣುವು ಈ ಜನ್ಮದಲ್ಲಿ ಸಿಕ್ಕುವುದಿಲ್ಲ.

೯೨. ಭಕ್ತಿಯಿಂದ ವಿಷ್ಣುವು ಸಿಕ್ಕುತ್ತಾನೆ. ಅದರಿಂದ ಯಾವಾಗಲೂ ಸುಲಭನು. ವೇದಾನ್ತದಿಂದ ಜ್ಞಾನವೂ ಆ ಜ್ಞಾನದಿಂದ ಅದಕ್ಕೆ ವಿಷಯವಾದ ಪದಾರ್ಥವೂ (ಬ್ರಹ್ಮನೂ) ಸಿಕ್ಕುತ್ತದೆ.

**ತತ್ತು ಜ್ಞೇಯಂ ಯದಾ ಪ್ರಾಪ್ತಂ ತದಾ ಶೂನ್ಯಮಿದಂ ಜಗತ್ ।**
**ಖಲೇನ ಪ್ರಾಪ್ಯತೇ ವಿಷ್ಣುಃ ಯೋಗೈರಷ್ಟವಿಧೈಶ್ಚ ಕಿಂ ॥ ೯೩ ॥**

**ಸರ್ವೇಷಾಮೇವ ಭಾವಾನಾಂ ಭಾವಶುದ್ಧಿಃ ಪ್ರಶಸ್ಯತೇ ।**
**ಆಲಿಂಗ್ಯತೇ ಯಥಾ ಕಾನ್ತಾ ಯಥಾ ಭಾವಸ್ತಥಾ ಫಲಂ ॥ ೯೪ ॥**

**ಉಪಾನದ್ಯುಕ್ತಪಾದೋ ಹಿ ವೇತ್ತಿ ಚರ್ಮವತೀಂ ಮಹೀಂ ।**
**ಬುದ್ಧಿರ್ಯಥಾವಿಧಾ ಯಸ್ಯ ತದ್ವಚ್ಚ ಮನ್ಯತೇ ಜಗತ್ ॥ ೯೫ ॥**

**ದುಗ್ಧೇನ ಸಿಕ್ತೋ ನಿಂಬೋಽಪಿ ಕಟುಭಾವಂ ನ ತು ತ್ಯಜೇತ್ ।**
**ಪ್ರಕೃತಿಂ ಯಾಂತಿ ಭೂತಾನಿ ಹ್ಯುಪದೇಶೋ ನಿರರ್ಥಕಃ ॥ ೯೬ ॥**

---

೯೩. ಆ ವೇದಾಂತದ ಜ್ಞಾನದಿಂದ ಬ್ರಹ್ಮನನ್ನು ತಿಳಿದರೆ ಆಗ ನಮಗೆ ಪ್ರಪಂಚವೇ ಶೂನ್ಯವಾಗಿ ಕಾಣುತ್ತದೆ. ಅವಕ್ಕೂ ಭಕ್ತಿಯು ಬೇಕೇಬೇಕು. ಅಯೋಗ್ಯನಾದವನು ಎಂಟು ಬಗೆಯಾದ ಯೋಗಗಳನ್ನು ಮಾಡಿದರೂ ಭಕ್ತಿಯಿಲ್ಲದುದರಿಂದ ವಿಷ್ಣುವು ಸಿಕ್ಕುವುದಿಲ್ಲ.

೯೪. ಯಾವ ರೀತಿಯಾದ ಭಾವವನ್ನಿಟ್ಟರೂ ಅದರದರಲ್ಲಿ ಶುದ್ಧವಾದ ಭಾವವಿರಬೇಕು. ಕಾಂತೆಯನ್ನು ಯಾವ ಭಾವದಿಂದ ಆಲಂಗಿಸಿಕೊಳ್ಳುತ್ತೀವೆಯೋ ಅದಕ್ಕೆ ತಕ್ಕ ಫಲವು ಸಿಕ್ಕುತ್ತದೆ.

೯೫. ಕಾಲಿಗೆ ಚರ್ಮದ ಕೆರವನ್ನು ಹಾಕಿಕೊಂಡಿರುವವನು ಭೂಮಿಯನ್ನೆಲ್ಲಾ ಚರ್ಮದಿಂದ ಕೂಡಿದುದನ್ನಾಗಿ ತಿಳಿಯುತ್ತಾನೆ. ಯಾವನಿಗೆ ಬುದ್ಧಿಯು ಯಾವ ರೀತಿಯಾಗಿದೆಯೋ ಅದರಂತೆ ಅವನು ಪ್ರಪಂಚವನ್ನು ತಿಳಿಯುತ್ತಾನೆ.

೯೬. ಬೇವಿನ ಮರಕ್ಕೆ ಹಾಲನ್ನು ಹಾಕಿ ಬೆಳಸಿದರೂ ಅದು ಅದರ ಕಹಿಯನ್ನು ಬಿಡುವುದಿಲ್ಲ. ಉಪದೇಶ ಮಾಡಿದರೂ ಪ್ರಾಣಿಗಳು ತಮ್ಮ ಸ್ವಭಾವವನ್ನು ಬಿಡುವುದಿಲ್ಲ. ಉಪದೇಶವು ಸಾರ್ಥಕವಿಲ್ಲದೆ ಹೋಗುತ್ತವೆ.

ಛಿತ್ತ್ವಾ ವೈ ಸಹಕಾರಂ ಚ ಫಲಂ ಪತ್ರಂ ಕಥಂ ಭವೇತ್ ।
ಇಂದ್ರಿಯಾಣಾಂ ಸುಖಾರ್ಥೇನ ವೃಥಾ ಜನ್ಮ ಕಥಂ ನಯೇತ್ ॥ ೯೭ ॥

ಛಿತ್ತ್ವಾ ಕರ್ಪೂರಖಂಡಾನಿ ಕೋದ್ರವಾಣಾಂ ಚ ರಕ್ಷಣಂ ।
ಸುಖೇಚ್ಛಯಾ ಚೇಂದ್ರಿಯಾಣಾಂ ತಥಾ ಜನ್ಮ ಕಥಂ ಭವೇತ್ ॥ ೯೮ ॥

ಸೌವರ್ಣಲಾಂಗಲೇ ಭೂಮಿರರ್ಕತಳಸ್ಯ ಹೇತವೇ ।
ಇಂದ್ರಿಯಾಣಾಂ ಸುಖಾರ್ಥೇನ ವೃಥಾ ಜನ್ಮ ಕಥಂ ಭವೇತ್ ॥ ೯೯ ॥

ಸ್ಥಾಲ್ಯಾಂ ವೈಡೂರ್ಯಮಯ್ಯಾಂ ಹಿ ಪಚ್ಯತೇ ವೃಷಲಂ ಯಥಾ ।
ದಹ್ಯತೇ ಚಾಗದಸ್ತದ್ವದ್ವೃಥಾ ಜನ್ಮ ಕಥಂ ಭವೇತ್ ॥ ೧೦೦ ॥

---

೯೭. ಮಾವಿನ ಮರವನ್ನು ಕತ್ತರಿಸಿದರೆ ಹಣ್ಣು ಹೂವು ಎಲೆಗಳು ಹೇಗೆ ಬಂದಾವು? ಇಂದ್ರಿಯಗಳನ್ನು ಸುಖಪಡಿಸುತ್ತಿದ್ದರೆ ಜನ್ಮವು ವ್ಯರ್ಥವಾಗುತ್ತದೆ. ಎಂದರೆ ಮಾವಿನ ಮರವನ್ನು ಕತ್ತರಿಸುವಿಕೆಯು ತೊಂದರೆಪಡಿಸಿ ಹಣ್ಣು ಹೂವು ಗಳನ್ನು ಬಿಡದಂತೆ ಮಾಡುವ ಹಾಗೆ ಇಂದ್ರಿಯಲೋಲುಪತೆಯು ಮನುಷ್ಯನ ಉತ್ತಮವಾದ ಮುಕ್ತಿಯನ್ನು ನಾಶಮಾಡುತ್ತದೆ.

೯೮. ಕರ್ಪೂರದ ಕೊಂಬೆಗಳನ್ನೆಲ್ಲಾ ಕತ್ತರಿಸಿ ಹಾಕಿ ಮರವನ್ನು ಕಾಪಾಡದೆ ಇಂದ್ರಿಯಗಳ ಸುಖದಿಂದ ಕಗ್ಗಲಿಯ ರಕ್ಷಣೆಯಂತೆ ಅಕಾರ್ಯವನ್ನು ಮಾಡಿದರೆ ಜನ್ಮವನ್ನು ನಾಶಮಾಡಿಕೊಳ್ಳುತ್ತಾನೆ.

೯೯. ಇಂದ್ರಿಯಗಳ ಸುಖಕ್ಕೋಸ್ಕರ ಜನ್ಮವನ್ನು ಸಾರ್ಥಕಪಡಿಸಿಕೊಳ್ಳು ವವನು ಚಿನ್ನದ ಗಡ್ಡೆ ಬೆಳೆಯುವ ಭೂಮಿಯಲ್ಲಿ ಎಕ್ಕದ ಗಡ್ಡೆಯನ್ನು ಹಾಕಿ ಬೆಳೆದಂತಾಗುವುದು.

೧೦೦. ವೈಡೂರ್ಯದಿಂದ ಕೂಡಿರುವ ತಪ್ಪಲೆಯು ಇರುತ್ತಿರಲಾಗಿ ಮಡಕೆ ಯಲ್ಲಿ ಅಡಿಗೆ ಮಾಡಬಹುದೆ? ಉತ್ತಮವಾದ ರೋಗವನ್ನು ನಾಶಮಾಡುವ ಔಷಧಿಯನ್ನು ಸುಡಬಹುದೆ? ಇಂದ್ರಿಯಸುಖಕ್ಕೋಸ್ಕರ ಜನ್ಮವನ್ನು ನಾಶ ಮಾಡಿಕೊಳ್ಳುವುದು ಇದರಂತೆಯೇ ಆಗುತ್ತದೆ.

ನಿಧಾನಂ ಚ ಗೃಹೆ ಕ್ಷಿಪ್ತ್ವಾ ಶುನಸ್ಸೇವಾಂ ಕಥಂ ಚರೇತ್ ।
ತ್ಯಕ್ತ್ವಾ ವೈಕುಂಠನಾಥಂ ತಮನ್ಯಮಾರ್ಗೇ ಕಥಂ ರಮೇತ್ ॥ ೧೦೧ ॥

ಭಕ್ತಿಹೀನೈಶ್ಚತುರ್ವೇದೈಃ ಪಠಿತೈಃ ಕಿಂ ಪ್ರಯೋಜನಂ ।
ಶ್ವಪಚೋ ಭಕ್ತಿಯುಕ್ತಸ್ತು ತ್ರಿದಶೈರಪಿ ಪೂಜ್ಯತೇ ॥ ೧೦೨ ॥

ಸ್ವಕರೇ ಕಂಕಣಂ ಬಧ್ವಾ ದರ್ಪಣೈಃ ಕಿಂ ಪ್ರಯೋಜನಂ ।
ಬ್ರಹ್ಮರುದ್ರಾದಿಭಿರ್ದೇವೈರ್ದತ್ತೈಶ್ವರ್ಯಾಃ ಸ್ವಸೇವಕಾಃ ॥ ೧೦೩ ॥

ಅರ್ಪಿತಂ ನೈವ ಗೃಹ್ಣನ್ತಿ ಪ್ರಭೋರ್ಶ್ಚ್ಯುವ ತು ಕಿಂಚನ ।
ಅಕಿಂಚನಾಯ ಭಕ್ತಾಯ ದಾತುಂ ನಾಲಂ ಗತೋ ವಶೇ ॥ ೧೦೪ ॥

---

೧೦೧. ನಿಧಿಯನ್ನು ಮನೆಯಲ್ಲಿಟ್ಟುಕೊಂಡಿದ್ದು ನಾಯಿಯನ್ನು ಸೇವಿಸ ಬಹುದೆ? (ಆಳಾಗಿರಬಹುದೆ?) ವೈಕುಂಠನಾಥನಾದ ಆ ಸ್ವಾಮಿಯನ್ನು ಬಿಟ್ಟು ಬೇರೇ ಮಾರ್ಗದಲ್ಲಿ ಹೋಗಬಹುದೆ? ವಿಷ್ಣುವನ್ನು ಬಿಟ್ಟು ಬೇರೆ ದೇವರ ಸೇವೆ ಯನ್ನು ಮಾಡಿದರೆ ನಿಧಿಯನ್ನು ಬಿಟ್ಟು ನಾಯಿಯನ್ನು ಸೇವಿಸಿದಂತಾಗುವುದು

೧೦೨. ಭಕ್ತಿಯಿಲ್ಲದಿದ್ದರೆ ನಾಲ್ಕು ವೇದಗಳನ್ನು ಓದಿದರೆ ತಾನೇ ಪ್ರಯೋ ಜನವೇನು? ಭಕ್ತಿಯುಳ್ಳವನಾದರೆ ಅವನು ಚಂಡಾಲನಾದರೂ ದೇವತೆಗಳು ಅವನನ್ನು ಪೂಜಿಸುತ್ತಾರೆ.

೧೦೩. ತನ್ನ ಕೈಯ್ಯಲ್ಲಿ ಕಟ್ಟಿಕೊಂಡಿರುವ ಕಂಕಣವನ್ನು ನೋಡಿಕೊಳ್ಳಲು ಕನ್ನಡಿ ಬೇಕಾಗುವುದೇ? ಆ ಸ್ವಾಮಿಯ ಸೇವಕರಿಗೆ ಬ್ರಹ್ಮರುದ್ರಾದಿಗಳು ಐಶ್ವರ್ಯವನ್ನು ಕೊಡುತ್ತಾರೆ. ಆ ವಿಷ್ಣುವೇ ದೇಹದಲ್ಲಿರುವಾಗ ಮಿಕ್ಕವರನ್ನು ಚಿಂತಿಸಬಾರದು. ಹಾಗೆ ಭಕ್ತಿಯುಳ್ಳ ವಿಷ್ಣುಚಿಂತಕರಿಗೆ ಇತರ ದೇವತೆಗಳೂ ಕೂಡ ಬೇಕಾದುದನ್ನು ಕೊಡುತ್ತಾರೆ.

೧೦೪. ಆ ವಿಷ್ಣುವಿನಲ್ಲಿ ಭಕ್ತಿಯಿರುವವರು ಮತ್ತೊಬ್ಬರು ಏನನ್ನು ಕೊಟ್ಟರೂ ಆ ಸ್ವಾಮಿಯ ಧ್ಯಾನವು ಹೋಗುವುದಲ್ಲಾ ಎಂಬ ಭೀತಿಯಿಂದ ತೆಗೆದುಕೊಳ್ಳುವುದಿಲ್ಲ. ಬಡವನಾದವನು ಭಕ್ತನಾಗಿದ್ದರೆ ಅವನಿಗೆ ಕೊಡುವ ಪದಾರ್ಥವು ಯಾವುದೂ ನಮ್ಮಲ್ಲಿರುವುದಿಲ್ಲ. ಎಂದರೆ ಎಲ್ಲವನ್ನೂ ಕೊಟ್ಟರೂ ತೀರದು.

ನಿಶ್ಶರೀರಸ್ಯ ಕೃಷ್ಣಸ್ಯ ತತ್ರ ಧ್ಯಾನಂ ಕಥಂ ಭವೇತ್ ।
ಸಾಕಾರಂ ಬಹವೋ ಪೃಷ್ಟ್ವಾ ಗತಾ ಭಕ್ತಾಶ್ಚ ತತ್ಪದಂ ॥ ೧೦೫ ॥

ಪೂಜಾ ಭಕ್ತಿಃ ಕಥಂ ಶೂನ್ಯೇ ಸಾಕಾರೇ ಕಥ್ಯತೇ ಬುಧೈಃ ।
ಶೂನ್ಯಮಾರ್ಗೇ ಕಥಂ ಯಾತಿ ಆಧಾರೇಣ ವಿನಾ ನರಃ ॥ ೧೦೬ ॥

ಸಾಕಾರೋ ಯಸ್ಸ್ವಯಂ ಸ್ವಾಮೀ ನಿರಾಕಾರಸ್ಸ ವೈ ಪ್ರಭುಃ ।
ಸಾಕಾರೇ ಹಿ ಸುಖಂ ಚೈವ ನಿರಾಕಾರೇ ನ ದೃಶ್ಯತೇ ॥ ೧೦೭ ॥

ಸೇವಾರಸಶ್ಚ ಸಾಕಾರೇ ನಿರಾಕಾರೇ ನ ವೈ ರಸಃ ।
ಸಾಕಾರೇಣ ನಿರಾಕಾರೋ ಜ್ಞಾಯತೇ ಸ್ವಯಮೇವ ಹಿ ॥ ೧೦೮ ॥

---

೧೦೫. ಕೃಷ್ಣನಿಗೆ ಶರೀರವೇ ಇಲ್ಲದಿರುವಾಗ ಆತನನ್ನು ಧ್ಯಾನಮಾಡುವುದು ಹೇಗೆ? ಆದರೂ ಅಂತಹ ಸ್ವಾಮಿಯನ್ನು ಅನೇಕ ಭಕ್ತರು ಸಾಕಾರದಿಂದ ಭಜಿಸಿ ಆ ವೈಕುಂಠವನ್ನು ಹೊಂದಿದ್ದಾರೆ.

೧೦೬. ಪೂಜೆಯ ರೀತಿಯಿಂದ ಭಕ್ತಿಯನ್ನು ಮಾಡುವುದು ಶೂನ್ಯವಾದ ಸ್ವರೂಪದಲ್ಲಿ ಹೇಗೆ ಆದೀತು? ಪೂಜೆಭಕ್ತಿಯನ್ನು ಆಕಾರವಿರುವ ವಿಗ್ರಹಾದಿಗಳಲ್ಲಿ ಮಾಡಬೇಕೆಂದಲ್ಲವೆ ತಿಳಿದವರು ಹೇಳಿರುವುದು? ಪ್ರತಿಯೊಬ್ಬನಿಗೂ ತಾನು ನಡೆಯುವುದಕ್ಕೆ ಒಂದು ಗುರಿಯಿರಬೇಕು. ಆ ಆಧಾರರೂಪವಾದ ಗುರಿಯಿಲ್ಲದೆ ಶೂನ್ಯವಾದ ದಾರಿಯಲ್ಲಿ ಹೋಗುವುದು ತಾನೇ ಹೇಗೆ?

೧೦೭. ಯಾವಾತನನ್ನು ಆಕಾರವುಳ್ಳ ಪ್ರಭುವೆಂದೆನ್ನುತ್ತೀರೋ ಆತನೇ ಆಕಾರವಿಲ್ಲದ ಸ್ವಾಮಿಯು. ಆಕಾರವುಳ್ಳ ಮೂರ್ತಿಯಲ್ಲಿ ಸುಖವು ಕಂಡು ಬರುತ್ತದೆ. ನಿರಾಕಾರದಲ್ಲಿ ಆ ಸುಖಾದಿಗಳು ಕಂಡುಬರುವುದಿಲ್ಲ.

೧೦೮. ರಸವೆಂದರೆ ಒಂದು ಬಗೆಯಾದ ಆನಂದವು. ಆಕಾರವುಳ್ಳ ವಿಗ್ರಹಗಳನ್ನು ಪೂಜೆಮಾಡುತ್ತಿದ್ದರೆ ಸೇವಾಸುಖವನ್ನು ಅನುಭವಿಸುತ್ತಿರಬಹುದು. ಅದು ಲೋಕದಲ್ಲಿ ವ್ಯಕ್ತವಾಗಿದೆ. ನಿರಾಕಾರದಲ್ಲಿ ಯಾರೂ ಪೂಜೆ ಮುಂತಾದ ಸೇವೆಯನ್ನು ಸಲ್ಲಿಸುತ್ತಿಲ್ಲವಾದುದರಿಂದ ಆ ಸೇವಾಸುಖವು ನಿರಾಕಾರದಲ್ಲಿಲ್ಲ ಆದರೂ ಸಾಕಾರವನ್ನು ಪೂಜಿಸುತ್ತಿದ್ದು ಅದರಿಂದಲೇ ಕೊನೆಗೆ ನಿರಾಕಾರವು ತಾನಾಗಿಯೇ ತಿಳಿಯುತ್ತದೆಂದು ತಿಳಿಯಬೇಕು.

ಹರಿಸ್ಮೃತಿಪ್ರಸಾದೇನ ರೋಮಾಂಚಿತತನುರ್ಯದಾ ।
ನಯನಾನಂದಸಲಿಲಂ ಮುಕ್ತಿರ್ದಾಸೀ ಭವೇತ್ತದಾ ॥ ೧೦೯ ॥

ವಾಣ್ಯಾ ಚ ಯತ್ಕೃತಂ ಪಾಪಂ ಕೀರ್ತನಾತ್ತದ್ವಿನಶ್ಯತಿ ।
ಮನಸಾ ಯತ್ಕೃತಂ ಪಾಪಂ ಸ್ಮರಣಾತ್ತದ್ವಿನಶ್ಯತಿ ॥ ೧೧೦ ॥

ಕರ್ಮಣಾ ಯತ್ಕೃತಂ ಪಾಪಂ ತತ್ಕಥಂ ತು ವಿನಶ್ಯತಿ ।
ಪೂಜದಾನವ್ರತೈಸ್ತೀರ್ಥೈಃ ಜಪಹೋಮೈಸ್ತದರ್ಪಿತೈಃ ॥ ೧೧೧ ॥

ನಿಜಧರ್ಮಂ ಪರಿತ್ಯಜ್ಯ ತಪೋ ಘೋರಂ ಕಥಂ ಚರೇತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೧೧೨ ॥

---

೧೦೯. ಯಾವಾಗ ಹರಿಯನ್ನು ಸ್ಮರಿಸುತ್ತ ಮನುಷ್ಯನು ರೋಮಾಂಚ ವನ್ನು ಹೊಂದುತ್ತಾ ಆನಂದಬಾಷ್ಪಗಳನ್ನು ಸುರಿಸುತ್ತಾನೆಯೋ ಆಗ ಮುಕ್ತಿಯು ಆಳಾಗಿ ಇವನ ಸ್ವಾಧೀನವಾಗುತ್ತದೆ.

೧೧೦. ಮಾತಿನಿಂದ ಮಾಡಿದ ಪಾಪವು ಸ್ವಾಮಿಯ ಹೆಸರನ್ನು ಹೇಳುವುದರಿಂದಲೂ ಮನಸ್ಸಿನಿಂದ ಮಾಡಿದ ಪಾಪವು ಸ್ವಾಮಿಯನ್ನು ಸ್ಮರಿಸು ವುದರಿಂದಲೂ ಹೋಗುತ್ತವೆ.

೧೧೧. ಕರ್ಮದಿಂದ ಮಾಡಿದ ಪಾಪವು ಹೇಗೆ ಹೋಗುತ್ತದೆಂದರೆ ಆ ಸ್ವಾಮಿಯ ಪೂಜೆ, ದಾನ, ವ್ರತ, ತೀರ್ಥಸೇವೆ, ಜಪ, ಹೋಮ ಇವುಗಳಿಂದ ಹೋಗುತ್ತದೆ.

೧೧೨. ತನ್ನ ಜಾತಿಗೆ ಯೋಗ್ಯವಾದ ತಾನು ಮಾಡತಕ್ಕ ಅದರಂತೆ ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳನ್ನು ಬಿಟ್ಟು ಕ್ರೂರವಾದ ತಪಸ್ಸನ್ನು ಮಾಡುವುದು ಹೇಗೆ ? ಶಾಸ್ತ್ರವಿರುದ್ಧವಲ್ಲವೆ ? ತನ್ನ ಧರ್ಮದಲ್ಲಿ ಇದ್ದುಕೊಂಡು ಸಾಯುವುದು ಮೇಲು ಇತರರ ಧರ್ಮವು ಬಹು ಕೆಟ್ಟದ್ದು. ಎಂದು ಹೇಳಿದೆ.

ವಿಧಿಂ ಸಂತ್ಯಜ್ಯ ಶಾಸ್ತ್ರೀಯಂ ತಪ್ತೋ ಘೋರಂ ಕಥಂ ಭವೇತ್ ।
ಆಶ್ರಮೇಣ ವಿನಾ ಮೂಢೋ ನೈವ ಸಿದ್ಧಿಮವಾಪ್ನುಯಾತ್ ॥ ೧೧೩ ॥

ಬ್ರಹ್ಮಣಾ ನಿರ್ಮಿತಾ ವರ್ಣಾಃ ಸ್ವೇ ಸ್ವೇ ಧರ್ಮೇ ನಿಯೋಜಿತಾಃ ।
ಸ್ವಧರ್ಮೇಣಾಗತಂ ದ್ರವ್ಯಂ ಶುಕ್ಲದ್ರವ್ಯಂ ತದುಚ್ಯತೇ ॥ ೧೧೪ ॥

ಶುಕ್ಲದ್ರವ್ಯೇಣ ಯದ್ದಾನಂ ದೀಯತೇ ಶ್ರದ್ಧಯಾನ್ವಿತಂ ।
ಸ್ವಲ್ಪೇನಾಪಿ ಮಹತ್ಪುಣ್ಯಂ ತಸ್ಯ ಸಂಖ್ಯಾ ನ ವಿದ್ಯತೇ ॥ ೧೧೫ ॥

ನೀಚಸಂಗೇನ ಯದ್ದ್ರವ್ಯಮಾನೀತಂ ಗೃಹಕರ್ಮಸು ।
ತೇನ ದ್ರವ್ಯೇಣ ಯದ್ದಾನಂ ಕೃತಂ ವೈ ಮನುಜಾದಿಭಿಃ ॥ ೧೧೬ ॥

ತತ್ಫಲಂ ನ ಭವೇತ್ತೇಷಾಂ ನೈವ ತೇ ಪುಣ್ಯಭಾಗಿನಃ ।
ಲೀಲಯಾ ಕುರುತೇ ಕರ್ಮ ಇಂದ್ರಿಯಾಣಾಂ ಸುಖೇಚ್ಛಯಾ ॥ ೧೧೭ ॥

---

೧೧೩. ಶಾಸ್ತ್ರದಲ್ಲಿ ಹೇಳಿರುವ ನಿಯಮವನ್ನು ಬಿಟ್ಟು ಘೋರವಾದ ತಪಸ್ಸನ್ನು ಮಾಡುವುದು ಹೇಗೆ? ಆಯಾ ಆಶ್ರಮಕ್ಕೆ ಉಕ್ತವಾದುವನ್ನು ಮಾಡಬೇಕು. ಆ ರೀತಿಯಾದ ಆಶ್ರಮವಿಲ್ಲದಿದ್ದರೆ ಅವನಿಗೆ ತಪಸ್ಸಿದ್ಧಿಯು ತಾನೆ ಹೇಗಾದೀತು? ಆಗುವುದಿಲ್ಲವಷ್ಟೆ?

೧೧೪. ಬ್ರಹ್ಮನು ವರ್ಣಗಳನ್ನು ನಿರ್ಮಿಸಿದನು. ಮತ್ತು ಅವುಗಳಿಗೆ ಧರ್ಮಗಳನ್ನು ಗೊತ್ತುಮಾಡಿ ಅವುಗಳನ್ನು ಆಯಾ ಧರ್ಮದಲ್ಲಿರಬೇಕೆಂದು ನಿಯಮಿಸಿದನು. ಹಾಗೆ ಬ್ರಹ್ಮನು ಗೊತ್ತುಮಾಡಿದ ಆಯಾ ವರ್ಣಗಳು ಆಯಾ ಧರ್ಮಗಳಿಂದ ಸಂಪಾದನೆ ಮಾಡಿದ ದ್ರವ್ಯವು ಶುಕ್ಲ ದ್ರವ್ಯವೆಂದೆನಿಸಿಕೊಳ್ಳುತ್ತದೆ. ಎಂದರೆ ಅದು ಉತ್ತಮವಾದುದು.

೧೧೫. ಅಂತಹ ಧರ್ಮಾರ್ಜಿತವಾದ ಶುಕ್ಲ ದ್ರವ್ಯವನ್ನು ಶ್ರದ್ಧೆಯಿಂದ ದಾನ ಮಾಡಿದರೆ ಅದು ಸ್ವಲ್ಪವಾದರೂ ಬಹು ಪುಣ್ಯವು ಬರುತ್ತದೆ. ಮತ್ತು ಅದರ ಪುಣ್ಯಕ್ಕೆ ಲೆಕ್ಕವೇ ಇಲ್ಲ.

೧೧೬–೧೧೭. ನೀಚರ ಸಹವಾಸದಿಂದ ತಂದ ದ್ರವ್ಯವನ್ನು ದಾನ ಮಾಡಿದರೆ ಅದರ ಫಲವನ್ನು ದಾನ ಮಾಡುವವನು ಹೊಂದುವುದಿಲ್ಲ. ಅದು ಪುಣ್ಯವನ್ನು ಕೊಡುವುದಿಲ್ಲ. ಇಂದ್ರಿಯಗಳ ಸುಖಕ್ಕೋಸ್ಕರವಾಗಿ ಯಾವ ಕೆಲಸವನ್ನೂ ತಡೆಯಿಲ್ಲದೆ ಸಂತೋಷದಿಂದ ಮಾಡುವ ಜ್ಞಾನವನ್ನು

**ತಾದೃಶೀಂ ಯೋನಿಮಾಪ್ನೋತಿ ಮೂಢೋ ಹಿ ಜ್ಞಾನದುರ್ಬಲಃ ।**
**ಇಹ ಯತ್ಕುರುತೇ ಕರ್ಮ ತತ್ಪರತ್ರೋಪಭುಜ್ಯತೇ ॥ ೧೧೮ ॥**

**ಪುಣ್ಯಮಾಚರತಃ ಪುಂಸೋ ನ ಹಿ ದುಃಖಂ ಪ್ರಜಾಯತೇ ।**
**ತದಾ ತಾಪೋ ನ ಕರ್ತವ್ಯಃ ತತ್ಕರ್ಮ ಪೂರ್ವದೇಹಜಂ ॥ ೧೧೯ ॥**

**ಪಾಪಮಾಚರತಃ ಪುಂಸೋ ಜಾಯತೇ ದುಃಖಮೇವ ಚ ।**
**ನ ಕರ್ತವ್ಯಸ್ತದಾ ಹರ್ಷಃ ಸುಖೇ ತತ್ರ ಸುರೇಶ್ವರಿ ॥ ೧೨೦ ॥**

**ರಜ್ಜುಬದ್ಧಾಶ್ಚ ಪಶವಃ ಪ್ರಭುಣಾ ಸ್ವೇಚ್ಛಯಾ ಯಥಾ ।**
**ನೀಯಂತೇ ಕರ್ಮಬಂಧೇನ ಮನುಜಾ ಅಪಿ ಭೂತಳೇ ॥ ೧೨೧ ॥**

**ಶಾಖಾಮೃಗೋ ವನಚರೋ ವ್ರಜತ್ಯಥ ಗೃಹೇ ಗೃಹೇ ।**
**ಏವಂ ಚ ಕರ್ಮಣಾ ಜೀವಾ ನಿಯಂತೇ ಸರ್ವಯೋನಿಷು ॥ ೧೨೨ ॥**

---

ಉಪಯೋಗಿಸದ ಆ ದಡ್ಡನು ಅಂತಹ ಜನ್ಮದಲ್ಲಿಯೇ ಮತ್ತೆ ಹುಟ್ಟುವನು. ಈ ಲೋಕದಲ್ಲಿ ಮಾಡಿದ ಕರ್ಮಕ್ಕನುಗುಣವಾದ ಪುಣ್ಯಪಾಪಗಳನ್ನೇ ಪರಲೋಕದಲ್ಲಿ ಅನುಭವಿಸುತ್ತಾನೆ. ಪುಣ್ಯವನ್ನು ಮಾಡುತ್ತಿರುವ ಮನುಷ್ಯನಿಗೆ ದುಃಖವು ಉಂಟಾಗುವುದೇ ಇಲ್ಲ. ಒಂದುವೇಳೆ ದುಃಖವುಂಟಾದರೆ ಅದಕ್ಕೋಸ್ಕರ ದುಃಖ ಪಡಬಾರದು. ಆ ಪಾಪವು ಪೂರ್ವದೇಹದಲ್ಲಿ ಮಾಡಿದುದೆಂದು ತಿಳಿಯಬೇಕು.

೧೨೦. ಪಾಪ ಕರ್ಮವನ್ನು ಮಾಡುತ್ತಿರುವ ಮನುಷ್ಯನಿಗೆ ದುಃಖವೇ ಉಂಟಾಗುತ್ತದೆ ಪುಣ್ಯ ಮಾಡಿದವನಿಗೆ ಸುಖವೇ ಉಂಟಾಗುತ್ತದೆ. ಅದಕ್ಕೆ ಹರ್ಷವನ್ನಾಗಲಿ ದುಃಖವನ್ನಾಗಲಿ ಹೊಂದಬಾರದು.

೧೨೧. ಹಗ್ಗದಿಂದ ಕಟ್ಟಿದ ಹಸುಗಳನ್ನು ಅದರ ಯಜಮಾನರು ತಮ್ಮ ಇಷ್ಟ ಬಂದಹಾಗೆ ಹೇಗೆ ಎಳೆದುಕೊಂಡು ಹೋಗುತ್ತಾರೆಯೋ ಅದರಂತೆಯೇ ಮನುಷ್ಯರೂ ಕೂಡ ಈ ಭೂಮಿಯಲ್ಲಿ ತಮ್ಮ ತಮ್ಮ ಕರ್ಮಬಂಧಗಳಿಂದ ಎಳೆಯಲ್ಪಡುತ್ತಾರೆ.

೧೨೨. ಕಾಡಿನಲ್ಲಿ ವಾಸಮಾಡುವ ಕಪಿಯನ್ನು ತಂದು ಮನೆ ಮನೆಗೂ ಆಟವಾಡಿಸಲು ಕೊಂಡೊಯ್ಯುವಂತೆ ಜೀವನು ತನ್ನ ಕರ್ಮ ಬಲದಿಂದ ಆಯಾ ಜನ್ಮಗಳಲ್ಲಿ ಸೇರಿಸಿ ಸೃಷ್ಟಿಸಲ್ಪಡುತ್ತಾನೆ. ಅದರಂತೆ ನಡೆಸಲ್ಪಡುತ್ತಾನೆ

ಕ್ರೀಡಾರ್ಥಂ ಕಂದುಕೋ ಯದ್ವತ್ ಪ್ರೇರ್ಯತೇ ಪ್ರಭುಣೇಚ್ಛಯಾ ।
ಕರ್ಮಣಾ ಪಾ ತಥಾ ಜನ್ತುಃ ನೀಯತೇ ಸುಖದುಃಖಯೋಃ ॥ ೧೨೩ ॥

ಬಲೇಚ್ಛಾ ಕರ್ಮಭಿರ್ಬದ್ಧೋ ನ ಶಕ್ತೋ ಬಂಧನಿಗ್ರಹೇ ।
ದೇವಾ ವೈ ಕರ್ಮಭಿರ್ಬದ್ಧಾ ಋಷಯಶ್ಚ ತಥಾ ಪರೇ ॥ ೧೨೪ ॥

ಕೈಲಾಸೇ ರುದ್ರದೇಹಸ್ಥಾ ಭುಜಂಗಾ ವಿಷಭಾಜಿನಃ ।
ಅಸಮರ್ಥಾಸ್ಸುಧಾಂ ಭೋಕ್ತುಂ ಕರ್ಮಯೋನಿರ್ಬಲೀಯಸೀ ॥ ೧೨೫ ॥

ನಿರವದ್ಯದೇಹದಾತಾ ಬುಧೈಸ್ಸೂರ್ಯೋ ಹಿ ಕಥ್ಯತೇ ।
ತದ್ರಥೇ ಸಾರಥಿಃ ಪಂಗುಃ ಕರ್ಮಯೋನಿರ್ಬಲೀಯಸೀ ॥ ೧೨೬ ॥

---

೧೨೩. ಆಟವಾಡತಕ್ಕವನು ಚಂಡನ್ನು ತನ್ನ ಇಷ್ಟಬಂದಂತೆ ಯಾವ ರೀತಿಯಾಗಿ ಆಡಿಸುತ್ತಾನೆಯೋ ಅದರಂತೆ ಪ್ರಾಣಿಯು ಅವನ ಕರ್ಮದಿಂದ ಸುಖ ದುಃಖ ರೂಪವಾದ ಯೋನಿಗಳಲ್ಲಿ ಸೃಷ್ಟಿಸಲ್ಪಡುತ್ತಾನೆ.

೧೨೪. ಬಲವಾದ ಇಚ್ಛೆಯಿಂದ ಮಾಡಿದ ಕರ್ಮವು ಇವನನ್ನು ಕಟ್ಟಿ ಹಾಕುತ್ತದೆ. ಆದ್ದರಿಂದ ಅದನ್ನು ಅಧೀನ ಮಾಡಿಕೊಳ್ಳುವುದಕ್ಕಾಗಲಿ ಅವನ್ನು ನಾಶ ಮಾಡುವುದಕ್ಕಾಗಲಿ ಇವನ ಕೈಯ್ಯಲ್ಲಿ ಆಗುವುದಿಲ್ಲ. ದೇವತೆಗಳೂ ಋಷಿಗಳೂ ಅದರಂತೆ ಇನ್ನೂ ಅನೇಕರೂ ಈ ಕರ್ಮಗಳಿಂದಲೇ ಕಟ್ಟಲ್ಪಟ್ಟು ಇರುವಾಗ ಮನುಷ್ಯನ ಮಾತೇನು ?

೧೨೫. ಕೈಲಾಸದಲ್ಲಿ ಆ ರುದ್ರನ ದೇಹದಲ್ಲಿಯೇ ಅಂಟಿಕೊಂಡಿರುವ ಸರ್ಪಗಳು ವಿಷವನ್ನೇ ಹೊಂದಿರುತ್ತವೆ. ಅಲ್ಲಿದ್ದರೂ ಅಮೃತವನ್ನು ಕುಡಿಯಲು ಅವುಗಳಿಗೆ ಸಾಧ್ಯವಿಲ್ಲ. ಆದ್ದರಿಂದ ಅವುಗಳ ಕರ್ಮಕ್ಕೆ ಅನುಸಾರವಾಗಿ ಬಂದ ಆ ದೇಹವು ಹಾಗಿರುವುದು. ಕರ್ಮವೇ ಬಲಿಷ್ಠವಾದುದಲ್ಲವೆ!

೧೨೬. ಸೂರ್ಯನು ಉತ್ತಮವಾದ ದೇಹವನ್ನು ಕೊಡುತ್ತಾನೆಂದು ದೇವತೆಗಳೂ ವಿದ್ವಾಂಸರೂ ಹೇಳುತ್ತಾರೆ. ಆದರೆ ಅವನ ರಥದಲ್ಲಿರುವ ಸಾರಥಿಯಾದ ಅರುಣನು ಕಾಲಿಲ್ಲದ ಕುಂಟನು ಅಲ್ಲವೆ ! ಆದ್ದರಿಂದ ಕರ್ಮವೇ ಬಲವಾದುದು. ಅವನಿಗೆ ಕರ್ಮಕ್ಕಧೀನವಾದ ದೇಹವು ಬಂದಿರುವುದು.

ಇಂದ್ರದ್ಯುಮ್ನೋ ಹಿ ರಾಜರ್ಷಿಃ ಗಜತ್ವಂ ಕರ್ಮಣಾ ಗತಃ ।
ಸಮರ್ಥಸ್ವಾಮಿನಾ ತಸ್ಮಿನ್ ಕರ್ಮಯೋನಿರ್ವೃಥಾ ಕೃತಾ ॥ ೧೨೭ ॥

ರುದ್ರಬ್ರಹ್ಮಾದಯೋ ದೇವಾ ಮಾನವಾಶ್ಚಾಸುರಾಶ್ಚ ಯೇ ।
ತೇ ಸರ್ವೇ ಕರ್ಮಬದ್ಧಾಶ್ಚ ವಿಚರಂತಿ ಮಹೀತಲೇ ॥ ೧೨೮ ॥

ಕರ್ಮಾಧೀನಂ ಜಗತ್ಸರ್ವಂ ವಿಷ್ಣುನಾ ನಿರ್ಮಿತಂ ಪುರಾ ।
ತತ್ಕರ್ಮ ಕೇಶವಾಧೀನಂ ರಾಮನಾಮ್ನಾ ವಿನಶ್ಯತಿ ॥ ೧೨೯ ॥

ಸರ್ವತ್ರಾಪಿ ಸ್ಥಿತಂ ತೋಯಂ ಮುಕ್ತಿದೇ ತು ಸಿತಾಸಿತೇ ।
ಏವಮಾಚರತಾಂ ಕರ್ಮ ಮುಕ್ತಿದಂ ಕೇಶವಾರ್ಚನಂ ॥ ೧೩೦ ॥

---

೧೨೭. ಇಂದ್ರದ್ಯುಮ್ನನೆಂಬ ರಾಜರ್ಷಿಯು ತನ್ನ ಕರ್ಮದಿಂದ ಆನೆಯಾದನು. ಸರ್ವಶಕ್ತನಾದ ವಿಷ್ಣುವು ಅವನ ಆ ಕರ್ಮದಿಂದ ಬಂದ ಜನ್ಮವನ್ನು ನಾಶಮಾಡಿದನು.

೧೨೮. ರುದ್ರ, ಬ್ರಹ್ಮ ಮೊದಲಾದ ದೇವತೆಗಳೂ ಮನುಷ್ಯರೂ ದೈತ್ಯರೂ ಇನ್ನೂ ಇತರರೂ ಕೂಡ ಕರ್ಮಕ್ಕೊಳಪಟ್ಟವರಾಗಿಯೇ ಭೂಮಿಯಲ್ಲಿ ಸಂಚರಿಸುತ್ತಿದ್ದಾರೆ.

೧೨೯. ವಿಷ್ಣುವು ಪೂರ್ವದಲ್ಲಿ ಈ ಜಗತ್ತನ್ನು ಕರ್ಮಕ್ಕೆ ಅಧೀನವಾಗಿ ನಿರ್ಮಿಸಿದನು. ಆ ಕರ್ಮವು ವಿಷ್ಣುವಿಗೆ ಅಧೀನವಾದುದು. ಅದು ಆ ಸ್ವಾಮಿಯ ನಾಮಸ್ಮರಣೆಯಿಂದ ನಾಶವಾಗುತ್ತದೆ.

೧೩೦. ನೀರು ಎಲ್ಲಾ ಕಡೆಯಲ್ಲಿಯೂ ಸಮೃದ್ಧಿಯಾಗಿರುವುದು. ಆದರೆ ಅವುಗಳಲ್ಲಿ ಗಂಗೆ ಯಮುನೆಗಳೇ ಮುಕ್ತಿಯನ್ನು ಕೊಡಲು ಶಕ್ತಿಯುಳ್ಳವು. ಆ ರೀತಿಯಾಗಿ ಎಷ್ಟು ದೇವತೆಗಳು ಲೋಕದಲ್ಲಿದ್ದರೂ ಕೇಶವನ ಅರ್ಚನೆಯನ್ನು ಬಿಟ್ಟರೆ ಮುಕ್ತಿಯನ್ನು ಕೊಡತಕ್ಕದ್ದು ಮತ್ತೊಂದಿಲ್ಲವು.

ಇಂದ್ರಿಯಾಣಾಂ ಸುಖಾರ್ಥಾಯ ಯಃ ಕರ್ಮ ಮನಸಾಚರೇತ್ ।
ಅಹಂಕೃತೇನ ಮನ್ಯೇತ ಕೇವಲಂ ದೇವಮೇವ ಹಿ ॥ ೧೩೧ ॥

ಮನಸಾ ಸಂಸ್ಮರನ್ ಜಂತುಃ ಪ್ರಾಯಶ್ಚಿತ್ತಂ ಸಮಾಚರೇತ್ ।
ಸ ಪೂರ್ವಕರ್ಮ ಭೋಕ್ತಾ ಚ ಅಗ್ರೇ ಕರ್ಮ ನ ವಿದ್ಯತೇ ॥ ೧೩೨ ॥

ಪ್ರಶಂಸಂತಿ ಗ್ರಹಾನ್ಕೇಚಿತ್ಕೇಚಿತ್ಪ್ರೇತ ಪಿಶಾಚಕಾನ್ ।
ಕೇಚಿದ್ದೇವಾನ್ಪ್ರಶಂಸಂತಿ ಹ್ಯೋಷಧೀಃ ಕೇಚಿದೂಚಿರೇ ॥ ೧೩೩ ॥

ಕೇಚಿನ್ಮಂತ್ರಂ ಚ ಸಿದ್ಧಿಂ ಚ ಕೇಚಿದ್ಬುದ್ಧಿಂ ಪರಾಕ್ರಮಂ ।
ಉದ್ಯಮಂ ಸಾಹಸಂ ಧೈರ್ಯಂ ಕೇಚಿನ್ನೀತಂ ಬಲಂ ತಥಾ ॥ ೧೩೪ ॥

---

೧೩೧. ಇಂದ್ರಿಯಗಳ ಸುಖಕ್ಕೋಸ್ಕರ ಮನಸ್ಸಿನಿಂದಲಾದರೂ ಯಾವನು ಕರ್ಮವನ್ನು ಭಾವಿಸುತ್ತಾನೆಯೋ ಅವನು ತಾನು ದೇಹದಲ್ಲಿ ಮಾಡಿದಂತಾಗುತ್ತವೆ. ಏಕೆಂದರೆ ಮನಸ್ಸು ಕರ್ಮ ಮಾಡುವುದರಲ್ಲಿ ಮುಖ್ಯವೇ ಹೊರತು ದೇಹವಲ್ಲ. ದೇಹವು ಕೇವಲ ಸಾಧನವು.

೧೩೨. ಪೂರ್ವಕರ್ಮವನ್ನು ಅನುಭವಿಸುತ್ತಿರುವ ಜಂತುವು ಮನಸ್ಸಿನಿಂದಲೇ ಸ್ವಾಮಿಯನ್ನು ಸ್ಮರಿಸುತ್ತ ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಹಾಗೆ ಮಾಡಿದರೆ ಮುಂದೆ ಆ ಕರ್ಮವಿರುವುದಿಲ್ಲ.

೧೩೩-೧೩೪. ಆ ಕರ್ಮವನ್ನು ಅನುಭವಿಸುತ್ತಿರುವಾಗ ಆ ಕರ್ಮದ ಕೆಲಸವನ್ನು ಕೆಲವರು ಗ್ರಹಚೇಷ್ಟೆಯೆಂದೂ, ಕೆಲವರು ಭೂತಚೇಷ್ಟೆಯೆಂದೂ, ಕೆಲವರು ಪ್ರೇತಗಳ ಬಾಧೆಯೆಂದೂ, ಕೆಲವರು ಪಿಶಾಚಿಗಳ ತೊಂದರೆಯೆಂದೂ ಎನ್ನುತ್ತಾರೆ. ಮತ್ತೆ ಕೆಲವರು ಆ ಕರ್ಮಗಳ ಹೆಚ್ಚು ಕಡಿಮೆಗಳಲ್ಲಿ ದೇವತೆಗಳಿಂದ ಗುಣವಾಯಿತೆಂದೂ ಅವರನ್ನು ಹೊಗಳುತ್ತಾರೆ. ಕೆಲವರು ಔಷಧಿಯ ಗುಣವೆಂದೆನ್ನುತ್ತಾರೆ. ಕೆಲವರು ಪರಾಕ್ರಮವೆಂದುನ್ನುತ್ತಾರೆ. ಮತ್ತೆ ಕೆಲವರು ಸಾಹಸ ಧೈರ್ಯಗಳೆಂದು ಹೇಳುತ್ತಾರೆ. ಕೆಲವರು ಬಲದ ಕೆಲಸವೆಂದು ಹೇಳುತ್ತಾರೆ. ಹೀಗೆ ಕೆಲಕೆಲವರು ತಮಗೆ ತೋರಿದ ರೀತಿಯಲ್ಲಿ ಬಗೆಬಗೆಯಾಗಿ ಹೇಳುತ್ತಾರೆ.

**ಅಹಂ ಕರ್ಮ ಪ್ರಶಂಸಾಮಿ ಸರ್ವೇ ಕರ್ಮಾನುವರ್ತಿನಃ ।**
**ಇತಿ ಮೇ ನಿಶ್ಚಿತಾ ಬುದ್ಧಿಃ ಕಥ್ಯತೇ ಪೂರ್ವಸೂರಿಭಿಃ ॥ ೧೩೫ ॥**

**ಯದಾ ಪುಣ್ಯಮಯೋ ಜನ್ತುಃ ಪಾಪಂ ಕಿಂಚಿನ್ನ ವಿದ್ಯತೇ ।**
**ಜ್ಞಾನಂ ಹಿ ದ್ವಿವಿಧಂ ಚೈವ ತದಾ ಪುಣ್ಯಂ ಸುಖಂ ಭವೇತ್ ॥ ೧೩೬ ॥**

**ಪಾಪಂ ಪುಣ್ಯಂ ಸಮಂ ಯಸ್ಯ ತದಾ ಕರ್ಮತನುಂ ಲಭೇತ್ ।**
**ಸಮಯೋಗಂ ಯದಾ ದ್ವಂದ್ವಂ ತದಾನಂತಪದಂ ವ್ರಜೇತ್ ॥ ೧೩೭ ॥**

**ಬಾಹ್ಯೇ ಸರ್ವಪರಿತ್ಯಾಗೇ ಮನಸಾ ಸಂಸ್ಪೃಹಾ ಭವೇತ್ ।**
**ತದ್ವ್ಯಥಾಚರಿತಂ ತಸ್ಯ ತೇನ ತತ್ಪಾಪಭೋಗಿನಃ ॥ ೧೩೮ ॥**

**ಬಾಹ್ಯೇ ಕರೋತಿ ಕರ್ಮಾಣಿ ಮನಸಾ ನಿಸ್ಪೃಹೋ ಭವೇತ್ ।**
**ತ್ಯಾಗೋಽಸೌ ಮಧ್ಯಮೋ ಜ್ಞೇಯೋ ನ ತು ಪೂರ್ಣಫಲಂ ಭವೇತ್ ॥೧೩೯॥**

---

೧೩೫. ನಾನು ಕರ್ಮವನ್ನೇ ದೊಡ್ಡದೆಂದೆನ್ನುತ್ತೇನೆ. ಎಲ್ಲರೂ ಕರ್ಮವನ್ನೇ ಅನುಸರಿಸುವರು. ಇದೇ ನನ್ನ ನಿಶ್ಚಯವಾದ ಬುದ್ಧಿಯು. ಇದನ್ನೇ ಹಿಂದಿನ ವಿದ್ವಾಂಸರೂ ಹೊಗಳಿದ್ದಾರೆ.

೧೩೬. ಪ್ರಾಣಿಯು ಪುಣ್ಯವನ್ನೇ ಮಾಡಿದ್ದು ಆದರಲ್ಲಿ ಪಾಪವು ಕೊಂಚವೂ ಇಲ್ಲದಿದ್ದರೆ ಅದು ಪುಣ್ಯಶರೀರವು. ಆಗ ಅವನಿಗೆ ಎರಡು ಬಗೆಯಾದ ಎಂದರೆ ಪಾಪಪುಣ್ಯ ಸಂಬಂಧವಾದ ಜ್ಞಾನಗಳು ಇರುತ್ತವೆ. ಆಗ ಸುಖವೇ ಕಂಡು ಬರುತ್ತದೆ. ಅದನ್ನೇ ಅನುಭವಿಸುತ್ತಾನೆ.

೧೩೭. ಪಾಪಪುಣ್ಯಗಳು ಯಾವ ಪ್ರಾಣಿಗಳಿಗೆ ಸಮವಾಗಿವೆಯೋ ಆ ಪ್ರಾಣಿಯು ಆಗ ಕರ್ಮಶರೀರವನ್ನು ಹೊಂದುತ್ತದೆ. ಆ ಸುಖದುಃಖಗಳು ಸಮವಾಗಿದ್ದಾಗಲೇ ಆನಂದವನ್ನು ಪ್ರಾಣಿಯು ಹೊಂದುತ್ತದೆ.

೧೩೮. ಬಾಹ್ಯ ಎಂದರೆ ಹೊರಗಡೆಯಲ್ಲಿ ಎಲ್ಲವನ್ನು ಬಿಟ್ಟಿದ್ದರೂ ಮನಸ್ಸಿನಲ್ಲಿ ಆಸೆಯು ಹುಟ್ಟುತ್ತದೆ. ಆಗ ಅವನ ಆಚರಣೆಯು ವ್ಯರ್ಥವಾಗುತ್ತದೆ. ಅಲ್ಲದೆ ಆ ಮನಸ್ಸಿನ ಯೋಚನೆಯಂತೆ ಪಾಪವನ್ನೇ ಹೊಂದುತ್ತಾನೆ.

೧೩೯. ಹೊರಗೆ ಮಾತ್ರ ಲೋಕವು ಮೆಚ್ಚುವುದಕ್ಕೆ ಕೆಲಸವನ್ನು ಮಾಡುತ್ತಾನೆ. ಮನಸ್ಸಿನಲ್ಲಿ ಆಸೆಯು ಸ್ವಲ್ಪವೂ ಇರುವುದಿಲ್ಲ. ಹೀಗೆ ಮಾಡುವವನ ಈ ತ್ಯಾಗವು ಮಧ್ಯಮವಾದ ತ್ಯಾಗವೆಂದು ಹೇಳುತ್ತಾರೆ. ಇದರಿಂದ ಪೂರ್ಣಫಲವು ಬರುವುದಿಲ್ಲ

ಬಾಹ್ಯಾಂತರೇ ಪರಿತ್ಯಜ್ಯ ಬುದ್ಧ್ಯಾ ಶೂನ್ಯಾವಲಂಬನಂ
ತ್ಯಾಗಸ್ಸ ಉತ್ತಮೋ ಜ್ಞೇಯಃ ಯೋಗಿನಾಮಪಿ ದುರ್ಲಭಃ । ॥ ೧೪೦ ॥

ಕ್ರೋಧಾತ್ಸರ್ವಂ ತ್ಯಜಂತ್ಯೇಕೇ ಕೇಚಿದ್ವಾ ತದಭಾವತಃ ।
ಕಷ್ಟಾತ್ಸರ್ವಂ ತ್ಯಜಂತ್ಯೇಕೇ ತ್ಯಾಗಾಸ್ಸರ್ವೇ ತು ಮಧ್ಯಮಾಃ ॥ ೧೪೧ ॥

ಸ್ವಬುದ್ಧ್ಯಾ ಶ್ರದ್ಧಯಾ ಯುಕ್ತ್ಯೈರ್ನಕ್ರೋಧಾದಿವಶಂ ಗತೈಃ ।
ಯೈರೇವಂ ತ್ಯಜತೇ ಸರ್ವಂ ತ್ಯಾಗಾಸ್ತ ಉತ್ತಮಾಃ ಸ್ಮೃತಾಃ ॥ ೧೪೨ ॥

ಯೋಗಾಭ್ಯಾಸರತೋ ದೇಹೀ ಯೋಗಪಾರೇ ನ ವೈ ಗತಃ ।
ಕರ್ಮಣಾ ಚಾಲಿತೋ ವಾಪಿ ಸುಗತಿಂ ಯಾತಿ ಮಾನವಃ ॥ ೧೪೩ ॥

ಶುಚಿನಾಂ ಶ್ರೀಮತಾಂ ಗೇಹೇ ಧೀಮತಾಂ ಯೋಗಿನಾಮಪಿ ।
ಯೋಗಾದ್ಭ್ರಷ್ಟಸ್ತು ಜಾಯೇತ ಕುಲೇ ವಾ ದ್ವಿಜಪೂರ್ವಕೇ ॥ ೧೪೪ ॥

---

೧೪೦. ಬಾಹ್ಯವಾದ ಮತ್ತು ಆಂತರಿಕವಾದ ಕರ್ಮಗಳನ್ನು ಬಿಟ್ಟು ಶೂನ್ಯವಾಗಿರುವಿಕೆಯನ್ನೇ ಅವಲಂಬಿಸಿರುವುದು ಉತ್ತಮತ್ಯಾಗವು. ಈ ತ್ಯಾಗವು ಯೋಗಿಗಳಿಗೂ ಸಾಧ್ಯವಾದುದಲ್ಲ.

೧೪೧. ಹೊರಗಿನ ಮತ್ತು ಒಳಗಿನ ಕರ್ಮಗಳನ್ನು ಕೆಲವರು ಕೋಪದಿಂದ ಬಿಟ್ಟು ಬಿಡುತ್ತಾರೆ. ಕೆಲವರು ಅದಕ್ಕೆ ಬೇಕಾದ ಅನುಕೂಲಗಳಿಲ್ಲದಿರುವುದರಿಂದ ಬಿಟ್ಟು ಬಿಡುತ್ತಾರೆ. ಕೆಲವರು ಕಷ್ಟವೆಂಬ ಭಾವನೆಯಿಂದ ಬಿಟ್ಟುಬಿಡುತ್ತಾರೆ. ಆದರೆ ಇವುಗಳು ಎಲ್ಲವೂ ತ್ಯಾಗದಲ್ಲಿಯೇ ಸೇರಿದುವುಗಳಾದರೂ ಮಧ್ಯಮದಲ್ಲಿ ಸೇರಿಸಬಹುದು.

೧೪೨. ಶ್ರದ್ಧೆಯಿಂದಲೇ ಬುದ್ಧಿಪೂರ್ವಕವಾಗಿ ಕೋಪಾದಿಗಳಿಗೆ ಅಧೀನರಾಗದೆ ಯಾರು ಈ ರೀತಿಯಾಗಿ ಬಾಹ್ಯ ಆಭ್ಯಂತರ ಕಾರ್ಯಗಗಳನ್ನು ಮಾಡುತ್ತಾರೆಯೋ ಅವರೆಲ್ಲರೂ ಉತ್ತಮರು.

೧೪೩. ಯೋಗಿಯು ಯೋಗಾಭ್ಯಾಸಮಾಡುತ್ತಿದ್ದು ಆ ಯೋಗಾಭ್ಯಾಸದಲ್ಲಿ ಕೊನೆಗಾಣದಿದ್ದರೂ ಆ ಯೋಗಾಭ್ಯಾಸದಿಂದ ಚಲಿತನಾದರೂ ಅವನು ಒಳ್ಳೆಯ ಗತಿಯನ್ನು ಹೊಂದುತ್ತಾನೆ.

೧೪೪. ಯೋಗಭ್ರಷ್ಟನಾದವನು ಶುಚಿಯಾದ ಐಶ್ವರ್ಯವಂತರ ಮನೆಯಲ್ಲಾಗಲಿ ಬುದ್ಧಿವಂತರ ಮನೆಯಲ್ಲಾಗಲಿ ಉತ್ತಮಕುಲದಲ್ಲಿ ಹುಟ್ಟುತ್ತಾನೆ.

ಸ್ವಲ್ಪೇನೈವ ತು ಕಾಲೇನ ಪೂರ್ಣಂ ಯೋಗಂ ಚ ವಿಂದತಿ ।
ಚಿದಾನಂದಪದಂ ಗಚ್ಛೇದ್ಯೋಗಭಕ್ತಿಪ್ರಸಾದತಃ ॥ ೧೪೫ ॥

ಪಂಕೇನೈವ ಯಥಾ ಪಂಕಂ ರುಧಿರಂ ರುಧಿರೇಣ ವೈ ।
ಹಿಂಸಯಾ ಕರ್ಮಣಾ ಕರ್ಮ ಕಥಂ ಕ್ಷಾಳಯಿತುಂ ಕ್ಷಮಃ ॥ ೧೪೬ ॥

ಹಿಂಸಾಕರ್ಮಮಯೋ ಯಜ್ಞಃ ಕಥಂ ಕರ್ಮಕ್ಷಯೇ ಕ್ಷಮಃ ।
ಸ್ವರ್ಗಕಾಮಕೃತಾ ಯಜ್ಞಾಃ ಸ್ವರ್ಗೇ ತೇ ಚಾಲ್ಪಸೌಖ್ಯದಾಃ ॥ ೧೪೭ ॥

ಅನಿತ್ಯಾನಿ ತು ಸೌಖ್ಯಾನಿ ಭವಂತಿ ಚ ಬಹೂನ್ಯಪಿ ।
ನಿತ್ಯಂ ಸೌಖ್ಯಂ ನ ತೇಷ್ವಸ್ತಿ ವಿನಾ ಭಕ್ತ್ಯಾ ಹರೇಃ ಕ್ವಚಿತ್ ॥ ೧೪೮ ॥

ಸಾರ್ವಭೌಮಂ ಸುಖಂ ರಾಜ್ಯಂ ಸ್ವರ್ಗೇ ಚಾಪಿ ತಥಾ ಸುಖಂ ।
ಅನ್ಯತ್ಕಿಂಚಿನ್ನ ವಾಂಛಾಮಿ ಗರ್ಭವಾಸಾದ್ಬಿಭೇಮ್ಯಹಂ ॥ ೧೪೯ ॥

---

೧೪೫. ಹುಟ್ಟಿದ ಸ್ವಲ್ಪ ದಿವಸದಲ್ಲಿಯೇ ಯೋಗವನ್ನು ಸಂಪೂರ್ಣವಾಗಿ ತಿಳಿದುಕೊಳ್ಳುತ್ತಾನೆ. ಮತ್ತು ಚಿದಾನಂದ ಸ್ವರೂಪನನ್ನೂ ಪರಮಪದವಾದ ವೈಕುಂಠವನ್ನೂ ಆ ಯೋಗದ ಮಹಿಮೆಯಿಂದ ಹೊಂದುತ್ತಾನೆ.

೧೪೬. ಕೆಸರಿನಿಂದ ಕೆಸರನ್ನೂ ರಕ್ತದಿಂದ ರಕ್ತವನ್ನೂ ಹೇಗೆ ತೊಳೆಯಲಾಗುವುದಿಲ್ಲವೋ ಹಾಗೆ ಹಿಂಸೆಯಿಂದ ಹಿಂಸೆಯ ಕರ್ಮವನ್ನು ನಾಶಮಾಡಿಕೊಳ್ಳಲು ಆಗುವುದಿಲ್ಲ.

೧೪೭ ಹಿಂಸೆಯ ಕರ್ಮದಿಂದ ಕೂಡಿರುವ ಯಜ್ಞದಿಂದ ಕರ್ಮವು ನಾಶವಾಗುವುದಿಲ್ಲ. ಸ್ವರ್ಗದ ಇಚ್ಛೆಯಿಂದ ಮಾಡಿದ ಯಜ್ಞಗಳು ಸ್ವರ್ಗದಲ್ಲಿ ಸ್ವಲ್ಪವೇ ಸೌಖ್ಯವನ್ನು ಕೊಡುತ್ತವೆ.

೧೪೮. ಅನಿತ್ಯವಾದ ಸೌಖ್ಯಗಳು ಲೋಕದಲ್ಲಿ ಬಹಳವಾಗಿ ಇವೆ. ನಿತ್ಯಸೌಖ್ಯವು ಅವುಗಳಲ್ಲೊಂದರಲ್ಲಿಯೂ ಇಲ್ಲ. ಏಕೆಂದರೆ ಅವುಗಳಲ್ಲಿ ಹರಿಯ ಭಕ್ತಿಯಿಲ್ಲ. ಹರಿಯ ಭಕ್ತಿಯು ಕೂಡಿದ್ದರಲ್ಲಿ ನಿತ್ಯಸೌಖ್ಯವಿದೆ.

೧೪೯. ಚಕ್ರವರ್ತಿ ಪದವಿಯುಳ್ಳ ರಾಜನಸೌಖ್ಯವೂ ಸ್ವರ್ಗದ ಸುಖವೂ ಒಂದೇ ಆಗಿರುವುದು. ಇವುಗಳನ್ನು ಹೊರತು ಬೇರಾವುದನ್ನೂ ನಾನು ಅಪೇಕ್ಷಿಸುವುದಿಲ್ಲ. ಆದರೆ ಗರ್ಭವಾಸಕ್ಕೆ ಹೆದರುತ್ತೇನೆ.

ಗ್ರಾವಾ ಹಿ ಭಿದ್ಯತೇ ಲೋಕೈರ್ಮಾಣಿಕ್ಯಂ ನೈವ ಭಿದ್ಯತೇ ।
ನಾನಾಕಾಮನಯಾ ಬುದ್ಧ್ಯಾ ವಿಷ್ಣುಭಕ್ತಿರ್ನ ಭಿದ್ಯತೇ ॥ ೧೫೦ ॥

ಬಕೋ ಜಲಚರಾನ್ಭುಂಕ್ತೇ ಮಂಡೂಕಾದೀಂಶ್ಚ ವರ್ಜಯೇನ್ ।
ತಥಾ ಯಮಸ್ಸರ್ವಹನ್ತಾ ವರ್ಜಯೇತ್ಕೃಷ್ಣಸೇವಕಾನ್ ॥ ೧೫೧ ॥

ಯಸ್ಸೃಜತಿ ಸ ಹರ್ತಾ ಚ ಸ ವೈ ಪಾಲಕ ಉಚ್ಯತೇ ।
ಅಪರಾಧಶತೈರ್ಯುಕ್ತಂ ಸ್ವಸ್ಥಾನೇ ನಯ ಮಾಮಿತಃ ॥ ೧೫೨ ॥

ತಥಾ ಕೃತಾಪರಾಧಸ್ಯ ಕೃಷ್ಣ ತ್ವಂ ಚ ಕೃಪಾಂ ಕುರು ।
ಫಲಂ ಚ ಲಭತೇ ಬಾಹ್ಯೋ ರಕ್ಷಕಃ ಕಿಂ ಕರೋಸ್ತಿ ಚೇತ್ ॥ ೧೫೩ ॥

ಏವಮಾತ್ಮಾ ಚ ದೇಹೇಸ್ಮಿನ್ ಪರವಶ್ಯಃ ಕೃಪಾಂ ಕುರು ।
ಪ್ರಾಪ್ತೋ ನ ಪಾರಶ್ಯನಕ್ತೈಃ ಮಲ್ಲೈರ್ಮುಕ್ತಿರವಾಪಿ ವಾ ॥ ೧೫೪ ॥

---

೧೫೦. ಜನಗಳು ಕಲ್ಲುಗಳನ್ನು ಒಡೆದು ಹಾಕುತ್ತಾರೆ. ಮಾಣಿಕ್ಯವನ್ನು ಒಡೆಯಲು ಆಗುವುದಿಲ್ಲ. ಆ ರೀತಿಯಾಗಿ ಅನೇಕ ಅಪೇಕ್ಷೆಗಳುಳ್ಳ ಬುದ್ಧಿಯಿಂದಲೂ ಕೂಡ ವಿಷ್ಣುಭಕ್ತಿಯನ್ನು ನಾಶಮಾಡಲು ಆಗುವುದಿಲ್ಲ.

೧೫೧. ನೀರಿನಲ್ಲಿರುವ ಬಕವು ಕಪ್ಪೆ ಮುಂತಾದುವನ್ನು ಬಿಟ್ಟು ಮೀನು ಮುಂತಾದ ಹುಳುಗಳನ್ನು ತಿನ್ನುತ್ತದೆ. ಸರ್ವನಾಶಕನಾದ ಯಮನು ಅದರಂತೆ ಕೃಷ್ಣ ಸೇವಕರನ್ನು ಬಿಟ್ಟು ಮಿಕ್ಕವರನ್ನು ಬಾಧಿಸುತ್ತಾನೆ.

೧೫೨. ಯಾವನು ಉತ್ಪತ್ತಿಮಾಡುವನೋ ಅವನೇ ಕೊಲ್ಲುತ್ತಾನೆ. ಮತ್ತು ಕಾಪಾಡುತ್ತಾನೆ ಅನೇಕವಾದ ತಪ್ಪುಗಳನ್ನು ಮಾಡಿದ್ದರೂ ನನ್ನನ್ನು ನಿನ್ನ ಸ್ಥಾನಕ್ಕೆ ಕರೆದುಕೊಂಡು ಹೋಗು.

೧೫೩. ಎಲೈ ಸ್ವಾಮಿಯೆ! ನಾನು ಅನೇಕ ಅಪರಾಧಗಳನ್ನು ಮಾಡಿದ್ದರೂ ನನ್ನಮೇಲೆ ಕೃಪೆಯನ್ನು ಮಾಡು. ಒಳಗೆ ಎಲ್ಲವನ್ನೂ ಪರಿಮಾಷಿ ಕೊಳ್ಳುವ ಆಳಿದ್ದರೆ ಅದರ ಫಲವನ್ನು ಹೊರಗಿನವನಾದ ರಕ್ಷಕನು ಹೊಂದುತ್ತಾನಲ್ಲವೆ!

೧೫೪. ಎಲೈ ಸ್ವಾಮಿಯೇ! ಈ ದೇಹದಲ್ಲಿ ಆತ್ಮನು ಪರವಶನಾಗಿ ರುತ್ತಿದ್ದಾನೆ. ನೀನು ಕೃಪೆಯನ್ನಿಡು. ಸಂಸಾರಪಾರವನ್ನು ನಾನು ಹೊಂದಲೇ ಇಲ್ಲ. ದೇಹದ ಗಟ್ಟಿಗತನವು ವ್ಯರ್ಥ. ಗಟ್ಟಿಗರಾದ ಜಟ್ಟಿಗಳು ಎಲ್ಲಿಯಾದರೂ ತಮ್ಮ ಗಟ್ಟಿಗತನದಿಂದ ಮುಕ್ತಿಯನ್ನು ಹೊಂದಿದ್ದಾರೆಯೋ? ಇಲ್ಲವೇ ಇಲ್ಲ.

ವ್ಯಾಧಸ್ಯ ಮುಕ್ತಿದಾತಾ ಚ ಕುಬ್ಜಕಾ ತಾರಿತಾ ತ್ವಯಾ ।
ಬ್ರಹ್ಮಾದ್ಯೈರ್ದುರ್ಲಭಃ ಸ್ವಪ್ನೇ ಸುಲಭೋ ಗೋಪಮಂದಿರೇ ॥ ೧೫೫ ॥

ಗೋಪೋಚ್ಛಿಷ್ಟಂ ಯದಾ ಭುಕ್ತಂ ತದಾ ತೇ ತಾರಿತಾಸ್ತ್ವಯಂ ।
ಯೋಗಿಭಿರ್ಗೀಯಸೇ ನಿತ್ಯಂ ಪರಮಾತ್ಮಾ ಜನಾರ್ದನಃ ॥ ೧೫೬ ॥

ಅವ್ಯಯಃ ಪುರುಷಶ್ಶ್ರೀಮಾನ್ ದೃಷ್ಟ್ವಾ ತ್ವಾಂ ತ್ವತ್ಪದಂ ಗತಾಃ ।
ವಿಷ್ಣುಸ್ಮರಣಕಂ ದಿವ್ಯಂ ಯೇ ಪಠಂತಿ ದಿನೇ ದಿನೇ ॥ ೧೫೭ ॥

ಸರ್ವಪಾಪವಿನಿರ್ಮುಕ್ತಾ ಯಾನ್ತಿ ವಿಷ್ಣೋಸ್ಸನಾತನಂ ।
ಅನಯಾ ಭಾವಬುದ್ಧ್ಯಾ ಚ ಪಠನಂ ವಿಷ್ಣುಸನ್ನಿಧೌ ।
ಇಹಲೋಕೇ ಸುಖಂ ಭುಕ್ತ್ವಾ ಪರಂ ಪದಮವಾಪ್ನುಯಾತ್ ॥ ೧೫೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ
ಸಂವಾದೇ ವಿಷ್ಣು ಸ್ಮರಣ ಮಾಹಾತ್ಮ್ಯ ಕಥನಂ ನಾಮ
ಅಷ್ಟಾವಿಂಶತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೫೫–೧೫೮. ನೀನು ವ್ಯಾಧನಾಗಿದ್ದ ವಾಲ್ಮೀಕಿಗೆ ಮೋಕ್ಷವನ್ನು ಕೊಟ್ಟೆ. ಕುಬ್ಜೆಯಾದ ಶಬರಿಗೆ ಮೋಕ್ಷವನ್ನು ಕೊಟ್ಟೆ. ಬ್ರಹ್ಮಾದಿಗಳಿಗೆ ಸ್ವಪ್ನದಲ್ಲಿಯೂ ನೀನು ಗೋಚರನಾಗುವುದಿಲ್ಲ. ಅಂತಹ ನೀನು ಗೋಪರ ಮನೆಯಲ್ಲಿ ಹುಟ್ಟಿ ಎಲ್ಲರಿಗೂ ಸುಲಭನಾಗಿದ್ದೀಯೆ. ಗೋಪರು ನಿನ್ನ ಎಂಜಲನ್ನು ತಿಂದಾಗಲೇ ಅವರೆಲ್ಲರೂ ಈ ಜನ್ಮದಿಂದ ಪಾರಾದರು. ಯೋಗಿಗಳೂ ನಿನ್ನನ್ನು ಪರಮಾತ್ಮನೇ! ಜನಾರ್ದನನೇ! ಎಂದು ಹೊಗಳುತ್ತಾರೆ. ವಿಷ್ಣುವಿನ ಸ್ಮರಣೆ ಬರುವ ಇದನ್ನು ಯಾರು ಪ್ರತಿದಿನವೂ ಪಠಿಸುತ್ತಾರೆಯೋ ಅವರು ಸರ್ವಪಾಪಗಳನ್ನೂ ಕಳೆದು ಕೊಂಡು ವಿಷ್ಣುವಿನ ಸನಾತನ ರೂಪದಲ್ಲಿ ಸೇರಿಹೋಗುತ್ತಾರೆ ಈ ರೀತಿಯಾದ ಪಾಪನಾಶಕ ಅಭಿಪ್ರಾಯದಿಂದ ವಿಷ್ಣುವಿನ ಸನ್ನಿಧಿಯಲ್ಲಿ ಓದಬೇಕು. ಹಾಗೆ ಓದಿದರೆ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಸತ್ತಮೇಲೆ ಪರಮಪದವಾದ ವೈಕುಂಠವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ವಿಷ್ಣು ಸ್ಮರಣ ಮಹಿಮಾ ಕಥನ ಎಂಬ
ನೂರ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನತ್ರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಪಾರ್ವತ್ಯುವಾಚ ॥

**ದ್ವೀಪೇಽಸ್ಮಿನ್ಯಾನಿ ತೀರ್ಥಾನಿ ತಾನಿ ಮೇ ವದ ಸುವ್ರತ ।**
**ಸಂಖ್ಯಯಾ ತ್ವಂ ವದ ಸ್ವಾಮಿನ್ ಕೃಪಾಂ ಕೃತ್ವಾ ಮಮೋಪರಿ ॥ ೧ ॥**

॥ ಮಹಾದೇವ ಉವಾಚ ॥

**ಸರ್ವಗಃ ಸರ್ವಭೂತೇಷು ದ್ರಷ್ಟವ್ಯಸ್ಸರ್ವತೋ ಭುವಿ ।**
**ಸಪ್ತಲೋಕೇಷು ಯತ್ಕಿಂಚಿದ್ದೃಶ್ಯತೆ ಸಚರಾಚರಂ ॥ ೨ ॥**

---

## ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು



೧. ಶ್ರೀ ಪಾರ್ವತಿಯು ಹೇಳಿದಳು–ಎಲೈ ಶಿವನೇ! ಈ ದ್ವೀಪದಲ್ಲಿ ಯಾವಯಾವ ತೀರ್ಥಗಳಿವಿಯೋ ಅವೆಲ್ಲವನ್ನೂ ಹೇಳು. ಈ ದ್ವೀಪವು ದ್ವೀಪಗಳಿಗೆಲ್ಲಾ ದ್ವೀಪ ರಾಜನಾಗಿದೆ. ನಿರ್ಮಿತವಾಗಿ ಇದರಲ್ಲಿರುವ ತೀರ್ಥಗಳನ್ನು ಲೆಕ್ಕಮಾಡಿ ನನ್ನ ಮೇಲೆ ಕೃಪೆಯಿಟ್ಟು ಹೇಳು.

೨. ಮಹಾದೇವನು ಹೇಳಿದನು–ಆ ಸರ್ವಜ್ಞನಾದ ಸ್ವಾಮಿಯು ಎಲ್ಲಾ ಲೋಕದಲ್ಲಿಯೂ ಚರಾಚರಾತ್ಮಕವಾದ ಪ್ರಾಣಿಗಳಲ್ಲಿಯೂ ಎಲ್ಲಾ ಕಡೆಗಳಲ್ಲಿಯೂ ಇರುವನು. ಈ ಸ್ವಾಮಿಯು ಅಂಥಹವನು.

ನ ಹಿ ತೇನ ವಿನಾ ದೇವಿ ದೃಷ್ಟಂ ನಾಪಿ ಶ್ರುತಂ ತಥಾ ।
ಅತೋ ವಿಷ್ಣುರ್ಮಹಾದೇವಃ ಕೇಶವಃ ಕ್ಲೇಶನಾಶನಃ || ೩ ||

ತೀರ್ಥರೂಪೇಣ ವರ್ತೇತ ದ್ವೀಪೇ ಹ್ಯಸ್ಮಿನ್ಸುರೇಶ್ವರಿ ।
ತಾನಿ ತೀರ್ಥಾನಿ ವಕ್ಷ್ಯಾಮಿ ತುಭ್ಯಂ ದೇವಿ ನ ಸಂಶಯಃ || ೪ ||

ಪ್ರಥಮಂ ಪುಷ್ಕರಂ ತೀರ್ಥಂ ತೀರ್ಥಾನಾಂ ಪ್ರವರಂ ಶುಭಂ ।
ವಾರಾಣಸೀ ದ್ವಿತೀಯಂ ತು ಕ್ಷೇತ್ರಂ ಮುಕ್ತಿಪ್ರದಾಯಕಂ || ೫ ||

ತೃತೀಯಂ ನೈಮಿಷಂ ಕ್ಷೇತ್ರಮೃಷೀಣಾಂ ಪಾವನಂ ಸ್ಮೃತಂ ।
ಪ್ರಯಾಗಂ ವೈ ಚತುರ್ಥಂ ತು ತೀರ್ಥಾನಾಮುತ್ತಮಂ ಸ್ಮೃತಂ || ೬ ||

ಕಾರ್ಮುಕಂ ಪಂಚಮಂ ಪ್ರೋಕ್ತಮುತ್ಪನ್ನಂ ಗಂಧಮಾದನೇ ।
ಷಷ್ಠಂ ವೈ ಮಾನಸಂ ತೀರ್ಥಂ ದೇವಾನಾಂ ರಮ್ಯಮೇವ ಚ || ೭ ||

---

೩. ಎಲೈ ದೇವಿಯೇ ! ಆ ಸ್ವಾಮಿಯು ಇಲ್ಲದಿರುವ ಪದಾರ್ಥವಾಗಲೀ ಇಲ್ಲದಿರುವ ಜಾಗವಾಗಲೀ ಕಾಣಲ್ಪಟ್ಟೂ ಇಲ್ಲ. ಕೇಳಲ್ಪಟ್ಟೂ ಇಲ್ಲ. ಆದ್ದರಿಂದಲೇ ಆ ಮಹಾದೇವನಾದ ಸ್ವಾಮಿಯು ಜನಗಳ ಕ್ಲೇಶವನ್ನು ನಾಶಮಾಡುತ್ತಾನೆ.

೪. ಅಂಥಹ ಸ್ವಾಮಿಯು ಈ ದ್ವೀಪದಲ್ಲಿ ತೀರ್ಥರೂಪದಿಂದ ಇದ್ದಾನೆ. ಆ ತೀರ್ಥಗಳನ್ನು ನಿನಗೆ ಹೇಳುತ್ತೇನೆ. ಕೇಳು. ಸಂಶಯ ಪಡಬೇಡ.

೫. ಕ್ಷೇತ್ರಗಳಲ್ಲಿ ಮೊದಲನೆಯದು ಪುಷ್ಕರತೀರ್ಥವು. ಇದು ತೀರ್ಥಗಳಲ್ಲೆಲ್ಲಾ ಉತ್ತಮವಾದುದು. ವಾರಾಣಸಿಯು ಎರಡನೆಯದು. ಇದು ಮುಕ್ತಿಯನ್ನು ಕೊಡತಕ್ಕದ್ದು.

೬ ಮೂರನೆಯದು ನೈಮಿಷಕ್ಷೇತ್ರವು. ಇದು ಋಷಿಗಳಿಗೆ ಪಾವನವಾದುದು. ಪ್ರಯಾಗ ತೀರ್ಥವು ನಾಲ್ಕನೆಯದು ಇದು ಉತ್ತಮವಾದುದು

೭. ಕಾರ್ಮುಕಾ (ಧನುಷ್ಕೋಟಿ) ಎಂಬ ಕ್ಷೇತ್ರವು ಐದನೆಯದು. ಇದು ಗಂಧಮಾದನಪರ್ವತದಲ್ಲಿದೆ. ಮಾನಸತೀರ್ಥವು ಆರನೆಯದು. ಇದು ದೇವತೆಗಳಿಗೆ ಉತ್ತಮವಾದುದು.

ಸಪ್ತಮಂ ವಿಶ್ವಕಾಯಂ ತು ಹ್ಯಂಬರೇ ಪರ್ವತೇ ಶುಭೇ ।
ಅಷ್ಟಮಂ ಗೌತಮಾಖ್ಯಂ ಚ ಮಂದರೇ ನಿರ್ಮಿತಂ ಪುರಾ ॥ ೮ ॥

ಮದೋತ್ಕಟಂ ತು ನವಮಂ ದಶಮಂ ರಥಚೈತ್ರಕಂ ।
ಏಕಾದಶಂ ಕಾನ್ಯಕುಬ್ಜಂ ಯತ್ರ ತಿಷ್ಠತಿ ವಾಮನಃ ॥ ೯ ॥

ದ್ವಾದಶಂ ವೈ ಮಲಯಜಂ ಕುಬ್ಜಾಮ್ರಕಮತಃ ಪರಂ ।
ವಿಶ್ವೇಶ್ವರಂ ಗಿರಿಕರ್ಣೇ ಕೇದಾರಂ ಗತಿದಾಯಕಂ ॥ ೧೦ ॥

ಬಾಹ್ಯಂ ಹಿಮವತಃ ಪೃಷ್ಠೇ ಗೋಕರ್ಣೇ ಗೋಪಕಂ ತಥಾ ।
ಸ್ಥಾನೇಶ್ವರಂ ಹಿಮಾದ್ರೌ ಚ ಬಿಲ್ವಕೇ ಬಿಲ್ವಪತ್ರಕಂ ॥ ೧೧ ॥

ಶ್ರೀಶೈಲೇ ಮಾಧವಂ ತೀರ್ಥಂ ಭದ್ರಂ ಭದ್ರೇಶ್ವರೇ ತಥಾ ।
ವರಾಹೇ ವಿಜಯಂ ಪ್ರೋಕ್ತಂ ವೈಷ್ಣವಂ ವೈಷ್ಣವೇ ಗಿರೌ ॥ ೧೨ ॥

---

೮. ವಿಶ್ವಕಾಯವೆಂಬ ಕ್ಷೇತ್ರವು ಏಳನೆಯದು. ಇದು ಅಂಬರಪರ್ವತದಲ್ಲಿದೆ. ಗೌತಮ ಕ್ಷೇತ್ರವು ಎಂಟನೆಯದು. ಇದು ಮಂದರಪರ್ವತದಲ್ಲಿದೆ.

೯. ಮದೋತ್ಕಟ ಕ್ಷೇತ್ರವೆಂಬುದು ಒಂಬತ್ತನೆಯದು. ರಥಚೈತ್ರಕವೆಂಬ ಕ್ಷೇತ್ರವು ಹತ್ತನೆಯದು. ಕಾನ್ಯಕುಬ್ಜವೆಂಬ ಕ್ಷೇತ್ರವು ಹನ್ನೊಂದನೆಯದು. ಅಲ್ಲಿಯೇ ವಾಮನನು ವಾಸವಾಗಿದ್ದಾನೆ.

೧೦ ಮಲಯಪರ್ವತದಲ್ಲಿರುವ ಕುಬ್ಜಾಮ್ರವೆಂಬ ತೀರ್ಥವು ಹನ್ನೆರಡನೆಯದು. ಅನಂತರ ಗಿರಕರ್ಣದಲ್ಲಿ ವಿಶ್ವೇಶ್ವರ ತೀರ್ಥವು ಇದೆ. ಕೇದಾರ ತೀರ್ಥವು ಗತಿಯನ್ನು ಕೊಡತಕ್ಕದ್ದು.

೧೧-೧೨. ಹಿಮವತ್ಪರ್ವತದ ತಪ್ಪಲಲಿ ಬಾಹ್ಯವೆಂಬ ತೀರ್ಥವೂ ಗೋಕರ್ಣದಲ್ಲಿ ಗೋಪಕ ತೀರ್ಥವೂ ಹಿಮಾದ್ರಿಯಲ್ಲಿ ಸ್ಥಾನೇಶ್ವರವೂ ಬಿಲ್ವಕವೆಂಬಲ್ಲಿ ಬಿಲ್ವಪತ್ರಕವೆಂಬ ತೀರ್ಥವೂ ಶ್ರೀಶೈಲದಲ್ಲಿ ಮಾಧವ ತೀರ್ಥವೂ ವರಾಹದಲ್ಲಿ ವಿಜಯ ತೀರ್ಥವೂ ವೈಷ್ಣವ ಗಿರಿಯಲ್ಲಿ ವಿಷ್ಣು ತೀರ್ಥವೂ ಇವೆ.

ರೌದ್ರಂ ತು ರುದ್ರಕೋಟೇ ತು ಪೈತ್ರ್ಯಂ ಕಾಲಂಜರೇ ಗಿರೌ ।
ಕಂಪಿಲೇ ಕಾಂಪಿಲಂ ತೀರ್ಥಂ ಮುಕುಟೇ ಕಕೋಟಕಂ ತಥಾ ॥ ೧೩ ॥

ಸಾಲಗ್ರಾಮೋದ್ಭವಂ ತೀರ್ಥಂ ಗಲ್ಲಿಕಾಯಾಂ ಸುರೇಶ್ವರಿ ।
ನರ್ಮದಾಯಾಂ ಶಿವಾಖ್ಯಂ ತು ಮಾಯಾಯಾಂ ವಿಶ್ವರೂಪಕಂ ॥ ೧೪ ॥

ಉತ್ಪಲಾಕ್ಷೇ ಸಹಸ್ರಾಕ್ಷಂ ಜಾತಂ ರೈವತಕೇ ಗಿರೌ ।
ಗಯಾಯಾಂ ಪಿತೃತೀರ್ಥಂ ತು ವಿಷ್ಣುಪಾದೋದ್ಭವಂ ತಥಾ ॥ ೧೫ ॥

ವಿಪಾಶಾಯಾಂ ವಿಪಾಪಂ ತು ಪಾಟಲಂ ಪುಂಡ್ರವರ್ಧನೇ ।
ನಾರಾಯಣಂ ಸುಪಾರ್ಶ್ವೇ ತು ತ್ರಿಕೂಟೇ ವಿಷ್ಣುಮಂದಿರಂ ॥ ೧೬ ॥

ವಿಪುಲೇ ವಿಪುಲಂ ನಾಮ ಕಲ್ಯಾಣಂ ಮಲಯಾಚಲೇ ।
ಕೌರವಂ ಕೋಟಿತೀರ್ಥೇ ತು ಸುಗಂಧಂ ಗಂಧಮಾದನೇ ॥ ೧೭ ॥

ಕುಬ್ಜಾಂತಕೇ ತ್ರಿಸಂಧ್ಯಂ ತು ಗಂಗಾದ್ವಾರೇ ಹರಿಪ್ರಿಯಂ ।
ಶೈಲಂ ವಿಂಧ್ಯಪ್ರದೇಶೇ ತು ಬದಾರ್ಯಾಂ ಸಾರಸ್ವತಂ ಶುಭಂ ॥ ೧೮ ॥

---

೧೩–೧೪. ರುದ್ರಕೋಟಿಯಲ್ಲಿ ರುದ್ರತೀರ್ಥವೂ, ಕಾಳಂಜರಗಿರಿಯಲ್ಲಿ ಪಿತೃತೀರ್ಥವೂ, ಕಂಪಿಲದಲ್ಲಿ ಕಾಂಪಿಲತೀರ್ಥವೂ, ಮುಕುಟದಲ್ಲಿ ಮುಕುಟೋದಕವೂ ಗಲ್ಲಿಕೆ (ಗಂಡಕಿ) ಯಲ್ಲಿ ಸಾಲಗ್ರಾಮ ತೀರ್ಥವೂ, ನರ್ಮದೆಯಲ್ಲಿ ಶಿವತೀರ್ಥವೂ, ಮಾಯೆಯಲ್ಲಿ ವಿಶ್ವರೂಪತೀರ್ಥವೂ ಇವೆ.

೧೫–೧೬. ಉತ್ಪಲಾಕ್ಷದಲ್ಲಿ ಸಹಸ್ರಾಕ್ಷತೀರ್ಥವೂ ಇದೆ. ಆ ಉತ್ಪಲಾಕ್ಷವು ರೈವತಕ ಪರ್ವತದಲ್ಲಿದೆ. ಗಯೆಯಲ್ಲಿ ಪಿತೃತೀರ್ಥವೂ, ವಿಷ್ಣುಪಾದೋದ್ಭವವೂ ತೀರ್ಥವೂ ಇವೆ. ವಿಪಾಶೆಯಲ್ಲಿ ವಿಪಾಶತೀರ್ಥವಿದೆ. ಪುಂಡ್ರವರ್ಧನದಲ್ಲಿ ಪಾಟಲತೀರ್ಥವಿದೆ. ತ್ರಿಕೂಟದಲ್ಲಿ ವಿಷ್ಣುಮಂದಿರವೆಂಬ ತೀರ್ಥವು ಇದೆ.

೧೭–೧೮. ವಿಪುಲದಲ್ಲಿ ವಿಪುಲತೀರ್ಥವೂ, ಮಲೆಯಪರ್ವತದಲ್ಲಿ ಕಲ್ಯಾಣತೀರ್ಥವೂ, ಕೋಟಿತೀರ್ಥದಲ್ಲಿ ಕೌರವತೀರ್ಥವೂ, ಗಂಧಮಾದನದಲ್ಲಿ ಸುಗಂಧವೂ, ಕುಬ್ಜಾಂಗನದಲ್ಲಿ ತ್ರಿಸಂಧ್ಯಾ ತೀರ್ಥವೂ, ವಿಂಧ್ಯಪ್ರದೇಶದಲ್ಲಿ ಶೈಲತೀರ್ಥವೂ, ಬದರಿಯಲ್ಲಿ ಸಾರಸ್ವಿತ ತೀರ್ಥವೂ ಇವೆ.

ಕಾಳಿಂದ್ಯಾಂ ಕಾಲರೂಪಂ ಚ ಸಹ್ಯೇ ವೈ ಸಾಹ್ಯಕಂ ಸ್ಮೃತಂ ।
ಚಾಂದ್ರಂ ಚಂದ್ರಪ್ರದೇಶೇ ಚ ರಮಣಂ ತೀರ್ಥನಾಯಕಂ ॥ ೧೯ ॥

ಯಮುನಾಯಾಂ ಮೃಗಾಖ್ಯಂ ತು ಕರವೀರೇ ಕುರೂದ್ಭವಂ ।
ವಿನಾಯಕೇ ಪರ್ವತೇ ವೈ ಉಮಾಖ್ಯಂ ತೀರ್ಥಮುತ್ತಮಂ ॥ ೨೦ ॥

ಆರೋಗ್ಯಂ ಭಾಸ್ಕರೇ ದೇಶೇ ಮಹಾಕಾಲೇ ಮಹೇಶ್ವರಂ ।
ತೀರ್ಥಂ ತ್ವಭಯದಂ ನಾಮ ಅಮೃತಾಖ್ಯಂ ವಿಂಧ್ಯಕಂದರೇ ॥ ೨೧ ॥

ಮಂಡಪೇ ವಿಶ್ವರೂಪಂ ಚ ಸ್ವಾಹಾಖ್ಯಮೀಶ್ವರೇ ಪುರೇ ।
ವೈಗಳೇಯಂ ಪ್ರಚಂಡಾಯಾಂ ಚಾಂಡಂ ಚಾಮರಕಂಟಕೇ ॥ ೨೨ ॥

ಸೋಮೇಶ್ವರಂ ತಥಾ ತೀರ್ಥಂ ಪ್ರಭಾಸೇ ಪುಷ್ಕರಂ ತಥಾ ।
ದೇವಮಾತ್ರಂ ಸರಸ್ವತ್ಯಾಂ ಪಾರಾಯತತಟೇ ಸ್ಥಿತಂ ॥ ೨೩ ॥

ಮಹಾಲಯಂ ಮಹಾಪದ್ಮೇ ಪಯೋಷ್ಣ್ಯಾಂ ಪಿಂಗಲೇಶ್ವರಂ ।
ಸಿಂಹಿಕಾಯಾಂ ತಥಾ ತೀರ್ಥಂ ಸೌರವೇ ರವಿ ಸಂಜ್ಞಕಂ ॥ ೨೪ ॥

---

೧೯–೨೦. ಕಾಳಿಂದಿಯಲ್ಲಿ ಕಾಲರೂಪ ತೀರ್ಥವೂ, ಸಹ್ಯಪರ್ವತದಲ್ಲಿ ಸಹ್ಯ ತೀರ್ಥವೂ, ಚಂದ್ರಪ್ರದೇಶದಲ್ಲಿ ಚಾಂದ್ರತೀರ್ಥವೂ, ರಮಣವೆಂಬ ತೀರ್ಥವೂ ಇವೆ. ಯಮುನೆಯಲ್ಲಿ ಮೃಗಾಖ್ಯ ತೀರ್ಥವೂ, ಕರವೀರದಲ್ಲಿ ಕುರೂದ್ಭವ ತೀರ್ಥವೂ, ವಿನಾಯಕ ಪರ್ವತದಲ್ಲಿ ಉಮಾತೀರ್ಥವೂ ಇವೆ.

೨೧–೨೩. ಭಾಸ್ಕರ ದೇಶದಲ್ಲಿ ಆರೋಗ್ಯ ತೀರ್ಥವೂ, ಮಹಾಕಾಳದಲ್ಲಿ ಮಹೇಶ್ವರ ತೀರ್ಥವೂ, ವಿಂಧ್ಯ ಕಂದರದಲ್ಲಿ ಅಭಯ ತೀರ್ಥವೂ, ಅಮೃತ ತೀರ್ಥವೂ ಇವೆ. ಮಂಡಪದಲ್ಲಿ ವಿಶ್ವರೂಪ ತೀರ್ಥವೂ, ಈಶ್ವರಪುರದಲ್ಲಿ ಸ್ವಾಹಾತೀರ್ಥವೂ, ಪ್ರಚಂಡೆಯಲ್ಲಿ ವೈಗಳ ತೀರ್ಥವೂ, ಅಮರಕಂಟಕದಲ್ಲಿ ಚಾಂಡ ತೀರ್ಥವೂ, ಪ್ರಭಾಸದಲ್ಲಿ ಸೋಮೇಶ್ವರ ಪುಷ್ಕರತೀರ್ಥಗಳೂ, ಸರಸ್ವತಿಯಲ್ಲಿ ದೇವಮಾತ್ರ ತೀರ್ಥವೂ ಇವೆ.

೨೪–೨೬. ಮಹಾಪದ್ಮದಲ್ಲಿ ಮಹಾಲಯ ತೀರ್ಥವೂ, ಪಯೋಷ್ಣಿಯಲ್ಲಿ ಪಿಂಗಳೇಶ್ವರ ಕ್ಷೇತ್ರವೂ, ಸಿಂಹಿಕೆಯಲ್ಲಿ ಸಿಂಹಿಕಾ ತೀರ್ಥವೂ, ಸೌರವದಲ್ಲಿ

ಕಾರ್ತಿಕಂ ಕೃತ್ತಿಕಾಕ್ಷೇತ್ರೇ ಶಾಂಕರಂ ಶಂಕರೇ ಗಿರೌ ।
ಉತ್ಪಲಾಖ್ಯಂ ತತೋ ದಿವ್ಯಂ ಸುಭದ್ರಾ ಸಿಂಧುಸಂಗಮೇ ॥ ೨೫ ॥

ಗಾಣಪತ್ಯಂ ತತಶ್ಚೈವ ಪರ್ವತೇ ವಿಷ್ಣುಸಂಜ್ಞಿತೇ ।
ಜಾಲಂಧರೇ ತತಃ ಪ್ರೋಕ್ತಂ ತೀರ್ಥಂ ವಿಷ್ಣುಮುಖಂ ಚ ಯತ್ ॥ ೨೬ ॥

ತಾರೇ ವೈ ತಾರಕಂ ಚೈವ ಪರ್ವತೇ ವಿಷ್ಣು ಸಂಜ್ಞಕೇ ।
ದೇವದಾರುವನೇ ಪೌಂಡ್ರಂ ಪೌಷ್ಕಂ ಕಾಶ್ಮೀರಮಂಡಲೇ ॥ ೨೭ ॥

ಭೌಮಂ ಹಿಮಂ ಹಿಮಾದ್ರೌ ಚ ತುಷ್ಟಿಕಂ ಪೌಷ್ಟಿಕಂ ಪುನಃ ।
ಕಪಾಲಮೋಚನಂ ತೀರ್ಥಂ ಜಾತಂ ಮಾಯಾಪುರೇ ತಥಾ ॥ ೨೮ ॥

ಶಂಖೋದ್ಧಾರೇ ತತಶ್ಚೈವ ದೈವಂ ವೈ ಶಂಖಧಾರಕಂ ।
ಪಿಂಡೇ ವೈ ಪಿಂಡನಂ ನಾಮ ಸಿದ್ಧೇ ವೈಖಾನಸಂ ಭವೇತ್ ॥ ೨೯ ॥

ಅಚ್ಛೋದೇ ವಿಷ್ಣುಕಾಮಂ ತು ಧರ್ಮಕಾಮಾರ್ಥಮೋಕ್ಷದಂ ।
ಓಷಧ್ಯಂ ಚೋತ್ತರೇ ಕೂಲೇ ಕುಶದ್ವೀಪೇ ಕುಶೋದಕಂ ॥ ೩೦ ॥

---

ರವಿತೀರ್ಥವೂ, ಕೃತ್ತಿಕಾ ಕ್ಷೇತ್ರದಲ್ಲಿ ಕಾರ್ತಿಕ ತೀರ್ಥವೂ, ಶಂಕರಗಿರಿಯಲ್ಲಿ ಶಂಕರ ತೀರ್ಥವೂ, ಸುಭದ್ರೆ, ಸಿಂಧು ನದಿಗಳ ಸಂಗಮದಲ್ಲಿ ಉತ್ಪಲವೆಂಬ ತೀರ್ಥವೂ, ವಿಷ್ಣುಪರ್ವತದಲ್ಲಿ ಗಾಣಪತ್ಯ ತೀರ್ಥವೂ, ಜಾಲಂಧರದಲ್ಲಿ ವಿಷ್ಣುಮುಖ ತೀರ್ಥವೂ ಇವೆ.

೨೭–೨೮. ವಿಷ್ಣುಪರ್ವತದಲ್ಲಿರುವ ತಾರವೆಂಬಲ್ಲಿ ತಾರಕ ತೀರ್ಥವೂ, ದೇವದಾರು ವನದಲ್ಲಿ ಪೌಂಡ್ರತೀರ್ಥವೂ, ಕಾಶ್ಮೀರದಲ್ಲಿ ಪೌಷ್ಕರ ತೀರ್ಥವೂ, ಹಿಮಾದ್ರಿಯಲ್ಲಿ ಭೌಮತೀರ್ಥ, ಹಿಮತೀರ್ಥಗಳೂ ತುಷ್ಟಿಕ ಪೌಷ್ಟಿಕಗಳೂ, ಮಾಯಾಪುರಿಯಲ್ಲಿ ಕಪಾಲಮೋಚನ ತೀರ್ಥವೂ ಇವೆ.

೨೯–೩೦. ಶಂಖೋದ್ಧಾರದಲ್ಲಿ ಶಂಖೋದ್ಧಾರಕ ತೀರ್ಥವೂ, ಪಿಂಡವೆಂಬಲ್ಲಿ ಪಿಂಡನ ತೀರ್ಥವೂ, ಸಿದ್ಧವೆಂಬಲ್ಲಿ ವೈಖಾನಸ ತೀರ್ಥವೂ, ಅಚ್ಛೋದದಲ್ಲಿ ವಿಷ್ಣುಕಾಮ ತೀರ್ಥವೂ ಇವೆ. ಇವೂ ಮೋಕ್ಷ ಕಾಮುಗಳನ್ನು ಕೊಡುತ್ತವೆ. ಉತ್ತರದಡದಲ್ಲಿ ಔಷಧ್ಯವೆಂಬ ತೀರ್ಥವೂ, ಕುಶದ್ವೀಪದಲ್ಲಿ ಕುಶೋದಕವೆಂಬ ತೀರ್ಥವೂ ಇವೆ.

ಮನ್ಮಥಂ ಹೇಮಕೂಟೇ ತು ಕುಮುದೇ ಸತ್ಯವಾದಿನಂ ।
ವಂದತ್ಯಾಮಶ್ವಕಂ ತೀರ್ಥಂ ವಿಂಧ್ಯೇ ವೈಮಾತ್ರಕಂ ಸ್ಮೃತಂ ॥ ೩೧ ॥

ಚಿತ್ತೇ ಬ್ರಹ್ಮಮಯಂ ತೀರ್ಥಂ ತೀರ್ಥಾನಾಂ ಪಾವನಂ ಸ್ಮೃತಂ ।
ಏತೇಷಾಂ ಸರ್ವತೀರ್ಥಾನಾಮುತ್ತಮಂ ಶೃಣು ಸುಂದರಿ ॥ ೩೨ ॥

ವಿಷ್ಣೋರ್ನಾಮಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಬ್ರಹ್ಮಹಾ ಹೇಮಹಾರೀ ಚ ಬಾಲಹಾ ಗೋಘ್ನ ಏವ ಚ ॥ ೩೩ ॥

ಮುಚ್ಯತೇ ನಾಮಮಾತ್ರೇಣ ಪ್ರಸಾದಾತ್ಕೇಶವಸ್ಯ ತು ।
ಕಲೌ ದ್ವಾರವತೀ ರಮ್ಯಾ ಧನ್ಯೋ ದೇವೋ ಜನಾರ್ದನಃ ॥ ೩೪ ॥

ಯೇ ಪಶ್ಯಂತಿ ನರಾ ದೇವಂ ಮುಕ್ತಿಸ್ತೇಷಾಂ ಸುನಿಶ್ಚಲಾ ।
ಏವಂ ಧನ್ಯತಮಂ ದೇವಂ ವಿಷ್ಣುಂ ಸರ್ವೇಶ್ವರಂ ಪ್ರಭುಂ ॥ ೩೫ ॥

ಚಿಂತಯಾಮಿ ಮಹಾದೇವಿ ವಿದ್ವತ್ಸಂಸ್ಥೋ ಜನಾರ್ದನಂ ।
ಅಷ್ಟೋತ್ತರಂ ತು ತೀರ್ಥಾನಾಂ ಶತಮೇತದುದಾಹೃತಂ ॥ ೩೬ ॥

---

೩೧-೩೬. ಹೇಮಕೂಟದಲ್ಲಿ ಮನ್ಮಥ ತೀರ್ಥವೂ, ಕುಮುದದಲ್ಲಿ ಸತ್ಯವಾದಿ ತೀರ್ಥವೂ, ವಂದತಿಯಲ್ಲಿ ಅಶ್ವತೀರ್ಥವೂ, ವಿಂಧ್ಯದಲ್ಲಿ ವೈಮಾತ್ರಕ ತೀರ್ಥವೂ ಇವೆ. ಚಿತ್ತದಲ್ಲಿ (ಮನಸ್ಸಿನಲ್ಲಿ) ಬ್ರಹ್ಮಮಯವಾದುದೇ ತೀರ್ಥವು (ಯಾವನು ಯಾವಾಗಲೂ ಬ್ರಹ್ಮನನ್ನೇ ಮನಸ್ಸಿನಲ್ಲಿ ಸ್ಮರಿಸುತ್ತಾನೆಯೋ ಅವನು ತೀರ್ಥಸ್ವರೂಪನೆಂದು ಭಾವವು.) ಎಲೈ ಪಾರ್ವತಿಯೇ! ಈ ತೀರ್ಥಗಳೆಲ್ಲಕ್ಕಿಂತಲೂ ಉತ್ತಮವಾದ ತೀರ್ಥವನ್ನು ಹೇಳುತ್ತೇನೆ. ಕೇಳು. ವಿಷ್ಣುವಿನ ನಾಮಸ್ಮರಣೆಗೆ ಸಮವಾದ ತೀರ್ಥವು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಬ್ರಹ್ಮಹತ್ಯೆ ಮಾಡಿದವನೂ ಚಿನ್ನ ಕದ್ದವನೂ ಬಾಲರನ್ನು ಕೊಂದವನೂ ಆ ಕೇಶವನ ಹೆಸರನ್ನು ಹೇಳಿದ ಕೂಡಲೇ ಆ ಸ್ವಾಮಿಯ ಅನುಗ್ರಹದಿಂದ ಮುಕ್ತನಾಗುತ್ತಾನೆ. ಕಲಿಯುಗದಲ್ಲಿ ದ್ವಾರಕೆಯು ಬಹು ರಮ್ಯವಾದುದು. ಅಲ್ಲಿರುವ ಜನಾರ್ಧನ ಸ್ವಾಮಿಯು ರಮ್ಯ ಮತ್ತು ಧನ್ಯವಾದುದು. ಅದನ್ನು ನೋಡಿದವರಿಗೆ ಮುಕ್ತಿಯೆಂಬುದು ಬಂದೇ ಬರುತ್ತದೆ. ಇದರಲ್ಲಿ ಸಂಶಯವಿಲ್ಲ. ಈ ರೀತಿಯಾಗಿ ಧನ್ಯರೊಳಗೆ ಬಹು ಧನ್ಯವಾದ ಸರ್ವೇಶ್ವರನಾದ ಆ ವಿಷ್ಣುವನ್ನು ಯಾವಾಗಲೂ ಸ್ಮರಿಸುತ್ತಿರುತ್ತೇನೆ ಈ ರೀತಿಯಾಗಿ ನೂರೆಂಟು ತೀರ್ಥಗಳನ್ನು ಹೇಳಿದ್ದೇನೆ.

**ಯೋ ಜಪೇಚ್ಛೃಣುಯಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।**
**ಏಷು ತೀರ್ಥೇಷು ಯಸ್ಸ್ನಾತ್ವಾ ಪಶ್ಯೇನ್ನಾರಾಯಣಂ ಹರಿಂ ॥ ೩೭ ॥**

**ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಸ್ಸನಾತನಂ ।**
**ಜಗನ್ನಾಥಂ ಮಹಾತೀರ್ಥಂ ಲೋಕಾನಾಂ ಪಾವನಂ ಸ್ಮೃತಂ ॥ ೩೮ ॥**

**ಯೇ ಗಚ್ಛಂತಿ ನರಶ್ರೇಷ್ಠಾಸ್ತೇಽಪಿ ಯಾಂತಿ ಪರಾಂ ಗತಿಂ ।**
**ಅಷ್ಟೌ ಶತಂ ಮಹಾಪುಣ್ಯಂ ಶ್ರಾವಯೇತ್ಪಿತೃಕರ್ಮಣಿ ॥ ೩೯ ॥**

**ಇಹ ಲೋಕೇ ಸುಖಂ ಭುಕ್ತ್ವಾ ಯಾತಿ ವಿಷ್ಣೋಸ್ಸನಾತನಂ ।**
**ಗೋದಾನೇ ಶ್ರಾದ್ಧದಾನೇ ವಾ ಅಹನ್ಯಹನಿ ವಾ ಪುನಃ ।**
**ದೇವಾರ್ಚನವಿಧೌ ವಿದ್ವಾನ್ ಪರಂ ಬ್ರಹ್ಮಾಧಿಗಚ್ಛತಿ ॥ ೪೦ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಜಂಬೂದ್ವೀಪ ಗತ ತೀರ್ಥ ಕಥನಂ ನಾಮ ಏಕೋನತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೩೭–೩೮. ಈ ನೂರೆಂಟು ತೀರ್ಥಗಳನ್ನು ಯಾವನು ಜಪಿಸುತ್ತಾನೆಯೋ ಅಥವಾ ಕೇಳುತ್ತಾನೆಯೋ ಯಾವನು ಈ ತೀರ್ಥಗಳಲ್ಲಿ ಸ್ನಾನಮಾಡುತ್ತಾನೆಯೋ ಅವನು ಪಾಪಗಳನ್ನೆಲ್ಲಾ ಕಳೆದುಕೊಂಡು ವಿಷ್ಣುವಿನ ಸ್ಥಾನವಾದ ವೈಕುಂಠಕ್ಕೆ ಹೋಗುತ್ತಾನೆ. ಜಗನ್ನಾಥವೆಂಬ ತೀರ್ಥವು ಮಹಾ ಪುಣ್ಯವನ್ನು ಕೊಡುತ್ತದೆ. ಲೋಕದಲ್ಲಿ ಅದೂ ಪಾವನವು ಎಂದೆನಿಸಿಕೊಂಡಿದೆ. ಅಲ್ಲಿಗೆ ಹೋಗುವವರು ಉತ್ತಮಗತಿಯನ್ನು ಹೊಂದುತ್ತಾರೆ. ಈ ನೂರೆಂಟು ಪುಣ್ಯಕ್ಷೇತ್ರಗಳನ್ನು ಪಿತೃಗಳ ಶ್ರಾದ್ಧದ ದಿವಸ ಹೇಳಿ ಕೇಳಿಸಬೇಕು. ಅಂತಹವನು ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ವೈಕುಂಠಕ್ಕೆ ಹೋಗುತ್ತಾನೆ ಗೋದಾನ ಮಾಡುವಾಗ, ಶ್ರಾದ್ಧ ಮಾಡುವಾಗ, ಅಥವಾ ನಿತ್ಯವೂ ಆಗಲಿ ದೇವತಾರ್ಚನೆ ಮಾಡುವಾಗ ಈ ನೂರೆಂಟು ತೀರ್ಥಗಳನ್ನು ಜಪಿಸಿದರೆ ಉತ್ತಮಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಜಂಬೂದ್ವೀಪದಲ್ಲಿರುವ ತೀರ್ಥಗಳ ಕಥನ ಎಂಬ ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಂಶದಧಿಕಶತತಮೋಽಧ್ಯಾಯಃ ॥



**॥ ಮಹಾದೇವ ಉವಾಚ ॥**

**ವೇತ್ರವತ್ಯಾಸ್ತು ಮಾಹಾತ್ಮ್ಯಂ ವಕ್ಷ್ಯಾಮಿ ಶೃಣು ಸುಂದರಿ ।**
**ತತ್ರ ಸ್ನಾತ್ವಾ ವಿಮುಚ್ಯೇತ ಯಾವದಾಭೂತಸಂಪ್ಲವಂ ॥ ೧ ॥**

**ವೃತ್ರೇಣ ಚ ಕೃತಃ ಕೂಪೋ ಮಹಾಗಂಭೀರಸಂಜ್ಞಕಃ ।**
**ಕೂಪಾತ್ವಾ ನಿಸ್ಸೃತಾ ದೇವೀ ಮಹಾಪಾಪೌಘನಾಶಿನೀ ॥ ೨ ॥**

**ಯಥಾ ಗಂಗಾ ತಥೇಯಂ ಚ ಸರಿಚ್ಛ್ರೇಷ್ಠಾ ಸುರೋತ್ತಮೇ ।**
**ಅಸ್ಯಾ ದರ್ಶನಮಾತ್ರೇಣ ಪಾಪೌಘಾಶ್ಶಮಯಂತಿ ಚ ॥ ೩ ॥**

---

## ನೂರ ಮೂವತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು–ಎಲೈ ಸುಂದರಿಯೇ ! ವೇತ್ರವತಿಯ ಮಹಿಮೆಯನ್ನು ಹೇಳುತ್ತೇನೆ. ಕೇಳು. ಅದರಲ್ಲಿ ಸ್ನಾನ ಮಾಡಿದರೆ ಮನುಷ್ಯನು ಪ್ರಳಯ ಕಾಲದವರೆಗೂ ಪಾಪದಿಂದ ಮುಕ್ತನಾಗುತ್ತಾನೆ.

೨. ವೃತ್ರಾಸುರನು ಅಲ್ಲಿ ಒಂದು ಭಾವಿಯನ್ನು ತೋಡಿರುವನು. ಅದರ ಹೆಸರು ಮಹಾ ಗಂಭೀರವೆಂದು. ಆ ಭಾವಿಯಿಂದ ಪಾಪನಾಶಕವಾದ ಈ ವೇತ್ರವತಿಯು ಹೊರಟಿದೆ.

೩. ಈ ನದಿಯು ಗಂಗೆಯು ಯಾವ ರೀತಿಯಾಗಿ ನದಿಗಳೆಲ್ಲೆಲ್ಲಾ ಶ್ರೇಷ್ಠವೋ ಹಾಗೆ ಶ್ರೇಷ್ಠವಾದುದು ಇದನ್ನು ನೋಡುವುದರಿಂದಲೇ ಪಾಪಗಳೆಲ್ಲವೂ ನಾಶವಾಗುತ್ತವೆ.

ಶೃಣು ದೇವಿ ಪ್ರವಕ್ಷ್ಯಾಮಿ ಇತಿಹಾಸಂ ಪುರಾತನಂ ।
ಯಂ ಶ್ರುತ್ವಾ ಪಾಪಿನಶ್ಚಾಪಿ ಮುಚ್ಯಂತೇ ಕರ್ಮಬಂಧನಾತ್ || ೪ ||

ಚಂಪಕೇ ನಗರೇ ಚೈವ ರಾಜಾ ರಾಜ್ಯಂ ಕರೋತಿ ಸಃ ।
ಸದಾ ದುಷ್ಟೋ ದುಷ್ಟರೂಪೋ ಜನಾನಾಂ ಸಂಪ್ರಪೀಡಕಃ || ೫ ||

ಅಧಮೋಽಧರ್ಮರೂಪಶ್ಚ ವಿಷ್ಣುನಿಂದಾಪರಾಯಣಃ ।
ದೇವದ್ವಿಜನಿಹಂತಾ ಚ ಆಶ್ರಮಾಣಾಂ ವಿದೂಷಕಃ || ೬ ||

ವೇದನಿಂದಾಪರಶ್ಚೈವ ಮೂರ್ಖೋ ವಾ ನಿರ್ಘೃಣಶ್ಶಠಃ ।
ಅಸಚ್ಛಾಸ್ತ್ರೇಷು ನಿರತಃ ಪರದಾರಾಭಿಮರ್ಶಕಃ || ೭ ||

ವಿದಾರುಣೇತಿನಾಮಾ ಚ ಸಂಜಾತೋತ್ಯಂತಪಾಪಕೃತ್ ।
ಕದಾಚಿದ್ದೈವಯೋಗೇನ ಆಗತಸ್ತಾಂ ನದೀಂ ಪ್ರತಿ || ೮ ||

---

೪. ಎಲೈ ದೇವಿಯೇ! ಒಂದು ಪೂರ್ವದ ಕಥೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದುದರಿಂದಲೇ ಪಾಪಿಗಳು ಪಾಪಗಳನ್ನು ನಾಶಮಾಡಿ ಕೊಳ್ಳುತ್ತಾರೆ.

೫. ಚಂಪಕವೆಂಬ ನಗರದಲ್ಲಿ ಒಬ್ಬ ರಾಜನು ರಾಜ್ಯವಾಳುತ್ತಿದ್ದನು. ಅವನು ಯಾವಾಗಲೂ ದುಷ್ಟನು. ನೋಡುವುದಕ್ಕೂ ಭಯಂಕರನು ಜನಗಳನ್ನು ಬಹುವಾಗಿ ಪೀಡಿಸುತ್ತಿದ್ದನು.

೬-೭. ಅವನು ಅಧಮನು. ಅಧರ್ಮದ ಅವತಾರವು. ಯಾವಾಗಲೂ ವಿಷ್ಣುವನ್ನು ನಿಂದಿಸುತ್ತಿದ್ದನು. ದೇವರುಗಳನ್ನು ನಾಶಮಾಡುತ್ತಿದ್ದನು. ಬ್ರಾಹ್ಮಣರನ್ನು ಹಿಂಸಿಸುತ್ತಿದ್ದನು. ಆಶ್ರಮಗಳನ್ನು ದೂಷಿಸುತ್ತಿದ್ದನು. ವೇದಗಳನ್ನು ನಿಂದಿಸುತ್ತಿದ್ದನು. ಮೂರ್ಖನಾಗಿದ್ದು ದಯಾಶೂನ್ಯನಾಗಿ ಅಯೋಗ್ಯನಾಗಿದ್ದನು. ಅವನು ಯಾವಾಗಲೂ ಕೆಟ್ಟ ವಿದ್ಯೆಗಳಲ್ಲಿಯೇ ಮನಸ್ಸಿಟ್ಟುಕೊಂಡು ನೋಡುತ್ತಿದ್ದನು. ಪರರ ಹೆಂಡಿರನ್ನು ಯಥೇಚ್ಛವಾಗಿ ರಮಿಸುತ್ತಾ ಇದ್ದನು.

೮. ಅವನ ಹೆಸರು ವಿದಾರುಣನೆಂದು. ಒಟ್ಟಿನಲ್ಲಿ ಇವನು ಬಹಳ ಪಾಪಿಯಾಗಿದ್ದನು. ಒಂದು ಸಾರಿ ಅದೃಷ್ಟವಶದಿಂದ ಆತನು ಆ ವೇತ್ರವತೀ ನದಿಗೆ ಬಂದನು.

ಅಖೇಟಿಕಸಮಾಯುಕ್ತಃ ಸ್ವಯಂ ಕುಷ್ಠೀ ಸುರೇಶ್ವರಿ ।
ಮಹಾಪಾಪಾದಯಂ ಜಾತೋ ಬ್ರಾಹ್ಮಣಾನಾಂ ಚ ನಿಂದನಾತ್ ॥ ೯ ॥

ವೃಥಾವಾದೀ ದುರಾತ್ಮಾ ಚ ಶಠೋ ವೈ ಪಶುರೇವ ಹಿ ।
ವೇದವಾದತಿರಸ್ಕರ್ತಾ ಗೋದಾನಂ ಪ್ರತಿದೂಷಕಃ ॥ ೧೦ ॥

ಏವಂವಿಧೋಭವದ್ರಾಜಾ ತೃಷಾರ್ತಸ್ಸಸುಹೃದ್ವೃತಃ ।
ಅಶ್ವಾದುತ್ತೀರ್ಯ ಸ ತದಾ ಪೀತ್ವಾಪಃ ಸ್ವಗೃಹಂ ಗತಃ ॥ ೧೧ ॥

ತೇನೈವೋದಕಪಾನೇನ ಗತಂ ಕುಷ್ಠಂ ನ ಸಂಶಯಃ ।
ಬುದ್ಧಿಶ್ಚ ನಿರ್ಮಲಾ ಜಾತಾ ತಸ್ಯ ರಾಜ್ಞೋ ವಿಶೇಷತಃ ॥ ೧೨ ॥

ವಿಷ್ಣೌ ಭಕ್ತಿಸ್ಸಮುತ್ಪನ್ನಾ ತದಾ ತಸ್ಯ ಸುರೇಶ್ವರಿ ।
ತತಃ ಪ್ರಭೃತಿ ಕಾಲೇನ ಸ್ನಾನಂ ಚ ಕೃತವಾನ್ಸದಾ ॥ ೧೩ ॥

---

೯. ಇವನು ಆ ನದಿಯ ಹತ್ತಿರಕ್ಕೆ ಬೇಟೆಯನ್ನು ಆಡುತ್ತ ಬಂದನು. ಅವನು ಬ್ರಾಹ್ಮಣರನ್ನು ನಿಂದೆಮಾಡುವ ಮಹಾ ಪಾಪದಿಂದ ಕುಷ್ಠರೋಗವುಳ್ಳವನಾಗಿದ್ದನು.

೧೦. ತಲೆಹರಟೆಯನ್ನು ಯಾವಾಗಲೂ ಆಡುತ್ತಿರುವನು. ದುಷ್ಟನು. ಆಯೋಗ್ಯನು. ಯುಕ್ತಾಯುಕ್ತಗಳನ್ನು ತಿಳಿಯದ ಪಶುವು. ವೇದವನ್ನೂ ಅದರಂತೆ ನಡೆಯುವವರನ್ನೂ ತಿರಸ್ಕಾರಮಾಡುವನು. ಗೋದಾನ ಮಾಡುವವರನ್ನು ನಿಂದಿಸುತ್ತಿದ್ದನು.

೧೧. ಈ ರೀತಿಯಾಗಿದ್ದ ರಾಜನು ಅಲ್ಲಿಗೆ ಬಂದಾಗ ಬಾಯಾರಲು ಸ್ನೇಹಿತರೊಡನೆ ಕುದುರೆಯಿಂದ ಕೆಳಗಿಳಿದು ಅವನು ನೀರನ್ನು ಕುಡಿದು ಮನೆಗೆ ಹೋದನು.

೧೨. ಆ ನೀರನ್ನು ಕುಡಿದುದರಿಂದಲೇ ಆ ಕುಷ್ಠರೋಗವು ಹೋಯಿತು. ಬುದ್ಧಿಯು ಪಾಪವಿಷಯವನ್ನು ಬಿಟ್ಟು ಬಹು ನಿರ್ಮಲವಾಯಿತು.

೧೩. ಆಗ ಆತನಿಗೆ ವಿಷ್ಣುವಿನಲ್ಲಿ ಭಕ್ತಿಯೂ ಉಂಟಾಯಿತು. ಆಗಿನಿಂದ ಮೊದಲುಗೊಂಡು ಅವನು ಆ ನದಿಯಲ್ಲಿ ತಪ್ಪದೆ ಸ್ನಾನಮಾಡುತ್ತಾ ಬಂದನು.

ನಿರ್ಮಲೋ ಬಹುರೂಪಾಢ್ಯೋ ಜಾತಸ್ತತ್ರ ಸುರೇಶ್ವರಿ ।
ಇಹಲೋಕೇ ಸುಖಂ ಭುಕ್ತ್ವಾ ಕೃತ್ವಾ ಯಜ್ಞಾನನೇಕಶಃ ॥ ೧೪ ॥

ವಿಪ್ರೇಭ್ಯೋ ದಕ್ಷಿಣಾಂ ದತ್ವಾ ಸ ಗತೋ ವೈಷ್ಣವಂ ಪದಂ ।
ಇತಿ ಜ್ಞಾತ್ವಾ ತು ಭೋ ದೇವಿ ವೇತ್ರವತ್ಯಾ ವಿಶೇಷತಃ ॥ ೧೫ ॥

ಸ್ನಾನಂ ಕುರ್ವಂತಿ ಯೇ ವಿಪ್ರಾಃ ತೇ ಮುಕ್ತಾ ನಗನಂದಿನಿ ।
ರಾಜನ್ಯೋ ವಾಥ ವೈಶ್ಯೋ ವಾ ಶೂದ್ರೋ ವಾ ಸುರಸತ್ತಮೋ ॥ ೧೬ ॥

ಸ್ನಾನಂ ಕುರ್ವೀತ ಯಸ್ತತ್ರ ಸ ಮುಕ್ತಃ ಪಾಪಬಂಧನಾತ್ ।
ಕಾರ್ತಿಕೇ ವಾಥ ಮಾಘೇ ವಾ ವೈಶಾಖೇ ವಾ ಪುನಃ ಪುನಃ ॥ ೧೭ ॥

ಸ್ನಾನಂ ಕುರ್ವಂತಿ ಯೇ ಲೋಕಾ ಮುಕ್ತಾಸ್ತೇ ಕರ್ಮಭಿಸ್ಸದಾ ।
ಬ್ರಹ್ಮಘ್ನೋ ವಾಥ ಗೋಘ್ನೋ ವಾ ಬಾಲಘ್ನೋ ವೇದನಿಂದಕಃ ॥ ೧೮ ॥

---

೧೪. ಆದುದರಿಂದ ನಿರ್ಮಲನೂ ಬಹುವಾದ ರೂಪವಂತನೂ ಆದನು. ಮತ್ತು ಈ ಲೋಕದಲ್ಲಿ ಅನೇಕ ರೀತಿಯಲ್ಲಿ ಸುಖಪಟ್ಟು ಬಹುವಾದ ಯಜ್ಞಗಳನ್ನು ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ವೈಕುಂಠವನ್ನು ಹೊಂದಿದನು

೧೫. ಈ ವಿಷಯವನ್ನು ತಿಳಿದು ಆ ವೇತ್ರವತಿಯಲ್ಲಿ ಸ್ನಾನಮಾಡಿದ ವಿಪ್ರರು ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ.

೧೬. ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಯಾರೇ ಆಗಲಿ ಅಲ್ಲಿ ಸ್ನಾನವನ್ನು ಮಾಡಬೇಕು. ಹಾಗೆ ಮಾಡಿದರೆ ಪಾಪದಿಂದ ಮುಕ್ತರಾಗುತ್ತಾರೆ.

೧೭. ಕಾರ್ತಿಕ, ಮಾಘ, ವೈಶಾಖಗಳಲ್ಲಿ ಆಗಾಗ್ಗೆ ಸ್ನಾನಮಾಡುತ್ತಿದ್ದರೆ ಅವರು ತಮ್ಮ ತಮ್ಮ ಪಾಪದಿಂದ ಮುಕ್ತರಾಗುತ್ತಾರೆ.

೧೮. ಬ್ರಹ್ಮಹತ್ಯೆ ಮಾಡಿದವನು, ಗೋಹತ್ಯೆಮಾಡಿದವನು, ಬಾಲರನ್ನು ಕೊಂದವನು, ವೇದವನ್ನು ನಿಂದಿಸುವವನು ಯಾವನೇ ಆಗಲಿ ಈ ನದಿಯ ಸಂಗಮದಲ್ಲಿ ಸ್ನಾನಮಾಡಿದರೆ ಪಾಪದಿಂದ ಬಿಡುಗಡೆ ಹೊಂದುತ್ತಾನೆ.

ಸರಿತಾಂ ಸಂಗಮೋ ಸ್ನಾತ್ವಾ ಮುಚ್ಯತೇ ದೇವಿ ಕಿಲ್ಬಿಷಾತ್ ।
ಸಾಭ್ರಮತ್ಯಾ ಸಮಂ ಯತ್ರ ಯಸ್ಯಾಸ್ಸಂಗಃ ಪ್ರದೃಶ್ಯತೇ ॥ ೧೯ ॥

ತತ್ರ ಸ್ನಾತ್ವಾ ವಿಶೇಷೇಣ ಮುಚ್ಯತೇ ಬ್ರಹ್ಮಹಾ ಸದಾ ।
ಖೇಟಕಂ ನಗರಂ ದಿವ್ಯಂ ಸ್ವರ್ಗರೂಪಂ ಧರಾತಳೇ ॥ ೨೦ ॥

ಬ್ರಾಹ್ಮಣೈಸ್ತತ್ರ ವೈ ದೇವಿ ಯೋಗಾಶ್ಚ ಬಹವಃ ಕೃತಾಃ ।
ತತ್ರ ಸ್ನಾತ್ವಾ ಚ ಭುಕ್ತ್ವಾ ಚ ಪುನರ್ಜನ್ಮ ನ ವಿಂದತಿ ॥ ೨೧ ॥

ಸಾ ದ್ವಿತೀಯಾ ಸ್ಮೃತಾ ಗಂಗಾ ಕಲೌ ದೇವಿ ವಿಶೇಷತಃ ।
ಯೇ ನರಾಸ್ಸುಖಮಿಚ್ಛಂತಿ ಧನಮಿಚ್ಛಂತಿ ಯೇ ನರಾಃ ॥ ೨೨ ॥

ಸ್ವರ್ಗಮಿಚ್ಛಂತಿ ಯೇ ಲೋಕಾಸ್ತೇ ವೈ ಸ್ನಾತ್ವಾ ಪುನಃ ಪುನಃ ।
ಇಹ ಲೋಕೇ ಸುಖಂ ಭುಕ್ತ್ವಾ ಯಾಂತಿ ವಿಷ್ಣೋಸ್ಸನಾತನಂ ॥ ೨೩ ॥

ಸೂರ್ಯವಂಶೇ ಚ ಯೇ ಜಾತಾಃ ಸೋಮವಂಶೇ ತಥೈವ ಚ ।
ಆಗತಾ ವೇತ್ರವತ್ಯಾಂ ತು ಸ್ನಾತ್ವಾ ನಿರ್ವೃತಿಮಾಗತಾಃ ॥ ೨೪ ॥

---

೧೯. ಸಾಭ್ರಮತಿಯೊಡನೆ ಆ ವೇತ್ರವತಿಯು ಸಂಗಮವಾಗುತ್ತದೆ. ಅಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಹೋಗಲಾಡಿಸಿಕೊಳ್ಳುತ್ತಾನೆ.

೨೦-೨೧. ಆ ಖೇಟಕವೆಂಬ ಪಟ್ಟಣವು ಸುಂದರವಾಗಿವೆ. ಭೂಮಿಯಲ್ಲಿ ಸ್ವರ್ಗಕ್ಕೆ ಸಮಾನವಾದುದು. ಬ್ರಾಹ್ಮಣರು ಅಲ್ಲಿ ಅನೇಕ ಬಗೆಯಿಂದ ಯೋಗಾಭ್ಯಾಸವನ್ನು ಮಾಡಿರುವರು. ಅಲ್ಲಿ ಸ್ನಾನಮಾಡಿದರೂ, ಊಟಮಾಡಿದರೂ ಮತ್ತೆ ಜನ್ಮವನ್ನು ಹೊಂದುವುದಿಲ್ಲ.

೨೨-೨೩. ಎಲೈ ದೇವಿಯೇ! ಆ ವೇತ್ರವತಿಯು ಕಲಿಯುಗದಲ್ಲಿ ಎರಡನೆಯ ಗಂಗೆಯೆಂದೆನಿಸಿಕೊಂಡಿದೆ. ಯಾರು ಧನವನ್ನು ಅಪೇಕ್ಷಿಸುತ್ತಾರೆಯೋ, ಯಾರು ಸುಖವನ್ನು ಅಪೇಕ್ಷಿಸುತ್ತಾರೆಯೋ, ಯಾರು ಸ್ವರ್ಗವನ್ನು ಅಪೇಕ್ಷಿಸುತ್ತಾರೆಯೋ ಅವರು ಅಲ್ಲಿ ಸ್ನಾನಮಾಡಿದರೆ ಈ ಲೋಕದಲ್ಲಿಯೂ ಸುಖವನ್ನು ಅನುಭವಿಸಿ ಪರಲೋಕದಲ್ಲಿ ವೈಕುಂಠವನ್ನು ಹೊಂದುತ್ತಾರೆ.

೨೪. ಸೂರ್ಯವಂಶದ ರಾಜರೂ, ಚಂದ್ರವಂಶದ ರಾಜರೂ ಕೂಡ ಈ ವೇತ್ರವತಿಗೆ ಬಂದು ಸ್ನಾನಮಾಡಿ ಮೋಕ್ಷವನ್ನು ಹೊಂದಿರುವರು.

**ದರ್ಶನಾದ್ಧರತೇ ದುಃಖಂ ಸ್ಪರ್ಶನಾನ್ನಾಸಸಂ ಹ್ಯಘಂ ।**
**ಸ್ನಾತ್ವಾ ಭುಕ್ತ್ವಾ ತಥಾ ದೇವಿ ಮುಕ್ತಿಭಾಗೀ ನ ಸಂಶಯಃ ॥ ೨೫ ॥**

**ಸ್ನಾನಾಜ್ಜಪಾತ್ತಥಾ ಹೋಮಾದನಂತಂ ಫಲಮಶ್ನುತೇ ।**
**ಗತ್ವಾ ವಾರಾಣಸೀತೀರ್ಥಂ ಭಕ್ತ್ಯಾ ಚಾಂದ್ರಾಯಣಂ ಚರೇತ್ ॥ ೨೬ ॥**

**ಯತ್ತತ್ರ ಲಭತೇ ಪುಣ್ಯಂ ತತ್ಪುಣ್ಯಂ ಪ್ರಾಪ್ನುಯಾನ್ನರಃ ।**
**ವೇತ್ರವತ್ಯಾಂ ವಿಶೇಷೇಣ ಪಂಚತ್ವಂ ಯದಿ ಗಚ್ಛತಿ ॥ ೨೭ ॥**

**ಸ ವೈ ಚತುರ್ಭುಜೋ ಭೂತ್ವಾ ಯಾತಿ ವಿಷ್ಣೋಃ ಪರಂ ಪದಂ ।**
**ಪೃಥಿವ್ಯಾಂ ಯಾನಿ ತೀರ್ಥಾನಿ ಯೇ ದೇವಾಃ ಪಿತರಸ್ತಥಾ ॥ ೨೮ ॥**

**ತೇ ಚ ಸರ್ವೇ ವಸಂತೀಹ ವೇತ್ರವತ್ಯಾಂ ಸುರೇಶ್ವರಿ ।**
**ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯೋ ವರಾನನೇ ॥ ೨೯ ॥**

---

೨೫. ಆ ವೇತ್ರವತಿಯು ತನ್ನನ್ನು ನೋಡುವುದರಿಂದ ನೋಡಿದವನ ದುಃಖವನ್ನು ನಾಶಮಾಡುತ್ತದೆ. ಮುಟ್ಟುವುದರಿಂದ ಪಾಪವನ್ನು ನಾಶಮಾಡುತ್ತದೆ. ಸ್ನಾನಪಾನಗಳನ್ನು ಮಾಡಿದರೆ ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ.

೨೬. ಆ ವೇತ್ರವತಿಯಲ್ಲಿ ಸ್ನಾನಮಾಡುವುದರಿಂದಲೂ, ಜಪಮಾಡುವುದರಿಂದಲೂ, ಹೋಮಮಾಡುವುದರಿಂದಲೂ ಬಹುವಾದ ಫಲವನ್ನು ಹೊಂದುತ್ತಾನೆ. ವಾರಾಣಸಿಗೆ ಹೋಗಿ ಅಲ್ಲಿ ಚಾಂದ್ರಾಯಣವ್ರತವನ್ನು ಮಾಡಿದರೆ ಯಾವ ಪುಣ್ಯವನ್ನು ನರನು ಹೊಂದುತ್ತಾನೆಯೋ ಆ ಪುಣ್ಯವನ್ನು ಇಲ್ಲಿಯೂ ಹೊಂದುತ್ತಾನೆ.

೨೭. ವೇತ್ರವತಿಯಲ್ಲಿ ಪ್ರಾಣಬಿಟ್ಟರೆ ಅವನು ನಾಲ್ಕು ಭುಜಗಳನ್ನು ಹೊಂದಿ ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದಿಯೇ ಹೊಂದುತ್ತಾನೆ.

೨೮. ಭೂಲೋಕದಲ್ಲಿ ಎಷ್ಟು ತೀರ್ಥಗಳಿವೆಯೋ ಮತ್ತು ಎಷ್ಟು ಜನ ದೇವತೆಗಳಿರುವರೋ ಮತ್ತು ಪಿತೃಗಳಿರುವರೋ ಅವರೆಲ್ಲರೂ ಕೂಡ ಈ ವೇತ್ರವತಿಯಲ್ಲಿ ವಾಸಮಾಡುತ್ತಾರೆ.

೨೯. ಎಲೈ ಪಾರ್ವತಿಯೇ! ಬಹುವಾಗಿ ಹೇಳಿದುದರಿಂದ ಏನು ಪ್ರಯೋಜನ? ಈ ವೇತ್ರವತಿಗೆ ಸಮವಾದ ತೀರ್ಥವು ಈ ಭೂಮಿಯಲ್ಲಿಯೇ ಇಲ್ಲ.

ವೇತ್ರವತ್ಯಾ ಸಮಂ ತೀರ್ಥಂ ಪೃಥಿವ್ಯಾಂ ನಾಸ್ತಿ ಸುವ್ರತೇ ।
ಅಹಂ ವಿಷ್ಣುಸ್ತಥಾ ಬ್ರಹ್ಮಾ ದೇವಾಶ್ಚ ಪರಮರ್ಷಯಃ ॥ ೩೦ ॥

ತಿಷ್ಠಂತಿ ದೇವತಾಸ್ಸರ್ವಾ ವೇತ್ರವತ್ಯಾಂ ಮಹೇಶ್ವರಿ ।
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ವಾ ವಿಶೇಷತಃ ।
ಸ್ನಾನಂ ಕುರ್ವಂತಿ ಯೇ ತತ್ರ ತೇ ವೈ ಮುಕ್ತಾ ನ ಸಂಶಯಃ ॥ ೩೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ವೇತ್ರವತೀ ಮಾಹಾತ್ಮ್ಯ ಕಥನಂ ನಾಮ ತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೦. ನಾನು, ಬ್ರಹ್ಮನು, ವಿಷ್ಣುವು, ದೇವತೆಗಳು, ಮಹರ್ಷಿಗಳು, ಈ ವೇತ್ರವತಿಯಲ್ಲಿ ವಾಸಿಸುತ್ತೇವೆ.

೩೧. ಒಂದು ಹೊತ್ತು, ಎರಡು ಹೊತ್ತು, ಮೂರು ಹೊತ್ತುಗಳಲ್ಲಿಯೂ ಯಾರು ಯಾರು ವೇತ್ರವತಿಯಲ್ಲಿ ಸ್ನಾನಮಾಡುತ್ತಾರೆಯೋ ಅವರು ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ವೇತ್ರವತೀ ಮಹಿಮ ಕಥನ ಎಂಬ ನೂರ ಮೂವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕತ್ರಿಂಶದಧಿಕಶತತಮೋಽಧ್ಯಾಯಃ ||



|| ಮಹಾದೇವ ಉವಾಚ ||

**ಸಾಭ್ರಮತ್ಯಾಸ್ತು ಮಾಹಾತ್ಮ್ಯಂ ವಕ್ಷ್ಯೇ ದೇವಿ ಯಥಾ ತಥಂ |**
**ಕಶ್ಯಪೋ ವೈ ಮುನಿಶ್ರೇಷ್ಠಸ್ತಪೋ ವೈ ತಪ್ತವಾನ್ಮಹತ್** || ೧ ||

**ಅಯುತಂ ವರ್ಷಪರ್ಯಂತಂ ತೇನ ತಪ್ತಂ ಮಹತ್ತಪಃ |**
**ಅರ್ಬುದೇ ಪರ್ವತೇ ರಮ್ಯೇ ನಾನಾದ್ರುಮಸಮಾಕುಲೇ** || ೨ ||

**ತತ್ರ ಗತ್ವಾ ತಪಸ್ತಪ್ತಮೃಷಿಣಾ ಕಶ್ಯಪೇನ ವೈ |**
**ಸರಸ್ವತೀ ಯತ್ರ ರಮ್ಯಾ ಪವಿತ್ರಾ ಪಾಪನಾಶಿನೀ** || ೩ ||

---

## ನೂರ ಮೂವತ್ತೊಂದನೆಯ ಅಧ್ಯಾಯವು



೧. ಮಹಾದೇವನು ಹೇಳಿದನು—ಎಲೈ ಪಾರ್ವತಿಯೇ! ಸಾಭ್ರಮತಿಯ ಮಹಿಮೆಯವನ್ನು ಹೇಳುತ್ತೇನೆ. ಕೇಳು. ಕಶ್ಯಪನೆಂಬ ಮುನಿಯು ಪೂರ್ವದಲ್ಲಿ ಬಹು ಉಗ್ರವಾದ ತಪಸ್ಸನ್ನು ಮಾಡಿದನು.

೨. ರಮ್ಯವಾದ ಅನೇಕ ವಿಧವಾದ ಮರಗಳಿಂದ ಕೂಡಿರುವ ಅರ್ಬುದವೆಂಬ ಪರ್ವತದಲ್ಲಿ ಹತ್ತುಸಾವಿರ ವರ್ಷಗಳವರೆಗೂ ಆ ಕಶ್ಯಪನು ಉಗ್ರವಾದ ತಪಸ್ಸನ್ನು ಮಾಡಿದನು.

೩. ರಮ್ಯವಾದ ಸರಸ್ವತಿಯು ಪಾಪನಾಶಕಳಾಗಿ ಎಲ್ಲಿ ಹರಿಯುತ್ತಾಳೆಯೋ ಅಂತಹ ಅರ್ಬುತಪರ್ವತಕ್ಕೆ ಹೋಗಿ ಕಶ್ಯಪನು ತಪಸ್ಸನ್ನು ಮಾಡಿದನು.

ತೇನ ತೀವ್ರಂ ತಪಸ್ತಪ್ತಂ ಬ್ರಹ್ಮಜೇನ ಮಹಾತ್ಮನಾ ।
ಏಕಸ್ಮಿನ್ದಿವಸೇ ದೇವಿ ಗತೋಽಸೌ ನೈಮಿಷಂ ಪ್ರತಿ ॥ ೪ ॥

ತದಾ ತ್ವೈ ಋಷಿಭಿಸ್ಸಾರ್ಧಂ ಕಥಾಂ ಚಕ್ರೇ ಸ ಕಶ್ಯಪಃ ।
ತದಾ ದ್ವಿಜವರೈಸ್ಸಮ್ಯಕ್ ಪೃಷ್ಟೋಽಸೌ ಕಶ್ಯಪೋ ಮುನಿಃ ॥ ೫ ॥

॥ ಋಷಯ ಊಚುಃ ॥

ಅಹೋ ಕಶ್ಯಪ ನಃ ಪ್ರೀತ್ಯೈ ಗಂಗಾಹ್ಯಾನೀಯತಾಂ ಪ್ರಭೋ ।
ಭವನ್ನಾಮ್ನಾ ತು ಸಾ ಗಂಗಾ ಭವಿಷ್ಯತಿ ಸರಿದ್ವರಾ ॥ ೬ ॥

॥ ಮಹಾದೇವ ಉವಾಚ ॥

ತೇಷಾಂ ವಾಕ್ಯಮುಪಾಕರ್ಣ್ಯ ನಮಸ್ಕೃತ್ಯ ದ್ವಿಜಾಂಶ್ಚ ತಾನ್ ।
ಆಗತೋ ಹ್ಯರ್ಬುದಾರಣ್ಯೇ ಸರಸ್ವತ್ಯಾಶ್ಚ ಸನ್ನಿಧೌ ॥ ೭ ॥

ತತ್ರ ತಪ್ತಂ ತದಾನೇನ ತಪಃ ಪರಮದುಷ್ಕರಂ ।
ಆರಾಧಿತೋ ಹ್ಯಹಂ ತೇನ ಕಶ್ಯಪೇನ ದ್ವಿಜೇನ ವೈ ॥ ೮ ॥

---

೪. ಆ ಬ್ರಹ್ಮನ ಮಗನಾದ ಕಶ್ಯಪನು ಅಲ್ಲಿ ತೀವ್ರವಾದ ತಪಸ್ಸು ಮಾಡುತ್ತಿದ್ದಾಗ ಒಂದಾನೊಂದು ದಿನ ಅವನು ನೈಮಿಷಾರಣ್ಯಕ್ಕೆ ಹೋದನು.

೫. ಅಲ್ಲಿಗೆ ಹೋದ ಆ ಕಶ್ಯಪನು ಅಲ್ಲಿದ್ದ ಋಷಿಗಳೊಡನೆ ಅನೇಕ ವಿಷಯವಾದ ಮಾತುಗಳನ್ನಾಡುತ್ತಿದ್ದನು. ಆಗ ಅಲ್ಲಿದ್ದ ಋಷಿಗಳು ಈ ಕಶ್ಯಪನನ್ನು ಕುರಿತು ಇಂತೆಂದು ಕೇಳಿದರು.

೬. ಋಷಿಗಳು ಹೇಳಿದರು—ಎಲೈ ಕಶ್ಯಪನೇ! ನಮ್ಮಗಳ ಮೇಲಿನ ವಿಶ್ವಾಸದಿಂದ ನೀನು ಇಲ್ಲಿಗೆ ಗಂಗೆಯನ್ನು ಬರಮಾಡು. ಹಾಗೆ ತರಲ್ಪಟ್ಟ ಗಂಗೆಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಲಿ.

೭ ಮಹಾದೇವನು ಹೇಳಿದನು—ಆ ಋಷಿಗಳ ಮಾತನ್ನು ಕೇಳಿ ಅವರಿಗೆ ನಮಸ್ಕರಿಸಿ ಅರ್ಬುದಾರಣ್ಯದ ಸರಸ್ವತಿಯ ತೀರಕ್ಕೆ ಬಂದನು.

೮. ಆಗ ಅಲ್ಲಿ ಕಶ್ಯಪನು ಮಹತ್ತರವಾದ ತಪಸ್ಸನ್ನು ಮಾಡಿದನು. ಆ ತಪಸ್ಸಿನಿಂದ ಅವನು ನನ್ನನ್ನು ಬಹುವಾಗಿ ಪೂಜಿಸಿದನು.

ಪ್ರತ್ಯಕ್ಷೋಽಹಂ ತದಾ ಜಾತಸ್ತಸ್ಯ ದ್ವಿಜವರಸ್ಯ ಚ ।
ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ　　　　　　|| ೯ ||

|| ಕಶ್ಯಪ ಉವಾಚ ||

ವರಂ ದಾತುಂ ಸಮರ್ಥೋಽಸಿ ದೇವದೇವ ಜಗತ್ಪತೇ ।
ಶಿರಸ್ಥಿತೇಯಂ ಗಂಗಾ ಚ ಪವಿತ್ರಾ ಪಾಪಹಾರಿಣೀ ।
ಮಮ ದೇಯಾ ವಿಶೇಷೇಣ ಮಹಾದೇವ ನಮೋಽಸ್ತುತೇ　　　　　　|| ೧೦ ||

|| ಮಹಾದೇವ ಉವಾಚ ||

ತದಾ ದೇವಿ ಮಯೋಕ್ತಂ ಚ ಗೃಹ್ಣೀಷ್ವ ತ್ವಂ ದ್ವಿಜೋತ್ತಮ ।
ಜಟಾಮೇಕಾಂ ಪರಿತ್ಯಜ್ಯ ದತ್ತಾ ಗಂಗಾ ತದಾ ಮಯಾ　　　　　　|| ೧೧ ||

ತಾಂ ಗೃಹೀತ್ವಾ ದ್ವಿಜಶ್ರೇಷ್ಠಃ ಸ್ವಸ್ಥಾನಂ ಹರ್ಷಿತೋ ಯಯೌ ।
ಕೇಶರಂಧ್ರಂ ನಾಮ ತೀರ್ಥಂ ವಾಸೋ ವೈ ಕಶ್ಯಪಸ್ಯ ಚ　　　　　　|| ೧೨ ||

---

೯. ಆಗ ನಾನು ಆ ಬ್ರಾಹ್ಮಣ ಶ್ರೇಷ್ಠನಿಗೆ ಪ್ರತ್ಯಕ್ಷನಾದೆನು. ಮತ್ತು ಎಲೈ ಕಶ್ಯಪನೇ! ನಿನಗೆ ಮಂಗಳವಾಗಲಿ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೋ.

೧೦. ಕಶ್ಯಪನು ಹೇಳಿದನು—ಎಲೈ ಜಗತ್ಪತಿಯಾದ ದೇವದೇವನೇ! ನೀನು ವರವನ್ನು ಕೊಡಲು ಸಮರ್ಥನಾಗಿದ್ದೀಯೆ. ನಿನ್ನ ತಲೆಯ ಮೇಲಿರುವ ಈ ಗಂಗೆಯು ಪವಿತ್ರವಾದುದು, ಮತ್ತು ಪಾಪನಾಶಕವಾದುದು. ಅದನ್ನು ನನಗೆ ಕೊಡಬೇಕು. ಅದೇ ನನಗೆ ಬೇಕಾದ ವರವು. ನಿನಗೆ ನಮಸ್ಕಾರವು.

೧೧. ಮಹಾದೇವನು ಹೇಳಿದನು—ನಾನು ಎಲೈ ಬ್ರಾಹ್ಮಣನೇ! ನೀನು ಈ ಗಂಗೆಯನ್ನು ತೆಗೆದುಕೋ. ಎಂದೆನು. ಆಗ ಜಟೆಯೊಂದನ್ನು ಬಿಚ್ಚಿ ಬಿಟ್ಟು ಆ ಗಂಗೆಯನ್ನು ಅವನಿಗೆ ಕೊಟ್ಟೆನು.

೧೨. ಆ ಕಶ್ಯಪನು ಆ ನದಿಯನ್ನು ತೆಗೆದುಕೊಂಡು ತನ್ನ ಜಾಗಕ್ಕೆ ಸಂತೋಷದಿಂದ ಹೋದನು. ಅವನು ತೆಗೆದುಕೊಂಡು ತನ್ನ ಜಾಗಕ್ಕೆ ಹೋಗಿ ತೀರ್ಥವನ್ನು ಮಾಡಿದನಷ್ಟೆ. ಅದು ಕೇಶರಂಧ್ರವೆಂಬ ಹೆಸರನ್ನು ಹೊಂದಿತು.

ಗತಸ್ತತ್ರ ತು ದೇವೇಶಿ ಮುನಿಭಿಃ ಪರಿವಾರಿತಃ ।
ಕಶ್ಯಪೇನ ಸಮಾನೀತಾ ಕಾಶ್ಯಪೀಯಂ ಸರಿದ್ವರಾ ।
ಯಸ್ಯಾ ದರ್ಶನಮಾತ್ರೇಣ ಬ್ರಹ್ಮಹಾ ಮುಚ್ಯತೇ ಕಿಲ ॥ ೧೩ ॥

॥ ಶ್ರೀ ಪಾರ್ವತ್ಯುವಾಚ ॥

ಸ್ನಾನಮಾತ್ರೇಣ ಕಿಂ ಪುಣ್ಯಂ ತತ್ರ ತೀರ್ಥೇ ವದಸ್ವ ಮೇ ।
ವಿಶ್ವನಾಥ ಕೃಪಾಳುಸ್ತ್ವಂ ದಯಾಂ ಕುರು ಮಮೋಪರಿ ॥ ೧೪ ॥

ದರ್ಶನೇ ಕಿಂ ಭವೇತ್ಪುಣ್ಯಂ ಸ್ನಾನೇ ಕಿಂ ವದ ದೇವರಾಟ್ ।
ಮಹಿಮಾ ಕೀದೃಶೋ ಬ್ರಹ್ಮನ್ ಸರ್ವಂ ತ್ವಂ ವಕ್ತುಮರ್ಹಸಿ ॥ ೧೫ ॥

॥ ಶ್ರೀ ಮಹಾದೇವ ಉವಾಚ ॥

ಮಯಾ ಶ್ರುತಾನ್ಯನೇಕಾನಿ ತೀರ್ಥಾನ್ಯಾಯನಾನಿ ಚ ।
ಶ್ರೀ ವಿಷ್ಣೋಶ್ಚ ಪ್ರಸಾದಾಚ್ಚ ನದ್ಯಃ ಸಾಗರಗಾಃ ಪ್ರಭೋಃ ॥ ೧೬ ॥

---

೧೩. ಅಲ್ಲಿಗೆ ಹೋದಮೇಲೆ ಋಷಿಗಳೆಲ್ಲರೂ ಸಂತೋಷದಿಂದ ಅವನನ್ನು ಸುತ್ತಿಕೊಂಡರು. ಕಶ್ಯಪನು ತಂದುದರಿಂದ ಅದಕ್ಕೆ ಕಾಶ್ಯಪಿಯೆಂದು ಹೆಸರು ಬಂದಿತು. ಅದನ್ನು ನೋಡಿದ ಕೂಡಲೇ ಬ್ರಹ್ಮಹತ್ಯೆಯು ಹೋಗುತ್ತದೆ.

೧೪. ಶ್ರೀ ಪಾರ್ವತಿಯು ಹೇಳಿದಳು—ಆ ತೀರ್ಥದಲ್ಲಿ ಸ್ನಾನಮಾಡಿದುದರಿಂದ ಬರುವ ಪುಣ್ಯವೇನು? ಎಲೈ ವಿಶ್ವನಾಥನೇ! ನನ್ನಲ್ಲಿ ದಯೆಮಾಡಿ ಹೇಳು.

೧೫. ಅದರ ದರ್ಶನದಿಂದ ಯಾವ ಪುಣ್ಯ ಬರುತ್ತದೆ? ಅದರಲ್ಲಿ ಸ್ನಾನ ಮಾಡಿದರೆ ಬರುವ ಪುಣ್ಯವೇನು? ಅದರ ಮಹಿಮೆ ಏನು? ಇದೆಲ್ಲವನ್ನೂ ನನಗೆ ಹೇಳು.

೧೬. ನಾನು ಬಹುವಾದ ತೀರ್ಥಗಳನ್ನೂ, ಕ್ಷೇತ್ರಗಳನ್ನೂ, ಸಮುದ್ರವನ್ನೂ ಸೇರುವ ನದಿಗಳನ್ನೂ ಕೇಳಿದ್ದೇನೆ. ಇವೆಲ್ಲವನ್ನೂ ಶ್ರೀ ವಿಷ್ಣುವೇ ನನಗೆ ಹೇಳಿದ್ದಾನೆ.

**ಗಂಗಾ ಚ ಯಮುನಾ ರೇವಾ ತಾಪೀ ಚೈವ ಮಹಾನದೀ ।**
**ಗೋದಾವರೀ ತುಂಗಭದ್ರಾ ಕೌಶಿಕೀ ಗಲ್ಲಿಕಾ ತಥಾ　　॥ ೧೭ ॥**

**ಕಾವೇರೀ ವೇದಿಕಾ ಭದ್ರಾ ಸರಯೂಃ ಪಾಪಹಾರಿಣೀ ।**
**ಅನ್ಯಾಶ್ಚ ವಿವಿಧಾ ನದ್ಯಃ ಸರ್ವಪಾಪಹರಾ ಭುವಿ　　॥ ೧೮ ॥**

**ಪ್ರಯಾಗಸ್ತೀರ್ಥರಾಜಶ್ಚ ಕಾಶೀ ಪುಷ್ಕರಮೇವ ಚ ।**
**ನೈಮಿಶಾರಣ್ಯಸಂಜ್ಞಂ ತು ತೀರ್ಥಂ ಚಾಮರಕಂಟಕಂ　　॥ ೧೯ ॥**

**ಉತ್ತಮಂ ದ್ವಾರಕಾ ಕ್ಷೇತ್ರಂ ಹ್ಯರ್ಬುದಾರಣ್ಯಮುತ್ತಮಂ ।**
**ಏವಂ ವಿಧಾನಿ ತೀರ್ಥಾನಿ ಕ್ಷೇತ್ರಾಣಿ ವಿವಿಧಾನಿ ಚ　　॥ ೨೦ ॥**

**ಶ್ರುತಾನಿ ತತ್ರ ದೇವೇಶಿ ಮಯಾ ವಿಷ್ಣೋಃ ಪ್ರಸಾದತಃ ।**
**ಪೂರ್ವಂ ಭಗೀರಥೇನೈವ ಯಾಚಿತೋಽಹಂ ತು ಪಾರ್ವತಿ　　॥ ೨೧ ॥**

**ತದಾ ದತ್ತಾ ಇಯಂ ಗಂಗಾ ವಿಷ್ಣುಲೋಕಮಭೀಪ್ಸುನಾ ।**
**ಕಶ್ಯಪಾಯ ಪುನರ್ದತ್ತಾ ಋಷೀಣಾಂ ವಚನಾದ್ಯತಃ　　॥ ೨೨ ॥**

---

೧೭-೧೮. ಗಂಗೆ ಯಮುನೆ, ರೇವೆ, ತಪತಿ, ಮಹಾನದಿ, ಗೋದಾವರಿ, ತುಂಗಭದ್ರೆ, ಕೌಶಿಕಿ, ಗಲ್ಲಿಕೆ, ಕಾವೇರಿ, ವೇದಿಕೆ, ಭದ್ರೆ, ಸರಯೂ ಇವುಗಳು ಪಾಪವನ್ನು ನಾಶಮಾಡುತ್ತವೆ. ಇನ್ನೂ ಅನೇಕವಾದ ನದಿಗಳಿವೆ. ಅವೂ ಲೋಕದಲ್ಲಿ ಪಾಪನಾಶಕವಾದುವು.

೧೯-೨೦. ಪ್ರಯಾಗ, ತೀರ್ಥರಾಜವಾದ ಕಾಶಿ, ಪುಷ್ಕರ, ನೈಮಿಷಾರಣ್ಯ, ಅಮರಕಂಟಕ, ದ್ವಾರಕೆ, ಅರ್ಬುದಾರಣ್ಯ, ಇವೇ ಮೊದಲಾದ ನಾನಾಬಗೆಯ ತೀರ್ಥಗಳನ್ನು ನಾನು ವಿಷ್ಣುವಿನ ಅನುಗ್ರಹದಿಂದ ಅವನ ಬಾಯಿಂದಲೇ ಕೇಳಿದ್ದೇನೆ.

೨೧-೨೨. ಹಿಂದೆ ನನ್ನನ್ನು ಭಗೀರಥನು ಯಾಚಿಸಿದುದರಿಂದ ನಾನು ಅವನಿಗೆ ಅವನ ಹಿರಿಯರನ್ನು ಸ್ವರ್ಗವನ್ನು ಹೊಂದಿರಲು ಕೊಟ್ಟೆನು. ಈಗ ಋಷಿಗಳ ಮಾತಿನಂತೆ ಕಶ್ಯಪನು ಬಂದು ಕೇಳಲು ಅವನಿಗೆ ಈ ಗಂಗೆಯನ್ನು ಕೊಟ್ಟೆನು.

ಇಯಂ ವೈ ಕಾಶ್ಯಪೀ ಗಂಗಾ ರಾಗದೋಷಹರಾ ಸದಾ ।
ಯಾ ಇಯಂ ಕಥ್ಯತೇ ಲೋಕೇ ಯುಗೇ ವೈ ನಾಮಪೂರ್ವಕಂ ॥ ೨೩ ॥

ತದಹಂ ಕಥಯಿಷ್ಯಾಮಿ ಶೃಣು ಸುಂದರಿ ತತ್ವತಃ ।
ಕೃತೇ ಕೃತವತೀ ನಾಮ ತ್ರೇತಾಯಾಂ ಗಿರಿಕರ್ಣಿಕಾ ॥ ೨೪ ॥

ದ್ವಾಪರೇ ಚಂದನಾ ನಾಮ ಕಲೌ ಸಾಭ್ರಮತೀ ಸ್ಮೃತಾ ।
ದಿನೇ ದಿನೇ ವಿಶೇಷೇಣ ಸ್ನಾನಾರ್ಥಂ ತು ನರಾಶ್ಚ ಯೇ ॥ ೨೫ ॥

ಸರ್ವಪಾಪವಿನಿರ್ಮುಕ್ತಾ ಯಾನ್ತಿ ವಿಷ್ಣೋಸ್ಸನಾತನಂ ।
ಪ್ಲಕ್ಷಾವತರಣೇ ತೀರ್ಥೇ ಸರಸ್ವತ್ಯಾಂ ತಥೇಶ್ವರಿ ॥ ೨೬ ॥

ಕೇದಾರೇ ಚ ಕುರುಕ್ಷೇತ್ರೇ ಯತ್ಫಲಂ ಸ್ನಾನತೋ ಭವೇತ್ ।
ತತ್ಫಲಂ ತು ಭವೇನ್ನಿತ್ಯಂ ಸಾಭ್ರಮತ್ಯಾಂ ದಿನೇ ದಿನೇ ॥ ೨೭ ॥

ಭವತೀತಿ ನ ಸಂದೇಹೋ ವ್ಯಾಸಸ್ಯ ವಚನಂ ಯಥಾ ।
ನಭಸ್ಯೇಪರಪಕ್ಷೇ ತು ಲೋಹಷಷ್ಠ್ಯಾಂ ಸುರೇಶ್ವರಿ ॥ ೨೮ ॥

---

೨೩. ಆದ್ದರಿಂದ ಈ ಗಂಗೆಗೆ ಕಾಶ್ಯಪಿ ಎಂದು ಹೆಸರು ಬಂದಿತು. ಇದು ಸರ್ವರೋಗಗಳನ್ನೂ, ದೋಷಗಳನ್ನೂ ನಾಶಮಾಡುತ್ತದೆ. ಇದು ಒಂದೊಂದು ಯುಗದಲ್ಲಿ ಒಂದೊಂದು ಹೆಸರನ್ನು ಹೊಂದುತ್ತದೆ.

೨೪-೨೭. ಆ ಹೆಸರುಗಳನ್ನು ಹೇಳುತ್ತೇನೆ ಕೇಳು. ಕೃತಯುಗದಲ್ಲಿ ಕೃತವತಿಯೆಂದೂ, ತ್ರೇತಾಯುಗದಲ್ಲಿ ಗಿರಿಕರ್ಣಿಕೆಯೆಂದೂ, ದ್ವಾಪರೆಯಲ್ಲಿ ಚಂದನೆಯೆಂದೂ, ಕಲಿಯುಗದಲ್ಲಿ ಸಾಭ್ರಮತಿಯೆಂದೂ ಹೆಸರನ್ನು ಹೊಂದಿರುತ್ತದೆ. ಪ್ರತಿ ದಿನವೂ ಸ್ನಾನಕ್ಕೋಸ್ಕರ ಬಂದು ಸ್ನಾನಮಾಡತಕ್ಕವರು ಪಾಪಗಳನ್ನು ಕಳೆದುಕೊಂಡು ವಿಷ್ಣುಪದವನ್ನು ಹೊಂದುತ್ತಾರೆ. ಸರಸ್ವತಿಯಲ್ಲಿರುವ ಪ್ಲಕ್ಷಾವತರಣ ತೀರ್ಥದಲ್ಲಿಯೂ, ಕುರುಕ್ಷೇತ್ರದಲ್ಲಿರುವ ಕೇದಾರ ತೀರ್ಥದಲ್ಲಿಯೂ, ಸ್ನಾನಮಾಡಿದರೆ ಬರುವ ಪುಣ್ಯವು ಸಾಭ್ರಮತಿಯಲ್ಲಿ ಸ್ನಾನಮಾಡಿದರೆ ಒಂದೇ ದಿನದಲ್ಲಿ ಬರುತ್ತದೆ.

೨೮-೨೯. ಆ ರೀತಿಯಾದ ಫಲವು ಬರುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ವ್ಯಾಸನೇ ಆ ರೀತಿ ಹೇಳಿರುವನು. ಎಲೈ ಪಾರ್ವತಿಯೇ, ಭಾದ್ರಪದ ಮಾಸದ ಆ

ಅಮಾವಸ್ಯಾದಿನೇ ಸಮ್ಯಕ್ ಶ್ರಾದ್ಧದಾನೇನ ಯತ್ಫಲಂ ।
ನರಸ್ತತ್ಫಲಮಾಪ್ನೋತಿ ಸಾಭ್ರಮತ್ಯವಗಾಹನಾತ್ ॥ ೨೯ ॥

ಮಾಘಮಾಸೇ ಪ್ರಯಾಗೇ ತು ಸ್ನಾತಸ್ನಾನೇನ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸಾಭ್ರಮತ್ಯವಗಾಹನಾತ್ ॥ ೩೦ ॥

ಕಾರ್ತಿಕ್ಯಾಂ ಕೃತ್ತಿಕಾಯೋಗೇ ಶ್ರೀಸ್ಥಳೇ ಮಾಧವಾಗ್ರತಃ ।
ತತ್ಫಲಂ ಲಭತೇ ಮರ್ತ್ಯಃ ಸಾಭ್ರಮತ್ಯವಗಾಹನಾತ್ ॥ ೩೧ ॥

ಏಷಾ ಶ್ರೇಷ್ಠತಮಾ ದೇವಿ ಸರ್ವಲೋಕೇಷು ಪಾವನೀ ।
ಇಯಂ ಧನ್ಯತಮಾ ದೇವಿ ಪವಿತ್ರಾ ಹ್ಯಘನಾಶಿನೀ ॥ ೩೨ ॥

ಯಸ್ಯಾಂ ವೈ ಸಾಭ್ರಮತ್ಯಾಂ ಚ ಏತೇ ತಿಷ್ಠಂತಿ ನಿತ್ಯಶಃ ।
ಪೂರ್ವಸಂಬಂಧಿನೋ ಯೇ ಚ ಉತ್ತರೇ ಯೇ ತಥಾ ಪುನಃ ॥ ೩೩ ॥

---

ಕೃಷ್ಣಪಕ್ಷದ ಲೋಹಷಷ್ಠಿಯ ದಿವಸವೂ ಪಿತೃಪಕ್ಷದ ಅಮಾವಾಸ್ಯೆಯ ದಿವಸವೂ ಮನುಷ್ಯನು ಶ್ರಾದ್ಧಮಾಡಿದರೆ ಯಾವ ಫಲವನ್ನು ಹೊಂದುತ್ತಾನೆಯೋ ಆ ಫಲವನ್ನು ಸಾಭ್ರಮತಿಯಲ್ಲಿ ಸ್ನಾನಮಾಡುವುದರಿಂದ ಹೊಂದುತ್ತಾನೆ.

೩೦. ಮಾಘಮಾಸದಲ್ಲಿ ಪ್ರಯಾಗದಲ್ಲಿ ಸ್ನಾನಮಾಡುವುದರಿಂದ ಯಾವ ಫಲವನ್ನು ಹೊಂದುತ್ತಾನೆಯೋ ಆ ಫಲವನ್ನು ಈ ಸಾಭ್ರಮತಿಯಲ್ಲಿ ಸ್ನಾನಮಾಡುವುದರಿಂದ ಹೊಂದುತ್ತಾನೆ.

೩೧. ಕಾರ್ತಿಕಮಾಸದಲ್ಲಿ ಕೃತ್ತಿಕಾ ನಕ್ಷತ್ರದ ಯೋಗವಿದ್ದಾಗ ಶ್ರೀಶೈಲದಲ್ಲಿ ಮಾಧವನ ಎದುರಿಗೆ ಸ್ನಾನಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಈ ಸಾಭ್ರಮತಿಯಲ್ಲಿ ಸ್ನಾನಮಾಡಿದರೆ ಹೊಂದುತ್ತಾನೆ.

೩೨. ಎಲೈ ದೇವಿಯೇ! ಇದು ಧನ್ಯವಾದುದು. ಲೋಕದಲ್ಲೆಲ್ಲಾ ಶ್ರೇಷ್ಠವಾದುದು. ಮತ್ತು ಪಾವನವಾದುದು. ಪಾಪಗಳನ್ನು ನಾಶಮಾಡುತ್ತದೆ. ಪವಿತ್ರವಾದುದು.

೩೩-೩೬ ಈ ಸಾಭ್ರಮತಿಯನ್ನು ಹೊಂದಿದೊಡನೆಯೇ ಪೂರ್ವಸಂಬಂಧಿಗಳು ಮುಂದಾಗುವ ಸಂಬಂಧಿಗಳು, ಎಡದವರು ಬಲದವರು ಕೂಡ ಅಲ್ಲಿಗೆ

ಪಾಶ್ಚಾತ್ತ್ಯಾ ದಾಕ್ಷಿಣಾತ್ಯಾಶ್ಚ ಸರ್ವೇ ಹ್ಯಾಯಾನ್ತಿ ನಿತ್ಯಶಃ ।
ತೀರ್ಥಯಾತ್ರಾಮಿಷೇಣೈವ ಖೇಟಕೇ ಬ್ರಹ್ಮಸನ್ನಿಧೌ ॥ ೩೪ ॥

ಆಯಾನ್ತಿ ಸರ್ವದಾ ದೇವಿ ಕಾರ್ತಿಕ್ಯಾಂ ಚ ನ ಸಂಶಯಃ ।
ತತ್ರ ಶ್ರಾದ್ಧಂ ಪ್ರಕುರ್ವಂತಿ ತಥಾ ವೈ ವಿಪ್ರಭೋಜನಂ ॥ ೩೫ ॥

ನಾನಾಧರ್ಮಾನ್ ಪ್ರಕುರ್ವಂತಿ ನಾನಾ ಯಜ್ಞಾಂಶ್ಚ ನಿತ್ಯಶಃ ।
ವಿವಿಧಾನಿ ಚ ದಾನಾನಿ ಪ್ರಕುರ್ವಂತಿ ಜನಾಸ್ಸದಾ ॥ ೩೬ ॥

ಚತುರ್ಯುಗೇಷು ಸರ್ವೇಷು ನಾತ್ರ ಕಾರ್ಯಾ ವಿಚಾರಣಾ ।
ಯವಕ್ರೀತೋಥ ರೈಭ್ಯಶ್ಚ ಕಕ್ಷೀವಾನುಶಿಜಸ್ತಥಾ ॥ ೩೭ ॥

ಭೃಗುರಂಗಿರಾಸ್ತಥಾ ಕಣ್ವೋ ಮೇಧಾವೀ ಚ ಪುನರ್ವಸುಃ ।
ವಂದೀ ಚ ಗುಣಸಂಪನ್ನಃ ಪ್ರಾಚ್ಯಾಂ ದಿಶಿ ಉಪಾಶ್ರಿತಾಃ ॥ ೩೮ ॥

---

ಬರುತ್ತಾರೆ. ಪಶ್ಚಿಮದೇಶದವರೂ, ದಕ್ಷಿಣದೇಶದವರೂ, ಉತ್ತರದೇಶದವರೂ, ಪೂರ್ವದೇಶದವರೂ ಎಲ್ಲರೂ ಅದರಲ್ಲಿ ಸ್ನಾನಮಾಡಲು ನಿತ್ಯವೂ ಬರುತ್ತಾರೆ. ತೀರ್ಥಯಾತ್ರೆ ಎಂಬ ನೆವದಿಂದ ಆ ಸಾಭ್ರಮತಿಯ ಬ್ರಹ್ಮ ಸನ್ನಿದಿಗೆ ಎಲ್ಲರೂ ಬರುತ್ತಾರೆ. ಆದರೆ ಕಾರ್ತಿಕದಲ್ಲಿ ಬಹಳವಾಗಿ ಬರುತ್ತಾರೆ. ಸಂಶಯವಿಲ್ಲ. ಅಲ್ಲಿಗೆ ಬಂದು ಶ್ರಾದ್ಧವನ್ನೂ ಬ್ರಾಹ್ಮಣ ಭೋಜನವನ್ನೂ ಮಾಡಿಸುತ್ತಾರೆ. ಅಲ್ಲದೆ ನಾನಾ ಧರ್ಮಗಳನ್ನೂ, ನಾನಾ ಯಜ್ಞಗಳನ್ನೂ ಮಾಡುತ್ತಾರೆ ಅಲ್ಲಿಗೆ ಬಂದ ಜನಗಳು ಯಾವಾಗ ನೋಡಿದರೂ ನಾನಾ ಬಗೆಯ ಧರ್ಮಗಳನ್ನು ಮಾಡುತ್ತಿರುತ್ತಾರೆ.

೩೭-೩೮. ಈ ದಾನಾದಿಗಳನ್ನು ನಾಲ್ಕು ಯುಗಗಳಲ್ಲಿಯೂ ಮಾಡುತ್ತಿರುತ್ತಾರೆ. ಸಂಶಯವೇ ಇಲ್ಲ ಯವಕ್ರೀತ, ರೈಭ್ಯ, ಕಕ್ಷಿವಂತ, ಉಶಿಜ, ಭೃಗು ಅಂಗಿರ, ಕಣ್ವ, ಮೇಧಾವೀ, ವಸು, ವಂದಿ, ಇವರೆಲ್ಲರೂ ಈ ಸಾಭ್ರಮತಿಯ ಪೂರ್ವದಿಕ್ಕಿನ ದಡವನ್ನು ಆಶ್ರಯಿಸಿಕೊಂಡಿರುತ್ತಾರೆ,

**ಉದೀಚ್ಯಾಂ ಯೇ ಮಹಾಭಾಗಾ ಮಧುಮತ್ಪ್ರಮುಖಾಸ್ತಥಾ ।**
**ಸುಮಧುಶ್ಚ ಮಹಾಭಾಗೋ ದತ್ತಾತ್ರೇಯಶ್ಚ ವೀರ್ಯವಾನ್** ॥ ೩೯ ॥

**ಋಷಿರ್ದೀರ್ಘತಮಾಶ್ಚೈವ ಗೌತಮಃ ಕಶ್ಯಪಸ್ತಥಾ ।**
**ಶ್ವೇತಕೇತುಃ ಕಹೋಡಶ್ಚ ಪುಲಹೋ ದೇವಲಸ್ತಥಾ** ॥ ೪೦ ॥

**ವಿಶ್ವಾಮಿತ್ರಭರದ್ವಾಜೌ ಜಮದಗ್ನಿಶ್ಚ ವೀರ್ಯವಾನ್ ।**
**ಋಚೀಕಪುತ್ರೋ ಗರ್ಗಶ್ಚ ಋಷಿರುದ್ದಾಲಕಸ್ತಥಾ** ॥ ೪೧ ॥

**ದೇವಶರ್ಮಾಥ ಧೌಮ್ಯಶ್ಚ ಆಸ್ತಿಕಃ ಕಶ್ಯಪಸ್ತಥಾ ।**
**ಲೋಮಶೋ ನಾಭಿಕೇತುಶ್ಚ ಲೋಮಹರ್ಷಣ ಏವ ಚ** ॥ ೪೨ ॥

**ಋಷಿರುಗ್ರಶ್ರವಾಶ್ಚೈವ ಭಾರ್ಗವಶ್ಚ್ಯವನಸ್ತಥಾ ।**
**ವಾಲಖಿಲ್ಯಾದಯೋ ಯೇ ಚ ಸರ್ವೇ ಗಚ್ಛಂತಿ ತತ್ರ ವೈ** ॥ ೪೩ ॥

**ಕೃತಸ್ನಾನಾ ನಿರಾಹಾರಾಃ ಸದಾ ವಿಷ್ಣುಪರಾಯಣಾಃ ।**
**ಶಂಖಚಕ್ರಧರಾಸ್ಸರ್ವೇ ತಟೇ ತಿಷ್ಠಂತಿ ನಿತ್ಯಶಃ** ॥ ೪೪ ॥

---

೩೯-೪೩. ಉತ್ತರ ದಿಕ್ಕಿನಲ್ಲಿ ಮಧುಮಂತನೇ ಮುಂತಾದವರು ಇರುತ್ತಾರೆ ಸುಮಧು, ದತ್ತಾತ್ರೇಯ, ದೀರ್ಘತಮ, ಗೌತಮ, ಕಶ್ಯಪ, ಶ್ವೇತ, ಕೇತು, ಕಹೋಡ, ಪುಲಹ, ದೇವಲ, ವಿಶ್ವಾಮಿತ್ರ, ಭರದ್ವಾಜ, ಜಮದಗ್ನಿ, ಋಚೀಕಪುತ್ರ ಗರ್ಗ, ಉದ್ದಾಲಕ, ದೇವಶರ್ಮ, ಧೌಮ್ಯ ಆಸ್ತಿಕ, ಕಶ್ಯಪ, ಲೋಮಶ, ನಾಭಿ ಕೇತು, ಲೋಮಹರ್ಷಣ, ಉಗ್ರಶ್ರವ, ಭಾರ್ಗವ, ಚ್ಯವನ, ವಾಲಖಿಲ್ಯ, ಇವರೆಲ್ಲರೂ ಈ ಸಾಭ್ರಮತಿಗೆ ಹೋಗುತ್ತಾರೆ. (ಕಶ್ಯಪನೆಂದು ಎರಡುಸಾರಿ ಬಂದಿದೆಯೆಂದು ಭಾವಿಸಬಾರದು. ಆ ಹೆಸರಿನವರು ಇಬ್ಬರು ಇರುತ್ತಾರೆ.)

೪೪. ಅವರೆಲ್ಲರೂ ಸ್ನಾನಮಾಡಿಕೊಂಡು ಆಹಾರವನ್ನು ತೆಗೆದುಕೊಳ್ಳದೆ ವಿಷ್ಣುವನ್ನೇ ಧ್ಯಾನಮಾಡುತ್ತಾ ಶಂಖ ಚಕ್ರಗಳನ್ನು ಧರಿಸಿಕೊಂಡು ಅದರ ದಡದಲ್ಲಿ ಯಾವಾಗಲೂ ಇದ್ದಾರೆ.

ಪಿತೃತೀರ್ಥಂ ಗಯಾ ನಾಮ ಸರ್ವತೀರ್ಥವರಂ ಶುಭಂ ।
ಯತ್ರಾಸ್ತೇ ದೇವದೇವೇಶಃ ಸ್ವಯಮೇವ ಪಿತಾಮಹಃ ॥ ೪೫ ॥

ಗೀತಾ ಯಾ ಪಿತೃಭಿರ್ಗಾಥಾ ಶ್ರಾದ್ಧಭಾಗಮಭೀಪ್ಸುಭಿಃ ।
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ॥ ೪೬ ॥

ಯಜೇತ ಹ್ಯಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ।
ತಥಾ ವಾರಾಣಸೀ ಪುಣ್ಯಾ ಪಿತೄಣಾಂ ವಲ್ಲಭಾ ಸದಾ ॥ ೪೭ ॥

ಯಾ ಚೈವ ಮಮ ಸಾನ್ನಿಧ್ಯಾತ್ ಭುಕ್ತಿಮುಕ್ತಿಫಲಪ್ರದಾ ।
ಮಮಾಜ್ಞಯಾ ತು ದೇವೇಶೋ ಬಿಂದುಮಾಧವಸಂಜ್ಞಕಃ ॥ ೪೮ ॥

ನಿತ್ಯಂ ತಿಷ್ಠತಿ ದೇವೇಶಿ ವಾರಾಣಸ್ಯಾಂ ವಿಶೇಷತಃ ।
ಅತೋ ಧನ್ಯತಮಾ ಶ್ರೇಷ್ಠಾ ಪುರೀಯಂ ಮಮ ಸರ್ವದಾ ॥ ೪೯ ॥

---

೪೫. ಗಯೆ ಯೆಂಬುದು ಪಿತೃತೀರ್ಥವು. ಅದು ಎಲ್ಲಾ ತೀರ್ಥಗಳಿಗಿಂತಲೂ ಶ್ರೇಷ್ಠವಾದುದು. ಅಲ್ಲಿಯೇ ದೇವದೇವನಾದ ಬ್ರಹ್ಮನು ಯಾವಾಗಲೂ ಇರುವನು.

೪೬-೪೯. ಅನೇಕ ಜನ ಮಕ್ಕಳು ಹುಟ್ಟಬೇಕು. ಏಕೆಂದರೆ ಅವರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಪಿಂಡವನ್ನು ಹಾಕುವನು ಅಶ್ವಮೇಧವನ್ನಾದರೂ ಮಾಡುವನು. ಅದಿಲ್ಲದಿದ್ದರೆ ನೀಲವೆಂಬ ವೃಷಉತ್ಸರ್ಗವನ್ನು ಮಾಡುವನು. ಎಂದು ಪಿತೃಗಳು ಯಾವಾಗಲೂ ಶ್ರಾದ್ಧಭಾಗವನ್ನು ಅಪೇಕ್ಷಿಸುತ್ತ ಇಂತೆಂದು ಒಂದು ಗಾದೆಯನ್ನು ಹೇಳುತ್ತಾ ಇರುವರು. ಅದೇ ರೀತಿಯಾಗಿ ವಾರಣಾಸಿಯು ಕೂಡ ಪುಣ್ಯ ರೂಪವಾದುದು. ಪಿತೃಗಳಿಗೆ ಬಹು ಪ್ರೀತಿಯನ್ನುಂಟುಮಾಡತಕ್ಕದ್ದು ಅಲ್ಲಿ ಯಾವಾಗಲೂ ನನ್ನ ಸಾನ್ನಿಧ್ಯವಿರುತ್ತದೆ. ಆದ್ದರಿಂದ ಅಲ್ಲಿ ಭುಕ್ತಿಯೂ, ಮುಕ್ತಿಯೂ ಸಿಕ್ಕುತ್ತವೆ. ಆ ವಾರಣಾಸಿಯಲ್ಲಿ ನನ್ನ ಅಪ್ಪಣೆಯಂತೆ ಬಿಂದುಮಾಧವನು ಯಾವಾಗಲೂ ಇದ್ದುಕೊಂಡಿರುತ್ತಾನೆ. ಅದರಿಂದಲೇ ಈ ವಾರಣಾಸಿಯು ಬಹು ಧನ್ಯವಾದುದು. ನನಗೂ ಅತ್ಯಂತ ಪ್ರೀತಿಪಾತ್ರವಾದದ್ದು.

**ಪಿತೄಣಾಂ ವಲ್ಲಭಂ ತೀರ್ಥಂ ಪುಣ್ಯಂ ವೈ ವಿಮಲೇಶ್ವರಂ ।**
**ಪಿತೃತೀರ್ಥಂ ಪ್ರಯಾಗಂ ಚ ಸರ್ವತೀರ್ಥಸಮನ್ವಿತಂ ॥ ೫೦ ॥**

**ಸಾಭ್ರಮತ್ಯುದಕೇ ದೇವಿ ಆಯಾನ್ತಿ ವಚನಾನ್ಮಮ ।**
**ವಟೇಶ್ವರಶ್ಚ ಭಗವಾನ್ಮಾಧವೇನ ಸಮನ್ವಿತಃ ॥ ೫೧ ॥**

**ದಶಾಶ್ವಮೇಧಿಕಂ ಪುಣ್ಯಂ ಗಂಗಾದ್ವಾರಂ ತಥೈವ ಚ ।**
**ಮನ್ನಿಯೋಗಾಚ್ಚ ದೇವೇಶಿ ಸಾಭ್ರಮತ್ಯಾಂ ವಸಂತಿ ಹಿ ॥ ೫೨ ॥**

**ನಂದಾಥ ಲಲಿತಾ ದೇವಿ ತೀರ್ಥಂ ಯತ್ಸಪ್ತಧಾರಕಂ ।**
**ತಥಾ ಮಿತ್ರಪದಂ ನಾಮ ಕೇದಾರಂ ಶಂಕರಾಲಯಂ ॥ ೫೩ ॥**

**ಗಂಗಾಸಾಗರಮಿತ್ಯಾಹುಃ ಸರ್ವತೀರ್ಥಮಯಂ ಶುಭಂ ।**
**ತೀರ್ಥಂ ಬ್ರಹ್ಮಸರಸ್ತದ್ವಚ್ಛತದ್ರುಸಲಿಲೇ ಹ್ರದೇ ॥ ೫೪ ॥**

**ತೀರ್ಥಂ ತು ನೈಮಿಷಂ ನಾಮ ಚಾಜ್ಞಯಾ ಮಮ ಸರ್ವದಾ ।**
**ಸಾಭ್ರಮತ್ಯುದಕೇ ದೇವಿ ನಿವಸಂತಿ ನ ಸಂಶಯಃ ॥ ೫೫ ॥**

---

೫೦. ವಿಮಲೇಶ್ವರವೆಂಬ ತೀರ್ಥವೂ ಪಿತೃಗಳಿಗೆ ವಲ್ಲಭವಾದುದು. ಪುಣ್ಯಕರವಾದುದು. ಪ್ರಯಾಗವು ಪಿತೃಗಳಿಗೆ ಉತ್ತಮವಾದ ತೀರ್ಥವು. ಎಲ್ಲಾ ತೀರ್ಥಗಳೊಡನೆಯೂ ಸೇರಿದೆ.

೫೧. ವಟೇಶ್ವರನೂ, ಮಾಧವನೂ ಕೂಡ ನನ್ನ ಅಪ್ಪಣೆಯಂತೆ ಈ ಸಾಭ್ರಮತಿ ತೀರ್ಥಕ್ಕೆ ಬರುತ್ತಾರೆ. ಅಲ್ಲದೆ ಮೇಲೆ ಹೇಳಿದ ವಾರಣಾಸಿ ಪ್ರಯಾಗ ತೀರ್ಥಗಳೂ ಈ ಸಾಭ್ರಮತಿ ತೀರ್ಥಕ್ಕೆ ಬರುತ್ತವೆ.

೫೨. ದಶಾಶ್ವಮೇಧಕ ತೀರ್ಥವೂ ಗಂಗಾದ್ವಾರ ತೀರ್ಥವೂ ಕೂಡ ನನ್ನ ಅಪ್ಪಣೆಯಂತೆ ಈ ಸಾಭ್ರಮತಿಯಲ್ಲಿ ಬಂದು ವಾಸಿಸುತ್ತವೆ.

೫೩-೫೫. ನಂದೆ ಲಲಿತೆ, ಸಪ್ತದಾರಕತೀರ್ಥ, ಮಿತ್ರಪದ, ಕೇದಾರ, ಶಂಕರಾಲಯ, ಸರ್ವತೀರ್ಥಸ್ವರೂಪವಾದ ಗಂಗಾಸಾಗರತೀರ್ಥ, ಬ್ರಹ್ಮಸರಸ್ತೀರ್ಥ ಶತದ್ರುವಿನಲ್ಲಿರುವ ಹ್ರದತೀರ್ಥ, ನೈಮಿಷತೀರ್ಥ, ಇವೆಲ್ಲವೂ ಕೂಡ ನನ್ನ ಅಪ್ಪಣೆಯಂತೆ ಸಾಭ್ರಮತಿಯ ತೀರ್ಥದಲ್ಲಿ ಬಂದು ವಾಸಿಸುತ್ತವೆ. ಸಂಶಯವಿಲ್ಲ.

ಶ್ವೇತಾ ವಲ್ಕಲಿನೀ ಪುಣ್ಯಾ ತತಶ್ಶ್ವೇತಾ ಹಿರಣ್ಮಯೀ ।
ಹಸ್ತಿಮತ್ಯಥ ವಾತ್ರ್ರಘ್ನೀ ನದೀ ಸಾಗರಗಾಮಿನೀ ॥ ೫೬ ॥

ಪಿತೄಣಾಂ ವಲ್ಲಭಾ ಹ್ಯೇತಾಃ ಶ್ರಾದ್ಧಕೋಟಿಫಲಪ್ರದಾಃ ।
ತತ್ರ ಶ್ರಾದ್ಧಾನಿ ದೇಯಾನಿ ಪುತ್ರೈಃ ಪಿತೃಹಿತಾಯ ವೈ ॥ ೫೭ ॥

ಪಾಟಲಂ ವಪುಷಾಖ್ಯಂ ಚ ನಗರಂ ತತ್ರ ಸುಂದರಿ ।
ಸಾಭ್ರಮತ್ಯಾ ಸಹೈವೈತಾಃ ಪ್ರಾಪ್ತಾ ನದ್ಯೋವಿಶೇಷತಃ ॥ ೫೮ ॥

ತತ್ರ ಸ್ನಾನಂ ಚ ದಾನಂ ಚ ಯೇ ಕುರ್ವಂತಿ ನರಾ ಭುವಿ ।
ಇಹ ಲೋಕೇ ಸುಖಂ ಭುಕ್ತ್ವಾ ಯಾಂತಿ ವಿಷ್ಣೋಸ್ಸನಾತನಂ ॥ ೫೯ ॥

ಜಂಬುದ್ವೀಪಂ ಮಹಾಪುಣ್ಯಂ ಯತ್ರ ಪುಣ್ಯಂ ವಿವರ್ಧತೇ ।
ತತ್ರಾರ್ಯಾಖ್ಯಂ ಮಹಾಪುಣ್ಯಂ ಸರ್ವಕಾಮಫಲಪ್ರದಂ ॥ ೬೦ ॥

---

೫೬-೫೭. ಶ್ವೇತವಲ್ಕಿಲಿನೀ, ಶ್ವೇತಹಿರಣ್ಮಯೀ, ಹಸ್ತಿಮತಿ, ವಾತ್ರ್ರಘ್ನಿ, ಇವು ಸಾಗರವನ್ನು ಸೇರುವ ನದಿಗಳು. ಪಿತೃಗಳಿಗೆ ಬಹು ಪ್ರಿಯವಾದುವು. ಇವುಗಳಲ್ಲಿ ಬಂದು ಶ್ರಾದ್ಧವನ್ನು ಮಾಡಿದರೆ ಕೋಟಿ ಶ್ರಾದ್ಧಗಳನ್ನು ಮಾಡಿದ ಫಲವನ್ನೂ ಕೊಡುತ್ತವೆ. ಅಲ್ಲಿಗೆ ಹೋಗಿ ಪಿತೃಗಳಿಗೆ ಮಕ್ಕಳಾದವರು ಶ್ರಾದ್ದವನ್ನು ಮಾಡಬೇಕು. ಅದು ಪಿತೃಗಳಿಗೆ ಬಹು ಆನಂದಕರವಾದುದು.

೫೮. ಆ ನದಿಗಳ ದಡದಲ್ಲಿ ಪಾಟಲ, ವಪುಷಾ ಎಂಬ ಪ್ರಸಿದ್ಧ ಪಟ್ಟಣಗಳಿವೆ. ಅಲ್ಲಿ ಅನೇಕ ನದಿಗಳು ಈ ಸಾಭ್ರಮತಿಯೊಡನೆ ಬಂದು ಸೇರುತ್ತವೆ.

೫೯. ಆ ನದಿಗಳು ಸೇರುವ ಜಾಗದಲ್ಲಿ ಸ್ನಾನ, ದಾನಗಳನ್ನು ಯಾರು ಮಾಡುತ್ತಾರೆಯೋ ಅವರು ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ದೇಹವನ್ನು ಬಿಟ್ಟಮೇಲೆ ವಿಷ್ಣುವಿನ ಜಾಗವಾದ ವೈಕುಂಠವನ್ನು ಹೊಂದುತ್ತಾರೆ.

೬೦. ಜಂಬುದ್ವೀಪವೆಂಬ ಜಾಗವು ಮಹಾ ಪುಣ್ಯಕರವಾದುದು. ಅಲ್ಲಿ ಪುಣ್ಯವು ಬಹುವಾಗಿ ಹೆಚ್ಚುತ್ತದೆ ಅದರಲ್ಲಿ ಆರ್ಯಾವರ್ತವೆಂಬುದು ಮಹಾಪುಣ್ಯಕರವಾದ ಜಾಗವು. ಅದು ಸರ್ವಕಾಮಗಳನ್ನು ಕೊಡುತ್ತದೆ.

**ನೀಲಕಂಠಮಿತಿ ಖ್ಯಾತಂ ತೀರ್ಥಂ ನಂದಹ್ರದಸ್ತಥಾ ।**
**ತಥಾ ರುದ್ರಹ್ರದಸ್ತೀರ್ಥಂ ಪುಣ್ಯಂ ರುದ್ರಮಹಾಲಯಂ ॥ ೬೧ ॥**

**ಮಂದಾಕಿನೀ ಮಹಾಪುಣ್ಯಾ ತಥಾಚ್ಛೋದಾ ಮಹಾನದೀ ।**
**ಸಾಭ್ರಮತ್ಯಾಂ ವಹನ್ತ್ಯೇತಾಃ ಸ್ವಾತ್ಮನಾಽದರ್ಶನಂ ಗತಾಃ ॥ ೬೨ ॥**

**ಧೂಮ್ರಂ ಮಿತ್ರಪದಂ ತದ್ವದ್ವೈಜನಾಥಂ ದೃಷದ್ವರಂ ।**
**ಕ್ಷಿಪ್ರಾ ನದೀ ಮಹಾಕಾಳಂ ತಥಾ ಕಾಳಂಜರೋ ಗಿರಿಃ ॥ ೬೩ ॥**

**ಗಂಗೋದ್ಭೂತಂ ಹರೋದ್ಭೇದಂ ನರ್ಮದೋಂಕಾರಮೇವ ಚ ।**
**ಗಂಗಾಪಿಂಡಪ್ರದಾನೇನ ಸಮಾನ್ಯಾಹುರ್ಮನೀಷಿಣಃ ॥ ೬೪ ॥**

**ಏತಾನಿ ಬ್ರಹ್ಮತೀರ್ಥಾನಿ ಸಾಭ್ರಮತ್ಯುತ್ತರೇ ತಟೇ ।**
**ಗುಪ್ತೀಕೃತಾನಿ ತೀರ್ಥಾನಿ ದೇವೈರ್ಬ್ರಹ್ಮಪುರೋಗಮೈಃ ॥ ೬೫ ॥**

---

೬೧. ನೀಲಕಂಠ, ನಂದಹ್ರದವೆಂಬಿವು ಪ್ರಸಿದ್ಧವಾದ ತೀರ್ಥಗಳು. ಅಂತೆಯೇ ರುದ್ರಹ್ರದತೀರ್ಥವೂ ರುದ್ರಮಹಾಲಯ ತೀರ್ಥವೂ ಪುಣ್ಯಕರಗಳು.

೬೨. ಮಂದಾಕಿನೀ ನದಿಯೂ ಅಚ್ಛೋದಾ ನದಿಯೂ ಮಹಾ ಪುಣ್ಯಕರಗಳು. ಇದು ಸಾಭ್ರಮತಿ ನದಿಯೊಡನೆ ಹರಿಯುತ್ತವೆ. ಆದರೆ ಕಾಣಿಸಿಕೊಳ್ಳುವುದಿಲ್ಲ.

೬೩–೬೪. ಧೂಮ್ರ, ಮಿತ್ರಪದ, ವೈಜನಾಥ, ದೃಷದ್ವರ, ಕ್ಷಿಪ್ರಾನದಿ, ಮಹಾಕಾಳಸ್ವಾಮಿ, ಕಾಳಂಜರಗಿರಿ, ಗಂಗೋದ್ಭೂತ, ಹರೋದ್ಭೇದ, ನರ್ಮದಾ ನದಿ, ಓಂಕಾರೇಶ್ವರ ಈ ಕ್ಷೇತ್ರಗಳು ಉತ್ತಮವಾದುವುಗಳು. ಇಲ್ಲಿ ಪಿತೃಗಳಿಗೆ ಪಿಂಡವನ್ನು ಹಾಕಿದರೆ ಗಂಗೆಯಲ್ಲಿ ಪಿಂಡ ಹಾಕಿದುದಕ್ಕೆ ಸಮವೆಂದು ವಿದ್ವಾಂಸರು ಹೇಳುತ್ತಾರೆ.

೬೫. ಈ ತೀರ್ಥಗಳೆಲ್ಲವೂ ಸಾಭ್ರಮತಿಯ ಉತ್ತರ ತೀರದಲ್ಲಿವೆ. ಬ್ರಹ್ಮನೇ ಮುಂತಾದ ದೇವತೆಗಳು ಈ ತೀರ್ಥವನ್ನು ಕಾಣದಂತೆ ಗುಪ್ತ ಮಾಡಿದ್ದಾರೆ.

ಸ್ಮರಣಾದಪಿ ಲೋಕಾನಾಂ ಪಾಪಘ್ನಾನಿ ಮಹೇಶ್ವರೀ ।
ಕಿಂ ಪುನಶ್ಶ್ರಾದ್ಧದಾತ್ಯಾಣಾಂ ಮಾನವಾನಾಂ ಸುರೇಶ್ವರಿ ॥ ೬೬ ॥

ಓಂಕಾರಂ ಪಿತೃತೀರ್ಥಂ ಚ ಕಾವೇರೀ ಕಪಿಲೋದಕಂ ।
ಸಂಭೇದಶ್ಚಂಡವೇಗಾಯಾಸ್ತಥೈವಾಮರಕಂಟಕಂ ॥ ೬೭ ॥

ಕುರುಕ್ಷೇತ್ರಾಚ್ಛತಗುಣಮಸ್ಮಿನ್ ಸ್ನಾನಾದಿಕಂ ಭವೇತ್ ।
ವಾತ್ರಘ್ನೋ ಸಂಗಮೋ ದೇವೀ ಗಣೇಶ್ವರಪುರಸ್ಸರೈಃ ॥ ೬೮ ॥

ಸಾಭ್ರಮತ್ಯಾಂ ಪುರಾ ನೀತಂ ಗಣೈಸ್ತೀರ್ಥಕದಂಬಕಂ ।
ಏಷ ತೂದ್ದೇಶತಃ ಪ್ರೋಕ್ತಃ ತೀರ್ಥಾನಾಂ ಸಂಗಮೋ ಮಯಾ॥ ೬೯ ॥

ವಾಗೀಶೋಽಪಿ ನ ಶಕ್ನೋತಿ ತೀರ್ಥಾನಂ ತತ್ರ ವಿಸ್ತರಂ ।
ಸತ್ಯ ತೀರ್ಥಂ ದಯಾ ತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ॥ ೭೦ ॥

---

೬೬. ಎಲೈ ಪಾರ್ವತಿಯೇ! ಇವುಗಳನ್ನು ಸ್ಮರಿಸಿದರೇನೆ ಜನಗಳು ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಇಲ್ಲಿ ಶ್ರಾದ್ಧ ದಾನ ಮಾಡಿದರೆ ಅವರಿಗೆ ಬರುವ ಪುಣ್ಯವನ್ನು ಹೇಳತಕ್ಕದ್ದೇನಿದೆ ?

೬೭–೬೯. ಓಂಕಾರ ತೀರ್ಥವು ಕಾವೇರಿತೀರ್ಥ ಕಪಿಲಾತೀರ್ಥಗಳು ಪಿತೃತೀರ್ಥಗಳು. ಚಂಡವೇಗೆಯ ಸಂಗಮ ಅಮರಕಂಟಕತೀರ್ಥ ಇವುಗಳು ಕುರುಕ್ಷೇತ್ರದ ಪುಣ್ಯಕ್ಕಿಂತಲೂ ನೂರರಷ್ಟು ಹೆಚ್ಚು ಪುಣ್ಯವನ್ನು ಕೊಡುತ್ತವೆ. ಆದ್ದರಿಂದ ಇವುಗಳಲ್ಲಿ ಸ್ನಾನ ಮುಂತಾದುವನ್ನು ಮಾಡಬೇಕು. ವಾತ್ರಘ್ನಿಯು ಸಾಭ್ರಮತಿಯೊಡನೆ ಸಂಗಮವಾಗುವ ಜಾಗಕ್ಕೆ ಪೂರ್ವದಲ್ಲಿ ಗಣೇಶನೇ ಮುಂತಾದವರು ಅನೇಕ ತೀರ್ಥಗಳನ್ನು ಅಲ್ಲಿಗೆ ತೆಗೆದುಕೊಂಡು ಹೋದರು. ಎಲೈ ದೇವಿಯೇ! ಈ ರೀತಿಯಾದ ತೀರ್ಥಗಳ ಸಂಗಮಗಳ ಹೆಸರನ್ನು ಮಾತ್ರ ಹೇಳಿದ್ದೇನೆ.

೭೦–೭೪. ಅಲ್ಲಿರತಕ್ಕ ತೀರ್ಥಗಳನ್ನೆಲ್ಲಾ ಒಂದನ್ನೂ ಬಿಡದಂತೆ ವಿಸ್ತಾರವಾಗಿ ಹೇಳುವುದಕ್ಕೆ ಬ್ರಹ್ಮನಿಂದಲೂ ಆಗುವುದಿಲ್ಲ. ಇವುಗಳಲ್ಲದೆ ಸತ್ಯವನ್ನು ಹೇಳುವುದೇ ತೀರ್ಥವು. ಪ್ರಾಣಿಗಳಲ್ಲಿ ದಯೆ ತೋರುವುದೇ ದಯಾ ತೀರ್ಥವು. ಇಂದ್ರಿಯಗಳನ್ನು ಸ್ವೇಚ್ಛೆಯಾಗಿ ಬಿಡದೆ ಅವನ್ನು ನಿಗ್ರಹಿಸುವುದೇ

ತಸ್ಮಾತ್ತೀರ್ಥೇ ಪ್ರಯತ್ನೇನ ಸ್ನಾನಂ ಕುರ್ಯಾನ್ನ ಸಂಶಯಃ ।
ಪ್ರಾತಃಕಾಲೇ ಮುಹೂರ್ತಾಂಸ್ತ್ರೀನ್ ಪೂರ್ವಾಹ್ಣಸ್ತಾವದೇವ ತು ॥ ೭೧ ॥

ತದಾ ಸ್ನಾನಾದಿಕಂ ತೀರ್ಥೇ ದೇವಾನಾಂ ಪ್ರೀತಿದಾಯಕಂ ।
ಮಧ್ಯಾಹ್ನಸ್ತ್ರಿಮುಹೂರ್ತಸ್ಸ್ಯಾದಪರಾಹ್ಣಸ್ತತಃ ಪರಂ ॥ ೭೨ ॥

ಪಿತೃಣಾಂ ಪ್ರೀತಿಜನನಂ ಸ್ನಾನಪಿಂಡಾದಿತರ್ಪಣಂ ।
ಸಾಯಾಹ್ನಸ್ತ್ರಿಮುಹೂರ್ತಸ್ಸ್ಯಾತ್ ಸ್ನಾನಂ ತತ್ರ ನ ಕಾರಯೇತ್ ॥ ೭೩ ॥

ರಾಕ್ಷಸೀ ನಾಮ ಸಾ ವೇಳಾ ಗರ್ಹಿತಾ ಸರ್ವಕರ್ಮಸು ।
ಅಹ್ನೋ ಮುಹೂರ್ತಾ ವಿಖ್ಯಾತಾ ದಶ ಪಂಚ ಚ ಸರ್ವದಾ ॥ ೭೪ ॥

---

ಇಂದ್ರಿಯನಿಗ್ರಹವು. ಇವು ಯಾವಾಗಲೂ ಮನುಷ್ಯನಲ್ಲಿ ಇರಬೇಕು. ಆದ್ದರಿಂದ ಇವೆಲ್ಲವೂ ಇದ್ದರೆ ಅವನೇ ತೀರ್ಥಸ್ವರೂಪನು. ತೀರ್ಥಗಳಲ್ಲಿ ಸ್ನಾನ ಮಾಡಬೇಕಾದರೆ ಇವೆಲ್ಲವೂ ಇರಬೇಕು. ಪ್ರಾತಃಕಾಲದಲ್ಲಿ ಎಂದರೆ ಸೂರ್ಯೋದಯವಾದ ಮೇಲೆ ಮೂರು ಮುಹೂರ್ತಗಳು ಪೂರ್ವಾಹ್ಣವು. ಈ ಕಾಲದಲ್ಲಿ ಸ್ನಾನಾದಿಗಳನ್ನು ಮಾಡಿದರೆ ದೇವತೆಗಳಿಗೆ ಪ್ರೀತಿಯುಂಟಾಗುತ್ತವೆ. ಅನಂತರ ಮೂರು ಮುಹೂರ್ತಗಳು ಮಧ್ಯಾಹ್ನವು. ಆಮೇಲಿನ ಮೂರು ಮುಹೂರ್ತಗಳು ಅಪರಾಹ್ಣವು ಈ ಕಾಲದಲ್ಲಿ ಸ್ನಾನ, ಪಿಂಡತರ್ಪಣಗಳನ್ನು ಮಾಡಿದರೆ ಪಿತೃಗಳಿಗೆ ಪ್ರೀತಿಯು ಉಂಟಾಗುತ್ತದೆ. ಆ ಅಪರಾಹ್ಣವಾದನಂತರ ಸಾಯಾಹ್ನವು ಮೂರು ಮುಹೂರ್ತಗಳು ಇರುತ್ತದೆ. ಈ ಕಾಲದಲ್ಲಿ ಸ್ನಾನವನ್ನು ಮಾಡಕೂಡದು. ಆ ಕಾಲವು ರಾಕ್ಷಸೀಕಾಲವೆನಿಸಿಕೊಳ್ಳುತ್ತದೆ. ಈ ಕಾಲವು ಎಲ್ಲಾ ಕೆಲಸಗಳಿಗೂ ನಿಂದಿತವು. ಹಗಲಿನಲ್ಲಿ ಹದಿನೈದು ಮುಹೂರ್ತಗಳೆಂದು ಯಾವಾಗಲೂ ಪ್ರಸಿದ್ಧಿಯು.

ತತ್ರಾಷ್ಟಮೋ ಮುಹೂರ್ತೋಽಯಂ ಸ ಕಾಲಃ ಕುತುಪಃ ಸ್ಮೃತಃ ।
ಮಧ್ಯಾಹ್ನೇ ಸರ್ವದಾ ಯಸ್ಮಾನ್ಮಂದೋ ಭವತಿ ಭಾಸ್ಕರಃ ॥ ೭೫ ॥

ತಸ್ಮಾದನಂತಫಲದಃ ಪಿತ್ಯಾಣಾಂ ಪಿಂಡದಾನತಃ ।
ಮಧ್ಯಾಹ್ನಃ ಖಡ್ಗಪಾತ್ರಂ ಚ ತಥಾ ನೇಪಾಳಕಂಬಳಃ ॥ ೭೬ ॥

---

೭೫. ಇದರಲ್ಲಿ ಎಂಟನೆಯ ಮುಹೂರ್ತವೇ ಕುತುಪವೆಂಬುದು. ಸೂಚನೆ:— ಎರಡು ಘಳಿಗೆಗೆ ಒಂದು ಮುಹೂರ್ತವೆಂದೂ ಒಂದು ದಿನಕ್ಕೆ ಮೂವತ್ತು ಮುಹೂರ್ತಗಳು ಎಂದೂ ಕೋಶಕಾರರು ನಿರ್ಣಯಿಸಿದ್ದಾರೆ. ಎಂದರೆ ಮೂವತ್ತು ಮುಹೂರ್ತಗಳಿಗೆ ಇಪ್ಪತ್ತನಾಲ್ಕು ಗಂಟೆಗಳು ಎಂದಂತಾಯಿತು. ಒಂದು ಗಂಟೆಗೆ ಒಂದೂಕಾಲು ಮುಹೂರ್ತವಾಗುತ್ತದೆ. ಅಥವಾ ನಾಲ್ವತ್ತೆಂಟು ನಿಮಿಷಕ್ಕೆ ಒಂದುಮುಹೂರ್ತ. ಹಗಲಿಗೆ ಹದಿನೈದು ಮುಹೂರ್ತಗಳು ರಾತ್ರಿಗೆ ಹದಿನೈದು ಮುಹೂರ್ತಗಳೆಂದು ಭಾಗಮಾಡಿ ಹಗಲಿನ ಭಾಗಗಳನ್ನು ಹೇಳುತ್ತಾನೆ. ಸೂರ್ಯೋದಯವು ಆರು ಗಂಟೆಗೆ ಎಂದಿಟ್ಟುಕೊಂಡು ಆರು ಗಂಟೆಯ ಕೊನೆ ಅಥವಾ ಏಳನೆಯ ಗಂಟೆಯ ಆದಿಯಲ್ಲಿ ಅಸ್ತವೆಂದು ಇಟ್ಟುಕೊಂಡರೆ ಆರು ಮುಹೂರ್ತಗಳಿಗೆ ನಾಲ್ಕುಘಂಟೆ ನಾಲ್ವತ್ತೆಂಟು ನಿಮಿಷವಾಯಿತು. ಅದರ ಮುಂದಿನ ನಾಲ್ವತ್ತೆಂಟು ನಿಮಿಷಗಳು ಎಂದರೆ ಹನ್ನೊಂದು ಗಂಟೆಗೆ ಎರಡು ನಿಮಿಷ ಕಡಿಮೆಯಾಗಿ ಹನ್ನೆರಡು ಗಂಟೆಗೆ ನಾಲ್ಕುನಿಮಿಷ ಕಡಿಮೆಯಾಗಿರುವ ವರೆಗೂ ಕುತುಪುಕಾಲವೆಂದು ನಿರ್ಣಯಿಸಿಕೊಳ್ಳಬೇಕು. ಈ ರೀತಿಯಾಗಿ ಸೂರ್ಯೋದಯದ ಹೆಚ್ಚು ಕಡಿಮೆಗಳನ್ನು ನೋಡಿಕೊಂಡು ಗೊತ್ತುಮಾಡಿಕೊಳ್ಳ ಬೇಕು. ಈ ನಿರ್ಣಯವು ಹಗಲು ಹೆಚ್ಚಾದಾಗ ಆಗಲಿ ಕಡಿಮೆಯಾದಾಗಲಾಗಲಿ ಉದಯದಿಂದಲೇ ಲೆಕ್ಕಹಾಕಿ ಅದಕ್ಕೆ ಎಂಟನೆಯದೆಂದು ಹೇಳಬೇಕು. ಹಗಲನ್ನು ಅರ್ಧವನ್ನಾಗಿ ಮಾಡಿದರೆ ಹಗಲು ಹೆಚ್ಚಾಗಿದ್ದಾಗ ಅಥವಾ ಕಡಿಮೆಯಾಗಿದ್ದಾಗ ಹೆಚ್ಚುಕಡಿಮೆಗಳಾಗುತ್ತವೆ. ಇದರಂತೆ ಹಿಂದಿನ ಮುಂದಿನ ಮುಹೂರ್ತಗಳನ್ನು ಲೆಕ್ಕಹಾಕಿಕೊಳ್ಳಬೇಕು.

೭೬–೭೭. ಮಧ್ಯಾಹ್ನದಲ್ಲಿ ಸೂರ್ಯನು ಕಾಂತಿಯಲ್ಲಿ ಕಡಿಮೆಯಾಗುವುದಕ್ಕೆ ಮೊದಲಾಗುತ್ತಾನೆ. ಈ ಕಾಲದಲ್ಲಿ ಪಿತೃಗಳಿಗೆ ದಾನಮಾಡಿದ ಪಿಂಡಗಳು ಅನಂತವಾದ ಫಲವನ್ನು ಕೊಡುತ್ತವೆ. ಮಧ್ಯಾಹ್ನ ಖಡ್ಗಪಾತ್ರೆ, ನೇಪಾಳದ

**ರೂಪ್ಯಂ ದರ್ಭಾಸ್ತಥಾ ಗಾವೋ ದೌಹಿತ್ರಃ ಕುತುಪಸ್ತಿಲಾಃ ।**
**ಪಾಪಂ ಕುತ್ಸಿತಮಿತ್ಯಾಹುಸ್ತಸ್ಯ ಸಂತಾಪಕಾರಕಾಃ ॥ ೭೭ ॥**

**ಅಷ್ಟಾವೇತೇ ಯತಸ್ತಸ್ಮಾತ್ಕುತಪಾ ಇತಿ ವಿಶ್ರುತಾಃ ।**
**ಊರ್ಧ್ವಂ ಮುಹೂರ್ತಾತ್ಕುತಪಾದ್ಯನ್ಮುಹೂರ್ತಚತುಷ್ಟಯಂ ॥ ೭೮ ॥**

**ಮುಹೂರ್ತಪಂಚಕಂ ಚೈತಚ್ಛ್ರಾದ್ಧಕಾಲೋಽಭಿಧೀಯತೇ ।**
**ವಿಷ್ಣೋರ್ದೇಹಸಮುದ್ಭೂತಾಃ ಕುಶಾಃ ಕೃಷ್ಣತಿಲಾಃ ಸ್ಮೃತಾಃ ॥ ೭೯ ॥**

**ಶ್ರಾದ್ಧಸ್ಯ ರಕ್ಷಣಾರ್ಥಾಯ ಹ್ಯೇವಮಾಹುರ್ದಿವೌಕಸಃ ।**
**ತಿಲೋದಕಾಂಜಲಿರ್ದೇಯೋ ಜಲಸ್ಥೈಸ್ತೀರ್ಥವಾಸಿಭಿಃ ॥ ೮೦ ॥**

**ಸದರ್ಭಹಸ್ತೈರ್ಯೈಕೇನ ಶ್ರಾದ್ಧಮೇವಂ ನ ಹಿಂಸ್ಯತೇ ।**
**ಸಾಭ್ರಮತ್ಯಾಂ ನಾಮಧೇಯೈರಿತಿ ತೀರ್ಥಪ್ರವೇಶನಂ ॥ ೮೧ ॥**

---

ಕಂಬಳ (ಶಾಲು), ಬೆಳ್ಳಿ, ದರ್ಭೆ, ಗೋವುಗಳು, ದೌಹಿತ್ರ, ಕರಿಯೆಳ್ಳು, ಇವೆಲ್ಲವೂ ಆ ಕಾಲದಲ್ಲಿ ಪಾಪವನ್ನು ತೊಂದರೆಪಡಿಸಿ ನಾಶಮಾಡುವುದರಿಂದ ಅವಕ್ಕೆ ಕುತಪಗಳೆಂದು ಹೆಸರು.

೭೮–೮೧. ಈ ಎಂಟು ಪದಾರ್ಥಗಳಿಗೂ ಕುತಪಗಳೆಂದು ಹೆಸರು ಬಂದಿರುವುದರಿಂದ ಆ ಕಾಲದಲ್ಲಿ ಅವನ್ನು ಉಪಯೋಗಿಸಬೇಕು ಎಂದು ಹೇಳಿರುವುದರಿಂದ ಆ ಕಾಲವು ಕುತಪವೆಂದು ಹೆಸರುಳ್ಳದ್ದಾಯಿತು. ಕುತುಪಕಾಲಕ್ಕಿಂತ ಮೇಲೆ ನಾಲ್ಕುಮುಹೂರ್ತಗಳು ಕುತುಪದ ಒಂದು ಮುಹೂರ್ತ ಈ ಕಾಲಗಳಲ್ಲಿ ಶ್ರಾದ್ಧವನ್ನು ಮಾಡಬೇಕು. ಇದೇ ಶ್ರಾದ್ಧಕಾಲವು. ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ದರ್ಭೆಯೂ ಕಪ್ಪಾದಎಳ್ಳೂ ವಿಷ್ಣುವಿನ ದೇಹದಿಂದಲೇ ಹುಟ್ಟಿದುವು. ಇವು ಶ್ರಾದ್ಧವನ್ನು ರಕ್ಷಿಸುವುದಕ್ಕೆ ಹುಟ್ಟಿದುವೆಂದು ದೇವತೆಗಳು ಹೇಳುತ್ತಾರೆ. ಬಲಗೈಗೆ ದರ್ಭೆಯನ್ನು ಹಾಕಿಕೊಂಡು ಎಳ್ಳು ನೀರಿನ ತರ್ಪಣವನ್ನು ಸಾಭ್ರಮತಿ ತೀರ್ಥದಲ್ಲಿರುವವರು ಆ ನೀರಿನಲ್ಲಿ ನಿಂತುಕೊಂಡು ಕೊಡಬೇಕು ಹಾಗೆ ತರ್ಪಣ ಕೊಡುವಾಗ ತಮಗೆ ಬೇಕಾದವರ ಹೆಸರನ್ನು ಹೇಳಿ ತರ್ಪಣವನ್ನು ಕೊಡಬೇಕು. ತೀರ್ಥಪ್ರವೇಶ ಮಾಡುವಾಗ ಹೀಗೆ ಮಾಡಬೇಕು.

ಕಾರಯಿತ್ವಾ ಮಯಾ ದೇವಿ ದತ್ತಾ ವೈ ಕಶ್ಯಪಾಯ ಚ ।
ಮಮ ಭಕ್ತಃ ಕಶ್ಯಪೋಽಸೌ ವಲ್ಲಭೋ ಮಮ ಸರ್ವದಾ ॥ ೮೨ ॥

ತಸ್ಮಾದ್ದತ್ತಾ ಇಯಂ ಗಂಗಾ ಪವಿತ್ರಾ ಪಾಪನಾಶಿನೀ ।
ಸಾಭ್ರಮತ್ಯಾಂ ಮಹಾಭಾಗೇ ತೀರ್ಥಂ ವೈ ಬ್ರಹ್ಮಚಾರಿಕೇ ॥ ೮೩ ॥

ಅತ್ಮಾನಂ ಚ ಪ್ರತಿಷ್ಠಾಪ್ಯ ತನ್ನಾಮ್ನಾ ಶಂಕರೋ ಹ್ಯಹಂ ।
ಸ್ಥಿತೋ ಲೋಕಹಿತಾರ್ಥಾಯ ಬ್ರಹ್ಮಚಾರೀಶಸಂಜ್ಞಿತಃ ॥ ೮೪ ॥

ಸಾಭ್ರಮತ್ಯಾ ಉಪಕಂಠೇ ಬ್ರಹ್ಮಚಾರೀಶಸಂಜ್ಞಕೇ ।
ಕಲೌ ಭಕ್ತ್ಯೋ ವಿಶೇಷೇಣ ಪೂಜನಂ ಕುರುತೇ ಯದಾ ॥ ೮೫ ॥

ಇಹ ಲೋಕೇ ಸುಖಂ ಭುಕ್ತ್ವಾ ಯಾತಿ ಶೈವಪದಂ ಮಹತ್ ।
ಮಹದ್ಭಿಃ ವ್ಯಾಧಿಭಿಶ್ಚೈವ ಪೀಡಿತೋ ಯದಿ ಗಚ್ಛತಿ ॥ ೮೬ ॥

---

೮೨. ನಾನೂ ಕೂಡ ಆ ಸಾಭ್ರಮತಿಯನ್ನು ಕಶ್ಯಪನಿಗೆ ಕೊಟ್ಟಾಗ ಆ ತೀರ್ಥಪ್ರವೇಶವನ್ನು ಮಾಡಿದೆನು. ಅವನು ನನಗೆ ಭಕ್ತನು. ಬಹು ಪ್ರೀತಿ ಪಾತ್ರನು.

೮೩. ಎಲೈ ಬ್ರಹ್ಮನನ್ನು ಬಲ್ಲ ಪಾರ್ವತಿಯೇ! ಹಾಗೆ ಅವನು ನನಗೆ ಬೇಕಾದವನಾದುದರಿಂದಲೇ ಅವನಿಗೆ ಇದನ್ನು ಕೊಟ್ಟೆನು. ಆದುದರಿಂದ ಸಾಭ್ರಮತಿ ಎಂಬ ಗಂಗೆಯು ಪವಿತ್ರವಾದುದು. ಪಾಪನಾಶಕವಾದುದು. ಇದು ಬ್ರಹ್ಮನಿಂದ ಅನುಭೂತವಾದ ತೀರ್ಥ.

೮೪. ನನ್ನ ಆತ್ಮನನ್ನು ಅಲ್ಲಿ ಪ್ರತಿಷ್ಠೆಮಾಡಿದ್ದೇನೆ. ನಾನು ಲೋಕ ಹಿತಕ್ಕೋಸ್ಕರ ಅಲ್ಲಿ ಬ್ರಹ್ಮಚಾರೀಶನೆಂಬ ಹೆಸರನ್ನು ಹೊಂದಿ ನಿಂತಿದ್ದೇನೆ.

೮೫–೮೮. ಸಾಭ್ರಮತಿಯ ಹತ್ತಿರದಲ್ಲಿ ಬ್ರಹ್ಮಚಾರೀಶನ ಹತ್ತಿರದಲ್ಲಿ ಭಕ್ತನಾದವನು ಪೂಜೆ ಮಾಡಬೇಕು. ಅದರಲ್ಲಿಯೂ ಕಲಿಯುಗದಲ್ಲಿ ಪೂಜೆ ಮಾಡಿದರೆ ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಪ್ರಾಣತ್ಯಾಗವಾದ ನಂತರದಲ್ಲಿ ಶಿವನ ಪದವನ್ನು ಹೊಂದುತ್ತಾನೆ. ಮಹಾವ್ಯಾಧಿಗಳಿಂದ ಕೂಡಿದವನು ಅಲ್ಲಿಗೆ ಹೋಗಿ ಆ ಬ್ರಹ್ಮಚಾರೀಶನನ್ನು ದರ್ಶನಮಾಡಿದೊಡನೆಯೇ

ತಸ್ಯಾಶು ನಶ್ಯೇತ್ಸ ವ್ಯಾಧಿಃ ದರ್ಶನಾಚ್ಚ ಮಹೇಶ್ವರಿ ।
ಗತ್ವಾ ವೈ ತಸ್ಯ ಸಂಸ್ಥಾನೇ ಹ್ಯುಪವಾಸೀ ಜಿತೇಂದ್ರಿಯಃ ॥ ೮೭ ॥

ಪೂಜನಂ ಕುರುತೇ ಭಕ್ತ್ಯಾ ರಾತ್ರೌ ತಿಷ್ಠೇತ್ ಸುನಿಶ್ಚಲಃ ।
ತದಾಹಂ ಯೋಗಿರೂಪೇಣ ದರ್ಶನಂ ತಸ್ಯ ಯಾಮಿ ಹಿ ॥ ೮೮ ॥

ದದಾಮಿ ವಾಂಛಿತಾನ್ಕಾಮಾನ್ ಸತ್ಯಂ ಸತ್ಯಂ ವರಾನನೇ ।
ಮಮ ಸ್ಥಾನೇ ವಿಶೇಷೇಣ ಸಮಾಯಾಂತಿ ಚ ಯೇ ಜನಾಃ ॥ ೮೯ ॥

ತೇಷಾಂ ವ್ಯಾಧಿಪ್ರಶಮನಂ ಕರೋಮಿ ಸುಚಿರಾದಹಂ ।
ಚತುರಶೀತಿಸಂಜ್ಞೋ ಯೋ ವ್ಯಾಧಿಸ್ಸಂಕಥಿತೋ ಮಯಾ ॥ ೯೦ ॥

ಸ ಚ ವ್ಯಾಧಿರ್ವಿನಶ್ಯೇತ ದರ್ಶನಾದೇವ ಸುಂದರಿ ।
ನ ಲಿಂಗಂ ವರ್ತತೇ ತತ್ರ ಮನ್ಮೈಕಂ ನಗನಂದಿನಿ ॥ ೯೧ ॥

ಸ್ಥಾನಮಾತ್ರಂ ತು ತತ್ರೈವ ಮಾನುಕಂ ನಾತ್ರ ಸಂಶಯಃ ।
ಏಕಸ್ಮಿನ್ನೇವ ಕಾಲೇ ತು ಅಸ್ಯಾಂ ಭೂಮೌ ಮಹಾತಪಾಃ ॥ ೯೨ ॥

ರಾಜಾ ವೈ ಸೂರ್ಯವಂಶೀಯೋ ಬ್ರಹ್ಮದತ್ತಸ್ತು ವೀರ್ಯವಾನ್ ।
ತೇನ ರಾಜ್ಞಾ ತಪಸ್ತಪ್ತಂ ಬಹುಕಾಲಂ ಸುರೇಶ್ವರಿ ॥ ೯೩ ॥

---

ಅವನ ವ್ಯಾಧಿಗಳೆಲ್ಲವೂ ಹೋಗಿಬಿಡುತ್ತವೆ. ಆ ಸಾಭ್ರಮತಿಯ ಬ್ರಹ್ಮಚಾರೀಶನ ಬಳಿಗೆ ಹೋಗಿ ಜಿತೇಂದ್ರಿಯನಾಗಿ ಉಪವಾಸವಿದ್ದು ಆ ಪ್ರತಿಮೆಯನ್ನು ಪೂಜೆಮಾಡಿ ರಾತ್ರಿಯೆಲ್ಲವೂ ಜಾಗರಣೆ ಮಾಡುತ್ತಿದ್ದರೆ ಆಗ ನಾನು ಯೋಗಿರೂಪದಿಂದ ಅವನಿಗೆ ದರ್ಶನವನ್ನು ಕೊಡುತ್ತೇನೆ.

೮೯–೯೩. ಅಂತಹವರಿಗೆ ಇಷ್ಟವಾದ ವರಗಳನ್ನು ಕೊಡುತ್ತೇನೆ. ಇದು ಸತ್ಯವು ಖಂಡಿತವಾಗಿಯೂ ಸತ್ಯವು. ನನ್ನ ಜಾಗಕ್ಕೆ ಬರತಕ್ಕ ಜನಗಳಿಗೆ ರೋಗವನ್ನು ಖಂಡಿತವಾಗಿಯೂ ನಾಶಮಾಡುತ್ತೇನೆ. ಅದೂ ಅಲ್ಪ ಕಾಲದಲ್ಲಿ ನಾಶಮಾಡುತ್ತೇನೆ. ಎಂಬತ್ತುನಾಲ್ಕು ಬಗೆಯ ವ್ಯಾಧಿಗಳಿವೆಯೆಂದು ನಾನು ಹೇಳಿದ್ದೇನಷ್ಟೆ. ಅವೆಲ್ಲವೂ ನನ್ನನ್ನು ನೋಡಿದೊಡನೆಯೇ ಹೋಗುತ್ತವೆ. ಎಲೈ ಪಾರ್ವತಿಯೇ ! ಅಲ್ಲಿ ನನ್ನ ಲಿಂಗ ರೂಪವಾದ ದೇಹವಿಲ್ಲ. ಬರಿಯ ಜಾಗಮಾತ್ರ ಕಾಣಿಸುತ್ತದೆ. ಅಲ್ಲಿ ನಾನಿರುವುದರಲ್ಲಿ ಸಂಶಯವಿಲ್ಲ. ಒಂದಾನೊಂದು ಕಾಲದಲ್ಲಿ ಸೂರ್ಯವಂಶದ ರಾಜನಾದ ಪರಾಕ್ರಮಶಾಲಿಯಾದ ಬ್ರಹ್ಮದತ್ತನೆಂಬುವನು ಈ ಜಾಗದಲ್ಲಿ ತಪಸ್ಸನ್ನು ಬಹುಕಾಲದವರೆಗೂ ಮಾಡಿದನು.

ಪಂಚಾಗ್ನಿಸಾಧನಂ ತೇನ ಕೃತಂ ಚ ಬಹುಧಾ ತತಃ ।
ಮಾಸೋಪವಾಸಕಾದೀನಿ ತಪಾಂಸಿ ತಪ್ತಾನ್ಯನೇಕಶಃ ॥ ೯೪ ॥

ಏವಂ ಬಹುತರಂ ಕಾಲಂ ರಾಜ್ಞಾ ತಪ್ತಂ ತಪೋ ಮಹತ್ ।
ಪ್ರತ್ಯಕ್ಷೋಽಹಂ ತದಾ ಜಾತೋ ವರಾರ್ಥಂ ವರವರ್ಣಿನಿ ॥ ೯೫ ॥

ಬ್ರಹ್ಮದತ್ತ ಶೃಣುಷ್ವ ತ್ವಂ ಮಹದ್ವಾಕ್ಯಂ ನರೇಶ್ವರ ।
ಯಂ ಯಂ ವಾಂಛಯಸೇ ನಿತ್ಯಂ ತಂ ತಂ ದದ್ಮಿ ನ ಸಂಶಯಃ ॥ ೯೬ ॥

ತೇನೋಕ್ತಂ ಮಮ ದೇವೇಶ ವಾಂಛಿತಂ ಯದಿ ದೀಯತೇ ।
ಏಕ ಏವ ವರೋ ದೇವ ದೀಯತಾಂ ಮಮ ಸರ್ವದಾ ॥ ೯೭ ॥

ಮಮ ನಾಮ್ನಾ ತು ದೇವೇಶ್ಯೈತತ್ಸರಃ ಸಂಪ್ರಜಾಯತಾಂ ।
ತೇನ ವಾಕ್ಯೇನ ತುಷ್ಟೇನ ವರೋ ದತ್ತೋ ಮಯಾನಘೇ ॥ ೯೮ ॥

---

೯೪. ಐದು ಅಗ್ನಿಗಳನ್ನು ಸಾಧನವಾಗಿಟ್ಟುಕೊಂಡು ತಪಸ್ಸುಗಳನ್ನು ಮಾಡಿದನು. ಅಲ್ಲದೆ ಮಾಸೋಪವಾಸವೇ ಮುಂತಾದ ಅನೇಕ ಬಗೆಯ ತಪಸ್ಸುಗಳನ್ನು ಅನೇಕ ಬಾರಿ ಮಾಡಿದನು.

೯೫ ಎಲೈ ಪಾರ್ವತಿಯೇ ! ಆ ರಾಜನು ಹೀಗೆ ಬಹಳಕಾಲ ತಪಸ್ಸನ್ನು ಮಾಡಿದನು. ಆಗ ನಾನು ವರಕೊಡಬೇಕೆಂದು ಪ್ರತ್ಯಕ್ಷನಾದೆನು.

೯೬. ಎಲೈ ರಾಜನಾದ ಬ್ರಹ್ಮದತ್ತನೇ ! ನನ್ನ ಮಾತನ್ನು ಕೇಳು. ನೀನು ನಿತ್ಯವೂ ಯಾವು ಯಾವುದನ್ನು ಅಪೇಕ್ಷಿಸುತ್ತೀಯೋ ಅವೆಲ್ಲವನ್ನೂ ಕೊಡುತ್ತೇನೆ. ಸಂಶಯವಿಲ್ಲ.

೯೭. ಆಗ ಆತನ್ನು ಎಲೈ ಸ್ವಾಮಿಯೇ ! ನನಗೆ ಬೇಕಾದುದನ್ನು ನೀನು ಕೊಡುವುದಾದರೆ ನಾನು ಬಹುವಾಗಿ ಕೇಳುವುದಿಲ್ಲ. ಒಂದೇ ಒಂದು ವರವನ್ನು ಕೇಳಿಕೊಳ್ಳುತ್ತೇನೆ. ಅದೇ ನನಗೆ ಯಾವಾಗಲೂ ಇರಲಿ.

೯೮. ಎಲೈ ಸ್ವಾಮಿಯೇ ! ನನ್ನ ಹೆಸರಿನಿಂದ ಈ ಸರೋವರವು ಪ್ರಸಿದ್ಧವಾಗಿ ಆಗಲಿ. ಎಂದು ಕೇಳಿದನು. ನಾನು ಆ ಮಾತಿಗೆ ಸಂತೋಷಗೊಂಡು ಹಾಗೇ ಆಗಲೆಂದು ವರವನ್ನು ಕೊಟ್ಟೆನು.

ತದಾಹಂ ತೇನ ವೈ ಸಾರ್ಧಂ ನಿವಸಾಮಿ ಸುರೇಶ್ವರಿ ।
ಅತ್ರ ಸ್ಥಿತ್ವಾ ನಿರಾಹಾರಾ ಭಕ್ತಿಂ ಕುರ್ವಂತ್ಯನೇಕಶಃ ॥ ೯೯ ॥

ದದಾಮಿ ವಾಂಛಿತಾನ್ಕಾಮಾ ಯಾವದಿಂದ್ರಾಶ್ಚತುರ್ದಶ ।
ಅತ್ರಾಗತ್ಯ ತು ಯೇ ವಿಪ್ರಾ ರುದ್ರಜಾಪ್ಯಾದಿಕಂ ಜಪಂತ್ ॥ ೧೦೦ ॥

ಪ್ರಕುರ್ವಂತಿ ವಿಶೇಷೇಣ ತೇಷಾಂ ದದ್ಮಿ ಶೃಣುಷ್ವ ತತ್ ।
ಸ್ತ್ರೀಸೌಖ್ಯಂ ಪುತ್ರಸೌಖ್ಯಂ ಚ ಲಕ್ಷ್ಮೀವೃದ್ಧಿಕರಂ ಪುನಃ ॥ ೧೦೧ ॥

ಯಶ ಐಶ್ವರ್ಯಮೇವಾಪಿ ತಥಾ ರೋಗಾದಿನಾಶನಂ ।
ತತ್ಸರ್ವಂ ಪ್ರಾಪ್ಯತೇ ಕ್ಷಿಪ್ರಂ ವಾಂಛಿತಂ ವೈ ಕಲೌ ಯುಗೇ ॥ ೧೦೨ ॥

ಅಸ್ಮಿನ್ ಕಲೌ ಯುಗೇ ಘೋರೇ ಮದ್ಭಕ್ತ್ಯಾ ಭುವಿ ಪಾರ್ವತಿ ।
ಅತ್ರಾಗತ್ಯ ಪ್ರಕುರ್ವಂತಿ ಸ್ನಾನದಾನಾದಿಕಾಃ ಕ್ರಿಯಾಃ ॥ ೧೦೩ ॥

ದದಾಮಿ ವಾಂಛಿತಾನರ್ಥಾನ್ ಸತ್ಯಂ ಸತ್ಯಂ ಸುರೇಶ್ವರಿ ।
ಬ್ರಹ್ಮದತ್ತಸ್ತು ತನ್ನಾಮ್ನಾ ದ್ವಿತೀಯಂ ಬ್ರಹ್ಮಚಾರಿಣಂ ॥ ೧೦೪ ॥

---

೯೯–೧೦೨. ಅದು ಮೊದಲುಗೊಂಡು ನಾನು ಅಲ್ಲಿಯೇ ಇರುತ್ತೇನೆ. ಈ ಜಾಗದಲ್ಲಿ ಆಹಾರವನ್ನು ತೆಗೆದುಕೊಳ್ಳದೆ ಯಾರು ಅನೇಕ ಬಗೆಯಲ್ಲಿ ತಮ್ಮ ಭಕ್ತಿಯನ್ನು ತೋರ್ಪಡಿಸಿಕೊಳ್ಳುತ್ತಾರೆಯೋ ಅವರಿಗೆ ನಾನು ಹದಿನಾಲ್ಕು ಜನರಿಂದ್ರರಿರುವವರೆವಿಗೆ ಬೇಕಾದ ಇಷ್ಟಗಳನ್ನು ಕೊಡುತ್ತೇನೆ. ಈ ಜಾಗಕ್ಕೆ ಬಂದು ಯಾವ ಬ್ರಾಹ್ಮಣರು ರುದ್ರಾಧ್ಯಾಯಗಳನ್ನು ಜಪಿಸುತ್ತಾರೆಯೋ ಅವರಿಗೆ ನಾನು ಕೊಡುವುದನ್ನು ಕೇಳು. ಸ್ತ್ರೀಸೌಖ್ಯ, ಪುತ್ರಸೌಖ್ಯ, ಲಕ್ಷ್ಮೀವೃದ್ಧಿ, ಯಶಸ್ಸು, ಐಶ್ವರ್ಯ, ರೋಗನಾಶನವನ್ನೂ ಅವರಿಗೆ ಯಾವ ಯಾವುದು ಇಷ್ಟವೋ ಅವೆಲ್ಲವೂ ಬೇಗನೇ ಸಿಕ್ಕುವಂತೆ ಕಲಿಯುಗದಲ್ಲಿಯೂ ಮಾಡುತ್ತೇನೆ. ಸಂಶಯವಿಲ್ಲ.

೧೦೩–೧೦೪. ಎಲೈ ಪಾರ್ವತಿಯೇ ! ಈ ಘೋರವಾದ ಕಲಿಯುಗದಲ್ಲಿ ನನ್ನ ಭಕ್ತರು ಇಲ್ಲಿಗೆ ಬಂದು ಸ್ನಾನಮಾಡಿ ದಾನಾದಿಗಳನ್ನು ಮಾಡಿದರೆ ಅವರಿಗೆ ಇಷ್ಟವಾದುವುಗಳನ್ನು ಕೊಡುತ್ತೇನೆ. ಇದು ಸತ್ಯವು. ಸಂದೇಹವೇ ಇಲ್ಲ. ಈ ಬ್ರಹ್ಮದತ್ತನು ಬ್ರಹ್ಮಚಾರಿಯೆಂಬ ಎರಡನೆಯ ಈಶ್ವರ ಲಿಂಗವನ್ನು ಅಲ್ಲಿ

ಗಂಗಾಧರಂ ಪ್ರತಿಷ್ಠಾಪ್ಯ ಉಷಿತ್ವಾ ದಿನಪಂಚಕಂ ।
ಸ ರಾಜಾ ಗತವಾಂಸ್ತತ್ರ ಸ್ವಕೇ ರಾಜ್ಯೇ ತತಃ ಪುನಃ ॥ ೧೦೫ ॥

ಬ್ರಹ್ಮದತ್ತಸ್ತು ವಿಖ್ಯಾತೋ ಲೋಕೇ ವೈ ಪರಮೋ ಮಹಾನ್ ।
ರಾಜ್ಯಂ ಚಕಾರ ಧರ್ಮಜ್ಞೋ ಹ್ಯಯುತಂ ವರ್ಷಸಂಜ್ಞಕಂ ॥ ೧೦೬ ॥

ತತೋ ವೈ ಕತಿಕಾಲಂ ಚ ರಾಜ್ಯಂ ಭುಕ್ತ್ವಾ ಸ ವೈ ಪುಮಾನ್ ।
ಗತವಾನ್ ಶಿವಲೋಕಂ ತಂ ಬ್ರಹ್ಮಾಖ್ಯಂ ಪದಮುತ್ತಮಂ ॥ ೧೦೭ ॥

ದೇವೌ ದ್ವೌ ತತ್ರ ವರ್ತೇತೇ ಮಮ ನಾಮಾಭಿಧಾಯುಕೌ ।
ಏಕೋ ವೈ ಬ್ರಹ್ಮಚಾರೀಶೋ ಹ್ಯನ್ಯೋ ಗಂಗಾಧರಃ ಸ್ಮೃತಃ ॥ ೧೦೮ ॥

ಮಮ ಸ್ಥಾನೇ ವಿಶೇಷೇಣ ಪೂಜಾಂ ಕುರ್ವಂತಿ ಯೇ ಜನಾಃ ।
ತೇಷಾಂ ಸರ್ವಂ ದದಾಮೀಹ ವಾಂಛಿತಂ ನಾತ್ರ ಸಂಶಯಃ ॥ ೧೦೯ ॥

---

ಪ್ರತಿಷ್ಠೆಮಾಡಿ ಐದು ದಿನಗಳಿದ್ದು ಊರಿಗೆ ಹೊರಟುಹೋದನು. ಮತ್ತು ರಾಜ್ಯಭಾರ ಮಾಡುತ್ತಿದ್ದನು

೧೦೬. ಅನಂತರ ಬ್ರಹ್ಮದತ್ತನು ಲೋಕದಲ್ಲಿ ಬಹು ಧರ್ಮಜ್ಞನೆಂದೂ, ಪುಣ್ಯಪುರುಷನೆಂದೂ ಪ್ರಖ್ಯಾತನಾಗಿ ಈ ರೀತಿಯಾಗಿದ್ದುಕೊಂಡು ಹತ್ತು ಸಾವಿರ ವರ್ಷಗಳವರೆವಿಗೂ ರಾಜ್ಯಭಾರವನ್ನು ಮಾಡಿದನು.

೧೦೭. ಈ ರೀತಿಯಾಗಿ ಬ್ರಹ್ಮದತ್ತನು ಬಹುಕಾಲದವರೆಗೆ ರಾಜ್ಯಭಾರವನ್ನು ಮಾಡಿ ಅನಂತರ ಶಿವಲೋಕವನ್ನು ಹೊಂದಿ ಅಲ್ಲಿ ಬ್ರಹ್ಮಪದವೆಂಬ ಉತ್ತಮಸ್ಥಾನವನ್ನು ಹೊಂದಿದನು.

೧೦೮. ಆ ಸಾಭ್ರಮತಿಯ ದಡದಲ್ಲಿ ನನ್ನ ಹೆಸರನ್ನು ಹೊಂದಿದ ಎರಡು ಮೂರ್ತಿಗಳಿವೆ. ಒಂದು ಬ್ರಹ್ಮಚಾರೀಶನು. ಮತ್ತೊಂದು ಗಂಗಾಧರನು.

೧೦೯. ಆ ವಿಗ್ರಹಗಳಿರುವ ಸ್ಥಳದಲ್ಲಿ ಯಾರು ಅತಿಶಯವಾಗಿ ಪೂಜೆಯನ್ನು ಮಾಡುವರೋ ಅವರಿಗೆ ಎಲ್ಲವನ್ನೂ ಕೊಡುತ್ತೇನೆ. ಇದರಲ್ಲಿ ಸಂಶಯವಿಲ್ಲ.

ಸ್ಥಾನಮೇವ ಸದಾ ಲಿಂಗಂ ಜ್ಞಾತವ್ಯಂ ಬುದ್ಧಿಭಿಸ್ಸದಾ ।
ತತ್ರ ಪುಷ್ಪಂ ಚ ಧೂಪಂ ಚ ನೈವೇದ್ಯಂ ವಿವಿಧಂ ತಥಾ ॥ ೧೧೦ ॥

ಯಃ ಕರೋತಿ ಮಮ ಪ್ರಾಜ್ಞಃ ಸ ಸರ್ವಂ ಲಭತೇ ಧ್ರುವಂ ।
ಬಿಲ್ವಪತ್ರೈಶ್ಚ ಪುಷ್ಪೈಶ್ಚ ತಥಾ ವಾ ಚಂದನಾದಿಭಿಃ ॥ ೧೧೧ ॥

ಪೂಜಾಂ ಕುರ್ವಂತಿ ಮತ್ಸ್ಥಾನೇ ತೇಷಾಂ ಸರ್ವಂ ದದಾಮ್ಯಹಂ ।
ಯ ಇದಂ ಶೃಣುಯಾನ್ನಿತ್ಯಂ ಬ್ರಹ್ಮಚಾರೀ ಕಥಾನಕಂ ॥ ೧೧೨ ॥

ಇಹಲೋಕೇ ಸುಖಂ ಪ್ರಾಪ್ಯ ವ್ರಜತೇ ಶಿವಸನ್ನಿಧೌ ।
ಯತ್ರ ಗಂಗಾಧರೋ ದೇವೋ ನಿತ್ಯಂ ತಿಷ್ಠತಿ ಭೂತಿದಃ ॥ ೧೧೩ ॥

ಬ್ರಹ್ಮಚಾರೀಶಸಂಜ್ಞಸ್ತು ದ್ವಿತೀಯೋ ವರ್ತತೇ ಸದಾ ।
ತಾಭ್ಯಾಂ ಜ್ಞಾನಸಮಾಯೋಗಾತ್ ಶಿವತ್ವಮಶ್ನುತೇ ಧ್ರುವಂ ॥ ೧೧೪ ॥

ದರ್ಶನಾನ್ನಶ್ಯತೇ ರೋಗಃ ಪೂಜಾನಾದಾಯುರಾಪ್ನುಯಾತ್ ।
ಸ್ನಾನಾತ್ತತ್ರ ತು ದೇವೇಶಿ ಮುಕ್ತಿಭಾಗೀ ನ ಸಂಶಯಃ ॥ ೧೧೫ ॥

---

೧೧೦–೧೧೪. ಅಲ್ಲಿರುವ ನನ್ನ ಲಿಂಗಮೂರ್ತಿಯನ್ನು ಬುದ್ಧಿವಂತರಾದವರು ತಿಳಿದುಕೊಳ್ಳಬೇಕು. ಆ ಸ್ಥಾನವೇ ಲಿಂಗವು. ಹಾಗೆ ತಿಳಿದು ಅದರ ದರ್ಶನವನ್ನು ಮಾಡಿ ಅದಕ್ಕೆ ಧೂಪ ದೀಪ ನೈವೇದ್ಯಗಳನ್ನು ಮಾಡಿದರೆ ಅವನಿಗೆ ಬೇಕಾದುದೆಲ್ಲವೂ ಲಭಿಸುತ್ತವೆ. ಸಂದೇಹವೇ ಇರುವುದಿಲ್ಲ. ಬಿಲ್ವಪತ್ರೆ, ಹುವ್ವು, ಚಂದನ ಮುಂತಾದುವುಗಳಿಂದ ನನಗೆ ಯಾರು ಪೂಜೆಯನ್ನು ಮಾಡುತ್ತಾರೆಯೋ ಅವರಿಗೆ ಎಲ್ಲವನ್ನೂ ಕೊಡುತ್ತೇನೆ. ಈ ಬ್ರಹ್ಮಚಾರಿಯ ಕಥೆಯನ್ನು ಯಾವನು ನಿತ್ಯವೂ ಕೇಳುತ್ತಾನೆಯೋ ಅವನು ಈ ಲೋಕದಲ್ಲಿ ಸುಖವನ್ನು ಹೊಂದಿ ದೇಹವನ್ನು ಬಿಟ್ಟಮೇಲೆ ಶಿವನ ಸನ್ನಿಧಿಗೆ ಹೋಗುತ್ತಾನೆ. ಯಾವಜಾಗದಲ್ಲಿ ಸಂಪತ್ತನ್ನು ಕೊಡತಕ್ಕ ಗಂಗಾಧರೇಶ್ವರನೂ ಬ್ರಹ್ಮಚಾರೀಶ್ವರನೂ ಇರುತ್ತಾರೆಯೋ ಅವರ ಬಳಿಗೆ ಹೋಗಿ ಅವರನ್ನು ಸೇವಿಸಿ ಅವರ ವಿಷಯವನ್ನು ತಿಳಿದುಕೊಂಡರೆ ಶಿವತತ್ವವನ್ನು ತಿಳಿದಂತೆ ಆಗುತ್ತದೆ.

೧೧೫. ಆ ದೇವರುಗಳನ್ನು ನೋಡುವುದರಿಂದ ರೋಗವು ಹೋಗುತ್ತದೆ. ಪೂಜಿಸುವುದರಿಂದ ಆಯುಸ್ಸು ಹೆಚ್ಚುತ್ತದೆ. ಅಲ್ಲಿ ಸ್ನಾನಮಾಡುವುದರಿಂದ ಮುಕ್ತಿಯನ್ನು ಹೊಂದುವುದರಲ್ಲಿ ಏನೇನೂ ಸಂಶಯವಿಲ್ಲ.

ಶೃಣು ಸುಂದರಿ ವಕ್ಷ್ಯಾಮಿ ತೀರ್ಥಂ ಪರಮುಮುದ್ಭುತಂ ।
ರಾಜಖಡ್ಗ ಇತಿ ಖ್ಯಾತಂ ಸಾಭ್ರಮತ್ಯಾಂ ವಿಶೇಷತಃ ॥ ೧೧೬ ॥

ಸೂರ್ಯವಂಶಸಮುತ್ಪನ್ನೋ ರಾಜಾ ವೈಕರ್ತನಸ್ತಥಾ ।
ದುರಾಚಾರೀ ತು ಪಾಪಾತ್ಮಾ ಬ್ರಾಹ್ಮಣಾನಾಂ ಚ ನಿಂದಕಃ ॥ ೧೧೭ ॥

ಗುರುದ್ರೋಹೀ ಸದಾತುಷ್ಟೋ ನಿಂದಕಸ್ಸರ್ವಕರ್ಮಣಾಂ ।
ಪರದಾರರತೋ ನಿತ್ಯಂ ನಿತ್ಯಂ ವಿಷ್ಣುಪ್ರದೂಷಕಃ ॥ ೧೧೮ ॥

ಪ್ರಜಾಪೀಡನಕಂ ನಿತ್ಯಂ ಕರೋತಿ ಬಹುಘಾತಕಃ ।
ಏವಂವಿಧಃ ಸ ದುಷ್ಟಾತ್ಮಾ ಪೃಥಿವ್ಯಾಂ ವರ್ತತೇ ಸದಾ ॥ ೧೧೯ ॥

ಕತಿಚಿಚ್ಚ ಗತೇ ಕಾಲೇ ಶೃಣು ಸುಂದರಿ ತತ್ವತಃ ।
ಪಾಪೇನ ದೈವಯೋಗಾಚ್ಚ ಕುಷ್ಠಿತ್ವಂ ಸಮುಜಾಯತ ॥ ೧೨೦ ॥

ನಿರೀಕ್ಷ್ಯ ಸ್ವಶರೀರಂ ತು ವಿಚಾರ್ಯ ಚ ಪುನಃ ಪುನಃ ।
ಕಿಂ ಕರ್ತವ್ಯಮಿತಿ ಧ್ಯಾಯನ್ನಿತಿಚಿಂತಾಪರೋಭವತ್ ॥ ೧೨೧ ॥

---

೧೧೬. ಎಲೈ ಸುಂದರಿಯೇ ! ಆ ಸಾಭ್ರಮತಿ ನದಿಯಲ್ಲಿ ರಾಜಖಡ್ಗವೆಂಬ ಮತ್ತೊಂದು ಉತ್ತಮವಾದ ತೀರ್ಥವಿದೆ. ಅದರ ವಿಷಯವನ್ನು ಹೇಳುತ್ತೇನೆ. ಕೇಳು.

೧೧೭-೧೧೯. ಸೂರ್ಯವಂಶದಲ್ಲಿ ಹುಟ್ಟಿದ ವೈಕರ್ತನನೆಂಬ ರಾಜನಿದ್ದನು. ಅವನು ದುರಾಚಾರಿಯು ಪಾಪಿಯು. ಬ್ರಾಹ್ಮಣರನ್ನು ನಿಂದಿಸುತ್ತಿದ್ದನು. ಗುರುದ್ರೋಹಿಯು. ತೃಪ್ತಿಯೆಂಬುದೇ ಅವನಿಗಿರಲಿಲ್ಲ. ಒಳ್ಳೆಯ ಕೆಲಸಗಳನ್ನೆಲ್ಲಾ ನಿಂದಿಸುತ್ತಿದ್ದನು. ಪರರ ಹೆಂಡಿರಲ್ಲಿಯೇ ಆಸೆಯುಳ್ಳವನು. ವಿಷ್ಣುವನ್ನು ಯಾವಾಗಲೂ ನಿಂದಿಸುತ್ತಿದ್ದನು. ಬಹುಜನರನ್ನು ಕೊಲ್ಲುತ್ತ ಪ್ರಜೆಗಳನ್ನೆಲ್ಲಾ ಪೀಡಿಸುತ್ತಿದ್ದನು ಈ ರೀತಿಯಾಗಿ ಆ ರಾಜನು ದುಷ್ಟನಾಗಿ ಇದ್ದುಕೊಂಡಿದ್ದನು.

೧೨೦. ಎಲೈ ಸುಂದರಿಯೆ ! ಹೀಗೆ ಕೆಲವು ದಿನಗಳು ಕಳೆಯಲು ಆ ಪಾಪದದೆಸೆಯಿಂದಲೂ ಅದೃಷ್ಟದ ವೈಪರೀತ್ಯದಿಂದಲೂ ಅವನಿಗೆ ಕುಷ್ಠರೋಗವು ಬಂದಿತು.

೧೨೧. ಆಗ ಅವನು ತನ್ನ ಮೈಯ್ಯನ್ನು ನೋಡಿಕೊಂಡು ಆಗಾಗ್ಗೆ ಯೋಚಿಸುತ್ತ ಚರ್ಚಿಸುತ್ತ ಏನು ಮಾಡಬೇಕೆಂಬುದಾಗಿ ಚಿಂತಿಸುತ್ತಿದ್ದನು.

ಕದಾಚಿದ್ದೈವಯೋಗಾಚ್ಚ ಕ್ರೀಡಾರ್ಥಂ ಗತವಾನ್ವನೇ ।
ತತ್ರ ಸಾಭ್ರಮತೀ ತೀರಂ ಸಮಾಸಾದ್ಯ ಸ ತಿಷ್ಠತಿ ॥ ೧೨೨ ॥

ತತ್ರ ಸ್ನಾನಂ ಕೃತಂ ತೇನ ಪೀತಂ ಪಾನೀಯಮುತ್ತಮಂ ।
ತೇನೋದಕೇನ ಸಂಜಾತಂ ಶರೀರಂ ದಿವ್ಯಸಂಜ್ಞಿಕಂ ॥ ೧೨೩ ॥

ಯಥಾ ಸ್ವರ್ಣಮಯೀ ಮೂರ್ತಿರ್ದೃಶ್ಯತೇ ನಗನಂದಿನಿ ।
ತದ್ವದೇವ ತು ಸಂಜಾತಃ ಸ ರಾಜಾ ನಾತ್ರ ಸಂಶಯಃ ॥ ೧೨೪ ॥

ದಿವ್ಯರೂಪಮನುಪ್ರಾಪ್ಯ ಕಿಯತ್ಕಾಲಂ ತತೋ ನೃಪಃ ।
ರಾಜ್ಯಂ ಭುಕ್ತ್ವಾ ತು ದೇವೇಶಿ ಗತೋ ವೈ ಪರಮಂ ಪದಂ ॥ ೧೨೫ ॥

ತದಾ ತೀರ್ಥಮಿದಂ ಜಾತಂ ರಾಜಖಡ್ಗೇತಿಸಂಜ್ಞಕಂ ।
ಅತ್ರ ಸ್ನಾನಂ ಪ್ರಕುರ್ವಂತಿ ದಾನಂ ಯೇ ವೈ ದದಂತಿ ಚ ॥ ೧೨೬ ॥

---

೧೨೨. ಒಂದು ಸಾರಿ ತನ್ನ ಪುಣ್ಯಯೋಗದ ದೆಸೆಯಿಂದ ಕಾಡಿಗೆ ಬೇಟೆಗೋಸ್ಕರ ಹೋದನು. ಹೋದವನು ಅಲ್ಲಿ ಸಾಭ್ರಮತಿಯ ದಡದಲ್ಲಿ ನಿಸ್ತ್ರಮಿಸಿಕೊಳ್ಳಲು ಇಳಿದುಕೊಂಡನು.

೧೨೩–೧೨೪. ಆ ರಾಜನು ಅಲ್ಲಿ ಸ್ನಾನಮಾಡಿದನು. ಮತ್ತು ಅದರ ನೀರನ್ನು ಕುಡಿದನು. ಆ ನೀರಿನ ಸಂಬಂಧದಿಂದ ಅವನ ದೇಹವು ಉತ್ತಮವಾದುದಾಯಿತು. ಆ ರೋಗವೆಲ್ಲವೂ ಹೋಗಿ ಚಿನ್ನದ ಮೂರ್ತಿಯನ್ನು ನೋಡಿದರೆ ಹೇಗಿರುವುದೋ ಅದರಂತೆ ಆತನ ದೇಹವೆಲ್ಲವೂ ಕಾಣುತ್ತ ಬಂದಿತು. ಇದು ನಿಶ್ಚಯವು. ಆ ರಾಜನು ಈರೀತಿಯಾಗಿ ಶುದ್ಧನಾದನು.

೧೨೫. ಈ ರೀತಿಯಾಗಿ ದಿವ್ಯದೇಹವನ್ನು ಹೊಂದಿ ಕೆಲವುಕಾಲ ಸುಖವಾಗಿದ್ದು ರಾಜ್ಯಭಾರವನ್ನು ಮಾಡುತ್ತ ಅನಂತರ ಮುಕ್ತಿಯನ್ನು ಹೊಂದಿದನು.

೧೨೬–೧೨೭. ಅವಾಗ ಈ ತೀರ್ಥಕ್ಕೆ ರಾಜಖಡ್ಗವೆಂದು ಹೆಸರಾಯಿತು. ಇಲ್ಲಿ ಸ್ನಾನಮಾಡಿ ದಾನಮಾಡಿದವರು ಈ ಲೋಕದಲ್ಲಿ ಸುಖವನ್ನು ಅನುಭವಿಸಿ

ಇಹ ಲೋಕೇ ಸುಖಂ ಭುಕ್ತ್ವಾ ಯಾನ್ತಿ ವಿಷ್ಣೋಸ್ಸನಾತನಂ ।
ನ ರೋಗೋ ವರ್ತತೇ ತೇಷಾಂ ನ ಶೋಕಶ್ಚ ಕದಾಚನ ॥ ೧೨೭ ॥

ಪ್ರತ್ಯಹಂ ಕುರುತೇ ಸ್ನಾನಂ ಖಡ್ಗೇಸ್ಮಿನ್ರಾಜಸಂಜ್ಞಕೇ ।
ಯೋ ನರಃ ಪ್ರಾಪ್ನುಯಾತ್ಸ್ವರ್ಗಂ ಬ್ರಹ್ಮಾದ್ಯೈಸ್ಸ ಚ ಪೂಜ್ಯತೇ॥ ೧೨೮ ॥

ಕೃತೇ ಸತ್ಯೇಶ್ವರೋ ನಾಮ ತ್ರೇತಾಯಾಂ ಭುವನೇಶ್ವರಃ ।
ರಾಜೇಶ್ವರಸ್ಸಮಾಖ್ಯಾತೋ ದ್ವಾಪರೇ ನಗನಂದಿನಿ ॥ ೧೨೯ ॥

ಅಸ್ಮಿನ್ಕಲಿಯುಗೇ ಘೋರೇ ಗುಪ್ತೀಭೂತೋಥ ವಿಶ್ವರಾಟ್ ।
ಅತೋ ವೈ ತೀರ್ಥಂ ಸಂಭೂತಂ ರಾಜಖಡ್ಗೇತಿಸಂಜ್ಞಕಂ ॥ ೧೩೦ ॥

ಪಿತೄಣಾಂ ತರ್ಪಣಂ ಚಾತ್ರ ಶ್ರದ್ಧಯಾ ಯೋ ಪ್ರಕುರ್ವತೇ ।
ತೇ ನರಾಃ ಪುಣ್ಯಕರ್ಮಾಣಃ ಪೃಥಿವ್ಯಾಂ ಪರಿಕೀರ್ತಿತಾಃ ॥ ೧೩೧ ॥

---

ವಿಷ್ಣುಪದವನ್ನು ದೇಹತ್ಯಾಗಾನಂತರ ಹೊಂದುತ್ತಾರೆ. ಅವರಿಗೆ ರೋಗವಾಗಲಿ ದುಃಖವಾಗಲೀ ಖಂಡಿತವಾಗಿಯೂ ಬರುವುದಿಲ್ಲ.

೧೨೮. ಈ ರಾಜಖಡ್ಗದಲ್ಲಿ ಪ್ರತಿದಿನವೂ ಸ್ನಾನಮಾಡಿದವರು ಸ್ವರ್ಗವನ್ನು ಹೊಂದುವರಲ್ಲದೆ ಬ್ರಹ್ಮಾದಿಗಳಿಂದಲೂ ಪೂಜಿಸಲ್ಪಡುತ್ತಾರೆ.

೧೨೯–೧೩೦. ಈ ರಾಜಖಡ್ಗದಲ್ಲಿರುವ ಶಿವಮೂರ್ತಿಗೆ ಕೃತಯುಗದಲ್ಲಿ ಸತ್ಯೇಶ್ವರನೆಂದೂ ತ್ರೇತೆಯಲ್ಲಿ ಭುವನೇಶ್ವರನೆಂದೂ ದ್ವಾಪರದಲ್ಲಿ ರಾಜೇಶ್ವರನೆಂದೂ ಹೆಸರು ಬಂದಿರುವುದು. ಈ ಘೋರವಾದ ಕಲಿಯುಗದಲ್ಲಿ ಆ ಈಶ್ವರನು ಕಣ್ಣಿಗೆ ಕಾಣದಂತೆ ಮರೆಯಾಗಿರುವನು. ಈ ರೀತಿಯಾಗಿ ಈ ತೀರ್ಥಕ್ಕೆ ರಾಜಖಡ್ಗವೆಂದು ಹೆಸರು ಬಂದಿರುವುದು.

೧೩೧. ಈ ಜಾಗದಲ್ಲಿ ಪಿತೃಗಳಿಗೆ ತರ್ಪಣವನ್ನು ಯಾರು ಶ್ರದ್ಧೆಯಿಂದ ಮಾಡುತ್ತಾರೆಯೋ ಅವರೇ ಪುಣ್ಯ ಕರ್ಮವುಳ್ಳವರೆಂದು ಲೋಕದಲ್ಲಿ ಹೆಸರನ್ನು ಪಡೆಯುತ್ತಾರೆ.

ಬ್ರಹ್ಮಘ್ನಾ ಬಾಲಹಂತಾರಃ ಸ್ನಾನಂ ಯೇತ್ರ ಪ್ರಕುರ್ವತೇ ।
ತೈರ್ದೋಷೈರಹಿತಾಸ್ತೇ ಚ ಗಚ್ಛಂತಿ ಶಿವಸನ್ನಿಧೌ ॥ ೧೩೨ ॥

ನೀಲೋತ್ಸರ್ಗಂ ಕರಿಷ್ಯಂತಿ ಸಾಭ್ರಮತ್ಯಾಂ ನರಾಶ್ಚ ಯೇ ।
ತೇಷಾನ್ತು ಪಿತರಸ್ತೃಪ್ತಾ ಯಾವದಾಭೂತಸಂಪ್ಲವಂ ॥ ೧೩೩ ॥

ಇದಮಾಖ್ಯಾನಕಂ ದಿವ್ಯಂ ರಾಜಖಡ್ಗೇತಿಸಂಜ್ಞಕಂ ।
ಯೇ ಶೃಣ್ವಂತಿ ನರಾ ದೇವಿ ನ ತೇಷಾಂ ವಿದ್ಯತೇ ಭಯಂ ॥
ರೋಗದೋಷಾ ವಿನಶ್ಯಂತೇ ಶ್ರವಣಾತ್ಪಠನಾತ್ತತಃ ॥ ೧೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯ ಕಥನಂ ನಾಮ ಏಕತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೩೨. ಬ್ರಹ್ಮಹತ್ಯೆ ಮಾಡಿರಲಿ ಭ್ರೂಣಹತ್ಯೆ ಮಾಡಿರಲಿ ಈ ರಾಜಖಡ್ಗ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಆ ಪಾಪಗಳೆಲ್ಲವೂ ಹೋಗಿ ಅವರು ಶಿವನ ಸನ್ನಿಧಿಯನ್ನು ಹೊಂದುತ್ತಾರೆ.

೧೩೩ ನೀಲವೆಂಬ ವೃಷೋತ್ಸರ್ಗವನ್ನು ಈ ಸಾಭ್ರಮತಿಯ ರಾಜಖಡ್ಗ ತೀರ್ಥದಲ್ಲಿ ಮಾಡಿದರೆ ಅವರ ಪಿತೃಗಳು ಪ್ರಪಂಚವಿರುವವರೆವಿಗೂ ತೃಪ್ತರಾಗಿರುತ್ತಾರೆ.

೧೩೪. ಈ ರಾಜಖಡ್ಗದ ತೀರ್ಥದ ಕಥೆಯನ್ನು ಯಾರು ಕೇಳುತ್ತಾರೆಯೋ ಅವರಿಗೆ ಯಾವ ಭಯವೂ ಇರುವುದಿಲ್ಲ. ಎಲ್ಲಾ ರೋಗಗಳೂ ಪಾಪಗಳೂ ಇದನ್ನು ಕೇಳುವುದರಿಂದಲೂ ಓದುವುದರಿಂದಲೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮ ಕಥನ ಎಂಬ ನೂರ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾತ್ರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಪಾರ್ವತ್ಯುವಾಚ ॥

ಸಾಭ್ರಮತ್ಯಪಿ ಯಾನ್ದೇಶಾನ್ನಂದಿಕುಂಡಾದ್ವಿನಿಸ್ಸೃತಾ ।
ಗಚ್ಛಂತೀ ಪಾವಯಾಮಾಸ ತಾಂಸ್ತಾನ್ದೇಶಾನ್ವದಸ್ವ ನಃ ॥
ಚಕಾರ ಕಾನಿ ತೀರ್ಥಾನಿ ವಿಲಂಘ್ಯಾರ್ಬುದಪರ್ವತಂ ॥ ೧ ॥

॥ ಸೂತ ಉವಾಚ ॥

ಇತಿ ಸನ್ನೋದಿತೋ ದೇವ್ಯಾ ಮಹೇಶಃ ಕಿಲ ವಿಶ್ವರಾಟ್ ।
ಉವಾಚ ವಚನಂ ತಾಂ ವೈ ಪಾರ್ವತೀಂ ವಿಶ್ವಮೋಹಿನೀಂ ॥ ೨ ॥

---

## ನೂರ ಮೂವತ್ತೆರಡನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು—ಸಾಭ್ರಮತಿ ನದಿಯು ಅರ್ಬುತ ಪರ್ವತದಲ್ಲಿ ಇರುವ ನಂದಿಕುಂಡದಿಂದ ಹೊರಟು ಯಾವ ಯಾವ ಪ್ರದೇಶಗಳಿಗೆ ಹೋಯಿತು? ಮತ್ತು ಯಾವ ಪ್ರದೇಶಗಳನ್ನು ಪವಿತ್ರವನ್ನಾಗಿ ಮಾಡಿತು? ಅಲ್ಲಿ ಯಾವ ಯಾವ ತೀರ್ಥಗಳು ಉಂಟಾದುವು? ಹೇಳು.

೨. ಸೂತನು ಹೇಳಿದನು—ದೇವಿಯು ಹೀಗೆ ಕೇಳಲು ಪ್ರಪಂಚಾಧಿಪತಿಯಾದ ಮಹೇಶ್ವರನು ಆ ವಿಶ್ವಮೋಹಿನಿಯಾದ ಪಾರ್ವತಿಯನ್ನು ಕುರಿತು ಇಂತೆಂದನು.

|| ಮಹಾದೇವ ಉವಾಚ ||

ನಂದಿಕುಂಡಾತ್ಪ್ರಥಮತಸ್ತೀರ್ಥಾತ್ಪರಮಪಾವನಂ ।
ಕಪಾಲಮೋಚನಂ ತೀರ್ಥಂ ಮುನಿಭಿಸ್ಸಂಪ್ರಕಾರಿತಂ || ೩ ||

ಸರ್ವತೇಜೋಧಿಕಂ ತೀರ್ಥಂ ಪಾವನಾತ್ಪಾವನಂ ಪರಂ ।
ಅತ್ರ ಮಯಾ ಪರಿತ್ಯಕ್ತಂ ಕಪಾಲಂ ಬ್ರಹ್ಮಸಂಜ್ಞಕಂ || ೪ ||

ಕಪಾಲಮೋಚನಂ ತೀರ್ಥಂ ಮತ್ತೋ ಜಾತಂ ಹಿ ಪಾರ್ವತಿ ।
ಪಾವನಂ ಸರ್ವಭೂತಾನಂ ಪ್ರಕಟಂ ಲೋಕವಿಶ್ರುತಂ || ೫ ||

ಕಪಾಲಕುಂಡಮಾಖ್ಯಾತಂ ತತ್ತೀರ್ಥಂ ತೀರ್ಥರಾಜಕಂ ।
ಯತ್ರ ದೇವಾಸ್ತಥಾ ನಾಗಾ ಗಂಧರ್ವಾಃ ಕಿನ್ನರಾದಯಃ || ೬ ||

ನಿವಸಂತಿ ಮಹಾತ್ಮಾನಃ ತತ್ತೀರ್ಥೇ ನಿರ್ಮಲೇ ಶುಭೇ ।
ತ್ರೈಲೋಕ್ಯವಿಶ್ರುತಂ ತೀರ್ಥಂ ಜ್ಞಾನದಂ ಮುಕ್ತಿದಾಯಕಂ || ೭ ||

ತತ್ರ ಸ್ನಾತ್ವಾ ಶುಚಿರ್ಭೂತ್ವಾ ಕಪಾಲೇ ಮಾಂ ಪ್ರಪೂಜಯೇತ್ ।
ಉಪೋಷ್ಯ ರಜನೀಮೇಕಾಂ ಕೃತ್ವಾ ಬ್ರಾಹ್ಮಣಭೋಜನಂ || ೮ ||

ತತ್ರಾಪಿ ವಸ್ತ್ರದಾನೇನ ಸೋಽಗ್ನಿಹೋತ್ರಫಲಂ ಲಭೇತ್ ।
ತಸ್ಮಿಂಸ್ತೀರ್ಥೇ ತು ಯಃ ಕಶ್ಚಿದ್ದರ್ಶನವ್ರತಮಾಸ್ಥಿತಃ || ೯ ||

---

೩-೧೨. ಶ್ರೀ ಮಹಾದೇವನು ಹೇಳಿದನು-ನಂದಿಕುಂಡದಿಂದ ಹೊರಟೊಡನೆಯೇ ಕಪಾಲಮೋಚನವೆಂಬ ತೀರ್ಥವು ಆಗಿರುತ್ತದೆ. ಇದನ್ನು ಮುನಿಗಳೇ ಮಾಡಿರುವರು. ಈ ಕಪಾಲಮೋಚನ ತೀರ್ಥವು ಬಹು ಪವಿತ್ರವಾದುದು. ಇಲ್ಲಿಯೇ ನಾನು ಬ್ರಹ್ಮಕಪಾಲದಿಂದ ಮುಕ್ತನಾದುದು ಈ ಕಪಾಲಮೋಚನ ತೀರ್ಥವು ನನ್ನಿಂದಲೇ ಹುಟ್ಟಿತು. ಇದು ಎಲ್ಲಾ ಪ್ರಾಣಿಗಳಿಗೂ ಪವಿತ್ರವಾದುದು. ಲೋಕ ಪ್ರಸಿದ್ಧಿಯಾಗಿದೆ. ಕಪಾಲಕುಂಡಲವೆಂಬ ಮತ್ತೊಂದು ತೀರ್ಥವು ಅದರ ಮುಂದೆ ಇರುವುದು. ಅಲ್ಲಿ ದೇವತೆಗಳೂ, ನಾಗರೂ, ಗಂಧರ್ವರೂ, ಕಿನ್ನರರೂ ಇನ್ನೂ ಅನೇಕ ಜನ ಮಹಿಮರೂ ವಾಸಮಾಡುತ್ತಾರೆ. ಈ ತೀರ್ಥವು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಜ್ಞಾನವನ್ನೂ, ಮುಕ್ತಿಯನ್ನೂ ಕೊಡುತ್ತದೆ ಅಲ್ಲಿ ಸ್ನಾನಮಾಡಿ ಶುಚಿಯಾಗಿ ಆ ಕಪಾಲ ತೀರ್ಥದಲ್ಲಿ ನನ್ನನ್ನು ಪೂಜಿಸಬೇಕು. ಆ ರಾತ್ರಿ ಉಪವಾಸವಿದ್ದು ಮಾರನೆಯ ದಿವಸ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ವಸ್ತ್ರದಾನಮಾಡಿದವನು ಅಗ್ನಿ ಹೋತ್ರ ಫಲವನ್ನು ಹೊಂದುತ್ತಾನೆ. ಆ ತೀರ್ಥದಲ್ಲಿ ದರ್ಶನ ವ್ರತವನ್ನು ಆಶ್ರಯಿಸಿದವನು

ಸ ತ್ಯಕ್ತ್ವಾ ದೇಹಮಾತ್ಮೀಯಂ ಶಿವಲೋಕಂ ವ್ರಜೇದ್ಧ್ರುವಂ ।
ಅಸ್ಮಿಂಸ್ತೀರ್ಥೇ ಪುರಾ ಸ್ನಾನಾತ್ಸೌದಾಸೋ ಬ್ರಹ್ಮಹತ್ಯಯಾ ॥ ೧೦ ॥

ಮೋಚಿತೋ ವಿಮಲಂ ಜ್ಞಾನಂ ಪ್ರಾಪ್ತವಾನ್ ವೈ ಸುರೇಶ್ವರಿ ।
ಭಗೀರಥಾನ್ವಯೇ ಜಾತಃ ಸುದಾಸಾಖ್ಯೋ ಮಹಾಬಲಃ ॥ ೧೧ ॥

ತಸ್ಯ ಪುತ್ರೋ ಮಿತ್ರಸಹಃ ಸೌದಾಸ ಇತಿ ವಿಶ್ರುತಃ ।
ವಸಿಷ್ಠಶಾಪತಃ ಪ್ರಾಪ್ತೋ ಸೌದಾಸೋ ರಾಕ್ಷಸೀಂ ತನುಂ ॥ ೧೨ ॥

ಸಾಭ್ರಮತ್ಯಾಂ ಕೃತಸ್ನಾನೋ ವಿಮುಕ್ತಶ್ಶಾಪಜಾದಘಾತ್ ।
ಅತ್ರ ಗಂಗಾ ಚ ಯಮುನಾ ಗೋದಾವರೀ ಸರಸ್ವತೀ ॥ ೧೩ ॥

ನಂದಿತೀರ್ಥೇ ವಸಂತ್ಯೇತಾಃ ಪವಿತ್ರಾಃ ಪುಣ್ಯದಾಸ್ಸದಾ ।
ಗೋದಾನಂ ಭೂಮಿದಾನಂ ಚ ಪೃಥ್ವೀದಾನಂ ತಥೈವ ಚ ॥ ೧೪ ॥

ಕನ್ಯಾದಾನಂ ವಿಶೇಷೇಣ ಕರ್ತವ್ಯಂ ಜ್ಞಾನಿಭಿಃ ನರೈಃ ।
ಏತದ್ದಾನಸಮಂ ಪ್ರೋಕ್ತಂ ಸಾಭ್ರಮತ್ಯವಗಾಹನಂ ॥ ೧೫ ॥

---

ದೇಹವನ್ನು ಬಿಟ್ಟು ಆಮೇಲೆ ಶಿವಲೋಕವನ್ನೇ ಹೊಂದುತ್ತಾನೆ. ಈ ತೀರ್ಥದಲ್ಲಿ ಸ್ನಾನಮಾಡಿದುದರಿಂದ ಸುದಾಸನೆಂಬ ರಾಜನು ಪೂರ್ವದಲ್ಲಿ ಬ್ರಹ್ಮಹತ್ಯೆಯ ಪಾಪವನ್ನು ಕಳೆದುಕೊಂಡನು. ಮತ್ತು ಉತ್ತಮವಾದ ಜ್ಞಾನವನ್ನೂ ಹೊಂದಿದನು. ಭಗೀರಥನ ವಂಶದಲ್ಲಿ ಸುದಾಸನೆಂಬವನೊಬ್ಬನು ಶೂರನು ಹುಟ್ಟಿದ್ದನು. ಅವನ ಮಗನೇ ಸೌದಸನು. ಅವನು ವಶಿಷ್ಠನ ಶಾಪದಿಂದ ರಾಕ್ಷಸನಾದನು.

೧೩-೧೫. ಅವನು ಈ ಸಾಭ್ರಮತಿ ನದಿಯಲ್ಲಿ ಸ್ನಾನಮಾಡಿ ಆ ಶಾಪದಿಂದ ಬಿಡುಗಡೆಯನ್ನು ಹೊಂದಿದನು. ಇಲ್ಲಿಯೇ ಗಂಗೆ, ಯಮುನೆ, ಗೋದಾವರಿ, ಸರಸ್ವತಿಗಳು ಬಂದು ವಾಸಮಾಡುತ್ತವೆ. ಈ ಈಶ್ವರ ತೀರ್ಥವು ಪವಿತ್ರವೂ ಪುಣ್ಯಕರವೂ ಆದುದು. ಗೋದಾನ, ಭೂದಾನ, ಕನ್ಯಾದಾನಗಳನ್ನು ಮಾಡಬೇಕೆಂದು ಜ್ಞಾನಿಗಳಾದ ಋಷಿಗಳು ಹೇಳಿದ್ದಾರೆ ಆ ದಾನಗಳನ್ನು ಮಾಡಿದವನ ಫಲದಷ್ಟು ಫಲವನ್ನು ಈ ಸಾಭ್ರಮತಿಯಲ್ಲಿ ಸ್ನಾನವನ್ನು ಮಾಡುವುದರಿಂದ ಹೊಂದುತ್ತಾನೆ.

ಯತ್ರ ವೈ ಸಕಲಾನ್ಯೇವ ಪತಿತಾನೀಹ ಭೂತಲೇ ।
ವಾರಿಣಾ ಸ್ಪರ್ಶಮಾತ್ರೇಣ ಶುದ್ಧತ್ವಂ ಯಾನ್ತಿ ತಾನ್ಯಪಿ ॥ ೧೬ ॥

ಅತ್ರ ಶ್ರಾದ್ಧಂ ಪ್ರಕುರ್ವಾಣೋ ನರೋ ವೈ ಭಕ್ತಿತತ್ಪರಃ ।
ಪಿತರಸ್ತಸ್ಯ ಸಂತುಷ್ಟಾ ಗಚ್ಛಂತಿ ಪರಮಂ ಪದಂ ॥ ೧೭ ॥

ಏತದಾಖ್ಯಾನಕಂ ದಿವ್ಯಂ ಯೇ ಶೃಣ್ವಂತಿ ನರಾಸ್ಸದಾ ।
ಸರ್ವಪಾಪವಿನಿರ್ಮುಕ್ತಾ ವಿಷ್ಣೋಸ್ಸಾಯುಜ್ಯಮಾಪ್ನುಯುಃ ॥ ೧೮ ॥

ಕರ್ಮಣಾ ಮನಸಾ ವಾಚಾ ಯೇ ಸ್ತುವಂತಿ ಮಹೇಶ್ವರಂ ।
ನ ತೇಷಾಂ ವಿದ್ಯತೇ ದುಃಖಂ ಯಾವದಾಭೂತಸಂಪ್ಲವಂ ॥ ೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ
ಸಂವಾದೇ ನಂದೀ ತೀರ್ಥ ಕಥನಂ ನಾಮ
ದ್ವಾತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೬. ಈ ಪ್ರಪಂಚದಲ್ಲಿ ಅಯೋಗ್ಯವಾದ ಕೆಲಸವನ್ನು ಮಾಡಿ ಪತಿತ ರೆಂದು ಪಾಪಿಗಳಾಗಿರುವವರು ಯಾರಿರುವರೋ ಅವರು ಈ ಸಾಭ್ರಮತಿಯ ನೀರನ್ನು ಮುಟ್ಟಿದಮಾತ್ರದಿಂದಲೇ ಶುದ್ಧರಾಗುತ್ತಾರೆ.

೧೭. ಈ ಸ್ಥಳದಲ್ಲಿ ಭಕ್ತಿಯಿಂದ ಶ್ರಾದ್ಧಮಾಡಿದ ಮನುಷ್ಯನ ಪಿತೃಗಳು ತೃಪ್ತರಾಗಿ ಮುಕ್ತಿಯನ್ನು ಹೊಂದುತ್ತಾರೆ.

೧೮. ಈ ಉತ್ತಮವಾದ ಕಥೆಯನ್ನು ಕೇಳಿದವರು ತಮ್ಮ ಪಾಪಗಳ ನ್ನೆಲ್ಲಾ ಕಳೆದುಕೊಂಡು ವಿಷ್ಣುವಿನ ಸಾಯುಜ್ಯವನ್ನು ಹೊಂದುತ್ತಾರೆ.

೧೯. ಮನೋವಾಕ್ಕಾಯ ಕರ್ಮಗಳಿಂದ ಯಾರು ಮಹೇಶ್ವರನನ್ನು ಸ್ತುತಿಸುವರೋ ಅವರಿಗೆ ಈ ಪ್ರಪಂಚವಿರುವವರೆಗೂ ದುಃಖವಿರುವುದಿಲ್ಲ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ನಂದೀ ತೀರ್ಥ ಕಥನ ಎಂಬ
ನೂರ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಅಥ ಮುನ್ಯುಪದೇಶೇನ ಯಥಾ ಸಾಭ್ರಮತೀ ನದೀ ।**
**ಸಮಾಯಾತಾ ವಿಕೀರ್ಣಂ ಚ ವನಂ ವಿಪ್ರರ್ಷಿಸೇವಿತಂ ॥ ೧ ॥**

**ಬಹುಧಾ ಜಲವೇಗೇನ ಪರ್ವತಾನಾಂ ಚ ರೋಧತಃ ।**
**ಸಪ್ತಧಾ ಪ್ರವಿಭಕ್ತಾ ಸಾ ದಕ್ಷಿಣೋದಧಿಗಾಮಿನೀ ॥ ೨ ॥**

**ಆದ್ಯಾ ಸಾಭ್ರಮತೀ ಪುಣ್ಯಾ ದ್ವಿತೀಯಾ ಶ್ವೇತಕಾ ತಥಾ ।**
**ತೃತೀಯಾ ವಕುಳಾ ಪುಣ್ಯಾ ಚತುರ್ಥೀ ಚ ಹಿರಣ್ಮಯೀ ॥ ೩ ॥**

---

### ನೂರ ಮೂವತ್ತಮೂರನೆಯ ಅಧ್ಯಾಯವು



೧ ಶ್ರೀ ಮಹಾದೇವನು ಹೇಳಿದನು–ಅನಂತರ ಈ ಮುನಿಯ ಉಪದೇಶದಿಂದ ಆ ಸಾಭ್ರಮತಿ ನದಿಯು ಬ್ರಾಹ್ಮಣರೂ ಋಷಿಗಳೂ ಸೇವಿಸುತ್ತಿರುವ ವನವನ್ನು ಹೊಂದಿತು. ಅನಂತರ ಅದು ಚದುರಿತು.

೨. ಅದರಲ್ಲಿರುವ ನೀರು ಹೆಚ್ಚಾಗಿದ್ದುದರಿಂದ ಅದರ ವೇಗದಿಂದ ಅಲ್ಲಲ್ಲಿಯೇ ಪರ್ವತಗಳು ತಡೆಯುವುದರಿಂದ ಚದರುತ್ತ ಏಳು ವಿಭಾಗವಾಗಿ ಭಾಗವಾಯಿತು. ಅಲ್ಲಿಂದ ದಕ್ಷಿಣಸಮುದ್ರವನ್ನು ಹೊಂದಿತು.

೩–೪. ಮೊದಲನೆಯದು ಸಾಭ್ರಮತಿಯು. ಪುಣ್ಯಕರವಾದುದು. ಎರಡನೆಯದು ಶ್ವೇತಕೆಯು. ಮೂರನೆಯದು ವಕುಳೆಯು. ನಾಲ್ಕನೆಯದು

**ಸರ್ವಪಾಪಹರಾ ಪ್ರೋಕ್ತಾ ಹಸ್ತಿಮತ್ಯಥ ಪಂಚಮೀ ।**
**ಷಷ್ಠೀ ವೇತ್ರವತೀ ಸಾ ಸ್ಯಾದ್ವೃತ್ರೇಣ ನಿರ್ಮಿತಾ ಪುರಾ ॥ ೪ ॥**

**ಇಯಂ ಸಾ ಪರಮಾ ದೇವೀ ವೃತ್ರಕೂಪಾದ್ವಿನಿಸ್ಸೃತಾ ।**
**ವೇತ್ರವತೀ ತತೋ ಜಾತಾ ಮಹಾಪಾಪಪ್ರಣಾಶಿನೀ ॥ ೫ ॥**

**ಭದ್ರಾಮುಖೀ ಸುಭದ್ರಾ ಯಾ ಸಪ್ತಮೀ ಲೋಕಪಾವನೀ ।**
**ಏತೈಸ್ತು ಸಪ್ತಭಿರ್ದೇವಿ ತಾಂಸ್ತಾಞ್ಜನಪದಾನಥ ॥ ೬ ॥**

**ಪವಿತ್ರೀಕೃತ್ಯ ಚೈಕೇನ ಸಪ್ತ ಸ್ರೋತಾಃ ಪ್ರತಿಷ್ಠಿತಾ ।**
**ವಿಕೀರ್ಣತೀರ್ಥೇ ಯಶ್ಶ್ರಾದ್ಧಂ ಪಿತೄನುದ್ದಿಶ್ಯ ದಾಸ್ಯತಿ ॥ ೭ ॥**

**ಗಯಾಪಿಂಡಪ್ರದಾನಸ್ಯ ಫಲಂ ಯತ್ತದ್ಭವಿಷ್ಯತಿ ।**
**ಅವಕೀರ್ಣಾಶ್ಚ್ಯುತಾ ಯೇ ಚ ಲುಪ್ತಪಿಂಡೋದಕಕ್ರಿಯಾಃ ॥ ೮ ॥**

---

ಹಿರಣ್ಮಯಿಯು. ಐದನೆಯದು ಹಸ್ತಿಮತಿಯು. ಇದು ಸರ್ವ ಪಾಪಗಳನ್ನೂ ನಾಶಮಾಡುತ್ತದೆ. ಆರನೆಯದು ವೇತ್ರವತಿಯು. ಇದನ್ನು ವೃತ್ರಾಸುರನು ನಿರ್ಮಿಸಿದನು.

೫. ಇದು ವೃತ್ರಕೂಪದಿಂದ ಹೊರಟಿದೆ. ಉತ್ತಮವಾದುದು. ಅನಂತರ ಇದು ವೇತ್ರವತಿಯೆಂಬ ಹೆಸರನ್ನು ಹೊಂದಿದೆ. ಮಹಾ ಪಾಪಗಳನ್ನು ನಾಶಮಾಡುತ್ತದೆ.

೬-೧೧. ಏಳನೆಯ ಭಾಗವು ಭದ್ರಾಮುಖಿಯೆಂದು. ಇದು ಮಂಗಳ ಕರವೂ, ಪಾಪಹರವೂ ಆಗಿದೆ. ಸಾಭ್ರಮತಿಯು ಈ ರೀತಿಯಾದ ಏಳು ಭಾಗಗಳಿಂದ ಕೂಡಿ ಹರಿಯುತ್ತ ಆಯಾ ದೇಶಗಳನ್ನು ಪವಿತ್ರವನ್ನಾಗಿ ಮಾಡುತ್ತ ಹೋಗುತ್ತದೆ. ಈ ಸಾಭ್ರಮತಿಯು ಚದರಿಹೋಗುವುದಕ್ಕೆ ವಿಕೀರ್ಣ ತೀರ್ಥವೆಂದು ಹೆಸರು. ಈ ವಿಕೀರ್ಣ ತೀರ್ಥದಲ್ಲಿ ಯಾವನು ಪಿತೃಗಳನ್ನು ಉದ್ದೇಶಪಟ್ಟು ಶ್ರಾದ್ಧವನ್ನು ಮಾಡುತ್ತಾನೆಯೋ ಅದರಲ್ಲಿನ ಪಿಂಡಗಳು ಗಯೆಯಲ್ಲಿ ಹಾಕುವ ಪಿಂಡಗಳಿಗೆ ಸಮಾನವಾಗುತ್ತವೆ. ಪಿತೃಗಳಲ್ಲಿ ಸೇರದೆ ಯಾರು ಅನ್ನ ನೀರನ್ನು ಕಾಣದೆ ಪಿಂಡವನ್ನೂ ತರ್ಪಣವನ್ನೂ ಹೊಂದದೆ

ತೇ ವಿಕೀರ್ಣೇ ಪ್ರಮುಚ್ಯಂತೇ ದತ್ತೇ ಪಿಂಡೋದಕಾದಿಕೇ ।
ತತ್ರ ಶ್ರಾದ್ಧಂ ತು ಯಃ ಕುರ್ಯಾದ್ಗಾಣಪತ್ಯಂ ಭವೇದ್ಧ್ರುವಂ ॥ ೯ ॥

ತಸ್ಮಾತ್ತ್ರಯೀವಿಧಾನೇನ ಶ್ರದ್ಧಯಾ ಶ್ರಾದ್ಧಮಾಚರೇತ್ ।
ಅಸ್ಮಿಂಸ್ತೀರ್ಥೇ ವಿಶೇಷೇಣ ಸಪ್ತನದ್ಯುದಯೇ ದ್ವಿಜಾಃ ॥ ೧೦ ॥

ಸ್ನಾನಂ ಕುರುತ ವಿಪ್ರೇಂದ್ರಾ ಋಷಿಲೋಕಮಭೀಪ್ಸವಃ ।
ಇತ್ಯುಕ್ತಂ ಕಶ್ಯಪೇನಾಥ ದ್ವಿಜಾನ್ ಪ್ರತಿ ವಿಶೇಷತಃ ॥ ೧೧ ॥

ಯದಿ ಚೇತ್ಕ್ರಿಯತೇ ಸ್ನಾನಂ ಸರ್ವದುಃಖಾಪಹಸ್ಸದಾ ।
ತೀರ್ಥಾನಾಂ ಪ್ರವರಂ ತೀರ್ಥಂ ಕ್ಷೇತ್ರಾಣಾಮುತ್ತಮೋತ್ತಮಂ ॥ ೧೨ ॥

ತೀರ್ಥಮೇತದ್ವಿಕೀರ್ಣಂ ಚ ಶುಭದಂ ರೋಗದೋಷಹೃತ್ ।
ಕುರ್ವಂತ್ಯತ್ರ ವಿಶೇಷೇಣ ಯೇ ಸ್ನಾನಂ ಸರ್ವದಾ ಕಲೌ ॥ ೧೩ ॥

---

ಇರುತ್ತಾರೆಯೋ ಅವರೆಲ್ಲರೂ ಇಲ್ಲಿ ಕೊಟ್ಟ ಪಿಂಡ ತರ್ಪಣವನ್ನು ಹೊಂದಿ ಆ ತೊಂದರೆಯಿಂದ ಬಿಡಲ್ಪಟ್ಟು ಪಿತೃಗಳಲ್ಲಿ ಸೇರಿಕೊಳ್ಳುತ್ತಾರೆ. ಅಲ್ಲಿ ಶ್ರಾದ್ಧ ಮಾಡಿದವನು ಗಣಗಳಿಗೆ ಅಧಿಪತಿಯಾಗುವನು. ಆದ್ದರಿಂದ ವೇದೋಕ್ತವಾದ ವಿಧಾನದಲ್ಲಿ ಇಲ್ಲಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಬೇಕು. ಎಲೈ ಬ್ರಾಹ್ಮಣರಿರಾ ! ಈ ಏಳು ನದಿಗಳು ಹುಟ್ಟುವ ಮೂಲದಲ್ಲಿ ಸ್ನಾನ ಮಾಡಿದರೆ ಋಷಿಲೋಕವು ಸಿಕ್ಕುತ್ತದೆ. ಎಂಬುದಾಗಿ ಕಶ್ಯಪನು ದ್ವಿಜರಿಗೆ ಹೇಳಿದ್ದಾನೆ.

೧೨-೧೪. ಇಲ್ಲಿ ಸ್ನಾನವನ್ನು ಮಾಡಿದರೆ ಎಲ್ಲಾ ದುಃಖಗಳೂ ಹೋಗುತ್ತವೆ. ಇದು ತೀರ್ಥಗಳಲ್ಲೆಲ್ಲಾ ಉತ್ತಮ ತೀರ್ಥವು. ಕ್ಷೇತ್ರಗಳಲ್ಲೆಲ್ಲಾ ಉತ್ತಮ ಕ್ಷೇತ್ರವು. ಈ ವಿಕೀರ್ಣ ಕ್ಷೇತ್ರವು ಶುಭಕರವಾದುದು. ರೋಗಗಳನ್ನೂ ಪಾಪಗಳನ್ನೂ ಸಹ ನಾಶಮಾಡುತ್ತದೆ. ಕಲಿಯುಗದಲ್ಲಿ ಯಾರು ಇಲ್ಲಿ ಸ್ನಾನವನ್ನು ಸದಾ ಮಾಡುತ್ತಾರೆಯೋ ಅವರು ಪುಣ್ಯವಂತರಾಗಿ ಹುಟ್ಟುತ್ತಾರೆ.

**ತೇ ನರಾಃ ಪುಣ್ಯಭಾಜೋ ಹಿ ಜಾಯಂತೇ ನಾತ್ರ ಸಂಶಯಃ ।**
**ಗಯಾತೀರ್ಥಸಮಂ ತೀರ್ಥಂ ವಿಕೀರ್ಣಂ ಪಾವನಂ ಪರಂ ॥**
**ಪಿತೄಣಾಂ ಪುಣ್ಯದಂ ನಿತ್ಯಂ ಲೋಕಾನಾಂ ದುಃಖನಾಶನಂ ॥ ೧೪ ॥**

**॥ ಇತಿ ವಿಕೀರ್ಣತೀರ್ಥಂ ॥**

**ತೀರ್ಥಾದಸ್ಮಾತ್ಪರಂ ತೀರ್ಥಂ ಶ್ವೇತೋದ್ಭವಮನುತ್ತಮಂ ।**
**ಯತ್ರ ಶ್ವೇತಾ ನದೀ ಜಾತಾ ಸಂಸ್ಪೃಷ್ಟೋದರಭಸ್ಮನಾ ॥ ೧೫ ॥**

**ವಿಶ್ರುತಾ ತ್ರಿಷು ಲೋಕೇಷು ಸರ್ವಪಾಪಪ್ರಣಾಶಿನೀ ।**
**ಹರಾಂಗಭಸ್ಮಸಂಯೋಗಾಜ್ಜಾತಾ ದೇವೈಸ್ತು ಮಾನಿತಾ ॥ ೧೬ ॥**

**ತಸ್ಯಾಂ ಸ್ನಾತಶ್ಶುಚಿರ್ದಾಂತಸ್ತ್ರಿರಾತ್ರಮುಷಿತಃ ಪುಮಾನ್ ।**
**ಮಹಾಕಾಳೇಶ್ವರಂ ದೃಷ್ಟ್ವಾ ರುದ್ರಲೋಕೇ ಮಹೀಯತೇ ॥ ೧೭ ॥**

---

ಸಂಶಯವೇ ಇಲ್ಲ. ಈ ವಿಕೀರ್ಣ ತೀರ್ಥವು ಗಯಾ ತೀರ್ಥಕ್ಕೆ ಸಮವಾದುದು. ಪಾವನವಾದುದು. ಪಿತೃಗಳಿಗೆ ಪುಣ್ಯವನ್ನು ಕೊಡುತ್ತದೆ. ಜನಗಳಿಗೆ ದುಃಖವನ್ನು ನಾಶಮಾಡುತ್ತದೆ.

ಇದು ವಿಕೀರ್ಣ ತೀರ್ಥದ ಮಹಿಮೆಯು.

೧೫. ಈ ವಿಕೀರ್ಣ ತೀರ್ಥಕ್ಕಿಂತಲೂ ಉತ್ತಮವಾದುದು. ಶ್ವೇತನದಿಯಲ್ಲಿ ಹುಟ್ಟಿದ ಶ್ವೇತ ತೀರ್ಥವು ಒಂದಿರುವುದು. ಶ್ವೇತಾನದಿಯು ಭಸ್ಮದಿಂದ ಕೂಡಿ ಹರಿಯುವುದೇ ಇದಕ್ಕೆ ಕಾರಣವು.

೧೬. ಈ ತೀರ್ಥವುಳ್ಳ ಶ್ವೇತಾನದಿಯು ಸರ್ವಪಾಪಗಳನ್ನೂ ನಾಶಮಾಡುತ್ತದೆಂದು ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿದೆ. ಏತಕ್ಕೆಂದರೆ ಶ್ರೀ ಶಿವನ ಅವಯವದ ಭಸ್ಮದ ಸಂಯೋಗವನ್ನು ಹೊಂದಿ ಹರಿಯುತ್ತದೆ ದೇವತೆಗಳೂ ಇದನ್ನು ಗೌರವಿಸಿದ್ದಾರೆ.

೧೭. ಆ ನದಿಯಲ್ಲಿ ಸ್ನಾನ ಮಾಡಿ ಶುಚಿಯಾಗಿ ಮೂರು ದಿನವಲ್ಲಿದ್ದು ಮಹಾಕಾಳೇಶ್ವರನ ದರ್ಶನವನ್ನು ಮಾಡಿದವನು ರುದ್ರಲೋಕದಲ್ಲಿ ಸುಖಿಸುತ್ತಾನೆ.

ಪಿಂಡಾನ್ ಪಿತೃಭ್ಯೋ ಯೋ ದದ್ಯಾತ್ತಸ್ಯಾಸ್ತೀರೇ ಕುಶೈಸ್ತಿಲೈಃ ।
ಸುತೃಪ್ತಾಃ ಪಿತರಸ್ತಸ್ಯ ಭವಂತೀತಿ ನ ಸಂಶಯಃ ॥ ೧೮ ॥

ಶ್ವೇತಗಂಗಾ ಮಹಾಪುಣ್ಯಾ ದುಃಖದಾರಿದ್ರ್ಯಮೋಚಿನೀ ।
ಯತ್ರ ಸ್ನಾತ್ವಾ ತು ಭೋ ದೇವಿ ಪದಂ ಗಚ್ಛತಿ ತಸ್ಯ ವೈ ॥ ೧೯ ॥

ತಸ್ಯಾ ವೈ ಸಂಗಮೇ ಪುಣ್ಯೇ ನಿತ್ಯಂ ತಿಷ್ಠಾಮಿ ಪಾರ್ವತಿ ।
ಯಚ್ಚ ದಾನಂ ಪ್ರಕುರ್ವಂತಿ ಸ್ನಾನಂ ವೈ ತತ್ರ ಸುಂದರಿ ॥ ೨೦ ॥

ತದನಂತಫಲಂ ತೇಷಾಂ ಭವತೇ ನಾತ್ರ ಸಂಶಯಃ ।
ತತ್ರ ಭೂತೇಶ್ವರೋ ದೇವಃ ಸಂಗಮೇ ವಸತೇ ಧ್ರುವಂ ॥ ೨೧ ॥

ತತ್ರ ಧೂಪಂ ಚ ಪುಷ್ಪಂ ಚ ಮಾಲಾಂ ಚಾರಾರ್ತಿಕಂ ತಥಾ ।
ಯೇ ಕುರ್ವಂತಿ ನರಾ ಶ್ರೇಷ್ಠಾಸ್ತೇ ನರಾಃ ಪುಣ್ಯರೂಪಿಣಃ ॥ ೨೨ ॥

---

೧೮. ಆ ನದಿಯ ದಡದಲ್ಲಿ ದರ್ಭೆಗಳಿಂದಲೂ, ಎಳ್ಳಿನಿಂದಲೂ ಕೂಡಿಸಿ ಪಿಂಡವನ್ನು ಕೊಟ್ಟರೆ ಅವನ ಪಿತೃಗಳು ತೃಪ್ತರಾಗುತ್ತಾರೆ. ಎಂಬುದರಲ್ಲಿ ಸಂಶಯವಿಲ್ಲ.

೧೯ ಈ ಶ್ವೇತ ಗಂಗೆಯು ಬಹು ಪುಣ್ಯಕರವಾದುದು. ದುಃಖ ದಾರಿದ್ರ್ಯಗಳನ್ನು ನಾಶಮಾಡುತ್ತದೆ. ಇಲ್ಲಿ ಸ್ನಾನ ಮಾಡಿದರೆ ಆ ಶಿವಪದವನ್ನು ಹೊಂದುತ್ತಾನೆ.

೨೦-೨೨. ಅದರ ಸಂಗಮ ಪ್ರದೇಶವು ಪುಣ್ಯಕರವಾದುದು. ನಾನು ಅಲ್ಲಿ ಯಾವಾಗಲೂ ಇರುತ್ತೇನೆ. ಅಲ್ಲಿ ಮಾಡಿದ ಸ್ನಾನವೂ ದಾನವೂ ಅನಂತ ಫಲವನ್ನು ಕೊಡುವುದರಲ್ಲಿ ಸಂಶಯವಿಲ್ಲ. ಆ ಸಂಗಮದಲ್ಲಿ ಭೂತೇಶ್ವರನೆಂಬ ಸ್ವಾಮಿಯು ಇದ್ದಾನೆ. ಅವನಿಗೆ ಧೂಪ, ದೀಪ, ಹೂವು, ಆರತಿ ಮುಂತಾದು ವುಗಳನ್ನು ಮಾಡಿಸಿದ ಜನರೇ ಉತ್ತಮ ಪುಣ್ಯಭಾಗಿಗಳು.

ಬಿಲ್ವದಳಂ ಸಮಾದಾಯ ಯೋ ದದಾತಿ ಶಿವೋಪರಿ ।
ವಾಂಛಿತಂ ಲಭತೇ ನಿತ್ಯಂ ಶ್ವೇತಾಯಾಂ ಶಿವಸನ್ನಿಧೌ ॥ ೨೩ ॥

॥ ಇತಿ ಶ್ವೇತತೀರ್ಥಂ ॥

॥ ಶ್ರೀ ಮಹಾದೇವ ಉವಾಚ ॥

ಗಣತೀರ್ಥಂ ತತೋ ಗಚ್ಛೇತ್ತೀರ್ಥಯಾತ್ರಾಪರಾಯಣಃ ।
ತ್ರಿವಿಷ್ಟಪಮಿತಿ ಪ್ರೋಕ್ತಂ ಗಣೈಸ್ತಚ್ಚಂದನಾತಟೇ ॥ ೨೪ ॥

ತ್ರಿವಿಷ್ಟಪೇ ನರಸ್ಸ್ನಾತ್ವಾ ಪೌರ್ಣಮಾಸ್ಯಾಂ ಸಮಾಹಿತಃ ।
ಸಂಶಯೋ ನಾತ್ರ ಕುರ್ವೀತ ಮುಚ್ಯತೇ ಬ್ರಹ್ಮಹತ್ಯಯಾ ॥ ೨೫ ॥

ಚತುರೋ ವಾರ್ಷಿಕಾನ್ಮಾಸಾ಼ನ್ ಸ್ಥಿತಿರ್ಯಸ್ಯ ತ್ರಿವಿಷ್ಟಪೇ ।
ಸೋಽಪಿ ಪುಣ್ಯೋ ಮಹಾಭಾಗೋ ರುದ್ರಲೋಕೇ ಮಹೀಯತೇ ॥ ೨೬ ॥

---

೨೩. ಬಿಲ್ವದಳವನ್ನು ತೆಗೆದುಕೊಂಡು ಹೋಗಿ ಆ ಶಿವನನ್ನು ಯಾವನು ಪೂಜಿಸುತ್ತಾನೆಯೋ ಆತನು ತನ್ನ ಇಷ್ಟಾರ್ಥವನ್ನು ಹೊಂದುತ್ತಾನೆ

ಇದು ಶ್ವೇತತೀರ್ಥದ ವರ್ಣನೆಯು.

೨೪. ಮಹಾದೇವನು ಹೇಳಿದನು–ಅಲ್ಲಿಂದ ಮುಂದೆ ಚಂದನಾ ನದಿಯ ದಡದಲ್ಲಿರುವ ಗಣ ತೀರ್ಥಕ್ಕೆ ಹೋಗಬೇಕು. ಅದಕ್ಕೆ ತ್ರಿವಿಷ್ಟಪವೆಂದು ಹೆಸರು ಬಂದಿರುವುದು.

೨೫. ಹುಣ್ಣಿಮೆಯ ದಿವಸ ಈ ತ್ರಿವಿಷ್ಟಪದಲ್ಲಿ ಮನುಷ್ಯನು ಸ್ನಾನ ಮಾಡಿದರೆ ಬ್ರಹ್ಮಹತ್ಯೆಯು ಕೂಡ ಹೋಗುತ್ತದೆ. ಸಂಶಯವಿಲ್ಲ.

೨೬. ಮಳೆಗಾಲದ ನಾಲ್ಕು ತಿಂಗಳಲ್ಲಿಯೂ ಮನುಷ್ಯನು ಆ ತ್ರಿವಿಷ್ಟಪದಲ್ಲಿದ್ದರೆ ಅವನು ಪುಣ್ಯವನ್ನು ಹೊಂದಿ ರುದ್ರ ಲೋಕದಲ್ಲಿ ಸುಖಿಸುತ್ತಾನೆ.

ಗಣತೀರ್ಥೇ ನರಸ್ಸ್ನಾತ್ವಾ ಕೃಷ್ಣಾಷ್ಟಮ್ಯಾಮುಪೋಷಿತಃ ।
ಬಕುಲಾಸಂಗಮೇ ಸ್ನಾತ್ವಾ ಸ್ವರ್ಗಂ ಗಚ್ಛತಿ ಮಾನವಃ ॥ ೨೭ ॥

ತಸ್ಮಿಂಸ್ತೀರ್ಥೇ ನರಸ್ಸ್ನಾತ್ವಾ ಬಕುಲೇಶಂ ವಿಲೋಕ್ಯ ಚ ।
ಗಣೇಶ್ವರಪ್ರಸಾದೇನ ಗಾಣಪತ್ಯಮವಾಪ್ನುಯಾತ್ ॥ ೨೮ ॥

ಇದಂ ಪವಿತ್ರಂ ಪರಮಂ ಪುಣ್ಯಾಯುಷ್ಯವಿವರ್ಧನಂ ।
ಶ್ರುತ್ವಾ ತು ಲಭತೇ ಪುಣ್ಯಂ ಗಂಗಾಸ್ನಾನಸಮಂ ನರಃ ॥ ೨೯ ॥

ಅತ್ರ ಸ್ಥಿತ್ವಾ ನಿರಾಹಾರೋ ಜಿತೇಂದ್ರಿಯಸ್ಸಮಾಹಿತಃ ।
ಜಪತ್ಯೇವಂ ಪರಂ ದೇವಂ ಗಣೇಶ್ವರಂ ಮನೋರಮಂ ॥ ೩೦ ॥

ಸಂಪ್ರಾಪ್ನೋತ್ಯಖಿಲಾನ್ ಭೋಗಾನ್ ಸತ್ಯಂ ಸತ್ಯಂ ವರಾನನೇ ।
ಅತ್ರ ರಾಜಾ ಸೋಮವಂಶೀ ವಿಶ್ವದತ್ತಸ್ಸವೀರ್ಯವಾನ್ ॥ ೩೧ ॥

ತಪೋ ತೇನ ಮಹತ್ತಪ್ತಂ ಬಹುಕಾಲಂ ಸುರೇಶ್ವರಿ ।
ಗಾಣಪತ್ಯಂ ತದಾ ಪ್ರಾಪ್ತಂ ಶ್ರೀಗಣೇಶಪ್ರಸಾದತಃ ॥ ೩೨ ॥

---

೨೭. ಕೃಷ್ಣಪಕ್ಷದ ಅಷ್ಟಮಿಯ ದಿನ ಗಣತೀರ್ಥದಲ್ಲಿ ಸ್ನಾನಮಾಡಿ ಅಂತೆಯೇ ಬಕುಲಾ ತೀರ್ಥದಲ್ಲಿಯೂ ಸ್ನಾನಮಾಡಿದರೆ ಅವನು ಸ್ವರ್ಗವನ್ನು ಹೊಂದುವನು. ಸಂಶಯವಿಲ್ಲ.

೨೮. ಆ ಬಕುಲ ತೀರ್ಥದಲ್ಲಿ ಸ್ನಾನಮಾಡಿ ಬಕುಲೇಶನ ದರ್ಶನವನ್ನು ಮಾಡಿದರೆ ಗಣೇಶನ ಅನುಗ್ರಹದಿಂದ ಗಣಾಧಿಪತಿಯಾಗುತ್ತಾನೆ.

೨೯. ಇದು ಪವಿತ್ರವಾದುದು. ಉತ್ತಮವಾದುದು. ಪುಣ್ಯವನ್ನೂ ಆಯುಸ್ಸನ್ನೂ ಹೆಚ್ಚಿಸುತ್ತದೆ. ಇದನ್ನು ಕೇಳಿದರೆ ಗಂಗಾ ಸ್ನಾನಕ್ಕೆ ಸಮವಾದ ಪುಣ್ಯವನ್ನು ಹೊಂದುತ್ತಾನೆ.

೩೦-೩೨. ಇಲ್ಲಿದ್ದುಕೊಂಡು ಉಪವಾಸ ಮಾಡುತ್ತಾ ಜಿತೇಂದ್ರಿಯನಾಗಿ ಗಣೇಶ್ವರ ಮಂತ್ರವನ್ನು ಜಪಿಸಿದರೆ ತನಗೆ ಬೇಕಾದುದನ್ನೆಲ್ಲಾ ಹೊಂದುತ್ತಾನೆ. ಇದು ನಿಶ್ಚಯವು. ಸತ್ಯವಾಗಿಯೂ ಹೇಳುತ್ತೇನೆ. ಇಲ್ಲಿ ಹಿಂದೆ ಚಂದ್ರವಂಶದ ವಿಶ್ವದತ್ತನೆಂಬ ರಾಜನು ಬಹುಕಾಲದವರೆಗೂ ತಪಸ್ಸನ್ನು ಮಾಡಿ ಗಣೇಶನ ಅನುಗ್ರಹದಿಂದ ಗಣಾಧಿಪತಿಯಾದನು.

ವಸಿಷ್ಠೋ ವಾಮದೇವಶ್ಚ ಕಹೋಡಃ ಕೌಷೀತಕೋ ಮುನಿಃ ।
ಭರದ್ವಾಜೋಂಗಿರಾಶ್ಚೈವ ವಿಶ್ವಾಮಿತ್ರೋಥ ವಾಮನಃ ॥ ೩೩ ॥

ಏತೇ ವೈ ಮುನಯಸ್ಸರ್ವೇ ಪುಣ್ಯರೂಪಾ ಮಹೇಶ್ವರಿ ।
ನಿತ್ಯಂ ಸೇವಾಂ ಪ್ರಕುರ್ವಂತಿ ಶ್ರೀಗಣೇಶಪ್ರಸಾದತಃ ॥ ೩೪ ॥

ಅಪುತ್ರೋ ಲಭತೇ ಪುತ್ರಾನ್ನಿರ್ಧನೋ ಲಭತೇ ಧನಂ ।
ಅವಿದ್ಯೋ ಲಭತೇ ವಿದ್ಯಾಂ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥ ೩೫ ॥

ಕಿಮನ್ಯದ್ಬಹುನೋಕ್ತೇನ ಭೂಯೋ ಭೂಯೋ ವರಾನನೇ ।
ತತ್ರ ಸ್ನಾನಂ ಪ್ರಕುರ್ವೀತ ಪೂಜನಂ ವಾ ಕರೋತಿ ಯಃ ॥ ೩೬ ॥

---

೩೩. ವಸಿಷ್ಠ, ವಾಮದೇವ, ಕಹೋಡ, ಕೌಷೀತಕ, ಭರದ್ವಾಜ, ಅಂಗಿರ, ವಿಶ್ವಾಮಿತ್ರ, ವಾಮನ ಇವರು ಮಹರ್ಷಿಗಳು

೩೪. ಎಲೈ ಮಹೇಶ್ವರಿಯೆ! ಈ ಪುಣ್ಯ ರೂಪರಾದ ಮಹರ್ಷಿಗಳು ಗಣೇಶನ ಪ್ರಸಾದಕ್ಕೋಸ್ಕರ ನಿತ್ಯವೂ ಇಲ್ಲಿ ಸೇವೆಯನ್ನು ಮಾಡುತ್ತಿರುತ್ತಾರೆ.

೩೫. ಈ ಸೇವೆಯಿಂದ ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತದೆ. ಧನವಿಲ್ಲದವರಿಗೆ ಧನವು ಲಭಿಸುತ್ತದೆ. ವಿದ್ಯಾಹೀನರು ವಿದ್ಯೆಯನ್ನು ಹೊಂದುತ್ತಾರೆ. ಮೋಕ್ಷಾರ್ಥಿಗಳು ಮೋಕ್ಷವನ್ನು ಹೊಂದುತ್ತಾರೆ.

೩೬-೩೭. ಎಲೈ ಪಾರ್ವತಿಯೆ! ಅನೇಕ ಬಾರಿ ಬಹಳವಾಗಿ ಹೇಳಿದುದರಿಂದ ಪ್ರಯೋಜನವಿಲ್ಲ. ಆ ಸ್ಥಳದಲ್ಲಿ ಸ್ನಾನ ಮಾಡಿದರಾಗಲಿ ಪೂಜೆ ಮಾಡಿದರಾಗಲಿ ಅವರು ಪಾಪಗಳನ್ನು ಕಳೆದುಕೊಂಡು ವಿಷ್ಣುವಿನ ಸ್ಥಾನವಾದ

**ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ।**
**ಶಿವಾಯ ವಿಷ್ಣುರೂಪಾಯ ವಿಷ್ಣವೇ ಶಿವರೂಪಿಣೇ ॥**
**ನಾನ್ತರಂ ದೇವಿ ಪಶ್ಯಾಮಿ ಶ್ರೀವಿಷ್ಣೋಶ್ಚ ಪ್ರಸಾದತಃ ॥ ೩೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ವಿಕೀರ್ಣತೀರ್ಥ ಶ್ವೇತತೀರ್ಥ ವಕುಲಸಂಗಮ ಗತ ಗಣತೀರ್ಥ ವರ್ಣನಂ ನಾಮ ತ್ರಯಸ್ತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

ವೈಕುಂಠವನ್ನು ಹೊಂದುತ್ತಾರೆ. ವಿಷ್ಣುವಿನ ಅವತಾರ ರೂಪನಾದ ಶಿವನಿಗೂ, ಶಿವನ ಅವತಾರ ರೂಪನಾದ ವಿಷ್ಣುವಿಗೂ ನಮಸ್ಕಾರವು. ಎಲೈ ದೇವಿಯೆ! ವಿಷ್ಣುವಿನ ಅನುಗ್ರಹದಿಂದ ಶಿವ ವಿಷ್ಣುಗಳಿಗೆ ನಾನು ಭೇದವನ್ನೇ ತಿಳಿಯೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ವಿಕೀರ್ಣತೀರ್ಥ, ಶ್ವೇತ ತೀರ್ಥ, ವಕುಲ ಸಂಗಮದಲ್ಲಿರುವ ಗಣತೀರ್ಥ ಇವುಗಳ ವರ್ಣನ ಎಂಬ ನೂರ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಸ್ತ್ರಿಂಶದಧಿಕಶತತಮೋಽಧ್ಯಾಯಃ ||



**|| ಶ್ರೀಮಹಾದೇವ ಉವಾಚ ||**

**ಸಾಭ್ರಮತ್ಯುತ್ತರೇ ಕೂಲೇ ಅಗ್ನಿತೀರ್ಥಮಿತಿ ಸ್ಮೃತಂ ।**
**ತಸ್ಯಾಶ್ಚೋತ್ತರಪೂರ್ವೇಣ ನಾತಿದೂರೇ ಕೃತಾಸ್ಪದಂ || ೧ ||**

**ತೀರ್ಥಂ ಘಾಲೇಶ್ವರಂ ನಾಮ ಚಂಡೀ ಯತ್ರ ವ್ಯವಸ್ಥಿತಾ ।**
**ಪೀಠಂ ತದ್ಯೋಗಮಾತೃಣಾಂ ಸರ್ವಸಿದ್ಧಿವಿಧಾಯಕಂ || ೨ ||**

**ಯತ್ರ ತಾಸ್ಸರ್ವದೇವಾನಾಂ ಕಾರ್ಯಾರ್ಥಂ ಮಾತರಸ್ಥಿತಾಃ ।**
**ಪರಮಂ ಯತ್ನಮಾಸ್ಥಾಯ ಲೋಕಾನುಗ್ರಹಕಾರಣಾತ್ || ೩ ||**

---

### ನೂರ ಮೂವತ್ತನಾಲ್ಕನೆಯ ಅಧ್ಯಾಯವು



೧-೨. ಮಹಾದೇವನು ಹೇಳಿದನು ಈ ಸಾಭ್ರಮತಿಯ ಉತ್ತರ ದಡದಲ್ಲಿ ಅಗ್ನಿ ತೀರ್ಥವಿದೆ. ಅದರ ಈಶಾನ್ಯಕ್ಕೆ ಸ್ವಲ್ಪ ದೂರದಲ್ಲಿ ಘಾಲೇಶ್ವರವೆಂಬ ತೀರ್ಥವಿದೆ. ಅಲ್ಲಿ ಚಂಡಿಕಾದೇವಿಯಿರುವಳು. ಅದು ಯೋಗಮಾತೃಗಳಿಗೆ ಪೀಠಸ್ಥಾನವು. ಅಲ್ಲಿ ಸರ್ವಸಿದ್ಧಿಗಳನ್ನು ಹೊಂದಬಹುದು

೩. ಆ ಜಾಗದಲ್ಲಿ ಆ ಮಾತೃಗಳು ದೇವತೆಗಳ ಕಾರ್ಯಕ್ಕೋಸ್ಕರವೂ, ಲೋಕಗಳಿಗೆ ಅನುಗ್ರಹಮಾಡುವುದಕ್ಕೂ ಬಹು ಯತ್ನದಿಂದ ಅಲ್ಲಿರುತ್ತಾರೆ.

ತ್ರಿರಾತ್ರಮುಷಿತೋ ಭೂತ್ವಾ ತಸ್ಮಿಂಸ್ತೀರ್ಥೇ ದೃಢವ್ರತಾಃ ।
ಅಭಿಗಚ್ಛೇತ್ತಮೀಶಾನಂ ದೇವೇಶಂ ಚಂಡಿಕೇಶ್ವರಂ ॥ ೪ ॥

ಸಾಭ್ರಮತ್ಯಾಂ ಕೃತಸ್ನಾನೋ ಮಾತೃತೀರ್ಥೇಸ್ಯ ಸನ್ನಿಧೌ ।
ಸಮಾಧಿವಿಧಿನಾ ಯುಕ್ತೋ ಗಚ್ಛೇದ್ವೈ ಮಾತೃ ಮಂಡಲಂ ॥ ೫ ॥

ಗೋಸಹಸ್ರಪ್ರದಾನಸ್ಯ ಫಲಂ ಪ್ರಾಪ್ನೋತಿ ಮಾನವಃ ।
ಅಗ್ನಿತೀರ್ಥೇ ನರಸ್ಸ್ನಾತ್ವಾ ಚಾಮುಂಡಾದರ್ಶನೇ ಕೃತೇ ॥ ೬ ॥

ನ ಭಯಂ ಜಾಯತೇ ತಸ್ಯ ರಕ್ಷೋಭೂತಪಿಶಾಚಂ ।
ಗೋಷ್ಕಂಗಯಾನದೀ ಯತ್ರ ಸಾಭ್ರಮತ್ಯಾಂ ತು ಸಂಗತಾ ॥ ೭ ॥

ತತ್ರತೀರ್ಥಸಹಸ್ರಾಣಿ ತಿಷ್ಠಂತಿ ಚ ಸುರೇಶ್ವರಿ ।
ಶ್ರಾದ್ಧಂ ತತ್ರ ಪ್ರಕರ್ತವ್ಯಂ ತಿಲಚೂರ್ಣೇನ ಪಾರ್ವತಿ ॥ ೮ ॥

ಪಿಂಡಾನ್ದತ್ವಾ ದ್ವಿಜಾನ್ಭೋಜ್ಯಾಕ್ಷಯಂ ಪದಮಾಪ್ನುಯಾತ್ ।
ಯತ್ರ ಕುಕರ್ದಮೋ ರಾಜಾ ಪಾಪಿಷ್ಠೋ ದುರ್ಧರಃ ಖಲಃ ॥ ೯ ॥

---

೪. ಆ ತೀರ್ಥಕ್ಕೆ ಹೋಗಿ ಪ್ರಯತ್ನಪಟ್ಟು ಇಂದ್ರಿಯ ನಿಗ್ರಹಮಾಡಿಕೊಂಡು ಮೂರು ರಾತ್ರಿಗಳು ಇರಬೇಕು. ಮತ್ತು ಆ ಚಂಡಿಕೇಂಶ್ವರನನ್ನು ಸೇವಿಸಬೇಕು.

೫. ಈ ಚಂಡೀಕೇಶ್ವರನ ಸನ್ನಿಧಿಯಲ್ಲಿರುವ ಸಾಭ್ರಮತಿಯ ಮಾತೃತೀರ್ಥದಲ್ಲಿ ಸ್ನಾನಮಾಡಿ ನಿಯಮದಿಂದ ಸ್ವಾಮಿಯನ್ನು ಪೂಜಿಸಿ ಆ ಮಾತೃಗಳು ಇರುವ ಮಂಡಲಕ್ಕೆ ಹೋಗಿ ಅವರ ದರ್ಶನ ಮಾಡಬೇಕು.

೬–೯. ಹಾಗೆ ಮಾಡಿದರೆ ಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಮನುಷ್ಯನು ಹೊಂದುತ್ತಾನೆ. ಅಗ್ನಿ ತೀರ್ಥದಲ್ಲಿ ಸ್ನಾನಮಾಡಿ ಚಾಮುಂಡಾದರ್ಶನವನ್ನು ಮಾಡಿದರೆ ಅವನಿಗೆ ರಾಕ್ಷಸರ ಭೂತ ಪ್ರೇತ ಪಿಶಾಚಿಗಳ ತೊಂದರೆ ಇರುವುದಿಲ್ಲ. ಗೋಷ್ಕಂಗಯಾ ಎಂಬುವ ನದಿಯೂ ಸಾಭ್ರಮತಿಯೂ ಸೇರುವ ಜಾಗದಲ್ಲಿ ಸಾವಿರಾರು ತೀರ್ಥಗಳು ಬಂದು ಸೇರುತ್ತವೆ. ಆ ಜಾಗದಲ್ಲಿ ಶ್ರಾದ್ಧವನ್ನು ಮಾಡಿ ಎಳ್ಳಿನ ಹುಡಿಯಿಂದ ಪಿಂಡಗಳನ್ನು ಹಾಕಬೇಕು. ಬ್ರಾಹ್ಮಣರನ್ನು ಊಟಮಾಡಿಸಬೇಕು. ಹಾಗೆ ಮಾಡಿದರೆ ಅಕ್ಷಯವಾದ ವೈಕುಂಠವು ಖಂಡಿತವಾಗಿಯೂ ಪ್ರಾಪ್ತವಾಗುತ್ತದೆ.

ಮೂಢೋಽಹಂಕಾರಸಂಯುಕ್ತೋ ದ್ವಿಜಾನಾಂ ಪರಿನಿಂದಕಃ ।
ಗೋಘ್ನೋಽಯಂ ಬಾಲಹಾ ಚೈವ ಪಾಪಿಷ್ಠೋ ದುರ್ಮದಸ್ಸದಾ ॥ ೧೦ ॥

ರಾಜ್ಯಂ ಪ್ರಕುರ್ವತಸ್ತಸ್ಯ ಪುರೇ ಪಿಂಡಾರಸಂಜ್ಞಕೇ ।
ತದಾ ಮೃತಿಂ ಸಮಾಪನ್ನೋಽಧರ್ಮಯೋಗೇ ಸುರೇಶ್ವರಿ ॥ ೧೧ ॥

ಮೃತೋಽಸೌ ತತ್ರ ಸಂಜಾತಃ ಪ್ರೇತರೂಪೋ ಮಹೇಶ್ವರಿ ।
ಪೀತಾಸ್ಯಶ್ಶುಷ್ಕತುಂಡಶ್ಚ ಪೀತರೋಮಾಥ ಕರ್ಕಶಃ ॥ ೧೨ ॥

ಉಚ್ಚೈಸ್ತರೋ ಬಹುರೋಮಾ ಕ್ಷುತ್ಪಿಪಾಸಾಪ್ರಪೀಡಿತಃ ।
ವಾಯುಭಕ್ಷಮಕುರ್ವಾಣಃ ಪ್ರಗಚ್ಛತಿ ಇತಸ್ತತಃ ॥ ೧೩ ॥

ಬಹುಪ್ರೇತೈಸ್ಸಮಾಯುಕ್ತೋ ಹಾಹೇತಿ ಕರುಣಂ ರುದನ್ ।
ಕಿಂ ಕರ್ತವ್ಯಮಿತಿ ಪ್ರಾಹುಃ ಪ್ರೇತಾಸ್ತೇ ವೈ ಸಮೀಪಗಾಃ ॥ ೧೪ ॥

---

೧೦. ಕುಕರ್ದಮನೆಂಬ ರಾಜನು ಇದ್ದನು. ಅವನು ಪಾಪಿಷ್ಟನು. ಕೆಟ್ಟವನು. ಮೂರ್ಖನು. ಅಹಂಕಾರಿಯು. ಬ್ರಾಹ್ಮಣ ನಿಂದಕನು. ಗೋವುಗಳನ್ನು ಕೊಂದವನು. ಭ್ರೂಣಹತ್ಯೆ ಮಾಡಿದವನು. ಮದದಿಂದ ಕೂಡಿದವನು.

೧೧-೧೩. ಆತನು ಪಿಂಡಾರವೆಂಬ ಊರಿನಲ್ಲಿ ರಾಜ್ಯಭಾರಮಾಡುತ್ತಿದ್ದನು ಹೀಗಿರುತ್ತಿರಲು ಸತ್ತುಹೋದನು. ತಾನು ಮಾಡಿದ ಅಧರ್ಮದಿಂದ ಆ ಜಾಗದಲ್ಲಿ ಪ್ರೇತನಾಗಿ ಇದ್ದನು. ಆ ಪ್ರೇತಕ್ಕೆ ಮುಖವು ಬೆಳ್ಳಗಿದ್ದಿತು. ಆದರೆ ಒಣಗಿದಂತೆ ಕಾಣುತ್ತಿದ್ದಿತು. ಬಿಳಿಯ ಕೂದಲುಗಳಿದ್ದು ಅವು ಒರಟಾಗಿದ್ದುವು. ಮತ್ತು ಉದ್ದವಾಗಿದ್ದುವು. ಅಲ್ಲದೆ ಬಹಳವಾಗಿದ್ದುವು. ಹಸಿವು ಬಾಯಾರಿಕೆಗಳಿಂದ ಕೂಡಿ ಕೊಂಡಿದ್ದಿತು. ಗಾಳಿಯನ್ನೂ ಕೂಡ ತೆಗೆದುಕೊಳ್ಳದೆ ಅತ್ತಿತ್ತಲಾಗಿ ಓಡಿಯಾಡುತ್ತಿದ್ದಿತು.

೧೪. ಅನೇಕ ಪ್ರೇತಗಳೊಡನೆ ಕೂಡಿಕೊಂಡು ಹಾ ಹಾ ಎಂಬುದಾಗಿ ಅಳುತ್ತಿದ್ದನು ಅವನ ಜೊತೆಯಲ್ಲಿದ್ದ ಮಿಕ್ಕ ಪ್ರೇತಗಳು ಏನು ಮಾಡಬೇಕೆಂದು ಕೇಳುತ್ತಿದ್ದುವು.

ತೇಪಿ ರೋದನಮಾಚಕ್ರುಃ ಕ್ಷುತ್ಪಿಪಾಸಾದಿಪೀಡಿತಾಃ ।
ನ ಪ್ರಾಪ್ರುಸ್ತೇ ದುರಾತ್ಮಾನೋ ರಾಜ್ಞಸ್ಸಂಗತಿಮಾಗತಾಃ ॥ ೧೫ ॥

ರಾಜ್ಞಾ ಸಾರ್ಧಂ ಚ ಗಚ್ಛಂತಿ ಲೋಕಾನ್ನಿರ್ಜನಕಾನ್ ಬಹೂನ್ ।
ನೋದಕಂ ಅಥವಾ ಚಾನ್ನಂ ನ ಮಾರ್ಗೋ ದೃಶ್ಯತೇ ಕದಾ ॥ ೧೬ ॥

ತೇ ಪ್ರೇತಾ ದುಷ್ಟರೂಪಾಶ್ಚ ವಿಚರಂತಿ ಮಹೀತಳೇ ।
ಭಕ್ಷಂತಿ ಶವಮಾಂಸಾನಿ ಪಿಬಂತಿ ರುಧಿರಂ ಸದಾ ॥ ೧೭ ॥

ಏವಂ ಕುಕರ್ದನೋ ರಾಜಾ ಸದಾ ತೈಃ ಪರಿವಾರಿತಃ ।
ಕದಾಚಿದ್ದೈವಯೋಗೇನ ಗುರೋರಾಶ್ರಮಮನ್ವಗಾತ್ ॥
ಪೂರ್ವಜನ್ಮಕೃತಂ ಪುಣ್ಯಂ ತೇನ ಯೋಗೇನ ಸಂಗತಃ ॥ ೧೮ ॥

---

೧೫. ಹಸಿವು ಬಾಯಾರಿಕೆಗಳಿಂದ ಕೂಡಿ ಆ ಜೊತೆಯ ಪ್ರೇತಗಳೂ ಕೂಡ ಅಳುತ್ತಿದ್ದುವು. ದುಷ್ಟನಾದ ಆ ರಾಜ ಪ್ರೇತದ ಸಹವಾಸದಿಂದ ಅವಕ್ಕೂ ಏನೂ ಸಿಕ್ಕುತ್ತಿರಲಿಲ್ಲ.

೧೬. ಆ ರಾಜ ಪ್ರೇತದೊಡನೆ ಅವೂ ಕೂಡ ಜನಗಳಿಲ್ಲದ ಜಾಗದಲ್ಲೆಲ್ಲಾ ಓಡಾಡುತ್ತ ಇದ್ದುವು. ಅವುಗಳಿಗೆ ಎಲ್ಲಿಯೂ ಕುಡಿಯಲು ನೀರಾಗಲೀ, ತಿನ್ನಲು ಅನ್ನವಾಗಲೀ ಕೊನೆಗೆ ದಾರಿಯಾಗಲಿ ಸಿಕ್ಕುತ್ತಲೇ ಇರಲಿಲ್ಲ.

೧೭. ಈ ಪ್ರೇತಗಳು ಬಹು ದುಷ್ಟರೂಪಗಳುಳ್ಳವಾಗಿ ಸಂಚರಿಸುತ್ತ ಹೆಣಗಳನ್ನೂ, ಮಾಂಸಗಳನ್ನೂ, ರಕ್ತವನ್ನೂ ಸಿಕ್ಕಿದೆಡೆಯಲ್ಲಿ ಹೊಂದುತ್ತಾ ಇದ್ದುವು.

೧೮. ಆ ಕುಕರ್ದಮನು ಹೀಗೆ ತನ್ನವರನ್ನೆಲ್ಲಾ ಕಟ್ಟಿಕೊಂಡು ಸುತ್ತುತ್ತ ಅದೃಷ್ಟವಶದಿಂದ ಒಂದು ಬಾರಿ ತನ್ನ ಗುರುವಿನ ಆಶ್ರಮಕ್ಕೆ ಬಂದನು. ಪೂರ್ವ ಜನ್ಮದ ಪುಣ್ಯವು ಆಗ ಅವನನ್ನು ಹೊಂದಿದ್ದಿತು.

॥ ಶ್ರೀ ಪಾರ್ವತ್ಯುವಾಚ ॥

ಕಿಂ ಕೃತಂ ತೇನ ವೈ ಪುಣ್ಯಂ ವದ ವಿಶ್ವೇಶ್ವರ ಪ್ರಭೋ ।
ಅಯಂ ಪಾಪೀ ದುರಾತ್ಮಾ ಚ ಬ್ರಾಹ್ಮಣಾನಾಂ ಚ ನಿಂದಕಃ ॥
ಸತ್ಸಂಗತಿಃ ಕಥಂ ಜಾತಾ ತನ್ಮೇ ವಿಸ್ತರತೋ ವದ ॥ ೧೯ ॥

॥ ಶ್ರೀ ಮಹಾದೇವ ಉವಾಚ ॥

ಏತೇನ ನರದೇವೇನ ಪೂರ್ವಜನ್ಮನಿ ಯತ್ಕೃತಂ ।
ತತ್ಸರ್ವಂ ಕಥಯಿಷ್ಯಾಮಿ ಶೃಣು ತ್ವಂ ನಗನಂದಿನಿ ॥ ೨೦ ॥

ಪೂರ್ವಜನ್ಮನ್ಯಯಂ ವಿಪ್ರೋ ಬ್ರಾಹ್ಮಣೋ ವೇದಪಾಠಕಃ ।
ಸಂಪೂಜ್ಯ ಚ ಮಹಾದೇವಂ ಕೃತ್ವಾ ಚಾತಿಥಿಪೂಜನಂ ॥ ೨೧ ॥

ಭೋಜನಂ ಕುರುತೇ ನಿತ್ಯಮಸೌ ಬಾಡಬಸತ್ತಮಃ ।
ತೇನ ಪುಣ್ಯಪ್ರಭಾವೇನ ಪುರೇ ಪಿಂಡಾರಸಂಜ್ಞಕೇ ॥ ೨೨ ॥

ರಾಜಾ ವೈ ತತ್ರ ಸಂಜಾತಃ ಕುಕರ್ದಮ ಇತಿ ಸ್ಮೃತಃ ।
ಕರ್ಮಣಾ ಮನಸಾ ಚೈವ ನ ಕೃತಂ ಪುಣ್ಯಮೇವ ಚ ॥ ೨೩ ॥

---

೧೯. ಶ್ರೀ ಪಾರ್ವತಿಯು ಹೇಳಿದಳು–ಎಲೈ ವಿಶ್ವೇಶ್ವರನೆ! ಆತನು ಯಾವ ಪುಣ್ಯವನ್ನು ಮಾಡಿದ್ದನು. ಇವನು ಮಹಾಪಾಪಿಯು. ದುಷ್ಟನು. ಬ್ರಾಹ್ಮಣ ನಿಂದಕನು. ಇಂತಹವನಿಗೆ ಸತ್ಪುರುಷರ ಸಹವಾಸವು ಹೇಗೆ ಸಿಕ್ಕಿತು ? ಅದನ್ನು ನನಗೆ ವಿಸ್ತಾರವಾಗಿ ಹೇಳು.

೨೦ ಮಹಾದೇವನು ಹೇಳಿದನು–ಈ ರಾಜನು ಪೂರ್ವ ಜನ್ಮದಲ್ಲಿ ಏನನ್ನು ಮಾಡಿದನು. ಎಂಬುದೆಲ್ಲವನ್ನೂ ಹೇಳುತ್ತೇನೆ. ಎಲೈ ಪಾರ್ವತಿಯೇ ! ಕೇಳು.

೨೧-೨೩. ಈತನು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನು. ವೇದಪಾರಂ ಗತನು. ದೇವರನ್ನು ಪೂಜಿಸಿ ಅತಿಥಿ ಸತ್ಕಾರವನ್ನು ಮಾಡಿ ಅನಂತರ ತಾನು ಊಟಮಾಡುತ್ತಿದ್ದನು. ಆ ಪುಣ್ಯದ ಪ್ರಭಾವದಿಂದ ಪಿಂಡಾರವೆಂಬ ಪಟ್ಟಣ ದಲ್ಲಿ ಕುಕರ್ದಮನೆಂಬ ರಾಜನಾಗಿ ಹುಟ್ಟಿದನು. ಈತನು ರಾಜನಾದಮೇಲೆ ಮನೋವಾಕ್ಕಾಯಗಳಿಂದ ಯಾವ ಪುಣ್ಯವನ್ನೂ ಮಾಡಲೇ ಇಲ್ಲ.

ತೇನ ದೈವಾಭಿಯೋಗೇನ ಮೃತೋ ವೈ ಪ್ರೇತರಾಡಭೂತ್ ।
ಶುಷ್ಕಾಸ್ಯಶ್ಶುಷ್ಕರೂಪಶ್ಚ ಪೀತವರ್ಣಃ ಕರಾಳಕಃ ॥ ೨೪ ॥

ಗಂಭೀರಾಕ್ಷೋ ಮಹಾಪಾಪೀ ದುಷ್ಟೈಃ ಪ್ರೇತೈಶ್ಚ ಸಂಯುತಃ ।
ಊರ್ಧ್ವರೋಮಾ ಜಟಾಯುಕ್ತಃ ಕಾಲರೂಪೋ ಭಯಂಕರಃ ।
ಏವಂ ದೃಷ್ಟ್ವಾ ತದಾ ದೇಪ ವಿಹ್ವಲೋ ಬಾಡಬೋಽಭವತ್ ॥ ೨೫ ॥

॥ ಕಹೋಡ ಉವಾಚ ॥

ಅಸ್ಮಿನ್ಮನೋರಮೇ ರಮ್ಯೇ ಸ್ಥಾನೇ ವೈ ಪರಮಾದ್ಭುತೇ ।
ಅಗ್ನಿಪಾಲೇಶ್ವರೇ ತೀರ್ಥೇ ನಿತ್ಯಂ ತಿಷ್ಠಾಮಿ ಭೂಮಿಪ ॥ ೨೬ ॥

ಯಜಮಾನಸ್ತ್ವಮಸ್ಮಾಕಂ ಕಥಂ ಜಾತೋಽಸಿ ಪ್ರೇತರಾಟ್ ।
ದುರಾತ್ಮಾ ದುಷ್ಟರೂಪಶ್ಚ ಕಾಲರೂಪೋ ಭಯಂಕರಃ ॥
ತೇನ ಕರ್ಮವಿಪಾಕೇನ ಜಾತೋ ವೈ ಭೂತಳೇ ಶುಭೇ ॥ ೨೭ ॥

---

೨೪-೨೫ ಆ ದುರದೃಷ್ಟದಿಂದ ಸತ್ತನಂತರದಲ್ಲಿ ಪ್ರೇತನಾದನು. ಅವನ ಆಕಾರವು ಒಣಕಲ ಮುಖವೂ, ಒಣಕಲು ದೇಹವೂ, ಕೆಂಚಬಣ್ಣವೂ, ಭಯಂಕರ ರೂಪವೂ ಕಣ್ಣುಗಳು ಆಳವಾಗಿಯೂ ಆಗಿ ದುಷ್ಟರಾದ ಮಹಾ ಪಾಪಿಗಳೊಡನೆ ಸೇರಿಕೊಂಡನು. ರೋಮಗಳೆಲ್ಲವೂ ಮೇಲು ಮುಖವಾಗಿದ್ದುವು. ಈ ರೀತಿಯಾದ ಆ ರಾಜನ ಶರೀರವನ್ನು ನೋಡಿ ಆ ಪುರೋಹಿತನಾದ ಬ್ರಾಹ್ಮಣನು ದುಃಖಗೊಂಡನು.

೨೬. ಕಹೋಡನು ಹೇಳಿದನು-ಎಲೈ ದೊರೆಯೆ! ಈ ರಮ್ಯವೂ ಅದ್ಭುತವೂ, ಆದ ಅಗ್ನಿ ಪಾಲೇಶ್ವರ ತೀರ್ಥದಲ್ಲಿ ನಾನು ಯಾವಾಗಲೂ ಇರುತ್ತೇನೆ.

೨೭ ಎಲೈ ದೊರೆಯೆ! ನೀನು ನನಗೆ ಯಜಮಾನನು. ಯಾವ ಪಾಪದ ದೆಸೆಯಿಂದಪ್ರೇತರಾಜನಾಗಿ ಆದೆ? ಯಾವಾತನು ದುಷ್ಟರೂಪನೂ ಭಯಂಕರನೂ ಕೂಡ ಆಗಿರುವೆಯಲ್ಲಾ! ಇದು ಯಾವ ಕರ್ಮ ವಿಪಾಕವು ?

॥ ಪ್ರೇತ ಉವಾಚ ॥

ಶೃಣು ಬಾಡಬ ಮೇ ಪಾಪಂ ಪೂರ್ವಜನ್ಮನಿ ಯತ್ಕೃತಂ ।
ಅಹಂ ಕುಕರ್ದಮೋ ರಾಜಾ ಪುರೇ ಪಿಂಡಾರಸಂಜ್ಞಕೇ ॥ ೨೮ ॥

ತತ್ರಸ್ಥೋಽಹಂ ಮಯಾ ದೇವ ಯತ್ಕೃತಂ ತಚ್ಛೃಣುಷ್ವ ಹಿ ।
ಬ್ರಹ್ಮಣಾಂ ಹಿಂಸನಂ ಚೈವ ಪುರಾಽಸತ್ಯಾದಿಭಾಷಣಂ ॥ ೨೯ ॥

ಪ್ರಜಾನಾಂ ಪೀಡನಂ ಚೈವ ಜೀವಾನಾಂ ಹಿಂಸನಂ ಸದಾ ।
ಗವಾಂ ವೈ ದುಃಖಕರ್ತಾಽಹಂ ಬ್ರಾಹ್ಮಣವ್ರತಲೋಪನಂ ॥ ೩೦ ॥

ಅಸ್ನಾತಸ್ಸರ್ವದಾ ನಿತ್ಯಂ ಸಜ್ಜನಾನಾಂ ಪ್ರದೂಷಕಃ ।
ವಿಷ್ಣುನಿಂದಾಪರೋ ನಿತ್ಯಂ ವೈಷ್ಣವಾನಾಂ ಪ್ರಣಿಂವಕಃ ॥ ೩೧ ॥

ದುರಾಚಾರೋ ದುರಾತ್ಮಾ ಚ ಕುಯೋನಿನಿರತಸ್ಸದಾ ।
ಯತ್ರ ತತ್ರ ಪ್ರಭುಂಜಾನೋ ನಾಹಂ ಶೌಚಪರಾಯಣಃ ॥ ೩೨ ॥

---

೨೮–೩೨ ಪ್ರೇತವು ಹೇಳಿತು. ಎಲೈ ಬ್ರಾಹ್ಮಣನೇ! ಪೂರ್ವಜನ್ಮದಲ್ಲಿ ನಾನು ಮಾಡಿದ ಪಾಪವನ್ನು ಹೇಳುತ್ತೇನೆ. ಕೇಳು. ನಾನು ಪಿಂಡಾರವೆಂಬ ಪಟ್ಟಣದಲ್ಲಿ ದೊರೆಯಾಗಿದ್ದೆನು. ಅಲ್ಲಿದ್ದುಕೊಂಡು ನಾನು ಮಾಡಿದುದನ್ನು ಹೇಳುತ್ತೇನೆ. ಕೇಳು. ನಾನು ಪೂರ್ವದಲ್ಲಿ ಬ್ರಾಹ್ಮಣರನ್ನು ಹಿಂಸಿಸುತ್ತಿದ್ದೆನು. ಯಾವಾಗಲೂ ಸುಳ್ಳನ್ನೇ ಆಡುತ್ತಿದ್ದೆನು. ಪ್ರಜೆಗಳನ್ನು ಪೀಡಿಸುತ್ತಾ ಪ್ರಾಣಿಗಳನ್ನೆಲ್ಲಾ ಹಿಂಸಿಸುತ್ತಿದ್ದೆನು ಗೋವುಗಳನ್ನು ದುಃಖಪಡಿಸುತ್ತಿದ್ದೆನು. ಬ್ರಾಹ್ಮಣರ ವ್ರತಗಳನ್ನೆಲ್ಲಾ ನಾಶಮಾಡುತ್ತಿದ್ದೆನು. ನಾನು ಸ್ನಾನವನ್ನೇ ಮಾಡುತ್ತಿರಲಿಲ್ಲ ಸಜ್ಜನರನ್ನು ದೂಷಿಸುತ್ತಿದ್ದೆನು. ವಿಷ್ಣುವನ್ನೂ ವೈಷ್ಣವರನ್ನೂ ದೂಷಿಸುತ್ತಲಿದ್ದೆನು. ದುರಾಚಾರವುಳ್ಳವನೂ ಕೆಟ್ಟಮನಸ್ಸುಳ್ಳವನೂ ಆಗಿದ್ದೆನು. ಕೀಳುಜಾತಿಯವರಲ್ಲಿ ಯಾವಾಗಲೂ ರಮಿಸುತ್ತಿದ್ದೆನು. ಸಿಕ್ಕಿದ ಕಡೆಯಲೆಲ್ಲಾ ಊಟಮಾಡುತ್ತಾ ಶುಚಿತ್ವವೆಂಬುವನ್ನೇ ತಿಳಿಯೆನು.

ತೇನ ಕರ್ಮಾಭಿಯೋಗೇನ ಮೃತೋ ವೈ ದ್ವಿಜರಾಟ್‌ತತಃ ।
ಪ್ರೇತಯೋನಿಂ ಪ್ರಪನ್ನೋಽಸ್ಮಿ ದುಃಖೀ ಜಾತೋ ಹ್ಯನೇಕಧಾ ॥ ೩೩ ॥

ಯಸ್ಯ ಮಾತಾ ಪಿತಾ ನಾಸ್ತಿ ಯಸ್ಯ ಸ್ವಜನಬಾಂಧವಾಃ ।
ತಸ್ಯ ವೈ ತು ಗುರುರ್ಮಾತಾ ಗತಿರ್ವೈ ಗುರುರೇವ ಚ ॥
ಇತಿ ಜ್ಞಾತ್ವಾ ತು ಭೋ ಬ್ರಹ್ಮನ್ ಮುಕ್ತಿಂ ದಾತುಂ ತ್ವಮರ್ಹಸಿ ॥ ೩೪ ॥

॥ ಕಹೋಡ ಉವಾಚ ॥

ಶೃಣು ತ್ವಂ ನೃಪತಿಶ್ರೇಷ್ಠ ಕರಿಷ್ಯೇ ವಚನಂ ತವ ।
ಮುಕ್ತಿಂ ಯಾಸ್ಯಂತಿ ತೇ ಸರ್ವೇ ತ್ವಯಾ ಸಹ ನ ಸಂಶಯಃ ॥ ೩೫ ॥

ಏಕಾದಶಪುರೋಗಾಶ್ಚ ಪ್ರೇತಾ ಯೇ ತವ ಸಂಗತಾಃ ।
ತೇಷಾಂ ಹಿ ಮುಕ್ತಿಂ ದಾಸ್ಯಾಮಿ ತೀರ್ಥೇಽಸ್ಮಿನ್ನವಿಶೇಷತಃ ॥ ೩೬ ॥

॥ ಶ್ರೀ ಮಹಾದೇವ ಉವಾಚ ॥

ತದಾ ವೈ ಸ ಚ ವಿಪ್ರಸ್ತು ತೀರ್ಥೇ ಗತ್ವಾ ಸುರೇಶ್ವರಿ ।
ಸರ್ವೈರ್ನಿರ್ವಾಪಯಾಮಾಸ ತಿಲಪಿಂಡೋದಕಕ್ರಿಯಾಃ ॥ ೩೭ ॥

---

೩೩. ಎಲೈ ಬ್ರಾಹ್ಮಣನೆ! ಆ ಕರ್ಮದಿಂದ ನಾನು ಪ್ರೇತನಾಗಿ ಹುಟ್ಟಿ ಈ ರೀತಿಯಾಗಿ ಅನೇಕ ಬಗೆಯಾದ ದುಃಖಗಳನ್ನು ಹೊಂದುತ್ತಿದ್ದೇನೆ.

೩೪. ಯಾವನಿಗೆ ತಾಯಿತಂದೆಗಳಾಗಲೀ ಬಂಧುಬಳಗವಾಗಲಿ ಇರುವುದಿಲ್ಲವೋ ಅವನಿಗೆ ಗುರುವೇ ತಾಯಿತಂದೆಯು. ಗುರುವೇ ಗತಿಯು. ಎಲೈ ಬ್ರಾಹ್ಮಣನೆ! ನೀನು ಇದನ್ನು ತಿಳಿದು ನನಗೆ ಮುಕ್ತಿಯನ್ನು ಕೊಡಬೇಕು.

೩೫. ಕಹೋಡನು ಹೇಳಿದನು- ಎಲೈ ರಾಜನೆ! ಕೇಳು. ನಿನ್ನ ಮಾತಿನಂತೆ ನಡೆಯುತ್ತೇನೆ. ಇಲ್ಲಿರುವವರೆಲ್ಲರೂ ನಿನ್ನೊಡನೆ ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ.

೩೬. ನಿನ್ನ ಜೊತೆಯಲ್ಲಿ ಹನ್ನೊಂದು ಜನ ಪ್ರೇತರಿರುವರಷ್ಟೆ! ಈ ಜಾಗದಲ್ಲಿ ಮುಕ್ತಿಯು ಎಲ್ಲರಿಗೂ ಬರುವಂತೆ ಮಾಡುತ್ತೇನೆ.

೩೭. ಶ್ರೀ ಮಹಾದೇವನು ಹೇಳಿದನು- ಆಗ ಆ ಕಹೋಡ ಬ್ರಾಹ್ಮಣನು ತೀರ್ಥಪ್ರದೇಶಕ್ಕೆ ಹೋಗಿ ಅವರೆಲ್ಲರಿಗೂ ತರ್ಪಣವನ್ನೂ ಪಿಂಡವನ್ನೂ ಕೊಟ್ಟು ಶ್ರಾದ್ಧವನ್ನು ಮಾಡಿದನು.

**ನ ಮಾಸೋ ನ ತಿಥಿರ್ದೇವಿ ತೀರ್ಥೇ ಗತ್ವಾ ಪುನಃ ಪುನಃ ।**
**ಕರ್ತವ್ಯಂ ಶ್ರಾದ್ಧಕರ್ಮಾದಿ ಬ್ರಹ್ಮಣೋಕ್ತಂ ಪುರಾ ಮಮ ॥ ೩೮ ॥**

**ಕೃತೇ ಕರ್ಮಣಿ ದೇವೇಶಿ ಮುಕ್ತಾಸ್ತೇ ತೀರ್ಥರಾಜಕೇ ।**
**ವಿಮಾನವರಸಂರೂಢಾಸ್ತೇ ಗತಾ ಮಾಮಕೀಂ ಪುರೀಂ ॥ ೩೯ ॥**

**ಸಂಗತಾ ಗೌಷ್ಕರಂ ಯತ್ರ ಸಾಭ್ರಮತ್ಯಾ ಸುರೇಶ್ವರಿ ।**
**ತತ್ರಸ್ನಾನಂ ಚ ದಾನಂ ಚ ಕೋಟಿಯಜ್ಞಫಲಂ ಭವೇತ್ ॥ ೪೦ ॥**

**ಯತ್ರಾಗ್ನಿತೀರ್ಥಂ ವರ್ತೇತ ಕಪಾಲೇಶ್ವರಸಂಜ್ಞಕೇ ।**
**ತತ್ರ ಸಾ ಮುಕ್ತಿದಾ ಪ್ರೋಕ್ತಾ ಸತ್ಯಂ ಸತ್ಯಂ ಭವೇದ್ಧ್ರುವಂ ॥ ೪೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯ ಕಥನಂ ನಾಮ ಚತುಸ್ತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೩೮. ಎಲೈ ದೇವಿಯೇ! ತೀರ್ಥಕ್ಕೆ ಹೋದರೆ ಸತ್ತವರುಗಳಿಗೆ ತೃಪ್ತಿ ಪಡಿಸುವುದಕ್ಕೆ ಅವರು ಸತ್ತ ಮಾಸವಾಗಲಿ ತಿಥಿಯಾಗಲಿ ಬೇಕಾಗುವುದಿಲ್ಲ. ಯಾವಾಗ ಬೇಕಾದರೂ ಎಷ್ಟು ಬಾರಿ ಬೇಕಾದರೂ ಮಾಡಬಹುದು. ಎಂದು ಬ್ರಹ್ಮನು ನನಗೆ ಹೇಳಿರುವನು.

೩೯. ಎಲೈ ಪಾರ್ವತಿಯೆ! ಆ ತೀರ್ಥದಲ್ಲಿ ಶ್ರಾದ್ಧ ಕರ್ಮವನ್ನು ಅವರಿಗೆ ಮಾಡಲು ಅವರು ಪ್ರೇತ ಕರ್ಮದಿಂದ ಮುಕ್ತರಾದರು. ಮತ್ತು ಅವರು ವಿಮಾನಗಳಲ್ಲಿ ಕುಳಿತುಕೊಂಡು ನನ್ನ ಪಟ್ಟಣವಾದ ಕೈಲಾಸಕ್ಕೆ ಹೋದರು.

೪೦. ಸಾಭ್ರಮತಿ ನದಿಯೊಡನೆ ಗೋಷ್ಕರವೆಂಬ ನದಿಯು ಸೇರುವ ಸಂಗಮದಲ್ಲಿ ಸ್ನಾನವನ್ನೂ ದಾನವನ್ನೂ ಮಾಡಬೇಕು. ಹಾಗೆ ಮಾಡಿದ ಸ್ನಾನ ದಾನಗಳು ಕೋಟಿ ಯಜ್ಞದ ಫಲವನ್ನು ಕೊಡುತ್ತವೆ.

೪೧. ಕಪಾಲೇಶ್ವರನಿರುವ ಅಗ್ನಿತೀರ್ಥದ ಬಳಿಯಲ್ಲಿ ಸ್ನಾನ ದಾನಗಳು ಮುಕ್ತಿಯನ್ನು ಕೊಡುತ್ತವೆ. ಇದು ಸತ್ಯವಾದುದು. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮ ಕಥನ ಎಂಬ ನೂರ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚತ್ರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವಉವಾಚ ॥

ದೇವ್ಯನ್ಯತ್ಸಂಪ್ರವಕ್ಷ್ಯಾಮಿ ಹಿರಣ್ಯಾಸಂಗಮಂ ಮಹತ್ ।
ಯದಾ ಸಾಭ್ರಮತೀ ಗಂಗಾ ಸಪ್ತಸ್ರೋತಾಃ ಪುರಾಭವತ್ ॥ ೧ ॥

ತದಾ ಸಾ ಬ್ರಹ್ಮತನಯಾ ಸಪ್ತಸ್ರೋತೇತಿ ವಿಶ್ರುತಾ ।
ಸಪ್ತಮಂ ತದ್ಧಿರಣ್ಯಾಖ್ಯಂ ಸ್ರೋತ ಇತ್ಯಭಿಧೀಯತೇ ॥ ೨ ॥

ತಸ್ಮಿಂಸ್ತೀರ್ಥೇ ನರಸ್ಸ್ನಾತ್ವಾ ಪಾಪೀ ಗತಿಮವಾಪ್ನುಯಾತ್ ।
ಋಕ್ಷಮಂಜುಮಯೋರ್ಮಧ್ಯೇ ಸತ್ಯವಾನ್ನಾಮ ಪರ್ವತಃ ॥ ೩ ॥

---

## ನೂರ ಮೂವತ್ತೈದನೆಯ ಅಧ್ಯಾಯವು



೧–೨. ಶ್ರೀ ಮಹಾದೇವನು ಹೇಳಿದನು–ಎಲೈ ದೇವಿಯೆ! ಹಿರಣ್ಯಾಸಂಗಮವೆಂಬ ಮತ್ತೊಂದು ತೀರ್ಥವನ್ನು ಹೇಳುತ್ತೇನೆ. ಕೇಳು. ಸಾಭ್ರಮತಿಯೆಂಬ ಗಂಗೆಯು ಏಳು ಭಾಗವಾಗಿ ಭಾಗವಾದಾಗಲೇ ಅದು ಬ್ರಹ್ಮನ ಮಗಳು ಸಪ್ತಸ್ರೋತ ಎಂದು ಹೆಸರು ತೆಗೆದುಕೊಂಡಿತು. ಅವುಗಳಲ್ಲಿ ಏಳನೆಯದು ಹಿರಣ್ಯಾಸ್ರೋತವೆಂದು ಹೆಸರು ಹೊಂದಿದೆ.

೩–೪. ಆ ತೀರ್ಥವಲ್ಲಿ ಮನುಷ್ಯನು ಸ್ನಾನ ಮಾಡಿದರೆ ಪಾಪಿಯಾದವನು ಉತ್ತಮ ಗತಿಯನ್ನು ಹೊಂದುತ್ತಾನೆ. ಋಕ್ಷ ಮಂಜುಮಯವೆಂಬ ನದಿಗಳ

ತಸ್ಯ ಪ್ರಾಕ್ಸ್ಸಮಹಾತೀರ್ಥಂ ಹಿರಣ್ಯಾಸಂಗಮಂ ಶುಭಂ ।
ತತ್ರ ಸ್ನಾತ್ವಾ ಚ ಪೀತ್ವಾ ಚ ನಾಶುಭಾಂ ಗತಿಮಾಪ್ನುಯಾತ್ ॥ ೪ ॥

ವನಸ್ಥಲ್ಯಾಂ ತತೋ ಗಚ್ಛೇದ್ದೃಷ್ಟ್ವಾ ನಾರಾಯಣಂ ಹರಿಂ ।
ತೀರ್ಥಮಪ್ಸರಸಾಂ ಪುಣ್ಯಂ ಹಿರಣ್ಯಾಸಂಗಮೇಶ್ವರಂ ॥ ೫ ॥

ಯತ್ರೋರ್ವಶೀ ಪುರಾ ಜಾತಾ ಸಮುಸ್ತಾಪ್ಸರಸಾಂ ಶುಭಾ ।
ನರನಾರಾಯಣೌ ಯತ್ರ ತಪಸ್ತೇಪತುರುತ್ತಮಂ ॥ ೬ ॥

ಹಿರಣ್ಯಾಸಂಗಮೇ ರಮ್ಯೇ ಮಹಾಪಾಪಹರೇ ಶುಭೇ ।
ಯತ್ರ ವೈ ಋಷಯಸ್ಸರ್ವೇ ಮಜ್ಜನ್ತಿ ವೀತಕಲ್ಮಷಾಃ ॥ ೭ ॥

ವಸಿಷ್ಠಾದ್ಯಾಶ್ಚ ಯೇ ವಿಪ್ರಾ ವಾಲಖಿಲ್ಯಾದಯಶ್ಚ ಯೇ ।
ಯತ್ರ ಮಜ್ಜಂತಿ ದೇವೇಶಿ ಹಿರಣ್ಯಾಯಾಶ್ಚ ಸಂಗಮೇ ॥ ೮ ॥

---

ಮಧ್ಯದಲ್ಲಿ ಸತ್ಯವಂತನೆಂಬ ಪರ್ವತವಿದೆ. ಆ ಸತ್ಯವಂತ ಪರ್ವತದ ಪೂರ್ವಕ್ಕೆ ಹಿರಣ್ಯಾ ಸಂಗಮವೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಅದರ ನೀರನ್ನು ಕುಡಿದರೆ ನರಕಭಾಗಿಯಾಗುವುದಿಲ್ಲ.

೫. ಆಮೇಲೆ ವನಸ್ಥಳಿಯೆಂಬ ಪುಣ್ಯಕ್ಷೇತ್ರಕ್ಕೆ ಹೋಗಬೇಕು ಅಲ್ಲಿ ನಾರಾಯಣ ಸ್ವಾಮಿಯ ದರ್ಶನವನ್ನೂ ಮಾಡಬೇಕು. ಅಲ್ಲಿಯೇ ಅಪ್ಸರೆ ತೀರ್ಥವಿದೆ. ಅಲ್ಲಿ ಸ್ನಾನಮಾಡಬೇಕು. ಮತ್ತು ಅಲ್ಲಿರುವ ಹಿರಣ್ಯಾ ಸಂಗಮೇಶ್ವರನನ್ನೂ ಸೇವಿಸಬೇಕು.

೬. ಅದೇ ಕ್ಷೇತ್ರದಲ್ಲಿಯೇ ಪೂರ್ವದಲ್ಲಿ ಉತ್ತಮಳಾದ ಊರ್ವಶಿಯೆಂಬ ಅಪ್ಸರಸ್ತ್ರೀಯು ಹುಟ್ಟಿದುದು. ನರನಾರಾಯಣರೂ ಕೂಡ ಅಲ್ಲಿಯೇ ತಪಸ್ಸನ್ನು ಮಾಡಿದರು.

೭. ಹಿರಣ್ಯಾ ಸಂಗಮವು ಪಾಪಹಾರಕವು. ಮಂಗಳಕರವಾದುದು. ಅಲ್ಲಿ ಋಷಿಗಳು ಪಾಪವಿಲ್ಲದಿದ್ದರೂ ಸ್ನಾನಮಾಡುತ್ತಾರೆ.

೮. ಈ ಹಿರಣ್ಯಾ ಸಂಗಮದಲ್ಲಿ ವಸಿಷ್ಠಾದಿ ಮಹರ್ಷಿಗಳೂ ವಾಲಖಿಲ್ಯಾದಿಗಳೂ ಕೂಡ ಸ್ನಾನ ಮಾಡುತ್ತಾರೆ.

ಯತ್ರ ಹಿರಣ್ಮಯಂ ರೂಪಂ ಸ್ನಾನಾದ್ವೈ ಭವತೇ ಧ್ರುವಂ ।
ಕಪಿಲಾಗೋಸಹಸ್ರಸ್ಯ ದಾನೇನೈವ ತು ಯತ್ಫಲಂ ॥ ೯ ॥

ತತ್ಫಲಂ ಸಮವಾಪ್ನೋತಿ ಹಿರಣ್ಯಾಸಂಗಮೇ ಸದಾ ।
ದಶಾಶ್ವಮೇಧೇ ಯತ್ಪುಣ್ಯಂ ಗ್ರಹಣೇ ಚಂದ್ರಸೂರ್ಯಯೋಃ ॥ ೧೦ ॥

ತದನಂತಗುಣಂ ಪುಣ್ಯಂ ಹಿರಣ್ಯಾಸಂಗಮೇ ಪುನಃ ।
ತುಲಾಪುರುಷದಾನೇನ ಯತ್ಫಲಂ ಸಮವಾಪ್ನುಯಾತ್ ॥ ೧೧ ॥

ತತ್ಫಲಂ ಲಭತೇ ಮರ್ತ್ಯೋ ಹಿರಣ್ಯಾಸಂಗಮೇ ಸದಾ ।
ಹಿರಣ್ಯಾಕ್ಷೋ ಮಹಾದೈತ್ಯಸ್ತೇನ ತಪ್ತಂ ಮಹತ್ತಪಃ ॥ ೧೨ ॥

ಹಿರಣ್ಯಸದೃಶಂ ತಸ್ಯ ಶರೀರಮಭವತ್ಪುರಾ ।
ಜನಮೇಜಯೋಽಥ ರಾಜಾ ವೈ ಸ್ನಾನಂ ಪ್ರಾಕುರುತಾತ್ರ ಹಿ ॥ ೧೩ ॥

ಬ್ರಹ್ಮಹತ್ಯಾ ಗತಾ ತತ್ರ ಹಿರಣ್ಯಾಸಂಗಮೇ ತದಾ ।
ವಿಶ್ವಾಮಿತ್ರೋಽಥ ರಾಜರ್ಷಿಃ ಸ್ನಾನಾರ್ಥಂ ವೈ ಸಮಾಗತಃ ॥ ೧೪ ॥

---

೯–೧೪. ಆ ಹಿರಣ್ಯಾಸಂಗಮದಲ್ಲಿ ಸ್ನಾನ ಮಾಡಿದರೆ ದೇಹವೆಲ್ಲವೂ ಚಿನ್ನದ ಬಣ್ಣವನ್ನು ಹೊಂದುತ್ತದೆ. ಅಲ್ಲಿ ಸ್ನಾನ ಮಾಡಿದರೆ ಸಾವಿರ ಕಪಿಲೆಯ ಹಸುಗಳನ್ನು ದಾನ ಮಾಡಿದರೆ ಹೊಂದುವ ಫಲವನ್ನು ಹೊಂದುತ್ತಾನೆ. ಸೂರ್ಯ ಚಂದ್ರರ ಗ್ರಹಣಗಳಲ್ಲಿ ದಶಾಶ್ವಮೇಧ ತೀರ್ಥದಲ್ಲಿ ಸ್ನಾನಮಾಡಿದರೆ ಯಾವ ಪುಣ್ಯವು ಬರುತ್ತದೆಯೋ ಆ ಪುಣ್ಯಕ್ಕಿಂತ ಬಹು ಹೆಚ್ಚಾದ ಪುಣ್ಯವನ್ನು ಇಲ್ಲಿ ಸ್ನಾನ ಮಾಡುವುದರಿಂದ ಹೊಂದುತ್ತಾನೆ. ಈ ಹಿರಣ್ಯಾ ನದಿಯ ಸಂಗಮದಲ್ಲಿ ಸ್ನಾನ ಮಾಡಿದ ಮನುಷ್ಯನು ತುಲಾ ಪುರುಷನನ್ನು ದಾನ ಮಾಡಿದರೆ ಯಾವ ಫಲವನ್ನು ಹೊಂದುತ್ತಾನೆಯೋ ಆ ಫಲವನ್ನು ಹೊಂದುತ್ತಾನೆ. ಈ ಹಿರಣ್ಯಾ ಸಂಗಮದಲ್ಲಿ ಪೂರ್ವದಲ್ಲಿ ಹಿರಣ್ಯಾಕ್ಷನು ಬಹುವಾದ ತಪಸ್ಸನ್ನು ಮಾಡಿ ಚಿನ್ನದಂತೆ ಬಣ್ಣವುಳ್ಳ ಮೈಯನ್ನು ಹೊಂದಿದನು. ಜನಮೇಜಯ ರಾಜನೂ ಕೂಡ ಈ ಹಿರಣ್ಯಾ ಸಂಗಮದಲ್ಲಿ ಸ್ನಾನಮಾಡಿ ತನ್ನ ಬ್ರಹ್ಮಹತ್ಯೆಯನ್ನು ಕಳೆದು ಕೊಂಡನು. ವಿಶ್ವಾಮಿತ್ರನೆಂಬ ಋಷಿಯೂ ಕೂಡ ಇಲ್ಲಿ ಸ್ನಾನಮಾಡಿ ನನ್ನ ಪಟ್ಟಣವಾದ ಕೈಲಾಸವನ್ನು ಹೊಂದಿದನು.

ಸ್ನಾನಂ ಕೃತ್ವಾ ವಿಶೇಷೇಣ ಗತೋಽಸೌ ಮಾಮಕೀಂ ಪುರೀಂ ।
ಬ್ರಾಹ್ಮಣೋ ವಾ ಕ್ಷತ್ರಿಯೋ ವಾ ಶೂದ್ರೋ ವಾಥ ಸುರೇಶ್ವರಿ ।
ಸ್ನಾನಂ ತತ್ರ ಪ್ರಕುರ್ವಂತಿ ತೇ ಗಚ್ಛಂತಿ ಶಿವಾಲಯಂ ॥ ೧೫ ॥

॥ ಇತಿ ಹಿರಣ್ಯಾಸಂಗಮಂ ತೀರ್ಥಂ ॥

॥ ಮಹಾದೇವ ಉವಾಚ ॥

ತತೋ ದೇವಿ ಪ್ರವಕ್ಷ್ಯಾಮಿ ಹಿರಣ್ಯಾಸಂಗಮಾದನು ।
ಧರ್ಮವತೀ ನದೀ ಯತ್ರ ಸಂಗತಾ ಸಹ ಗಂಗಯಾ ॥ ೧೬ ॥

ತತ್ರ ಸ್ನಾತ್ವಾ ನರೋ ಧನ್ಯಃ ತ್ರಿದಿವಂ ಯಾತ್ಯಸಂಶಯಂ ।
ತತ್ರ ಧರ್ಮಕೃತಂ ತೀರ್ಥಂ ಯಃ ಪಶ್ಯತಿ ಸ ಪುಣ್ಯಭಾಕ್ ॥ ೧೭ ॥

ಶ್ರಾದ್ಧಂ ತತ್ರೈವ ಯೇ ಕುರ್ಯುರ್ಮುಚ್ಯಂತೇ ಪಿತೃಋಣಾತ್ ।
ತತಸ್ತು ಮಧುರಾ ತೀರ್ಥಂ ಸರ್ವಪಾಪಪ್ರಣಾಶನಂ ॥ ೧೮ ॥

---

೧೫. ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ ಶೂದ್ರನಾಗಲಿ ಯಾರಾದರೂ ಸರಿಯೆ ಈ ಹಿರಣ್ಯಾ ಸಂಗಮದಲ್ಲಿ ಸ್ನಾನಮಾಡಿದರೆ ಅವರು ನನ್ನ ಸ್ಥಾನವಾದ ಕೈಲಾಸವನ್ನು ಹೊಂದುತ್ತಾರೆ.

ಇಂತು ಹಿರಣ್ಯಾಸಂಗಮತೀರ್ಥದ ಮಹಿಮೆಯು.

೧೬-೧೭. ಮಹಾದೇವನು ಹೇಳಿದನು–ಎಲೈ ದೇವಿಯೆ! ಹಿರಣ್ಯಾ ಸಂಗಮವಾದ ಮೇಲೆ ಬರುವ ತೀರ್ಥಗಳನ್ನು ಹೇಳುತ್ತೇನೆ. ಕೇಳು. ಸ್ವಲ್ಪ ಮುಂದೆ ಹೋದಮೇಲೆ ಧರ್ಮಾವತೀ ಎಂಬ ನದಿಯು ಗಂಗೆಯೊಡನೆ ಬಂದು ಸೇರುತ್ತದೆ. ಅಲ್ಲಿ ಸ್ನಾನಮಾಡಿದ ಮನುಷ್ಯನು ಧನ್ಯನಾಗುತ್ತಾನೆ. ಅವನು ಸ್ವರ್ಗವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಆ ಧರ್ಮವತಿಯ ತೀರ್ಥವನ್ನು ನೋಡಿದವನೇ ಪುಣ್ಯವಂತನು.

೧೮-೧೯. ಆ ಜಾಗದಲ್ಲಿ ಶ್ರಾದ್ಧವನ್ನು ಮಾಡಿದವರು ಪಿತೃಋಣದಿಂದ ಮುಕ್ತರಾಗುತ್ತಾರೆ. ಅಲ್ಲಿಂದ ಸ್ವಲ್ಪ ಮುಂದೆ ಹೋದರೆ ಮಧುರಾ ತೀರ್ಥವಿರುವುದು ಅದು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ. ಮಧುರಾ ತೀರ್ಥದಲ್ಲಿ ಸ್ನಾನ

ಸ್ನಾತವ್ಯಂ ಮಧುರಾತೀರ್ಥೇ ದ್ರಷ್ಟವ್ಯೋ ಮಧುರಾಹರಿಃ ।
ಯತ್ರ ವಿಶ್ರಾಂತ್ರವಾನ್ಕೃಷ್ಣೋ ಜರಾಸಂಧಭಯಾಕುಲಃ ॥ ೧೯ ॥

ಕಂಸಾಸುರವಧೇ ವೃತ್ತೇ ಗಂತುಕಾಮಃ ಕುಶಸ್ಥಲೀಂ ।
ಉಷಿತ್ವಾ ಸಪ್ತರಾತ್ರಂ ತು ಸ ದೇವಶ್ಚಂದನಾತಟೇ ॥ ೨೦ ॥

ಮಧುರಾತೀರ್ಥಮಾಸಾದ್ಯ ಸ್ನಾನಂ ಕೃತ್ವಾ ವಿಧಾನತಃ ।
ಮಧುರಾದಿತ್ಯನಾಮಾನಂ ಯತ್ರ ಸ್ನಾಪಿತವಾನ್ ಹರಿಃ ॥ ೨೧ ॥

ಭೋಜವೃಷ್ಣ್ಯಂಧಕವೃತೋ ವೀರೈರ್ಯಾದವಸಂಕುಲೈಃ ।
ಅಷ್ಟಾದಶಸಹಸ್ರಾಣಿ ವಿಪ್ರಾಣಾಂ ಯಜ್ಞಶಾಲಿನಾಂ ॥ ೨೨ ॥

ಸ್ಥಾಪಯಿತ್ವಾ ಯಯೌ ದತ್ವಾ ದಾನಾನಿ ವಿವಿಧಾನಿ ಚ ।
ತತ್ರ ತೀರ್ಥಸಹಸ್ರಾಣಿ ತಿಷ್ಠಂತಿ ಚ ಸುರೇಶ್ವರಿ ॥ ೨೩ ॥

ಶ್ರಾದ್ಧಂ ತತ್ರ ಪ್ರಕರ್ತವ್ಯಂ ಪಿತೄಣಾಂ ಹಿತಕಾಮ್ಯಯಾ ।
ನ ಭೇತವ್ಯಂ ಜರಾಸಂಧಾನ್ಮತ್ತೀರ್ಥೇ ವಸತಾ ಸದಾ ॥ ೨೪ ॥

---

ಮಾಡಬೇಕು. ಮಧುರೆಯಲ್ಲಿ ಶ್ರೀ ಕೃಷ್ಣನ ದರ್ಶನವನ್ನು ಮಾಡಬೇಕು. ಹಿಂದೆ ಜರಾಸಂಧನಿಂದ ಭಯಪಟ್ಟ ಹರಿಯು ಈ ಮಧುರೆಯಲ್ಲಿಯೇ ಬಂದು ನೆಲಸಿದನು.

೨೦-೨೩. ಶ್ರೀ ಕೃಷ್ಣನು ಕಂಸನನ್ನು ಕೊಂದಮೇಲೆ ಕುಶಸ್ಥಳಿಗೆ ಹೋಗಲು ಭೋಜರು, ವೃಷ್ಣಿಗಳು, ಅಂಧಕರು, ಯಾದವರನ್ನು ಕರೆದುಕೊಂಡು ಹೊರಟು ಚಂದನಾವತಿಯ ದಡದಲ್ಲಿ ಏಳು ರಾತ್ರಿಗಳ ಕಾಲವಿದ್ದನು. ಹರಿಯು ಅಲ್ಲಿರುವ ಮಧುರಾ ತೀರ್ಥದಲ್ಲಿ ಶಾಸ್ತ್ರೋಕ್ತವಾಗಿ ಸ್ನಾನಮಾಡಿ ಅಲ್ಲಿರುವ ಮಧುರಾದಿತ್ಯನನ್ನು ಪೂಜಿಸಿದನು. ಯಾಗವನ್ನು ಮಾಡುವ ದೀಕ್ಷಿತರನ್ನು ಹದಿನೆಂಟು ಸಾವಿರ ಜನರನ್ನು ಅಲ್ಲಿ ಶ್ರೀ ಕೃಷ್ಣನು ನಿಲ್ಲಿಸಿ ಅವರಿಗೆ ಬೇಕಾದು ದನ್ನು ಕೊಟ್ಟು ತಾನು ಮುಂದೆ ಹೊರಟನು. ಆ ಜಾಗದಲ್ಲಿ ಸಾವಿರ ತೀರ್ಥಗಳು ಇವೆ.

೨೪-೨೫. ಆ ಜಾಗದಲ್ಲಿ ಪಿತೃಗಳಿಗೆ ಒಳ್ಳೆಯದಾಗಲು ಶ್ರಾದ್ಧವನ್ನು ಮಾಡಬೇಕು. ಶ್ರೀ ಕೃಷ್ಣನು ಆ ದೀಕ್ಷಿತರನ್ನು ಕುರಿತು ನೀವು ಈ ನನ್ನ ತೀರ್ಥದಲ್ಲಿಯೇ ಇರಿ. ಇಲ್ಲಿದ್ದರೆ ಜರಾಸಂಧನ ಭಯವು ನಿಮಗಿರುವುದಿಲ್ಲ.

ಇತ್ಯುಕ್ತ್ವಾ ತಾನ್ದ್ವಿಜಾನ್ ಕೃಷ್ಣಃ ಪ್ರಯಯೌ ದ್ವಾರಕಾಂಪ್ರತಿ ।
ತಸ್ಮಿಂಸ್ತೀರ್ಥೇ ನರಸ್ಸ್ನಾತ್ವಾ ಮಧುರಾರ್ಕಂ ಪ್ರಪೂಜಯೇತ್ ॥ ೨೫ ॥

ಮಾಘಸ್ಯ ಶುಕ್ಲಸಪ್ತಮ್ಯಾಂ ಕಪಿಲಾಗೋಪ್ರದಾನತಃ ।
ಚಿರಂ ಸೌಖ್ಯಾನಿ ಭುಕ್ತ್ವೇಹ ಪದಮಾದಿತ್ಯಮಾವ್ರಜೇತ್ ॥ ೨೬ ॥

ಶೃಣು ಸುಂದರಿ ವಕ್ಷ್ಯಾಮಿ ಚೇತಿಹಾಸಂ ಪುರಾತನಂ ।
ಯಂ ಶ್ರುತ್ವಾ ಮುಚ್ಯತೇ ಲೊಕೋ ಬ್ರಹ್ಮಹತ್ಯಾದಿಪಾತಕಾತ್ ॥ ೨೭ ॥

ಏಕಸ್ಮಿನ್ವಾಸರೇ ದೇವಿ ಮಾಂಡವ್ಯ ಋಷಿಸತ್ತಮಃ ।
ಗಂಗಾದ್ವಾರೇ ಮಹಾಪುಣ್ಯೇ ತಪಸ್ತೇಪೇ ತದಾನಘೇ ॥ ೨೮ ॥

ಪತ್ರಾಶೀ ಚ ಫಲಾಶೀ ಚ ವಾಯುಭಕ್ಷಕರಸ್ಸದಾ ।
ಅಹೋರಾತ್ರಂ ಸದಾ ದೇವಿ ವಿಷ್ಣುಧ್ಯಾನಪರಾಯಣಃ ॥ ೨೯ ॥

---

ಎಂದು ಹೇಳಿ ದ್ವಾರಕೆಗೆ ಹೊರಟು ಹೋದನು. ಆ ತೀರ್ಥದಲ್ಲಿ ಸ್ನಾನಮಾಡಿ ಮಧುರಾರ್ಕನನ್ನು ಪೂಜಿಸಬೇಕು.

೨೬. ಈ ಜಾಗದಲ್ಲಿ ಮಾಘಶುದ್ಧ ಸಪ್ತಮಿಯ ದಿವಸ ಸ್ನಾನಮಾಡಿ ಕಪಿಲೆಯ ಹಸುವನ್ನು ದಾನಮಾಡಿದರೆ ಈ ಲೋಕದಲ್ಲಿ ಬಹುಕಾಲ ಸುಖವನ್ನು ಅನುಭವಿಸಿ ಕೊನೆಯಲ್ಲಿ ಆದಿತ್ಯನ ಲೋಕವನ್ನು ಹೊಂದುತ್ತಾನೆ.

೨೭. ಎಲೈ ಪಾರ್ವತಿಯೆ! ಒಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದುದರಿಂದಲೇ ಬ್ರಹ್ಮಹತ್ಯಾದಿ ಪಾಪಗಳು ಹೋಗುತ್ತವೆ.

೨೮. ಎಲೈ ದೇವಿಯೆ! ಒಂದುಸಾರಿ ಋಷಿಶ್ರೇಷ್ಠನಾದ ಮಾಂಡವ್ಯನು ಆ ಗಂಗಾದ್ವಾರದಲ್ಲಿ ತಪಸ್ಸನ್ನು ಘೋರವಾಗಿ ಮಾಡುತ್ತಿದ್ದನು

೨೯. ಅವನು ನಿತ್ಯವೂ ಎಲೆ ಹಣ್ಣುಗಳನ್ನು ತಿಂದುಕೊಂಡು ಕೆಲವು ಕಾಲವೂ ಗಾಳಿಯನ್ನು ಸೇವಿಸುತ್ತ ಕೆಲವು ಕಾಲವೂ ಹಗಲೂ ರಾತ್ರಿಯೂ ಆ ವಿಷ್ಣುವನ್ನೇ ಧ್ಯಾನಿಸುತ್ತ ತಪಸ್ಸನ್ನು ಮಾಡಿದನು.

ಯೋಗಭ್ಯಾಸರತೋ ನಿತ್ಯಂ ನಿತ್ಯಂ ಧರ್ಮಪರಾಯಣಃ ।
ತಸ್ಮಿನ್ ದೇಶೇ ತು ವೈ ದೇವಿ ರಾಜಾ ವೈ ವಿಶ್ವಮೋಹನಃ ॥ ೩೦ ॥

ಗಜಾಶ್ವರಥಪತ್ತೀನಾಂ ಸಂಪದ್ಭಿರ್ವಿಶ್ರುತೋ ಭುವಿ ।
ಸೋಮಚಂದ್ರೇತಿ ವಿಖ್ಯಾತಃ ಪುತ್ರಸ್ತಸ್ಯ ಸುಲಕ್ಷಣಃ ॥ ೩೧ ॥

ಏಕದಾ ತು ತದಾ ದೇವಿ ಗತೋ ಹ್ಯಾಖೇಟಕೇ ವನೇ ।
ತತ್ರ ಗತ್ವಾ ತದಾ ತೇನ ಕೃತಾ ಹ್ಯಾಖೇಟಕಕ್ರಿಯಾಃ ॥ ೩೨ ॥

ಸ್ವಾತ್ಮಾನಂ ರಮಯಾಮಾಸ ಸ್ವಲೋಕೈಃ ಪರಿವಾರಿತಃ ।
ಕ್ರೀಡಿತೇ ತು ತದಾ ರಾಜ್ಞಿ ರಾತ್ರಿರ್ಜಾತಾ ಸುರೇಶ್ವರಿ ॥ ೩೩ ॥

ತಸ್ಯಾಂ ರಾತ್ರೌ ತದಾ ರಾಜಾ ಹ್ಯುವಾಸಾಖೇಟಕೇ ವನೇ ।
ತಸ್ಯಾಂ ರಾತ್ರೌ ವ್ಯತೀತಾಯಾಂ ಮುಹೂರ್ತೇ ಬ್ರಾಹ್ಮಸಂಜ್ಞಕೇ ॥ ೩೪ ॥

ಹೃತೋಽಶ್ವೋಽಥ ವಿಶೇಷೇಣ ಚೌರೇಣೈವ ದುರಾತ್ಮನಾ ।
ತದಾ ಹಾಹೇತಿ ಶಬ್ದೋಽಭೂತ್ ಕ್ವ ಗತಃ ಕ್ವ ಗತೋ ಹರಿಃ ॥ ೩೫ ॥

---

೩೦–೩೧. ಆ ಮಾಂಡವ್ಯನು ದಿನವೂ ಯೋಗಾಭ್ಯಾಸವನ್ನು ಮಾಡಿಕೊಂಡು ಧರ್ಮವನ್ನಾಚರಿಸುತ್ತಲಿದ್ದನು. ಆ ದೇಶದಲ್ಲಿ ವಿಶ್ವಮೋಹನನೆಂಬ ಒಬ್ಬ ರಾಜನಿದ್ದನು ಅವನಿಗೆ ಆನೆ ಕುದುರೆ ಕಾಲಾಳು ಮುಂತಾದ ಸಂಪತ್ತು ಅನೇಕವಾಗಿದ್ದಿತು. ಅವನು ಸೋಮಚಂದ್ರನೆಂಬುವನ ಮಗನು.

೩೨–೩೩. ಒಂದುಸಾರಿ ಆ ರಾಜನು ಬೇಟೆಗೋಸ್ಕರ ಆ ಕಾಡಿಗೆ ಹೋಗಿ ಅಲ್ಲಿ ಸ್ವೇಚ್ಛೆಯಾಗಿ ಬೇಟೆಯಾಡಿದನು. ತನ್ನ ಜನರೊಡನೆ ಕೂಡಿಕೊಂಡು ಅಲ್ಲಿ ತನಗೆ ತೃಪ್ತಿಯಾಗುವವರೆಗೂ ಬೇಟೆಯನ್ನಾಡಿದನು. ಹೀಗೆ ಬೇಟೆಯಾಡುತ್ತಿರಲು ಅಲ್ಲಿಯೇ ರಾತ್ರಿಯಾಯಿತು.

೩೪–೩೬. ಆ ರಾತ್ರಿಯೆಲ್ಲವೂ ಆ ರಾಜನು ಬೇಟೆಯಾಡಿದ ಕಾಡಿನಲ್ಲಿಯೇ ಇದ್ದನು. ರಾತ್ರಿಯು ಕಳೆದಮೇಲೆ ಬೆಳಗಾಗುತ್ತಿರಲು ಬ್ರಾಹ್ಮವೆಂಬ ಮುಹೂರ್ತದಲ್ಲಿ ಅವನ ಕುದುರೆಯನ್ನು ಯಾರೋ ಕಳ್ಳರು ಕದ್ದುಕೊಂಡು ಹೋದರು. ಆಗ ಕುದುರೆಯು ಎಲ್ಲಿ ಹೋಯಿತು ? ಕುದುರೆಯು ಎಲ್ಲಿ ಹೋಯಿತು ? ಎಂದು

ತದಾ ರಾಜ್ಞೋ ಭಟಾಸ್ಸರ್ವೇ ಗಂತುಕಾಮಾಸ್ಸಮುತ್ಸುಕಾಃ ।
ಚೋರೇಣಾಪಿ ಹೃತಶ್ಚಾಶ್ವ ಇತ್ಯೇವಂ ಸಂವದಂತಿ ಹಿ ॥ ೩೬ ॥

ನಿರೀಕ್ಷ್ಯಮಾಣಾಸ್ತೇ ಸರ್ವೇ ಹರಿದ್ವಾರಂ ಸಮಾಗತಾಃ ।
ಋಷಿರ್ಮಾಂಡವ್ಯ ತತ್ರಮಾಂಡಸ್ಯಸ್ತಪಸ್ತಪತಿ ನಿತ್ಯಶಃ ॥ ೩೭ ॥

ಧ್ಯಾನೇನ ಚ ಸಮಾಯುಕ್ತೋ ದೃಷ್ಟೋಽಸೌ ತೈರ್ಭಟೈಸ್ತದಾ ।
ಅಯಂ ಚೌರಸ್ಸದಾ ಪಾಪೀ ಧ್ಯಾನಂ ಕೃತ್ವಾ ಪ್ರತಿಷ್ಠತಿ ॥ ೩೮ ॥

ಬದ್ಧ್ವಾಶ್ವಂ ತು ಸಮಾಯಾತೋಽಜ್ಞಾತೋ ರಾಜಭಟೈಸ್ತದಾ ।
ಏವಂ ವಿಚಾರ್ಯ ತೇ ಸರ್ವೇ ಗೃಹೀತ್ವಾ ತಂ ಮಹಾಮುನಿಂ ।
ರಾಜ್ಞೋ ನಿವೇದಯಾಮಾಸುಸ್ತಂ ಚೌರಂ ಮುನಿಸತ್ತಮಂ ॥ ೩೯ ॥

॥ ದೂತಾ ಊಚುಃ ॥

ಅಶ್ವಾಪಹಾರೀ ಹ್ಯಾನೀತಶ್ಚೋರೋಽಯಂ ನೃಪ ಸರ್ವಥಾ ॥ ೪೦ ॥

---

ಹಾ ಹಾ ಕಾರವನ್ನು ಮಾಡುತ್ತ ರಾಜಭಟರೆಲ್ಲರೂ ಹುಡುಕುತ್ತ ಹೊರಟು ಯಾವನೋ ಕಳ್ಳನು ಕುದುರೆಯನ್ನು ಕದ್ದುಕೊಂಡು ಹೋಗಿರುವನೆಂದು ಮಾತನಾಡಿ ಕೊಳ್ಳುತ್ತಿದ್ದರು.

೩೭. ಕುದುರೆಯನ್ನು ಹುಡುಕುತ್ತ ಆ ರಾಜಭಟರೆಲ್ಲರೂ ಹರಿದ್ವಾರಕ್ಕೆ ಬಂದರು. ಅಲ್ಲಿಯೇ ಆ ಮಾಂಡವ್ಯ ಋಷಿಯು ನಿತ್ಯವೂ ತಪಸ್ಸನ್ನು ಮಾಡುತ್ತಿದ್ದನು.

೩೮–೩೯. ಧ್ಯಾನದಿಂದ ಕೂತುಕೊಂಡಿರುವ ಆ ಮಾಂಡವ್ಯನನ್ನು ನೋಡಿ ಆ ಭಟರು ಇವನೇ ಕಳ್ಳನು. ಪಾಪಿ. ಕುದುರೆಯನ್ನು ಕದ್ದು ತಂದು ಎಲ್ಲಿಯೋ ಕಟ್ಟಿಬಿಟ್ಟು ಇಲ್ಲಿ ಧ್ಯಾನಮಾಡುತ್ತ ನಮಗೆ ತಿಳಿಯದಂತೆ ನಟಿಸುತ್ತಿರುವನು. ಹೀಗೆಂದು ಆ ರಾಜಭಟರು ಯೋಚಿಸಿ ಆ ಮುನಿಯನ್ನು ಹಿಡಿದುಕೊಂಡು ಹೋಗಿ ಅವನೇ ಕಳ್ಳನೆಂದು ರಾಜನಿಗೆ ತಿಳಿಸಿದರು.

೪೦. ದೂತರು ಹೇಳಿದರು–ಎಲೈ ಪ್ರಭುವೆ! ಕುದುರೆಯ ಕಳ್ಳನನ್ನು ಹಿಡಿದು ತಂದಿದ್ದೇವೆ. ಇವನೇ ಕುದುರೆಯನ್ನು ಕದ್ದಿರುವವನು.

|| ಮಹಾದೇವ ಉವಾಚ ||

ಆಜ್ಞಾ ದತ್ತಾ ತದಾ ತೇನ ಶೂಲಿಕಾರೋಪಣೇ ಪುನಃ |
ತದಾ ತೈಸ್ತು ಭಟೈಸ್ಸರ್ವೈಃ ಮಿಲಿತ್ವಾ ಬಂಧನಂ ಕೃತಂ || ೪೧ ||

ಪಶ್ಚಾದ್ವೈ ಶೂಲಿಕಾಪ್ರೋತಸ್ಸತ್ ಕ್ಷಣಾಚ್ಚ ಕೃತಸ್ತದಾ |
ನ ಜ್ಞಾತಂ ತೇನ ತತ್ಕರ್ಮ ಶೂಲಿಕಾಯಾಃ ಪ್ರತೋದನಂ || ೪೨ ||

ಯತೋ ಯೋಗಸಮಾರೂಢೋ ವಿಷ್ಣುಧ್ಯಾನಪರಾಯಣಃ |
ಶೂಲಿಕಾಪ್ರೋತನಂ ಜ್ಞಾತಂ ಕತಿಚಿತ್ಕಾಲಯೋಗತಃ || ೪೩ ||

ಮಾಂಡವ್ಯೋಽಹಂ ಋಷಿಶ್ರೇಷ್ಠಃ ಕೇನ ಕರ್ಮ ಇದಂ ಕೃತಂ |
ತ್ರಿಕಾಲಜ್ಞಾನೀ ಸರ್ವಜ್ಞೋ ಜ್ಞಾತವಾಂಸ್ತದ್ವಿಚೇಷ್ಟಿತಂ || ೪೪ ||

ಧರ್ಮಸ್ಯ ಚ ಇದಂ ಕರ್ಮ ನಾನ್ಯಸ್ಯ ಚ ಕದಾಚನ |
ಯೋಗಾರೂಢಸ್ಸ ಧರ್ಮಾತ್ಮಾ ಗತೋ ಧರ್ಮಸ್ಯ ಚಾನ್ತಿಕೇ || ೪೫ ||

---

೪೧. ಮಹಾದೇವನು ಹೇಳಿದನು-ಆಗ ರಾಜನು ಅವನನ್ನು ಶೂಲಕ್ಕೇರಿಸುವಂತೆ ಅಪ್ಪಣೆ ಮಾಡಿದನು. ಅದರಂತೆ ರಾಜಭಟರೆಲ್ಲರೂ ಸೇರಿ ಕೊಂಡು ಆತನನ್ನು ಶೂಲಕ್ಕೇರಿಸಿದರು

೪೨ ಅನಂತರ ಅವರೆಲ್ಲರೂ ಸೇರಿಕೊಂಡು ಅವನನ್ನು ಶೂಲಕ್ಕೇರಿಸಲು ತನ್ನನ್ನು ಶೂಲಕ್ಕೇರಿಸಿದುದು ಆ ಮಾಂಡವ್ಯನಿಗೆ ತಿಳಿಯಲೇ ಇಲ್ಲ.

೪೩. ಅವನು ಯೋಗಾಭ್ಯಾಸದಲ್ಲಿದ್ದುದರಿಂದ ಆಗ ಆ ಶೂಲಕ್ಕೇರಿಸಿದುದು ತಿಳಿಯಲಿಲ್ಲ. ಆ ಮೇಲೆ ಸ್ವಲ್ಪ ಕಾಲದಲ್ಲಿಯೇ ಯೋಗದಿಂದ ನಿವೃತ್ತನಾಗಲು ತಾನು ಶೂಲದಲ್ಲಿದ್ದೇನೆಂಬುದು ತಿಳಿಯಿತು.

೪೪. ನಾನು ಋಷಿಶ್ರೇಷ್ಠನಾದ ಮಾಂಡವ್ಯನು. ಈ ಕೆಲಸವನ್ನು ಮಾಡಿದವರಾರು ? ನಾನು ಸರ್ವಜ್ಞನೂ ಭೂತ ಭವಿಷ್ಯದ್ವರ್ತಮಾನಗಳನ್ನು ಬಲ್ಲವನೂ ಆಗಿದ್ದೇನೆ. ಈ ರೀತಿಯಾಗಿ ನನಗೆ ತೊಂದರೆ ಕೊಟ್ಟವರಾರು ?

೪೫. ಇದು ಧರ್ಮನ ಕೆಲಸವಿರಬೇಕೇ ಹೊರತು ಮತ್ತೊಬ್ಬರದಲ್ಲ ಎಂದು ಯೋಚಿಸಿ ಯೋಗಾಭ್ಯಾಸವನ್ನು ಹೊಂದಿ ಧರ್ಮನ ಬಳಿಗೆ ಹೋದನು.

**ತತ್ರ ಗತ್ವಾ ಹ್ಯುವಾಚೇದಂ ಶೃಣು ತ್ವಂ ಶ್ರೇಯಸಾಂ ಪತೇ ।**
**ತ್ವಂ ವೈ ಧರ್ಮ ಇತಿ ಖ್ಯಾತೋ ಲೋಕೇ ವೇದೇ ಚ ಸರ್ವದಾ ॥ ೪೬ ॥**

**ಶೂಲಿಕಾಪ್ರೋತನಂ ಕರ್ಮ ಕಥಂ ವೈ ಚ ತ್ವಯಾ ಕೃತಂ ।**
**ತತ್ಸರ್ವಂ ಶ್ರೋತುಮಿಚ್ಛಾಮಿ ತ್ವತ್ತೋ ದೇವ ನ ಸಂಶಯಃ ॥ ೪೭ ॥**

**॥ ಧರ್ಮ ಉವಾಚ ॥**

**ಶೃಣುಷ್ವ ತ್ವಂ ದ್ವಿಜಶ್ರೇಷ್ಠ ಪೂರ್ವಜನ್ಮನಿ ಯತ್ಕೃತಂ ।**
**ತದಹಂ ಕಥಯಿಷ್ಯಾಮಿ ಕೃಪಾಂ ಕುರು ಮಮೋಪರಿ ॥ ೪೮ ॥**

**ಬಾಲತ್ವೇ ತು ಇದಂ ಕರ್ಮ ಯತ್ಕೃತಂ ಋಷಿಸತ್ತಮ ।**
**ತಚ್ಛೃಣುಷ್ವ ಮಹಾಪ್ರಾಜ್ಞ ಭವೇಸ್ಮಿನ್ ಪಾತನಂ ಕೃತಂ ॥ ೪೯ ॥**

**ಏಕಸ್ಮಿನ್ ಸಮಯೇ ವಿಪ್ರ ತ್ವಂ ಗತೋ ವಿಜನೇ ವನೇ ।**
**ತತ್ರ ಗತ್ವಾ ತ್ವಯಾ ವಿಪ್ರ ಜೀವಶ್ಶಲಭಸಂಜ್ಞಕಃ ॥ ೫೦ ॥**

---

೪೬-೪೭. ಆ ಧರ್ಮನ ಬಳಿಗೆ ಹೋಗಿ ಇಂತೆಂದನು. ಎಲೈ ಶ್ರೇಯಸ್ಸಿಗೆಲ್ಲಾ ನಿಧಿಯಾದ ಧರ್ಮನೆ! ನಿನ್ನನ್ನು ಲೋಕವೂ ವೇದವೂ ಧರ್ಮನೆಂದು ಯಾವಾಗಲೂ ಹೊಗಳುತ್ತವೆ. ಅಂತಹ ನೀನು ನನಗೆ ಶೂಲಕ್ಕೇರಿಸುವಿಕೆ ಯನ್ನೇಕೆ ಮಾಡಿದೆ? ಅದೆಲ್ಲವನ್ನೂ ನೀನು ಈಗ ನನಗೆ ಹೇಳು. ಕೇಳಲು ಇಚ್ಛಿಸುತ್ತೇನೆ.

೪೮. ಧರ್ಮನು ಹೇಳಿದನು–ಎಲೈ ಬ್ರಾಹ್ಮಣನೆ! ನೀನು ಪೂರ್ವ ಜನ್ಮದಲ್ಲಿ ಮಾಡಿದುದನ್ನು ಹೇಳುತ್ತೇನೆ. ಅದೆಲ್ಲವನ್ನೂ ದಯವಿಟ್ಟು ಕೇಳು.

೪೯. ಎಲೈ ಋಷಿಯೆ! ಬಾಲ್ಯದಲ್ಲಿ ನೀನು ಪಾಪವನ್ನು ಮಾಡಿದ್ದೀಯೆ. ಅದರ ಶಿಕ್ಷೆಯನು ಈಗ ಹೊಂದಿದ್ದೀಯೆ. ಅವನ್ನು ಹೇಳುತ್ತೇನೆ. ಕೇಳು

೫೦. ಎಲೈ ಬ್ರಾಹ್ಮಣನೆ! ನೀನು ಒಂದುಸಾರಿ ಯಾರೂ ಇಲ್ಲದ ನಿರ್ಜನವಾದ ಕಾಡಿಗೆ ಹೋಗಿದ್ದೆ. ಅಲ್ಲಿದ್ದ ಒಂದು ಪತಂಗದ ಹುಳುವನ್ನು ಹಿಡಿದುಕೊಂಡೆ.

ಆರೋಪಿತಸ್ಸ ವೈ ಶೂಲ್ಯಾಂ ಕರ್ಮಣಾ ತೇನ ದುಃಖಿತಃ ।
ರಾಜ್ಞಾ ಹ್ಯಾರೋಪಿತಸ್ತ್ವಂ ವೈ ಕರ್ಮಣಾ ತೇನ ಸುವ್ರತ ॥ ೫೧ ॥

ಸರ್ವಥೈವ ಪ್ರಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ।
ಅಲ್ಪಮಾತ್ರಮಿದಂ ಕರ್ಮ ತ್ವಯಾ ಭುಕ್ತಂ ನ ಸಂಶಯಃ ।
ಸುಖೀ ಭವ ಚ ವಿಪ್ರೇಂದ್ರ ಗಚ್ಛ ತ್ವಂ ಹಿ ಯಥೇಚ್ಛಯಾ ॥ ೫೨ ॥

॥ ಮಹಾದೇವ ಉವಾಚ ॥

ಏತದ್ವಾಕ್ಯಂ ತತಶ್ಶ್ರುತ್ವಾ ಮಾಂಡವ್ಯೋ ದ್ವಿಜಸತ್ತಮಃ ।
ಉವಾಚ ವಚನಂ ತತ್ರ ಸಕೋಪಾದರುಣೇಕ್ಷಣಃ ॥ ೫೩ ॥

॥ ಮಾಂಡವ್ಯ ಉವಾಚ ॥

ರೇ ಪಾಪಿಷ್ಠ ದುರಾಚಾರ ಕಿಂ ಕೃತಂ ಬಹುಪಾತಕಂ ।
ಯೇನ ಕೃತಮಿದಂ ಕರ್ಮ ಶೂಲಿಕಾಯಾಃ ಪ್ರತೋದನಂ ।
ಮಮ ವಾಕ್ಯಪ್ರಕೋಪೇಣ ಶೂದ್ರಸ್ತ್ವಂ ಭವ ಸರ್ವಥಾ ॥ ೫೪ ॥

---

೫೧. ಆ ಹುಳುವನ್ನು ಒಂದು ಮುಳ್ಳಿಗೆ ಚುಚ್ಚಿದೆ. ಆ ಕರ್ಮದಿಂದ ನೀನು ಈಗ ರಾಜನಿಂದ ಶೂಲಕ್ಕೇರಿಸಲ್ಪಟ್ಟವನಾಗಿ ತೊಂದರೆ ಪಡುತ್ತಿದ್ದೀಯೆ.

೫೨. ತಾನು ಮಾಡಿದುದು ಒಳ್ಳೆಯ ಕೆಲಸವೇ ಆಗಲಿ ಕೆಟ್ಟ ಕೆಲಸವೇ ಆಗಲಿ ಅವನ್ನು ಎಲ್ಲಾ ರೀತಿಯಿಂದಲೂ ಅನುಭವಿಸಿಯೇ ತೀರಬೇಕು. ಈ ಪಾಪವು ಸ್ವಲ್ಪದ್ದಾಗಿರುತ್ತದೆ. ಇದನ್ನು ನೀನು ಅನುಭವಿಸಿದೆ. ಸಂಶಯವಿಲ್ಲ. ಇನ್ನು ಮೇಲೆ ನೀನು ಹೋಗು. ಸುಖವಾಗಿರು. ಇಷ್ಟಬಂದ ಕಡೆಗೆ ಹೋಗು.

೫೩. ಮಹಾದೇವನು ಹೇಳಿದನು–ಮಾಂಡವ್ಯನು ಈ ಮಾತನ್ನು ಕೇಳಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಇಂತೆಂದನು.

೫೪. ಮಾಂಡವ್ಯನು ಹೇಳಿದನು–ಎಲೈ ಪಾಪಿಯೂ ದುರಾಚಾರಿಯೂ ಆದ ಧರ್ಮನೆ! ಏನು ಕೆಟ್ಟಕೆಲಸವನ್ನು ಮಾಡಿದೆ? ನನ್ನನ್ನು ಈ ಶೂಲದಲ್ಲಿ ಏರಿಸುವಂತೆ ಮಾಡಿದುದರಿಂದ ನನಗೆ ಕೋಪಬಂದು ಶಾಪ ಕೊಡುತ್ತೇನೆ ಈ ನನ್ನ ಶಾಪದಿಂದ ನೀನು ಶೂದ್ರನಾಗಿ ಹುಟ್ಟು.

॥ ಮಹಾದೇವ ಉವಾಚ ॥

ಕತಿಚಿತ್ಕಾಲಯೋಗೇನ ವಂಶೇ ವೈ ಚಂದ್ರಸಂಜ್ಞಕೇ ।
ಜಾತೋ ವಿದುರನಾಮಾಖ್ಯೋ ವಿಷ್ಣುಭಕ್ತಿಪರಾಯಣಃ । ॥ ೫೫ ॥

ತೀರ್ಥಯಾತ್ರಾಮಿಷೇಣೈವ ಗತಸ್ಸಾಭ್ರಮತೀಂ ನದೀಂ ।
ಯತ್ರ ಧರ್ಮವತೀಸಂಗೋ ವರ್ತತೇ ಚ ಸುರೇಶ್ವರಿ ॥ ೫೬ ॥

ತತ್ರ ವೈ ಕೃತವಾನ್ ಸ್ನಾನಂ ವಿದುರೋ ಧರ್ಮರೂಪವಾನ್ ।
ತ್ಯಕ್ತಂ ತತ್ರ ಹಿ ಶೂದ್ರತ್ವಂ ಧರ್ಮವತ್ಯಾಂ ನ ಸಂಶಯಃ ॥ ೫೭ ॥

ಏತಸ್ಮಾತ್ಕಾರಣಾದ್ದೇವಿ ಯೇತ್ರ ಸ್ನಾನಂ ಪ್ರಕುರ್ವತೇ ।
ತೇ ನರಾಃ ಪುಣ್ಯಕರ್ಮಾಣೋ ಗಚ್ಛಂತಿ ಪರಮಂ ಪದಂ ॥ ೫೮ ॥

---

೫೫. ಮಹಾದೇವನು ಹೇಳಿದನು–ಹೀಗಿರುತ್ತಿರಲು ಕೆಲವು ಕಾಲದ ಮೇಲೆ ಚಂದ್ರವಂಶದಲ್ಲಿ ಆ ಧರ್ಮನು ವಿದುರನೆಂಬ ಹೆಸರಿನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿ ವಿಷ್ಣು ಭಕ್ತಿಯನ್ನು ಹೊಂದಿ ಪ್ರಸಿದ್ಧನಾಗಿದ್ದನು.

೫೬. ಹೀಗಿರುತ್ತಿರಲು ಆ ವಿದುರನು ತೀರ್ಥಯಾತ್ರೆಯ ನಿಮಿತ್ತದಿಂದ ಸಾಭ್ರಮತಿ ಧರ್ಮವತಿಗಳು ಸಂಗಮವಾಗುವಲ್ಲಿಗೆ ಹೋದನು.

೫೭. ಆ ಧರ್ಮನ ಅವತಾರಿಯಾದ ವಿದುರನು ಧರ್ಮವತಿಯಲ್ಲಿ ಸ್ನಾನ ಮಾಡಿ ಅಲ್ಲಿ ತನ್ನ ಶೂದ್ರ ಭಾವವನ್ನು ಬಿಟ್ಟುಬಿಟ್ಟನು. ಸಂಶಯವಿಲ್ಲ

೫೮. ಈ ಕಾರಣದಿಂದಲೇ ನಾನು ಹೇಳುವುದು. ಇಲ್ಲಿ ಸ್ನಾನಮಾಡಿದವರು ಪುಣ್ಯಭಾಗಿಗಳಾಗಿ ಕೈವಲ್ಯವನ್ನು ಹೊಂದುತ್ತಾರೆ.

ಅತ್ರ ಶ್ರಾದ್ಧಂ ಚ ದಾನಂ ಚ ಯೇ ಕುರ್ವಂತಿ ನರಾ ಭುವಿ ।
ಇಹ ಲೋಕೇ ಪರಾಮ್ವೃದ್ಧಿಂ ಮೋದಂತೇ ಪ್ರಾಪ್ಯ ವೈ ದಿವಿ ॥ ೫೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಮಧುರಾದಿ ತೀರ್ಥ ವರ್ಣನಂ ನಾಮ ಪಂಚತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೯. ಈ ಜಾಗದಲ್ಲಿ ಸ್ನಾನಮಾಡಿ ಶ್ರಾದ್ಧಗಳನ್ನು ಮಾಡುವವರು ಈ ಲೋಕದಲ್ಲಿ ಬಹುವಾದ ವೃದ್ಧಿಯನ್ನು ಹೊಂದಿ ಸ್ವರ್ಗದಲ್ಲಿ ಸುಖಿಸುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮೆಯಲ್ಲಿ ಮಧುರೆಯೇ ಮುಂತಾದ ತೀರ್ಥಗಳ ವರ್ಣನೆ ಎಂಬ ನೂರ ಮೂವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಟ್‌ತ್ರಿಂಶದಧಿಕಶತತಮೋऽಧ್ಯಾಯಃ ||



|| ಮಹಾದೇವ ಉವಾಚ ||

ಕಂಬುತೀರ್ಥೇ ನರಸ್ಸ್ನಾತ್ವಾ ಕೃತ್ವಾ ವಾ ಪಿತೃತರ್ಪಣಂ ।
ಅರ್ಚಯೇದ್ದೇವದೇವೇಶಂ ನಾರಾಯಣಮನಾಮಯಂ || ೧ ||

ದತ್ವಾ ದಾನಾನಿ ವಿಧಿವತ್ ಬ್ರಾಹ್ಮಣೇಭ್ಯೋ ವಿಧಾನತಃ ।
ವಿಷ್ಣುಲೋಕಮವಾಪ್ನೋತಿ ತೀರ್ಥಸ್ಯಾಸ್ಯ ಪ್ರಭಾವತಃ || ೨ ||

ಅತ್ರ ರಾಜರ್ಷಿಣಾ ಪೂರ್ವಂ ವಿಶ್ವಾಮಿತ್ರೇಣ ಧೀಮತಾ ।
ತಪಸ್ತಪ್ತಂ ವಿಶೇಷೇಣ ಪ್ರಜಾಕಾಮೇನ ಸುಂದರಿ || ೩ ||

---

## ನೂರ ಮೂವತ್ತಾರನೆಯ ಅಧ್ಯಾಯವು



೧. ಮಹಾದೇವನು ಹೇಳಿದನು- ಕಂಬು ತೀರ್ಥದಲ್ಲಿ ಮನುಷ್ಯನು ಸ್ನಾನ ಮಾಡಿ ಪಿತೃತರ್ಪಣವನ್ನು ಮಾಡಿ ದೇವದೇವನಾದ ನಾರಾಯಣನನ್ನು ಪೂಜಿಸ ಬೇಕು.

೨. ಅಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ಬ್ರಾಹ್ಮಣರಿಗೆ ದಾನಗಳನ್ನು ಕೊಡ ಬೇಕು. ಹಾಗೆ ಮಾಡಿದರೆ ಈ ತೀರ್ಥದ ಮಹಿಮೆಯಿಂದ ವಿಷ್ಣುಲೋಕವನ್ನು ಹೊಂದುತ್ತಾನೆ.

೩. ಇದೇ ತೀರ್ಥದಲ್ಲಿ ಹಿಂದೆ ವಿಶ್ವಾಮಿತ್ರನು ಮಕ್ಕಳಿಗೋಸ್ಕರ ಬಹು ವಾದ ತಪಸ್ಸನ್ನು ಮಾಡಿದನು.

ಪ್ರಜಾಕಾಮೋ ನರೋ ಯಶ್ಚ ಕಂಬುತೀರ್ಥಂ ಹಿ ಗಚ್ಛತಿ ।
ಸಪ್ರಜಾಂ ಲಭತೇ ನಿತ್ಯಂ ಸತ್ಯಂ ಸತ್ಯಂ ವರಾನನೇ ॥ ೪ ॥

॥ ಇತಿ ಕಂಬುತೀರ್ಥಮಹಾತ್ಮ್ಯಂ ॥

ತತೋ ಗಚ್ಛೇತ್ಸುರಶ್ರೇಷ್ಠೇ ತೀರ್ಥಂ ನಾಮ ಕಪೀಶ್ವರಂ ।
ಸನ್ನಿಧೌ ರಕ್ತಸಿಂಹಸ್ಯ ಮಹಾಪಾತಕನಾಶನಂ ॥ ೫ ॥

ಬಧ್ಯಮಾನೇ ಪುರಾ ಸೇತೌ ರಾಮರಾವಣನಿಗ್ರಹೇ ।
ಗೃಹೀತಪರ್ವತಶೃಂಗೈರ್ವಿಶೇಷಾತ್ಕಪಿಭಿಃ ಸ್ಮೃತಂ ॥ ೬ ॥

ನಾಮ್ನಾ ಕಪೀಶ್ವರಾದಿತ್ಯಂ ಚಕ್ರುಸ್ತೀರ್ಥಮನುತ್ತಮಂ ।
ಯತ್ರ ತೀರ್ಥೇ ನರಸ್ಸ್ನಾತ್ವಾ ಕೃತ್ವಾ ಚ ಪಿತೃತರ್ಪಣಂ ॥ ೭ ॥

ದೃಷ್ಟ್ವಾ ಕಪೀಶ್ವರಾದಿತ್ಯಂ ಮುಚ್ಯತೇ ಬ್ರಹ್ಮಹತ್ಯಯಾ ।
ತತ್ರ ಸ್ನಾನಂ ಪ್ರಕರ್ತವ್ಯಂ ಚೈತ್ರಾಷ್ಟಮ್ಯಾಂ ವಿಶೇಷತಃ ॥ ೮ ॥

---

೪. ಆದ್ದರಿಂದ ಮಕ್ಕಳನ್ನು ಅಪೇಕ್ಷಿಸುವವನು ಕಂಬುತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಮಕ್ಕಳನ್ನು ಪಡೆಯುತ್ತಾನೆ. ಇದು ಸತ್ಯವು.

ಇದು ಕಂಬುತೀರ್ಥದ ಮಹಿಮೆಯು

೫. ಎಲೈ ಪಾರ್ವತಿಯೇ! ಅಲ್ಲಿಂದ ಮುಂದೆ ಕಪೀಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಅದು ರಕ್ತಸಿಂಹದ ಬಳಿಯಲ್ಲಿದೆ. ಮಹಾ ಪಾಪಗಳನ್ನು ನಾಶ ಮಾಡುತ್ತದೆ.

೬. ಪೂರ್ವದಲ್ಲಿ ರಾಮ ರಾವಣರ ಯುದ್ಧ ಕಾಲದಲ್ಲಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟುತ್ತಿರುವಾಗ ಕಪಿಗಳೆಲ್ಲವೂ ಅಲ್ಲಿ ಪರ್ವತದ ಬಂಡೆಗಳನ್ನು ತೆಗೆದುಕೊಂಡುದರಿಂದ ಅದಕ್ಕೆ ಆ ಹೆಸರು ಬಂದಿರುವುದು.

೭-೮. ಅಲ್ಲಿ ಕಪೀಶ್ವರಾದಿತ್ಯವೆಂಬ ಉತ್ತಮ ತೀರ್ಥವನ್ನು ಮಾಡಿದರು. ಆ ಕಪೀಶ್ವರಾದಿತ್ಯ ತೀರ್ಥದಲ್ಲಿ ಸ್ನಾನಮಾಡಿ ತರ್ಪಣಮಾಡಿ ಕಪೀಶ್ವರಾದಿತ್ಯನ ದರ್ಶನವನ್ನು ಮಾಡಿದರೆ ಬ್ರಹ್ಮಹತ್ಯೆಯೂ ಕೂಡ ಹೋಗುತ್ತದೆ. ಆ ಜಾಗದಲ್ಲಿ ಚೈತ್ರಾಷ್ಟಮಿಯಲ್ಲಿ ಸ್ನಾನಮಾಡುವುದು ಬಹು ಪುಣ್ಯಕರವು. ಹನುಮಂತನೇ

**ಹನೂಮತ್ಪ್ರಮುಖೈಸ್ತತ್ರ ಸ್ನಾತಂ ಯತ್ರ ದಿನತ್ರಯಂ ।**
**ಕಪಿತೀರ್ಥಪ್ರಭಾವೋಽಯಂ ಭವತ್ಯೈ ಸಮುದೀರಿತಃ ॥ ೯ ॥**

**ಅಸ್ಮಿನ್ ತೀರ್ಥೇ ನರಸ್ಸ್ನಾತ್ವಾ ಪೂಜಯಿತ್ವಾ ಕಪೀಶ್ವರಂ ।**
**ರೂಪವಾನ್ ಬಹುಭೋಗೀ ಚ ಜಾಯತೇ ನಾತ್ರ ಸಂಶಯಃ ॥ ೧೦ ॥**

**ಬಲಂ ವಾಂಛತಿ ಯೋ ಲೋಕೇ ಧರ್ಮಂ ವಾ ಪುತ್ರಮೇವ ಚ ।**
**ಸರ್ವಂ ಸ ತು ಲಭೇನ್ನಿತ್ಯಂ ಕಪಿತೀರ್ಥಪ್ರಭಾವತಃ ॥ ೧೧ ॥**

**॥ ಇತಿ ಕಪಿತೀರ್ಥಮಾಹಾತ್ಮ್ಯಂ ॥**

**ಏಕಧಾರಂ ತತೋ ಗಚ್ಛೇತ್ತೀರ್ಥಂ ಪರಮಪಾವನಂ ।**
**ಏಕಧಾರೇ ನರಸ್ಸ್ನಾತ್ವಾ ಏಕರಾತ್ರಮುಪೋಷಿತಃ ॥ ೧೨ ॥**

**ಅರ್ಚಯೇತ್ ಸ್ವಾಮಿದೇವೇಶಂ ಕುಲಾನಾಂ ತಾರಯೇಚ್ಛತಂ ।**
**ಸ್ವಾಮಿತೀರ್ಥಸಮಂ ಜ್ಞೇಯಂ ಯತ್ರ ತೀರ್ಥಾವಗಾಹನಂ ॥ ೧೩ ॥**

---

ಮುಂತಾದವರು ಅಲ್ಲಿ ಮೂರು ದಿನಗಳು ಸ್ನಾನಮಾಡಿದ್ದಾರೆ. ಈ ರೀತಿಯಾಗಿ ಕಪಿತೀರ್ಥದ ಮಹಿಮೆಯನ್ನು ನಿನಗೆ ಹೇಳಿದ್ದೇನೆ.

೧೦. ಈ ತೀರ್ಥದಲ್ಲಿ ನರನು ಸ್ನಾನಮಾಡಿ ಕಪೀಶ್ವರನನ್ನು ಪೂಜಿಸಿದರೆ ರೂಪವಂತನೂ, ಬಹುವಾದ ಭೋಗವುಳ್ಳವನೂ ಆಗುವುದರಲ್ಲಿ ಸಂಶಯವಿಲ್ಲ.

೧೧. ಲೋಕದಲ್ಲಿ ಯಾರು ಬಲವನ್ನಾಗಲೀ, ಧರ್ಮವನ್ನಾಗಲೀ, ಮಕ್ಕಳನ್ನಾಗಲೀ ಅಪೇಕ್ಷಿಸುವರೋ ಅವರು ಆ ಕಪಿತೀರ್ಥದಲ್ಲಿ ಸ್ನಾನಮಾಡಿದರೆ ಅದರ ಪ್ರಭಾವದಿಂದ ಅವೆಲ್ಲವನ್ನೂ ಹೊಂದುತ್ತಾರೆ.

ಇಂತು ಕಪಿತೀರ್ಥದ ಮಹಿಮೆಯು

೧೨-೧೩. ಅನಂತರ ಮುಂದೆ ಹೋದರೆ ಏಕಧಾರೆ ಎಂಬ ತೀರ್ಥವು ಸಿಕ್ಕುತ್ತದೆ ಅದು ಬಹು ಪಾವನವಾದುದು. ಏಕಧಾರೆಯಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸವಿದ್ದು ಆ ಏಕಧಾರೇಶನನ್ನು ಪೂಜಿಸಿದರೆ ನೂರು ವಂಶಗಳನ್ನು ಅವನು ಉದ್ಧರಿಸುತ್ತಾನೆ. ಈ ತೀರ್ಥವು ಸ್ವಾಮಿತೀರ್ಥಕ್ಕೆ ಸಮವಾದುದು.

ರುದ್ರಲೋಕಂ ನರೋ ಗಚ್ಛೇತ್ತೀರ್ಥಸ್ಯಾಸ್ಯ ಪ್ರಭಾವತಃ ।
ಯತ್ರ ಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಲೋಕಂ ಚ ಗಚ್ಛತಿ ॥ ೧೪ ॥

ತೇ ಲೋಕಾಃ ಪುಣ್ಯಕರ್ಮಾಣಃ ತಟೇಽಸ್ಮಿನ್ಸಂವಸಂತಿ ಹಿ ।
ನ ಭಯಂ ವಿದ್ಯತೇ ತೇಷಾಂ ಖಡ್ಗಧಾರಾದಿಕಂ ಚ ಯತ್ ।
ತತ್ಸರ್ವಮಾಶು ನಶ್ಯೇತ ತೀರ್ಥೇ ಹ್ಯೇಕಪ್ರಧಾರಕೇ ॥ ೧೫ ॥

॥ ಇತ್ಯೇಕಧಾರತೀರ್ಥವರ್ಣನಂ ॥

ಸಪ್ತಧಾರಂ ತತೋ ಗಚ್ಛೇತ್ತೀರ್ಥಾನಾಂ ತೀರ್ಥಮುತ್ತಮಂ ।
ಸಪ್ತಸಾರಸ್ವತಂ ನಾಮ ಯತ್ಕೃತೇ ಮುನಿಭಿಃ ಕೃತಂ ॥ ೧೬ ॥

ತ್ರೇತಾಯುಗೇ ಮಂಖಿತೀರ್ಥಂ ಕೃತಂ ಮಂಖಿಮಹರ್ಷಿಣಾ ।
ದ್ವಾಪರೇ ಪಾಂಡುಪುತ್ರೈಸ್ತು ಸಪ್ತಧಾರಂ ಪ್ರವರ್ತಿತಂ ॥ ೧೭ ॥

---

೧೪-೧೫. ಇಲ್ಲಿ ಸ್ನಾನಮಾಡಿದರೆ ಈ ತೀರ್ಥದ ಮಹಿಮೆಯಿಂದ ರುದ್ರಲೋಕವನ್ನು ಹೊಂದುತ್ತಾರೆ. ಯಾವ ತೀರ್ಥಗಳಲ್ಲಿ ಸ್ನಾನಮಾಡಿದರೆ ಪಾನಮಾಡಿದರೆ ಬ್ರಹ್ಮಲೋಕವು ಸಿಕ್ಕುತ್ತದೆಯೋ ಅದೂ ಕೂಡ ಈ ಏಕಧಾರೆಯ ದಡದಲ್ಲಿ ವಾಸಮಾಡಿದರೆ ಲಭಿಸುತ್ತವೆ ಅವರುಗಳಿಗೆ ಕತ್ತಿಯ ಏಟೇ ಮುಂತಾದುವುಗಳ ಭಯವೊಂದೂ ಇರುವುದಿಲ್ಲ. ಅವೆಲ್ಲ ಭಯಗಳೂ ಈ ಏಕಧಾರ ತೀರ್ಥದಲ್ಲಿ ಸ್ನಾನಮಾಡುವುದರಿಂದ ಹೋಗುತ್ತವೆ.

ಇಂತು ಏಕಧಾರ ತೀರ್ಥದ ವರ್ಣನೆಯು.

೧೬. ಅನಂತರ ಉತ್ತಮವಾದ ಸಪ್ತಧಾರವೆಂಬ ತೀರ್ಥಕ್ಕೆ ಹೋಗಬೇಕು. ಅದನ್ನೇ ಸಾರಸ್ವತವೆಂಬ ಹೆಸರಿನಿಂದ ತೀರ್ಥವನ್ನು ಮುನಿಗಳು ಮಾಡಿದ್ದಾರೆ.

೧೭. ಇದೇ ತೀರ್ಥವು ತ್ರೇತಾಯುಗದಲ್ಲಿ ಮಂಖಿಯೆಂಬ ಋಷಿಯಿಂದ ನಿರ್ಮಿತವಾಗಿ ಮಂಖಿತೀರ್ಥವೆನ್ನಿಸಿಕೊಂಡಿದ್ದಿತು. ದ್ವಾಪರ ಯುಗದಲ್ಲಿ ಪಾಂಡವರು ಸಪ್ತಧಾರವೆಂಬ ಹೆಸರಿನಿಂದ ಇದನ್ನೇ ಪ್ರಸಿದ್ಧಿಪಡಿಸಿದರು.

**ಸಪ್ತಧಾರಕತಾಂ ಪ್ರಾಪ್ತಂ ತೀರ್ಥಂ ಹರಜಟಾಚ್ಯುತಂ ।**
**ಸಪ್ತರೂಪಾಣಿ ಗಂಗಾಯಾ ಯಾನಿ ಲೋಕೇಷು ಸಪ್ತಸು ॥ ೧೮ ॥**

**ವಹನ್ತಿ ತಾನಿ ಪುಣ್ಯಾನಿ ತೀರ್ಥೇಽಸ್ಮಿನ್ಸಪ್ತಧಾರಕೇ ।**
**ಸಪ್ತಧಾರೇ ಕೃತಂ ಶ್ರಾದ್ಧಂ ಪಿತೃಣಾಂ ತೃಪ್ತಿದಾಯಕಂ ॥ ೧೯ ॥**

**ಶೃಣು ದೇವಿ ಪ್ರವಕ್ಷ್ಯಾಮಿ ಚೇತಿಹಾಸಂ ಪುರಾತನಂ ।**
**ಯಂ ಶ್ರುತ್ವಾ ದೇವದೇವೇಶಿ ಬ್ರಹ್ಮಲೋಕೇ ವ್ರಜೇದ್ಧ್ರುವಂ ॥ ೨೦ ॥**

**ಕೌಷೀತಕಸ್ಯ ಪುತ್ರೋ ವೈ ಮುಂಖಿನಾಮಾತಿವಿಶ್ರುತಃ ।**
**ವಿಷ್ಣುಧ್ಯಾನರತೋ ನಿತ್ಯಂ ವಿಷ್ಣುಲೋಕಪ್ರಪೂಜಕಃ ॥ ೨೧ ॥**

**ವೇದಾಧ್ಯಯನಕರ್ತಾ ಚ ಅಗ್ನಿಹೋತ್ರಪರಾಯಣಃ ।**
**ಸುರೂಪಾ ವಿಶ್ವರೂಪೇತಿ ಸ್ತ್ರಿಯೌ ದ್ವೇ ಸ್ತಸ್ತು ತದ್ಗೃಹೇ ॥ ೨೨ ॥**

---

೧೮-೧೯. ಗಂಗೆಯು ಹರನ ಜಟೆಯಿಂದ ಏಳುಭಾಗವಾಗಿ ಬಿದ್ದು ಹರಿದು ದರಿಂದ ಸಪ್ತಧಾರೆಯೆಂದು ಹೆಸರಾಯಿತು ಏಳು ಲೋಕವಲ್ಲಿಯೂ ಗಂಗೆಯು ಏಳು ರೂಪವಾಗಿದೆಯಷ್ಟೆ! ಆ ಪುಣ್ಯರೂಪಗಳಾದ ಏಳೂ ಇಲ್ಲಿ ಏಳು ಭಾಗವಾಗಿ ಹರಿಯುತ್ತವೆ. ಈ ಸಪ್ತಧಾರದಲ್ಲಿ ಮಾಡಿದ ಶ್ರಾದ್ಧವು ಪಿತೃಗಳಿಗೆ ತೃಪ್ತಿಯನ್ನು ಉಂಟುಮಾಡುತ್ತದೆ.

೨೦. ಎಲೈ ದೇವಿಯೆ! ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳುವುದರಿಂದಲೇ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೨೧. ಕೌಷೀತಕನೆಂಬ ಋಷಿಗೆ ಮುಂಖಿಯೆಂಬ ಒಬ್ಬ ಮಗನಿದ್ದನು. ಅವನು ಯಾವಾಗಲೂ ವಿಷ್ಣುಧ್ಯಾನ ಮಾಡುತ್ತಾ ವೈಷ್ಣವರನ್ನು ಪೂಜಿಸುತ್ತಾ ಇದ್ದನು.

೨೨. ವೇದಾಧ್ಯಯನದಲ್ಲಿ ನಿಪುಣನು. ಅಗ್ನಿಹೋತ್ರವನ್ನು ಮಾಡಿಕೊಂಡಿದ್ದನು. ಅವನಿಗೆ ಸುರೂಪಳೆಂದೂ, ವಿಶ್ವರೂಪಳೆಂದೂ ಇಬ್ಬರು ಹೆಂಡಿರಿದ್ದರು.

ತಾಭ್ಯಾಂ ಪುತ್ರವಿಹೀನಾಭ್ಯಾಂ ದೃಷ್ಟ್ವಾ ದೇವಿ ವಿಶಂಕಿತಃ ।
ಕಿಂ ಕರ್ತವ್ಯಮಿತಿ ಧ್ಯಾಯನ್ನತಿಚಿಂತಾಪರೋಽಭವತ್ ॥ ೨೩ ॥

ಆಭ್ಯಾಂ ಪುತ್ರವಿಹೀನಾಭ್ಯಾಂ ಮಮ ವಂಶೋ ವಿನಶ್ಯತಿ ।
ಪುತ್ರೇಣ ಲಭತೇ ಸ್ವರ್ಗೋ ಮುಕ್ತಿರ್ವೈ ಪುತ್ರಕೋ ಭವೇತ್ ॥ ೨೪ ॥

ಸ್ಥಿರೋ ವಂಶಸ್ತು ಪುತ್ರೇಣ ಹ್ಯನ್ಯಥಾ ನರಕಂ ವ್ರಜೇತ್ ।
ಏವಂ ಚಿನ್ತ್ಯಾಂ ಪ್ರಕುರ್ವಾಣೋ ನ ಸುಖಂ ಲಭತೇ ಕ್ವಚಿತ್ ॥
ತದಾ ಸ್ವಗೃಹಮುತ್ಸೃಜ್ಯ ಗತೋ ವೈ ಗುರುಸನ್ನಿಧೌ ॥ ೨೫ ॥

॥ ಮುಂಖಿರುವಾಚ ॥

ನಮೋ ವೈ ಗುರುವೇ ತುಭ್ಯಂ ದೇವಾನಾಮುಪಕಾರಿಣೇ ।
ತ್ವಂ ನಾಥಸ್ಸರ್ವಲೋಕಾನಾಂ ಬ್ರಾಹ್ಮಣಾನಾಂ ಚ ರಕ್ಷಕಃ ॥ ೨೬ ॥

---

೨೩. ಎಲೈ ದೇವಿಯೆ ! ಅವರಿಬ್ಬರಿಗೂ ಮಕ್ಕಳಾಗದಿರಲು ಇದನ್ನು ನೋಡಿ ಆ ಋಷಿಯು ಏನುಮಾಡಬೇಕೆಂದು ಯೋಚನೆ ಮಾಡುತ್ತಿದ್ದನು.

೨೪. ಇವರಿಬ್ಬರಿಗೂ ಮಕ್ಕಳೇ ಇಲ್ಲ. ಆದ್ದರಿಂದ ನನ್ನ ವಂಶವು ನಾಶವಾಗುತ್ತದೆ. ಮಗನಿದ್ದರೇನೇ ಸ್ವರ್ಗವಾಗಲೀ ಮುಕ್ತಿಯಾಗಲೀ ಸಿಕ್ಕಬೇಕು.

೨೫. ಮಗನಿದ್ದರೇನೇ ವಂಶವು ಸ್ಥಿರವಾಗಿ ನಿಲ್ಲುವುದು. ಅದಿಲ್ಲದಿದ್ದರೆ ಮನುಷ್ಯನು ನರಕವನ್ನು ಹೊಂದುತ್ತಾನೆ. ಈ ರೀತಿಯಾಗಿ ಯೋಚಿಸುತ್ತ ಅವನು ಸ್ವಲ್ಪವೂ ಸಂತೋಷದಿಂದಿರಲೇ ಇಲ್ಲ. ಆಗ ಕೊನೆಗೆ ಅವನು ಮನೆಯನ್ನು ಬಿಟ್ಟು ಗುರುವಿನ ಬಳಿಗೆ ಹೋದನು.

೨೬. ಮುಂಖಿಯು ಹೇಳಿದನು- ದೇವತೆಗಳಿಗೆಲ್ಲಾ ಉಪಕಾರ ಮಾಡುವ ಎಲೈ ಗುರುವೆ! ನಿನಗೆ ನಮಸ್ಕಾರವು. ನೀನೇ ಜನಗಳಿಗೆಲ್ಲಾ ರಕ್ಷಕನು. ಅದರಲ್ಲಿಯೂ ಬ್ರಾಹ್ಮಣರಿಗೆ ಅತಿಶಯವಾಗಿ ರಕ್ಷಕನು.

ಯಜ್ಞಾನಾಂ ತ್ವಂ ಪ್ರಕರ್ತಾ ಚ ದ್ವಿಜರಾಜ ನಮೋಽಸ್ತು ತೇ ।
ಅಪುತ್ರೋಽಹಂ ತು ವಿಪ್ರರ್ಷೇ ಕಿಂ ಕರ್ತವ್ಯಮಿತಿ ಪ್ರಭೋ ॥ ೨೭ ॥

ವದ ತ್ವಂ ತು ಯಥಾ ಸರ್ವಂ ಪುತ್ರೋ ಭವತಿ ನಿಶ್ಚಿತಂ ।
ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ ॥ ೨೮ ॥

ಯೇನ ಕೇನಾಪ್ಯುಪಾಯೇನ ಪುತ್ರಸ್ಯ ಜನನಂ ಚರೇತ್ ।
ಇತಿ ವಾಕ್ಯಂ ತು ಸಂಸ್ಮೃತ್ಯ ಹ್ಯಾಗತಸ್ತವ ಸನ್ನಿಧೌ ॥ ೨೯ ॥

॥ ಗುರುರುವಾಚ ॥

ಗಚ್ಛ ತ್ವಂ ಮುನಿಶಾರ್ದೂಲ ಯತ್ರ ಸಾಭ್ರಮತೀ ನದೀ ।
ತತ್ರ ಗತ್ವಾ ಮುನಿಶ್ರೇಷ್ಠ ಪುತ್ರಾನ್ ವೈ ಪ್ರಾಪ್ಸ್ಯಸಿ ಧ್ರುವಂ ॥ ೩೦ ॥

॥ ಮಹಾದೇವ ಉವಾಚ ॥

ತದ್ವಾಕ್ಯಂ ತು ಸಮಾಕರ್ಣ್ಯ ನಮಸ್ಕೃತ್ವಾ ತು ದಂಡವತ್ ।
ಸ ಗತೋ ವಿಪ್ರರಾಜಸ್ತು ನದೀಂ ಸಾಭ್ರಮತೀಂ ಪ್ರತಿ ॥ ೩೧ ॥

---

೨೭ ನೀನೇ ಯಜ್ಞಗಳನ್ನು ಮಾಡಿಸತಕ್ಕವನು. ಎಲೈ ಬ್ರಾಹ್ಮಣ ಶ್ರೇಷ್ಠನೇ ! ನಿನಗೆ ನಮಸ್ಕಾರವು. ನನಗೆ ಮಕ್ಕಳಿಲ್ಲ. ಏನುಮಾಡಬೇಕೆಂಬುದನ್ನು ಹೇಳು.

೨೮ ಮಕ್ಕಳಾಗುವ ರೀತಿಯಲ್ಲಿ ನಾನೇನು ಮಾಡಬೇಕೋ ಅವೆಲ್ಲವನ್ನೂ ಹೇಳು. ಮಕ್ಕಳಿಲ್ಲದವನಿಗೆ ಗತಿಯೆಂಬುದೇ ಇಲ್ಲ. ಸ್ವರ್ಗವಂತೂ ಇಲ್ಲವೇ ಇಲ್ಲ.

೨೯. ಯಾವ ರೀತಿಯಿಂದಲಾದರೂ ಮಕ್ಕಳನ್ನು ಪಡೆಯೇ ಪಡೆಯಬೇಕು ಎಂಬ ಮಾತನ್ನು ಜ್ಞಾಪಿಸಿಕೊಂಡು ನಿನ್ನ ಬಳಿಗೆ ಬಂದಿದ್ದೇನೆ.

೩೦. ಗುರುವು ಹೇಳಿದನು- ಎಲೈ ಋಷಿಶ್ರೇಷ್ಠನೆ ! ನೀನು ಸಾಭ್ರಮತೀ ನದಿಯ ಬಳಿಗೆ ಹೋಗು. ಅಲ್ಲಿಗೆ ಹೋಗಿ ಆ ತೀರ್ಥವನ್ನು ಸೇವಿಸಿದರೆ ನಿನಗೆ ಖಂಡಿತವಾಗಿಯೂ ಮಕ್ಕಳಾಗುತ್ತವೆ.

೩೧. ಮಹಾದೇವನು ಹೇಳಿದನು-ಗುರುವಿನ ಆ ಮಾತನ್ನು ಕೇಳಿ ಮುಂಷಿ ಋಷಿಯು ಅವನಿಗೆ ನಮಸ್ಕರಿಸಿ ಅಲ್ಲಿಂದ ಸಾಭ್ರಮತೀ ನದಿಯಬಳಿಗೆ ಹೊರಟನು.

ಮುಂಖಿನಾಮಾ ತು ವಿಪ್ರರ್ಷಿಃ ತತ್ರ ಗತ್ವಾ ತಪೋ ಮಹತ್ ।
ಅತಪ್ಯತ ತದಾ ದೇವಿ ಯಾವದ್ವರ್ಷಚತುಷ್ಟಯಂ ॥ ೩೨ ॥

ತತ್ರ ತೀರ್ಥಂ ಕೃತಂ ತೇನ ಮುಂಖಿನಾ ಬ್ರಹ್ಮವಾದಿನಾ ।
ತ್ರೇತಾಯುಗೇ ತದಾ ದೇವಿ ಕೃತಂ ತೀರ್ಥಂ ಮಹಾದ್ಭುತಂ ॥ ೩೩ ॥

ಜಾತಂ ತತ್ರ ನ ಸಂದೇಹಃ ಪುತ್ರದಂ ಸಾರ್ವಕಾಮಿಕಂ ।
ಅದ್ಯಾಪಿ ಮುಂಖಿತೀರ್ಥಂ ತು ಭೂತಳೇ ಪರಿಕೀರ್ತಿತಂ ॥ ೩೪ ॥

ದ್ವಿತೀಯಂ ಪಾಂಡುಪುತ್ರೇಣ ಸಪ್ತಧಾರಂ ಪ್ರವರ್ತಿತಂ ।
ತಸ್ಮಾದೇವಂ ವರಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೩೫ ॥

ಸ ವೈ ದ್ವಿಜವರೋ ಮುಂಖಿಃ ಪುತ್ರಾನ್ ಪ್ರಾಪ್ಯ ಯಥಾಸುಖಂ ।
ಭೋಗಾನ್ನಾನಾವಿಧಾನ್ ಭುಕ್ತ್ವಾ ಸ ಗತೋ ಮಂದಿರಂ ಮಮ ॥ ೩೬ ॥

---

೩೨. ಈ ರೀತಿಯಾಗಿ ಮುಂಖಿಋಷಿಯು ಅಲ್ಲಿಗೆ ಹೋಗಿ ನಾಲ್ಕು ವರ್ಷಗಳಕಾಲ ಉಗ್ರವಾದ ತಪಸ್ಸನ್ನು ಮಾಡಿದನು.

೩೩. ಆ ಬ್ರಹ್ಮರ್ಷಿಯಾದ ಮುಂಖಿಯು ಅಲ್ಲಿಯೇ ತೀರ್ಥವನ್ನು ನಿರ್ಮಿಸಿದನು. ಈ ರೀತಿಯಾಗಿ ಆ ಮುಂಖಿಯು ತ್ರೇತಾಯುಗದಲ್ಲಿ ಮಾಡಿದನು.

೩೪. ಈರೀತಿಯಾಗಿ ಅಲ್ಲಿ ಮುಂಖಿತೀರ್ಥವು ನಿರ್ಮಿತವಾಯಿತು. ಮಕ್ಕಳನ್ನು ಕೊಡುವುದಲ್ಲದೆ ಆ ತೀರ್ಥವು ಇನ್ನೂ ಇಷ್ಟಾರ್ಥಗಳೆಲ್ಲವನ್ನೂ ಕೊಡುತ್ತದೆ. ಈರೀತಿಯಾಗಿ ಭೂಮಿಯಲ್ಲಿ ಆ ತೀರ್ಥವು ಪ್ರಸಿದ್ಧವಾಯಿತು.

೩೫. ಎರಡನೆಯ ಬಾರಿ ಪಾಂಡುಪುತ್ರನಾದ ಧರ್ಮಜನಿಂದ ಈ ತೀರ್ಥವು ಸಪ್ತಧಾರವೆಂಬುದಾಗಿ ಮಾಡಲ್ಪಟ್ಟಿತು. ಆದ್ದರಿಂದ ಇಂತಹ ತೀರ್ಥವು ಹಿಂದೆಯೂ ಇದ್ದಿರಲಿಲ್ಲ. ಮುಂದೆಯೂ ಉಂಟಾಗುವುದಿಲ್ಲ.

೩೬. ಈ ರೀತಿಯಾಗಿ ಆ ಮುಂಖಿಯು ಮಕ್ಕಳನ್ನು ಹೊಂದಿ ಸುಖವಾಗಿ ಭೋಗಗಳನ್ನೆಲ್ಲಾ ಅನುಭವಿಸಿ ಕೊನೆಗೆ ನನ್ನ ಸ್ಥಾನವಾದ ಕೈಲಾಸಕ್ಕೆ ಹೋದನು.

**ಏತದಾಖ್ಯಾನಕಂ ದಿವ್ಯಂ ಪವಿತ್ರಂ ಪರಮಂ ಮಹತ್ ।**
**ಪುತ್ರಸೌಖ್ಯಾದಿಕಂ ಸರ್ವಂ ಲಭತೇ ಶ್ರವಣಾದತಃ ॥ ೩೭ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಸಪ್ತಧಾರಾದಿ ತೀರ್ಥ ವರ್ಣನಂ ನಾಮ ಷಟ್‌ತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೩೭. ಈ ಕಥೆಯು ಪವಿತ್ರವಾದುದು. ಉತ್ತಮವಾದುದು. ಇದನ್ನು ಕೇಳುವುದರಿಂದ ಮಕ್ಕಳೇ ಮೊದಲಾದ ಸೌಖ್ಯಗಳನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮೆಯ ಸಪ್ತಧಾರ ತೀರ್ಥ ವರ್ಣನ ಎಂಬ ನೂರ ಮೂವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಸಪ್ತತ್ರಿಂಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

ಬ್ರಹ್ಮವಲ್ಲೀಮಹಾತೀರ್ಥಂ ತತೋ ಗಚ್ಛೇತ್ಸುರೇಶ್ವರಿ ।
ತಸ್ಯ ತೀರ್ಥಸ್ಯ ಸಾರೂಪ್ಯಂ ಸಾಕ್ಷಾಚ್ಛೃಣು ಸುರೋತ್ತಮೇ ॥ ೧ ॥

ಯತ್ರ ಸಾಭ್ರಮತೀತೋಯಂ ಬ್ರಹ್ಮವಲ್ಲ್ಯಂಭಸಾ ಸಹ ।
ಯುಜ್ಯತೇ ಬ್ರಹ್ಮತೀರ್ಥಂ ತತ್ ಪ್ರಯಾಗೇಣ ಸಮಂ ಸ್ಮೃತಂ ॥ ೨ ॥

ತತ್ರ ಪಿಂಡಪ್ರದಾನೇನ ತೃಪ್ತಿರ್ದ್ವಾದಶವಾರ್ಷಿಕೀ ।
ಪಿತೄಣಾಂ ಜಾಯತೇ ನೂನಂ ಬ್ರಹ್ಮಣೋ ವಚನಂ ಯಥಾ ॥ ೩ ॥

---

ನೂರ ಮೂವತ್ತೇಳನೆಯ ಅಧ್ಯಾಯವು



೧. ಮಹಾದೇವನು ಹೇಳಿದನು-ಅಲ್ಲಿಂದ ಮುಂದೆ ಹೋದರೆ ಬ್ರಹ್ಮವಲ್ಲಿಯೆಂಬ ತೀರ್ಥವು ಸಿಕ್ಕುತ್ತದೆ. ಆ ತೀರ್ಥದಲ್ಲಿ ಉಂಟಾಗುವ ಸರೂಪತೆಯನ್ನು ಹೇಳುತ್ತೇನೆ. ಕೇಳು.

೨. ಸಾಭ್ರಮತಿಯೂ ಬ್ರಹ್ಮವಲ್ಲಿ ಎಂಬ ನದಿಯೂ ಸೇರುವ ಜಾಗಕ್ಕೆ ಬ್ರಹ್ಮತೀರ್ಥವೆಂದು ಹೆಸರು. ಆ ತೀರ್ಥವು ಪ್ರಯಾಗಕ್ಕೆ ಸಮವಾದುದು.

೩. ಅಲ್ಲಿ ಪಿತೃಗಳಿಗೆ ಪಿಂಡವನ್ನು ಕೊಡುವುದರಿಂದ ಅವರಿಗೆ ಹನ್ನೆರಡು ವರ್ಷಗಳವರೆಗೆ ತೃಪ್ತಿಯುಂಟಾಗುತ್ತದೆ. ಆ ರೀತಿಯಾಗಿ ಬ್ರಹ್ಮನೇ ಹೇಳಿರುವನು.

ಗಯಾಶ್ರಾದ್ಧಸಮಂ ಪುಣ್ಯಂ ಬ್ರಹ್ಮವಲ್ಯಾಂ ವಿಶೇಷತಃ ।
ಯೇತ್ರ ಜ್ಞಾತ್ವಾ ಪ್ರಕುರ್ವಂತಿ ಪಿತರಸ್ತೃಪ್ತಿಮಾಪ್ನುಯುಃ ॥ ೪ ॥

ಗೋದಾನಂ ಭೂಮಿದಾನಂ ಚ ಅನ್ನದಾನಂ ತಥೈವ ಚ ।
ಏತದ್ದಾನಸಮಂ ಪುಣ್ಯಂ ಬ್ರಹ್ಮವಲ್ಲ್ಯಾಂ ವಿಶೇಷತಃ ॥ ೫ ॥

ಅತ್ರೈವ ಸನಕಾದ್ಯಾಸ್ತು ಸ್ನಾತ್ವಾ ಚ ವಿಧಿಪೂರ್ವಕಂ ।
ಪರಂ ಬ್ರಹ್ಮ ಇತಿ ಧ್ಯಾನಾದ್ವಿಷ್ಣುಲೋಕಮವಾಪ್ನುಯುಃ ॥ ೬ ॥

ಪುಷ್ಕರೇ ಚೈವ ಗಂಗಾಯಾಂ ಕ್ಷೇತ್ರೇ ಚಾಮರಕಂಟಕೇ ।
ತತ್ರ ಗತ್ವಾ ತು ದೇವೇಶಿ ಯತ್ಫಲಂ ಲಭತೇ ನರಃ ॥ ೭ ॥

ತತ್ಫಲಂ ಸಮವಾಪ್ನೋತಿ ಬ್ರಹ್ಮವಲ್ಲ್ಯಾಂ ವಿಶೇಷತಃ ।
ಚಂದ್ರಸೂರ್ಯೋಪರಾಗೇ ಚ ದಾನಂ ಯೇ ದದತೇ ನರಾಃ ॥ ೮ ॥

---

೪. ಈ ಬ್ರಹ್ಮವಲ್ಲಿಯಲ್ಲಿ ಶ್ರಾದ್ಧಮಾಡಿದರೆ ಗಯಾ ಶ್ರಾದ್ಧಕ್ಕೆ ಸಮವಾದ ಪುಣ್ಯವು ಬರುತ್ತದೆ. ಇದನ್ನು ತಿಳಿದು ಇಲ್ಲಿ ಶ್ರಾದ್ಧಮಾಡಬೇಕು ಪಿತೃಗಳು ತೃಪ್ತರಾಗುತ್ತಾರೆ.

೫. ಬ್ರಹ್ಮವಲ್ಲಿಯಲ್ಲಿ ಸ್ನಾನಮಾಡಿದರೆ ಗೋದಾನ, ಭೂಮಿದಾನ, ಅನ್ನದಾನಗಳನ್ನು ಮಾಡಿದ ಪುಣ್ಯವು ಬರುತ್ತದೆ. ಇದೇ ಈ ಬ್ರಹ್ಮವಲ್ಲಿಯಲ್ಲಿ ವಿಶೇಷವು.

೬. ಇದೇ ಜಾಗದಲ್ಲಿ ಸನಕಾದಿ ಋಷಿಗಳು ವಿಧಿವತ್ತಾಗಿ ಸ್ನಾನಮಾಡಿ ಪರಬ್ರಹ್ಮನನ್ನು ಧ್ಯಾನಿಸುತ್ತಾ ವಿಷ್ಣುಲೋಕವನ್ನು ಹೊಂದಿದರು.

೭-೧೦. ಪುಷ್ಕರ, ಗಂಗೆ, ಅಮರಕಂಟಕಗಳಲ್ಲಿ ಜನರು ಸ್ನಾನಮಾಡಿ ಯಾವ ಫಲವನ್ನು ಹೊಂದುತ್ತಾರೆಯೋ ಆ ಫಲವನ್ನು ಈ ಬ್ರಹ್ಮವಲ್ಲಿಯಲ್ಲಿ ಸ್ನಾನ ಮಾಡುವುದರಿಂದ ಹೊಂದುತ್ತಾರೆ. ಸೂರ್ಯ ಚಂದ್ರರ ಗ್ರಹಣಕಾಲದಲ್ಲಿ ದಾನ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಈ ಬ್ರಹ್ಮವಲ್ಲಿಯಲ್ಲಿ

ತತ್ಫಲಂ ಸಮವಾಪ್ನೋತಿ ಬ್ರಹ್ಮವಲ್ಲ್ಯಾಂ ಸುರೇಶ್ವರಿ ।
ಭೂತಾಃ ಪ್ರೇತಾಃ ಪಿಶಾಚಾಶ್ಚ ಯೇ ಕೇಚಿದ್ದುಷ್ಟಯೋನಯಃ ॥ ೯ ॥

ದಿವ್ಯರೂಪಧರಾಸ್ತೇ ಚ ಶಂಖಚಕ್ರಗದಾಧರಾಃ ।
ತೇಽಪಿ ಸ್ವರ್ಗೇ ಹಿ ಗಚ್ಛಂತಿ ಸ್ನಾನಂ ಕೃತ್ವಾ ಸುರೇಶ್ವರಿ ॥ ೧೦ ॥

ಧೃತ್ವಾ ತುಲಸಿಜಾಂ ಮಾಲಾಂ ನಾರಾಯಣಮನುಸ್ಮರನ್ ।
ವೈಕುಂಠಂ ದಿವ್ಯಮಾನಂದಂ ಯಾತಿ ವೈ ಪದಮವ್ಯಯಂ ॥ ೧೧ ॥

॥ ಇತಿ ಬ್ರಹ್ಮವಲ್ಲೀತೀರ್ಥಮಾಹಾತ್ಮ್ಯಂ ॥

ವೃಷತೀರ್ಥಂ ತತೋ ಗಚ್ಛೇತ್ ಖಂಡತೀರ್ಥಮಿತಿ ಶ್ರುತಂ ।
ತತ್ರ ಸ್ನಾತ್ವಾ ದಿವಂ ಗಾವೋ ಗೋಲೋಕಂ ಚ ಪುರಾ ಶ್ರಿತಾಃ ॥ ೧೨ ॥

ಖಂಡರೂಪೇಣ ಧರ್ಮೇಣ ಯಾ ಗಾವೋ ಲೋಕಮಾತರಃ ।
ಶಾಪಾತ್ಪ್ರಚ್ಯಾವಿತಾಸ್ತೇನ ಖಂಡತೀರ್ಥಮಥೋಚ್ಯತೇ ॥ ೧೩ ॥

---

ಸ್ನಾನವಮಾಡುವುದರಿಂದ ಹೊಂದುತ್ತಾರೆ. ಭೂತ, ಪ್ರೇತ, ಪಿಶಾಚಿಗಳೇ ಮುಂತಾದ ಹೀನಸ್ಥಿತಿಯುಳ್ಳವುಗಳೂ ಇಲ್ಲಿ ಸ್ನಾನ ಮಾಡಿದರೆ ಉತ್ತಮವಾದ ದೇಹವನ್ನು ಪೊಂದಿ ಶಂಖ, ಚಕ್ರ, ಗದೆಗಳನ್ನು ಧರಿಸಿ ಸ್ವರ್ಗಕ್ಕೆ ಹೋಗುತ್ತವೆ

೧೧. ತುಳಸೀಮಾಲೆಯನ್ನು ಹಾಕಿಕೊಂಡು ನಾರಾಯಣನನ್ನು ಸ್ಮರಿಸುತ್ತ ದಿವ್ಯವಾದ ಆನಂದ ರೂಪವಾದ ಆ ಸ್ವಾಮಿಯ ಜಾಗವನ್ನು ಹೊಂದುತ್ತಾರೆ.

ಇಂತು ಬ್ರಹ್ಮವಲ್ಲೀತೀರ್ಥದ ಮಹಿಮೆಯು.

೧೨. ಅಲ್ಲಿಂದ ಮುಂದೆ ವೃಷತೀರ್ಥಕ್ಕೆ ಹೋಗಬೇಕು. ಅದಕ್ಕೆ ಖಂಡ ತೀರ್ಥವೆಂದು ಹೆಸರು. ಪೂರ್ವದಲ್ಲಿ ಗೋವುಗಳು ಅಲ್ಲಿ ಸ್ನಾನಮಾಡಿ ಗೋಲೋಕ ವನ್ನು ಹೊಂದಿದುವು

೧೩. ಪ್ರಪಂಚದಲ್ಲಿ ಗೋವುಗಳು ಧರ್ಮದ ಸ್ವರೂಪುಗಳು. ಅವು ಧರ್ಮಗಳ ಚೂರಿನಂತೆ ಸುತ್ತುತ್ತಿರುತ್ತವೆ. ಆ ಗೋವುಗಳು ಇಲ್ಲಿ ಶಾಪದಿಂದ ಮುಕ್ತಿ ಹೊಂದುದರಿಂದ ಇದಕ್ಕೆ ಖಂಡ ತೀರ್ಥವೆಂದು ಹೆಸರಾಯಿತು.

॥ ಪಾರ್ವತ್ಯುವಾಚ ॥

ಶಾಪೋ ಹಿ ಲೋಕಮಾತೄಣಾಂ ಗವಾಂ ಕಸ್ಯ ಪುರಾಭವತ್ ।
ಕಥಂ ಲೋಕಾತ್ ಪರಿಭ್ರಷ್ಟಾಃ ಕಥಂ ಧರ್ಮೇಣ ರಕ್ಷಿತಾಃ ॥ ೧೪ ॥

॥ ಮಹಾದೇವ ಉವಾಚ ॥

ಪುರಾ ವೃಷೇಣ ಗೋಲೋಕೇ ಕ್ರೀಡಿತಾ ಸಹ ಮಾತೃಭಿಃ ।
ಮುಕ್ತಂ ತಥಾಽಸಕೃನ್ಮೂತ್ರಂ ಪತಿತಂ ಹರಮೂರ್ಧನಿ ॥ ೧೫ ॥

ತತಸ್ತಾಸಾಂ ದದೌ ಸಾಪಂ ತೇನ ದೋಷೇಣ ವೈ ಹರಃ ।
ನಷ್ಟಸಂಜ್ಞಾಸ್ಸ್ವಲೋಕಾಚ್ಚ ಗಾವೋ ಯಾಸ್ಯಥ ಮೇದಿನೀಂ ॥ ೧೬ ॥

ಗಾವಶ್ಶಪ್ತಾ ಭಗವತಾ ಸಂಪ್ರಸಾದ್ಯ ಪುನರ್ಹರಂ ।
ಪ್ರಾಪ್ಸ್ಯಾಮಹೇ ಪುನರ್ಲೋಕಮಿತಿ ದೇವಂ ಯಯಾಚಿರೇ ॥ ೧೭ ॥

---

೧೪. ಪಾರ್ವತಿಯು ಹೇಳಿದಳು–ಲೋಕಕ್ಕೆ ತಾಯಿಯರಂತಿರುವ ಗೋವುಗಳಿಗೆ ಪೂರ್ವದಲ್ಲಿ ಶಾಪಬರಲು ಕಾರಣವೇನು ? ಅವು ತಮ್ಮ ಲೋಕದಿಂದ ಭ್ರಷ್ಟವಾದುದು ಹೇಗೆ ? ಮತ್ತೆ ಹೇಗೆ ಅವು ಶಾಪವನ್ನು ಕಳೆದುಕೊಂಡುವು ?

೧೫. ಮಹಾದೇವನು ಹೇಳಿದನು–ಪೂರ್ವದಲ್ಲಿ ಗೋವುಗಳು ಗೋಲೋಕದಲ್ಲಿ ಹೋರಿಗಳೊಡನೆ ಕ್ರೀಡಿಸುತ್ತಿದ್ದುವು. ಆಗ್ಗ ಆ ಗೋವುಗಳು ಪದೇಪದೇ ಮೂತ್ರವನ್ನು ಸುರಿಸುತ್ತಿದ್ದುವು. ಅದು ಹರನ ತಲೆಯಮೇಲೆ ಬಿದ್ದಿತು.

೧೬. ಆಗ ಕೋಪಗೊಂಡು ಹರನು ಅವುಗಳ ಆ ತಪ್ಪಿಗೋಸ್ಕರವಾಗಿ ನೀವು ಜ್ಞಾನಶೂನ್ಯರಾಗಿ ನಿಮ್ಮ ಲೋಕವನ್ನು ಬಿಟ್ಟು ಭೂಮಿಯನ್ನು ಹೊಂದಿ. ಎಂಬುದಾಗಿ ಶಪಿಸಿದನು.

೧೭. ಹೀಗೆ ಶಾಪವನ್ನು ಹೊಂದಿದ ಗೋವುಗಳು ಬಂದು ಹರನನ್ನು ಸ್ತುತಿಸಿ ಮತ್ತೆ ತಮ್ಮ ಲೋಕಕ್ಕೆ ಹೋಗಬೇಕೆಂದು ಕೇಳಿಕೊಂಡುವು.

॥ ಹರ ಉವಾಚ ॥

ಯದಾ ಸಾಭ್ರಮತೀತೀರ್ಥೇ ಬ್ರಹ್ಮವಲ್ಲೀಸಮೀಪತಃ ।
ಖಂಡಸಂಜ್ಞೇ ಹ್ರದೇ ಸ್ನಾತ್ವಾ ಸ್ವರ್ಗಂ ವೈ ಪ್ರಾಪ್ಸ್ಯಥ ಧ್ರುವಂ ॥ ೧೮ ॥

ತತಸ್ತಸ್ಮಿನ್ ಹ್ರದೇ ಸ್ನಾತ್ವಾ ಗಾವೋ ಗೋಪತಿನಾ ಸಹ ।
ಸ್ವರ್ಗಂ ಗತಾಶ್ಶುದ್ಧಿತಮಾಃ ಮಹಾದೇವಸಮೀಪತಃ ॥ ೧೯ ॥

ಗೋಹ್ರದೇ ತು ನರಸ್ಸ್ನಾತ್ವಾ ಕೃತ್ವಾ ವೈ ಪಿತೃತರ್ಪಣಂ ।
ಗವಾಂ ಲೋಕಮವಾಪ್ನೋತಿ ದಾಹಪ್ರಳಯವರ್ಜಿತಂ ॥ ೨೦ ॥

ತತ್ರ ಸ್ಥಿತ್ವಾ ನಿರಾಹಾರೋ ಗೋಪಿಂಡಂ ಚ ದದಾತಿ ವೈ ।
ಸ ನರಸ್ಸುಖಮೇಧೇತ ಯಾವದಿಂದ್ರಾಶ್ಚತುರ್ದಶ ॥ ೨೧ ॥

ಗವಾಂ ಕೋಟಿಪ್ರದಾನೇನ ಯತ್ಫಲಂ ಪ್ರಾಪ್ಯತೇ ಧ್ರುವಂ ।
ತತ್ಫಲಂ ಸಮವಾಪ್ನೋತಿ ಖಂಡತೀರ್ಥೇ ನ ಸಂಶಯಃ ॥ ೨೨ ॥

---

೧೮. ಹರನು ಹೇಳಿದನು- ಬ್ರಹ್ಮವಲ್ಲಿಯು ಸಾಭ್ರಮತಿಗೆ ಸೇರುವ ಖಂಡಹ್ರದ ತೀರ್ಥದಲ್ಲಿ ಯಾವಾಗ ನೀವು ಸ್ನಾನಮಾಡುತ್ತೀರೋ ಆಗ ನೀವು ಸ್ವರ್ಗವನ್ನು ಹೊಂದುತ್ತೀರಿ.

೧೯. ಆಗ ಗೋವುಗಳೂ ಅವುಗಳ ಪತಿಯೂ ಆ ಹ್ರದದಲ್ಲಿ ಸ್ನಾನಮಾಡಿ ಶುದ್ಧವಾಗಿ ಸ್ವರ್ಗವನ್ನು ಹೊಂದಿದುವು. ಮಹಾದೇವನ ಸಮೀಪಕ್ಕೂ ಹೋದುವು.

೨೦. ಮನುಷ್ಯನು ಗೋಹ್ರವದಲ್ಲಿ ಸ್ನಾನಮಾಡಿ ಪಿತೃತರ್ಪಣವನ್ನು ಮಾಡಿದರೆ ಅವನು ಪ್ರಳಯ (ಮೂರ್ಛೆ) ಗಳಿಲ್ಲದ ಗೋಲೋಕವನ್ನು ಹೊಂದುತ್ತಾನೆ.

೨೧. ಅಲ್ಲಿದ್ದು ಉಪವಾಸದಿಂದ ಗೋಪಿಂಡದಾನವನ್ನು ಮಾಡಿದರೆ ಅವರು ಹದಿನಾಲ್ಕುಜನ ಇಂದ್ರಿರಿರುವವರೆಗೂ ಸುಖವಾಗಿರುತ್ತಾರೆ.

೨೨ ಈ ರೀತಿಯಾಗಿ ಆ ಖಂಡತೀರ್ಥದಲ್ಲಿ ಮಾಡಿದರೆ ಕೋಟಿ ಗೋವುಗಳನ್ನು ದಾನ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವನ್ನು ಹೊಂದುತ್ತಾನೆ. ಸಂಶಯವಿಲ್ಲ.

ಗೃಹೀತ್ವಾ ವೃಷಮೂತ್ರಂ ಚ ತೀರ್ಥೇ ಯಃ ಪಿಬತೇ ನರಃ ।
ತತ್ ಕ್ಷಣಾದೇವ ಶುದ್ಧಿಸ್ಸ್ಯಾತ್ ಖಂಡತೀರ್ಥೇ ನ ಸಂಶಯಃ ॥ ೨೩ ॥

ಖಂಡತೀರ್ಥಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಯೇ ಗಚ್ಛಂತಿ ಸುರಶ್ರೇಷ್ಠೇ ತೇ ನರಾಃ ಪುಣ್ಯಭಾಗಿನಃ ॥ ೨೪ ॥

ತತ್ರ ಗತ್ವಾ ಸುರಶ್ರೇಷ್ಠೇ ಗವಾಂ ಪೂಜನಮಾಚರೇತ್ ।
ವೃಷಭಂ ಚ ತತಃ ಪೂಜ್ಯ ಸ್ನಾನಂ ಕೃತ್ವಾ ಸಮಾಹಿತಃ ॥ ೨೫ ॥

ಪೂಜನಾದ್ವೈ ನ ಸಂದೇಹೋ ಗೋಲೋಕೇ ತು ವಸೇಚ್ಚಿರಂ ।
ತತ್ರ ಗತ್ವಾ ವಿಶೇಷೇಣ ಸೌವರ್ಣಂ ಗಾಂ ದದಂತಿ ಯೇ ॥ ೨೬ ॥

ತೇ ನರಾ ಭುಂಜತೇ ಸೌಖ್ಯಂ ಯಾವದಿಂದ್ರಾಶ್ಚತುರ್ದಶ ।
ದಶಧೇನು ತತಃ ಕೃತ್ವಾ ಯೋ ದದಾತಿ ದ್ವಿಜಾತಯೇ ॥ ೨೭ ॥

ಖಂಡತೀರ್ಥೇ ಸುರಶ್ರೇಷ್ಠೇ ತದನಂತಫಲಂ ಸ್ಮೃತಂ ।
ತತ್ರ ಗತ್ವಾ ತು ಕರ್ತವ್ಯಂ ಪಿಪ್ಪಲಾರೋಪಣಂ ಬುಧೈಃ ॥ ೨೮ ॥

---

೨೩. ಈ ತೀರ್ಥದಲ್ಲಿ ವೃಷಭನ ಗಂಜಲವನ್ನು ತೆಗೆದುಕೊಂಡು ಯಾವನು ಕುಡಿಯುತ್ತಾನೆಯೋ ಅವನು ಒಡನೆಯೇ ಶುದ್ಧನಾಗುತ್ತಾನೆ. ಸಂಶಯವಿಲ್ಲ.

೨೪. ಈ ಖಂಡತೀರ್ಥಕ್ಕಿಂತಲೂ ಉತ್ತಮವಾದ ತೀರ್ಥವು ಮತ್ತೊಂದಿಲ್ಲ. ಅಲ್ಲಿಗೆ ಹೋಗತಕ್ಕವರೇ ಪುಣ್ಯವಂತರು ಮತ್ತು ಪುಣ್ಯವನ್ನು ಹೊಂದುತ್ತಾರೆ.

೨೫-೩೦. ಎಲೈ ಪಾರ್ವತಿಯೆ ! ಆ ಖಂಡತೀರ್ಥಕ್ಕೆ ಹೋಗಿ ಸ್ನಾನಮಾಡಿ ಪೂಜೆಯನ್ನು ಮಾಡಬೇಕು. ಮತ್ತು ವೃಷಭನ ಪೂಜೆಯನ್ನು ಮಾಡಬೇಕು ಹೀಗೆ ಪೂಜಿಸಿದರೆ ಅವನು ಗೋಲೋಕವನ್ನು ಹೊಂದಿ ಬಹುಕಾಲ ವಾಸಿಸು ತ್ತಾನೆ ಆ ಖಂಡ ತೀರ್ಥದಲ್ಲಿ ಚಿನ್ನದ ಹಸುವಿನ ಪ್ರತಿಮೆಯನ್ನು ದಾನ ಮಾಡಿದರೆ ಅದರಿಂದ ಹದಿನಾಲ್ಕುಜನ ಇಂದ್ರರಿರುವವರೆಗೂ ಗೋಲೋಕದಲ್ಲಿ ಸುಖಿಸುತ್ತಾನೆ. ಆ ಖಂಡತೀರ್ಥದಲ್ಲಿ ಅದೇ ರೀತಿಯಾಗಿ ಹತ್ತು ಗೋಪ್ರತಿಮೆ ಗಳನ್ನು ಮಾಡಿ ದಾನಮಾಡಿದರೆ ಬಹುವಾದ ಫಲವು ಬರುತ್ತದೆ. ಆ ಖಂಡ ತೀರ್ಥದಲ್ಲಿ ಹೋಗಿ ಅರಳಿಯಮರವನ್ನು ನೆಟ್ಟು ಎಬ್ಬಿಸಬೇಕು. ಹಾಗೆ ಮಾಡಿದರೆ

ತಸ್ಮಿನ್ ಕೃತೇ ತು ದೇವೇತಿ ಪಿತೃಲೋಕಂ ಸ ಗಚ್ಛತಿ ।
ಪಂಚ ಆಮಲಕೀಂ ದಿವ್ಯಾಂ ಯೇ ಕುರ್ವಂತಿ ಪ್ರರೋಪಣಂ ॥ ೨೯ ॥

ಇಹ ಲೋಕೇ ಸುಖಂ ಭುಕ್ತ್ವಾ ಹರಿಲೋಕಂ ವ್ರಜಂತಿ ತೇ ॥ ೩೦ ॥

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಬ್ರಹ್ಮವಲ್ಲೀತೀರ್ಥ ಖಂಡತೀರ್ಥ ವರ್ಣನಂ ನಾಮ ಸಪ್ತತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

ಪಿತೃಲೋಕವನ್ನು ಹೊಂದುತ್ತಾನೆ. ಆ ಖಂಡತೀರ್ಥದಲ್ಲಿ ಐದು ನೆಲ್ಲಿಯ ಮರಗಳನ್ನು ಎಬ್ಬಿಸಿದರೆ ಈ ಲೋಕದಲ್ಲಿಯೂ ಸುಖವನ್ನು ಅನುಭವಿಸಿ ವಿಷ್ಣು ಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ಬ್ರಹ್ಮವಲ್ಲೀತೀರ್ಥ ಖಂಡತೀರ್ಥ ವರ್ಣನ ಎಂಬ ನೂರ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—×—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾತ್ರಿಂಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ತತೋ ಗಚ್ಛೇನ್ಮಹಾತೀರ್ಥಂ ಸಂಗಮೇಶ್ವರಮುತ್ತಮಂ ।**
**ಯತ್ರ ಹಸ್ತಿಮತೀ ಪುಣ್ಯಾ ಸಾಭ್ರಮತ್ಯಾ ಹಿ ಸಂಗತಾ ॥ ೧ ॥**

**ಶಾಪಂ ಕೌಂಡಿನ್ಯಮುನಿತಃ ಪ್ರಾಪ್ಯ ಶುಷ್ಕಾಭವನ್ನದೀ ।**
**ಬಹುಶ್ಚರೇತಿ ನಾಮ್ನಾ ವೈ ಲೋಕೇ ಖ್ಯಾತಿಮುಪಾಗತಾ ॥ ೨ ॥**

**ತತ್ತೀರ್ಥಂ ಸಂಪ್ರವಕ್ಷ್ಯಾಮಿ ಪುಣ್ಯಂ ತ್ರೈಲೋಕ್ಯವಿಶ್ರುತಂ ।**
**ಸರ್ವಪಾಪಹರಂ ಪುಣ್ಯಂ ತ್ರೈಲೋಕ್ಯೇ ವಾಪಿ ವಿಶ್ರುತಂ ॥ ೩ ॥**

---

## ನೂರ ಮೂವತ್ತೆಂಟನೆಯ ಅಧ್ಯಾಯವು



೧. ಮಹಾದೇವನು ಹೇಳಿದನು ಮುಂದೆ ಹೋದರೆ ಹಸ್ತಿಮತೀ ಎಂಬುವ ನದಿಯು ಸಾಭ್ರಮತಿಯೊಡನೆ ಸಂಗಮವಾಗುತ್ತದೆ. ಅಲ್ಲಿ ಸಂಗಮೇಶ್ವರವೆಂಬ ತೀರ್ಥವಿದೆ. ಅಲ್ಲಿಗೆ ಹೋಗಬೇಕು. ಅದು ಉತ್ತಮವಾದುದು.

೨. ಕೌಂಡಿನ್ಯ ಋಷಿಯಿಂದ ಆ ಹಸ್ತಿಮತೀ ನದಿಯು ಶಾಪವನ್ನು ಹೊಂದಿ ಒಣಗಿಹೋಯಿತು. ಅನಂತರ ಆ ನದಿಯು ಬಹುಶ್ಚರಾ ಎಂಬದಾಗಿ ಹೆಸರನ್ನು ಹೊಂದಿತು.

೩. ಆ ತೀರ್ಥದ ವಿಷಯವನ್ನು ಹೇಳುತ್ತೇನೆ. ಅದು ಪುಣ್ಯಕರವಾದುದು. ಮೂರು ಲೋಕವಲ್ಲಿಯೂ ಪ್ರಸಿದ್ಧವಾದುದು. ಪಾಪಹರವು.

ತತ್ರ ತೀರ್ಥೇ ನರಸ್ಸ್ನಾತ್ವಾ ದೃಷ್ಟ್ವಾ ದೇವಂ ಮಹೇಶ್ವರಂ ।
ಮುಚ್ಯತೇ ಸರ್ವಪಾಪೇಭ್ಯೋ ರುದ್ರಲೋಕಂ ಪ್ರಗಚ್ಛತಿ ॥ ೪ ॥

ಶೃಣು ದೇವಿ ಪ್ರವಕ್ಷ್ಯಾಮಿ ಏತಚ್ಛಾಪಸ್ಯ ಕಾರಣಂ ।
ಯಥೇಯಂ ಶುಷ್ಕರೂಪಾ ಹಿ ಜಾತಾ ಶಾಪಸ್ಯ ಕಾರಣಾತ್ ॥ ೫ ॥

ಯತ್ರ ಸಾಭ್ರಮತೀ ಪುಣ್ಯಾ ಗಂಗಾ ನಾಮ ಮಹಾನದೀ ।
ತತ್ರ ಹಸ್ತಿಮತೀ ನಾಮ ಗಂಗಯಾ ಸಹ ಸಂಗತಾ ॥ ೬ ॥

ತತ್ರಾರಬ್ಧಂ ಚ ಮುನಿನಾ ತಪೋ ವೈ ಪರಮಂ ಮಹತ್ ।
ಏವಂ ಬಹುಗತೇ ಕಾಲೇ ಋಷಿಣಾ ಪರಮಾತ್ಮನಾ ॥ ೭ ॥

ಆರಾಧಿತೋ ಹೃಷೀಕೇಶೋ ನಾರಾಯಣೋ ನಿರಂಜನಃ ।
ತಸ್ಯಾಸ್ತಟೇ ತು ದೇವೇಶಿ ವರ್ಷಾಣಿ ಸುಬಹೂನ್ಯಪಿ । ॥ ೮ ॥

ಗತಾನಿ ಚ ವಿಶೇಷೇಣ ಮುನೇಸ್ತಸ್ಯ ತು ಪಾರ್ವತಿ ।
ಕದಾಚಿದ್ದೈವಯೋಗಾಚ್ಚ ವರ್ಷಕಾಲಸ್ಸಮಾಗತಃ ॥ ೯ ॥

---

೪. ಆ ತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಮಹೇಶ್ವರನ ದರ್ಶನವನ್ನು ಮಾಡಿದರೆ ಪಾಪವೆಲ್ಲವನ್ನೂ ಕಳೆದುಕೊಂಡು ರುದ್ರಲೋಕವನ್ನು ಹೊಂದುತ್ತಾನೆ.

೫. ಎಲೈ ದೇವಿಯೆ ! ಆ ನದಿಗೆ ಈ ಶಾಪಬರಲು ಕಾರಣವನ್ನೂ ಆ ಶಾಪದಿಂದ ಅದು ಒಣಗಿಹೋದುದನ್ನೂ ಹೇಳುತ್ತೇನೆ. ಕೇಳು.

೬. ಗಂಗಾನದಿಯು ಸಾಭ್ರಮತಿಯೆಂಬ ಹೆಸರನ್ನು ಹೊಂದಿ ಎಲ್ಲಿ ಹರಿಯುತ್ತದೆಯೋ ಅಲ್ಲಿ ಆ ಸಾಭ್ರಮತಿಯು ಹಸ್ತಿಮತಿಯೆಂಬ ನದಿಯೊಡನೆ ಸೇರಿಕೊಂಡಿತು

೭–೯. ಆ ಜಾಗದಲ್ಲಿ ಆ ಕೌಂಡಿನ್ಯ ಋಷಿಯು ಉತ್ತಮವಾದ ತಪಸ್ಸನ್ನು ಮಾಡಲು ಮೊದಲು ಮಾಡಿದನು. ಹೀಗೆಯೇ ಬಹುಕಾಲ ತಪಸ್ಸನ್ನು ಮಾಡುತ್ತ ಪರಮ ಪುರುಷನಾದ ನಾರಾಯಣನನ್ನು ಆರಾಧಿಸಿದನು. ಹೀಗೆ ಆ ನದಿಯ ದಡದಲ್ಲಿ ತಪಸ್ಸು ಮಾಡುತ್ತ ಆ ಋಷಿಯು ಬಹುಕಾಲವನ್ನು ಕಳೆದನು. ಹೀಗಿರುತ್ತಿರಲು ಒಂದುಸಾರಿ ಮಳೆಗಾಲವು ಬಂದಿತು.

ನದೀ ತತ್ರ ತು ಸಪೂರ್ಣಾ ಕಾಲಯೋಗೇನ ಸುವ್ರತೇ ।
ತತ್ಕೌಂಡಿನ್ಯೇನ ಋಷಿಣಾ ಸ್ಥಾನಂ ತ್ಯಕ್ತಂ ತದಾ ನಿಶಿ ॥ ೧೦ ॥

ರಾತ್ರೌ ದುಃಖಂ ಮಹಜ್ಜಾತಂ ಹಾಹೇತಿ ಕರುಣಂ ರುದನ್ ।
ಕಿಂ ಕರ್ತವ್ಯಮಿತಿ ಧ್ಯಾಯನ್ನತಿ ಚಿಂತಾಪರೋಽಭವತ್ ॥ ೧೧ ॥

ಆಶ್ರಮೋ ಹಿ ಮಹಾನ್ದಿವ್ಯ ವೃಕ್ಷೈಶ್ಚೈವ ಸಮಾಯುತಃ ।
ಸ ಗತೋ ವಾರಿಯೋಗೇಣ ಹಸ್ತಿಮತ್ಯಾಂ ಸುರೋತ್ತಮೇ ॥ ೧೨ ॥

ಫಲಾನಿ ಚೈವ ಮೂಲಾನಿ ಪುಸ್ತಕಾನಿ ಬಹೂನ್ಯಪಿ ।
ತಾನಿ ತಸ್ಯಾಂ ಗತಾನ್ಯೇವ ವಾರಿಯೋಗೇಣ ಸುಂದರಿ ॥ ೧೩ ॥

ಸ ಕೌಂಡಿನ್ಯ ಋಷಿಶ್ರೇಷ್ಠಃ ಶಶಾಪ ತಾಂ ನದೀಂ ಕಿಲ ।
ಉದಕೇನ ವಿನಾ ತ್ವಂ ಚ ಭವಿಷ್ಯಸಿ ಕಲೌ ಯುಗೇ ॥ ೧೪ ॥

---

೧೦. ಆ ಮಳೆಯ ಸಂಬಂಧದಿಂದ ಆ ನದಿಯು ಪೂರ್ಣವಾಗಿ ಹರಿಯಿತು. ಇದು ಅವನ ಆಶ್ರಮದ ಬಳಿಗೂ ಬರಲು ಅವನು ರಾತ್ರಿಯಲ್ಲಿಯೇ ಆ ಜಾಗವನ್ನು ಬಿಡಬೇಕಾಗಿ ಬಂದಿತು.

೧೧ ರಾತ್ರಿಯಾದುದರಿಂದ ಬಹು ಕಷ್ಟವಾಯಿತು. ಆಗ ಹಾಹಾ ಎಂದು ಅಳುತ್ತ ಏನುಮಾಡಲೆಂದು ದುಃಖಿಸುತ್ತ ಯೋಚಿಸುತ್ತಿದ್ದನು.

೧೨. ಆ ಆಶ್ರಮವು ಬಹು ರಮ್ಯವಾದುದು. ಅಲ್ಲಿ ಬಹುವಾಗಿ ಮರಗಳಿದ್ದುವು. ಆ ನೀರಿನ ತೊಂದರೆಯನ್ನು ತಾಳಲಾರದೆ ಆ ಕೌಂಡಿನ್ಯನು ಹೊರಟು ಹೋದನು.

೧೩. ಆ ಹಸ್ತಿಮತಿಯ ನೀರಿನ ಪ್ರವಾಹದಿಂದ ಅವನ ಪುಸ್ತಕಗಳೂ, ಹಣ್ಣುಗಳೂ, ಗೆಡ್ಡೆಗೆಣಸುಗಳೂ ಎಲ್ಲವೂ ಕೊಚ್ಚಿಕೊಂಡು ಹೋದುವು.

೧೪. ಆಗ ಆ ಋಷಿಯು ಆ ನದಿಯನ್ನು ಕುರಿತು ನೀನು ನನಗೆ ಹೀಗೆ ತೊಂದರೆ ಮಾಡಿದುದರಿಂದ ಕಲಿಯುಗದಲ್ಲಿ ನೀರಿಲ್ಲದವಳಾಗಿ ಆಗುತ್ತೀಯೇ ಎಂದು ಶಪಿಸಿದನು.

ಏವಂ ದತ್ವಾ ತು ವೈ ಶಾಪಂ ಹಸ್ತಿಮತ್ವಾ ಮಹೇಶ್ವರಿ ।
ಗತೋಽಸೌ ವಿಪ್ರಪ್ರವರೋ ವಿಷ್ಣುಲೋಕಂ ಸನಾತನಂ ॥ ೧೫ ॥

ಅದ್ಯಾಪಿ ವರ್ತತೇ ತೀರ್ಥಂ ಸಂಗಮೇಶ್ವರಸಂಜ್ಞಕಂ ।
ಯದ್ದೃಷ್ಟ್ವಾ ಮುಚ್ಯತೇ ಪಾಪೀ ಬ್ರಹ್ಮಹತ್ಯಾದಿಪಾತಕಾತ್ ॥ ೧೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಂಗಮೇಶ್ವರ ತೀರ್ಥ ವರ್ಣನ ಕಥನಂ ನಾಮ ಅಷ್ಟಾತ್ರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೫. ಈ ರೀತಿಯಾಗಿ ಶಾಪವನ್ನು ಕೊಟ್ಟು ಆ ಬ್ರಾಹ್ಮಣನು ಸನಾತನವಾದ ವಿಷ್ಣುಲೋಕವನ್ನು ಹೊಂದಿದನು.

೧೬. ಆ ಸಂಗಮೇಶ್ವರ ತೀರ್ಥವು ಈಗಲೂ ಅಲ್ಲಿ ಇರುತ್ತದೆ. ಅದರ ದರ್ಶನದಿಂದ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಾಶವಾಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಂಗಮೇಶ್ವರ ತೀರ್ಥ ವರ್ಣನ ಕಥನ ಎಂಬ ನೂರ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—x—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನಚತ್ವಾರಿಂಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ತತೋ ಗಚ್ಛೇಚ್ಚ ದೇವೇಶಿ ತೀರ್ಥಂ ರುದ್ರಮಹಾಲಯಂ ।**
**ಕೇದಾರಾನುಪಮಂ ಸಾಕ್ಷಾದ್ರುದ್ರೇಣ ಪರಿನಿರ್ಮಿತಂ ॥ ೧ ॥**

**ಶ್ರಾದ್ಧಂ ತತ್ರೈವ ಕರ್ತವ್ಯಂ ಪಿತೄಣಾಂ ತೃಪ್ತಿಕಾರಣಂ ।**
**ತತ್ರ ಶ್ರಾದ್ಧಪ್ರದಾನೇನ ಪಿತರಸ್ಸಪಿತಾಮಹಾಃ ॥ ೨ ॥**

---

## ನೂರ ಮೂವತ್ತೊಂಭತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು– ಎಲೈ ಪಾರ್ವತಿಯೇ ! ಆಮೇಲೆ ಮುಂದಕ್ಕೆ ರುದ್ರಮಹಾಲಯ ತೀರ್ಥವಿರುವುದು. ಅಲ್ಲಿಗೆ ಹೋಗಬೇಕು. ಅದು ಕೇದಾರತೀರ್ಥಕ್ಕೆ ಸಮವಾದುದು. ರುದ್ರನೇ ಅದನ್ನು ಪ್ರತ್ಯಕ್ಷವಾಗಿ ನಿರ್ಮಿಸಿದ್ದಾನೆ.

೨–೪. ಅಲ್ಲಿ ಶ್ರಾದ್ಧಮಾಡಿದರೆ ಪಿತೃಗಳಿಗೆ ತೃಪ್ತಿಯಾಗುತ್ತದೆ ಅಲ್ಲಿ ಶ್ರಾದ್ಧಮಾಡುವುದರಿಂದ ಪಿತೃಪಿತಾಮಹಮರೇ ಮುಂತಾದವರೆಲ್ಲರೂ ತೃಪ್ತಿಯನ್ನು

ತೃಪ್ತಾಸ್ತ್ವಮಭಿಗಚ್ಛಂತಿ ರುದ್ರಸ್ಯ ಪರಮಂ ಪದಂ ।
ವೃಷಮುತ್ಸೃಜತೇ ಯಸ್ತು ತತ್ರ ರುದ್ರಮಹಾಲಯೇ । ॥ ೩ ॥

ಕಾರ್ತಿಕ್ಯಾಮಥ ವೈಶಾಖ್ಯಾಂ ರುದ್ರೇಣ ಸಹ ಮೋದತೇ ।
ಕೇದಾರ ಉದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥ ४ ॥

ಅತ್ರ ತು ಸ್ನಾನಮಾತ್ರೇಣ ಮುಕ್ತಿಭಾಗೀ ನ ಸಂಶಯಃ ।
ಏಕಸ್ಮಿನ್ಸಮಯೇ ದೇವಿ ತ್ಯಕ್ತ್ವಾ ಕೈಲಾಸಮಾಗತಃ ॥ ೫ ॥

ಸಾಭ್ರಮತೀಂ ಮಹಾಗಂಗಾಂ ಜ್ಞಾತ್ವಾ ಲೋಕಹಿತಾಯ ವೈ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಕೃತ್ವಾ ತೀರ್ಥಮನುತ್ತಮಂ ॥ ೬ ॥

ಗತೋಽಹಂ ಚ ಸ್ವಕಂ ಸ್ಥಾನಂ ಕೈಲಾಸಂ ಪ್ರತಿ ಭಾಮಿನಿ ।
ತದಂತರಂ ಮಹಾಪುಣ್ಯಂ ತೀರ್ಥಂ ಜಾತಂ ಮಹಾಲಯಂ ॥ ೭ ॥

---

ಹೊಂದಿ ರುದ್ರನ ಸ್ಥಾನವಾದ ಕೈಲಾಸವನ್ನು ಹೊಂದುತ್ತಾರೆ. ಆ ಜಾಗದಲ್ಲಿ ರುದ್ರ ಮಹಾಲಯದಲ್ಲಾಗಲಿ ಕಾರ್ತಿಕಮಾಸ ವೈಶಾಖಮಾಸಗಳಲ್ಲಾಗಲೀ ವೃಷ ಉತ್ಸರ್ಗವನ್ನು ಮಾಡಿದರೆ (ಬಸವನನ್ನು ಬಿಟ್ಟರೆ) ಅವನು ರುದ್ರನೊಡನೆ ಸುಖಿಸುತ್ತಾನೆ ಆ ಕೇದಾರದಲ್ಲಿ ನೀರನ್ನು ಕುಡಿದರೆ ಮತ್ತೆ ಜನ್ಮವೇ ಇರುವುದಿಲ್ಲ.

೫. ಇಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ. ಸಂಶಯವಿಲ್ಲ. ಎಲೈ ದೇವಿಯೇ ! ಒಂದು ಸಾರಿ ನಾನು ಕೈಲಾಸವನ್ನು ಬಿಟ್ಟು ಸಾಭ್ರಮತೀ ನದಿಗೆ ಬಂದೆನು.

೬-೭. ಸಾಭ್ರಮತಿಯಾದ ಗಂಗೆಯು ಮಹಾಪುಣ್ಯವಾಗಿ ಲೋಕಹಿತವಾಗಲೆಂದು ಅಲ್ಲಿಗೆ ಹೋದೆನು. ಮತ್ತು ಅಲ್ಲಿ ಸ್ನಾನಮಾಡಿ ನೀರನ್ನು ಕುಡಿದು ಕೈಲಾಸಕ್ಕೆ ಹೋದೆನು. ಆಗ ಆ ಜಾಗವು ಮಹಾಲಯವೆಂಬ ಹೆಸರನ್ನು ಹೊಂದಿ ಮಹಾಪುಣ್ಯ ತೀರ್ಥವಾಯಿತು.

ರುದ್ರಮಹಾಲಯಮಿತಿ ಲೋಕೇ ಖ್ಯಾತಿಂ ಗಮಿಷ್ಯತಿ ।
ಕಾರ್ತಿಕ್ಯಾಮಥ ವೈಶಾಖ್ಯಾಂ ಯೇ ಗಚ್ಛಂತಿ ಸುರೋತ್ತಮೇ ।
ನ ತೇಷಾಂ ವಿದ್ಯತೇ ದುಃಖಂ ಸರ್ವಸಂಸಾರಜಂ ಪುನಃ ॥ ೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ರುದ್ರ ಮಹಾಲಯ ತೀರ್ಥ ವರ್ಣನಂ ನಾಮ
ಏಕೋನಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೮. ಅದು ಮೊದಲುಗೊಂಡು ಇದು ಲೋಕದಲ್ಲಿ ರುದ್ರಮಹಾಲಯ ತೀರ್ಥವೆಂದು ಹೆಸರನ್ನು ಹೊಂದಿತು. ಕಾರ್ತಿಕದಲ್ಲಿ ವೈಶಾಖದಲ್ಲಿ ಇಲ್ಲಿ ಸ್ನಾನ ಮಾಡಿದರೆ ಅವರಿಗೆ ಸಂಸಾರದಲ್ಲಿ ಹುಟ್ಟುವಿಕೆಯೆಂಬ ದುಃಖವೇ ಇರುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದಲ್ಲಿ ರುದ್ರ ಮಹಾಲಯ ತೀರ್ಥ ವರ್ಣನ ಎಂಬ
ನೂರ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತ್ವಾರಿಂಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ॥

ದೇವಿ ವೈ ಶ್ರೂಯತಾಂ ತೀರ್ಥಂ ದೇವಾನಾಮಪಿ ದುರ್ಲಭಂ ।
ಖಡ್ಗತೀರ್ಥಮಿತಿ ಖ್ಯಾತಂ ಸರ್ವಪಾಪಪ್ರಣಾಶನಂ ॥ ೧ ॥

ಖಡ್ಗತೀರ್ಥೇ ನರಸ್ಸ್ನಾತ್ವಾ ದೃಷ್ಟ್ವಾ ಖಡ್ಗೇಶ್ವರಂ ಶಿವಂ ।
ನ ನರೋ ದುರ್ಗತಿಂ ಯಾಯಾತ್ ಸ್ವರ್ಗಲೋಕಂ ಪ್ರಗಚ್ಛತಿ ॥ ೨ ॥

ಖಡ್ಗಧಾರೇಶ್ವರಂ ದೇವಂ ಯಃ ಪಶ್ಯತಿ ಸುರೋತ್ತಮೇ ।
ಕಾರ್ತಿಕ್ಯಾಂ ತು ವಿಶೇಷೇಣ ಪೂಜನಂ ತತ್ರ ಕಾರಯೇತ್ ॥ ೩ ॥

---

## ನೂರ ನಲವತ್ತನೆಯ ಅಧ್ಯಾಯವು



೧. ಮಹಾದೇವನು ಹೇಳಿದನು– ಎಲೈ ದೇವಿಯೇ ! ಕೇಳು. ದೇವತೆಗಳಿಗೂ ದುರ್ಲಭವಾದ ಪುಣ್ಯಕರವಾದ ಖಡ್ಗತೀರ್ಥವೆಂಬ ತೀರ್ಥವಿದೆ. ಅದು ಎಲ್ಲಾ ಪಾಪಗಳನ್ನೂ ನಾಶಮಾಡುತ್ತದೆ.

೨ ಮನುಷ್ಯನು ಖಡ್ಗತೀರ್ಥದಲ್ಲಿ ಸ್ನಾನಮಾಡಿ ಖಡ್ಗೇಶ್ವರನ ದರ್ಶನವನ್ನು ಮಾಡಿದರೆ ನರಕಭಾಗಿಯಾಗದೆ ಸ್ವರ್ಗವನ್ನು ಹೊಂದುತ್ತಾನೆ.

೩. ಖಡ್ಗಧಾರೇಶ್ವರನನ್ನು ದರ್ಶನಮಾಡಿದರೆ ಮಹಾಪುಣ್ಯವು ಬರುತ್ತದೆ. ಕಾರ್ತೀಕಮಾಸದಲ್ಲಿ ಅಲ್ಲಿ ಸ್ನಾನವೂ ಪೂಜೆಯೂ ವಿಶೇಷ ಫಲಪ್ರದಗಳು.

ಅಯಂ ವಿಶ್ವೇಶ್ವರೋ ದೇವಃ ಸರ್ವದಾ ಭುವಿ ವಲ್ಲಭೇ ।
ಸರ್ವಂ ದದಾತಿ ಸರ್ವೇಶೋ ವಾಂಛಿತಾರ್ಥಪ್ರದಾಯಕಃ ॥ ೪ ॥

ವೈಶಾಖೇ ರಾಜ್ಯಕಾಮಾರ್ಥೀ ಯಃ ಪಶ್ಯತಿ ತಮೀಶ್ವರಂ ।
ತಮರ್ಥಂ ಲಭತೇ ಕ್ಷಿಪ್ರಂ ವಿಶ್ವನಾಥಪ್ರಸಾದತಃ ॥ ೫ ॥

ಪುಷ್ಪೈರ್ಧೂಪೈಶ್ಚ ನೈವೇದ್ಯೈರ್ದೀಪೈರ್ವಾ ನಗನಂದಿನಿ ।
ಫಲಪ್ರದಾನೈರ್ಬಿಲ್ವೈಶ್ಚ ವಿಶ್ವೇಶಂ ಪೂಜಯೇತ್ತತಃ ॥ ೬ ॥

ಧನಧಾನ್ಯಪ್ರದಂ ಚಾಶು ಪುತ್ರಪೌತ್ರಾದಿಸಂಪದಃ ।
ಪ್ರಾಪ್ಯಂತೇ ನಾತ್ರ ಸಂದೇಹಃ ಶ್ರೀವಿಶ್ವೇಶ್ವರಪೂಜನಾತ್ ॥ ೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಹಾತ್ಮ್ಯೇ ಖಡ್ಗ ತೀರ್ಥ ವರ್ಣನಂ ನಾಮ ಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪. ಎಲೈ ಪಾರ್ವತಿಯೇ! ಈ ವಿಶ್ವೇಶ್ವರ ಸ್ವಾಮಿಯು ಈ ಲೋಕದಲ್ಲಿ ಯಾವಾಗಲೂ ಇಷ್ಟಾರ್ಥಗಳನ್ನು ಕೊಡುತ್ತಾನೆ.

೫. ರಾಜ್ಯವನ್ನು ಅಪೇಕ್ಷಿಸುವವನು ವೈಶಾಖಮಾಸದಲ್ಲಿ ಆ ಸ್ವಾಮಿಯನ್ನು ಸೇವಿಸಬೇಕು. ಹಾಗೆ ಸೇವಿಸಿದರೆ ಆ ಸ್ವಾಮಿಯ ಅನುಗ್ರಹದಿಂದ ಇಷ್ಟವಾದುದನ್ನು ಹೊಂದುತ್ತಾನೆ.

೬. ಹೂವು, ಧೂಪ, ದೀಪ, ನೈವೇದ್ಯ, ಫಲಪ್ರದಾನ, ಬಿಲ್ವಪತ್ರೆ ಇವುಗಳನ್ನು ಸಮರ್ಪಿಸಿ ಆ ಸ್ವಾಮಿಯನ್ನು ಪೂಜಿಸಬೇಕು.

೭. ಈ ರೀತಿಯಾಗಿ ಆ ವಿಶ್ವೇಶ್ವರನನ್ನು ಪೂಜಿಸುವುದರಿಂದ ಆ ಸ್ವಾಮಿಯು ಜಾಗ್ರತೆಯಾಗಿ ಧನ, ಧಾನ್ಯ, ಪುತ್ರ, ಪೌತ್ರ ಸಂಪತ್ತುಗಳೆಲ್ಲವನ್ನೂ ಕೊಡುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮೆಯಲ್ಲಿ ಖಡ್ಗ ತೀರ್ಥ ವರ್ಣನೆ ಎಂಬ ನೂರ ನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಏಕಚತ್ವಾರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಸಾಭ್ರಮತ್ಯಾಸ್ತಟೇ ತೀರ್ಥಂ ಗಯಾತೀರ್ಥಾದನುತ್ತಮಂ ।**
**ಚಿತ್ರಾಂಗವದನಂ ನಾಮ ಮಾಲಾರ್ಕೇಧಿಷ್ಠಿತಂ ಶುಭಂ ॥ ೧ ॥**

**ಕಲ್ಪಪಾದಪಸಂತಾನೈರ್ಮಂದಾರೈಶ್ಚೋಪಶೋಭಿತಂ ।**
**ಚೂತನಿಂಬಕದಂಬೈಶ್ಚ ಕಾಶ್ಮರ್ಯಶ್ವತ್ಥತಿಂದುಕೈಃ ॥ ೨ ॥**

**ತಸ್ಮಾದಪಹರೇತ್ಕುಷ್ಠಂ ಯೋಜನಸ್ಮೃತಿವಿಭ್ರಮಾತ್ ।**
**ಯಸ್ಯ ಸಂಜಾಯತೇ ಕುಷ್ಠಂ ತಸ್ಯ ಮಾಲಾರ್ಕಕೋ ಹರೇತ್ ॥ ೩ ॥**

---

**ನೂರ ನಲವತ್ತೊಂದನೆಯ ಅಧ್ಯಾಯವು**



೧. ಶ್ರೀ ಮಹಾದೇವನು ಹೇಳಿದನು- ಮುಂದಕ್ಕೆ ಹೋದರೆ ಅಲ್ಲಿ ಈ ಸಾಭ್ರಮತಿಯ ದಡದಲ್ಲಿ ಚಿತ್ರಾಂಗವದನವೆಂಬ ತೀರ್ಥವಿದೆ. ಅಲ್ಲಿ ಮಾಲಾರ್ಕನೆಂಬ ಆದಿತ್ಯನಿದ್ದಾನೆ.

೨ ಅಲ್ಲಿ ಕಲ್ಪವೃಕ್ಷ, ಚಂದನವೃಕ್ಷ, ಪಾರಿಜಾತವೃಕ್ಷ, ಮಾವು, ಬೇವು, ಕಡಹ, ಅರಳಿ, ಬಸರಿ ಮುಂತಾದ ಅನೇಕ ಬಗೆಯ ಮರಗಳಿವೆ.

೩ ಅಲ್ಲಿ ಒಂದು ಯೋಜನದಗಲದಲ್ಲಿ ಆ ಮರಗಳಿರುವುದರಿಂದ ಕುಷ್ಠರೋಗವು ಹೋಗುತ್ತದೆ. ಕುಷ್ಠ ಬಂದವನ ಕಷ್ಟವನ್ನು ಆ ಮಾಲಾರ್ಕಸ್ವಾಮಿಯು ನಾಶಮಾಡುತ್ತಾನೆ.

ಯೊ ತು ವೇದೋಕ್ತವಿಧಿನಾ ನಾರೀ ತತ್ರಾಭಿಷಿಂಚತಿ ।
ಮೃತವತ್ಸಾಥವಾ ವಂಧ್ಯಾ ಪುತ್ರಂ ಪ್ರಾಪ್ನೋತಿ ಸಾಚಿರಾತ್ ॥ ೪ ॥

ಸಂಧ್ಯಾಸ್ನಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಾ ।
ಕೃತಂ ಭಾಸ್ಕರವಾರೇಣ ಮಾಲಾರ್ಕೇ ಚಾಕ್ಷಯಂ ಭವೇತ್ ॥ ೫ ॥

ಅತ್ರ ಗತ್ವಾ ತು ದೇವೇತಿ ಶ್ರೀರವೇರ್ವ್ರತಮಾಚರೇತ್ ।
ಇಹ ಲೋಕೇ ಸುಖಂ ಭುಕ್ತ್ವಾ ರವೇರ್ಲೋಕಂ ಹಿ ಯಾತಿ ವೈ ॥ ೬ ॥

ಮೃತವತ್ಸೋ ಹಿ ರಾಜರ್ಷಿಃ ತತ್ರ ಗತ್ವಾ ಕರೋತ್ತಪಃ ।
ಸ ರಾಜಾ ಪ್ರಾಪ್ತವಾನ್ ಪುತ್ರಂ ಶ್ರೀಮಾಲಾರ್ಕಪ್ರಸಾದತಃ ॥ ೭ ॥

ತತ್ರ ಗತ್ವಾ ವಿಶೇಷೇಣ ಉಪವಾಸೀ ಜಿತೇಂದ್ರಿಯಃ ।
ಮಾಲಾರ್ಕಂ ಪೂಜಯೇದ್ಯೋ ವೈ ಮುಕ್ತಿಭಾಗೀ ಭವೇದ್ಧ್ರುವಂ ॥ ೮ ॥

---

೪. ಯಾವಾಕೆಯು ಅಲ್ಲಿ ವೇದದಲ್ಲಿ ಹೇಳಿರುವ ರೀತಿಯಿಂದ ಸ್ನಾನ ಮಾಡುತ್ತಾಳೆಯೋ ಆಕೆಯು ಮಕ್ಕಳು ಸಾಯುವವಳಾಗಿದ್ದರೂ, ಬಂಜೆಯಾಗಿದ್ದರೂ ಮಕ್ಕಳನ್ನು ಹೊಂದುತ್ತಾಳೆ.

೫. ಅಲ್ಲಿ ಭಾನುವಾರದ ದಿನ ಸಂಧ್ಯಾಕಾಲದಲ್ಲಿ ಮಾಡಿದ ಸ್ನಾನ, ಜಪ, ಹೋಮ, ಅಧ್ಯಯನ ದೇವತಾರ್ಚನೆ ಮುಂತಾದುವು ಅಕ್ಷಯವಾಗುತ್ತವೆ

೬. ಎಲೈ ಪಾರ್ವತಿಯೇ! ಇಲ್ಲಿಗೆ ಬಂದು ಸೂರ್ಯನ ವ್ರತಗಳನು ಮಾಡಬೇಕು. ಅವನು ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಅನಂತರ ಸೂರ್ಯಲೋಕವನ್ನು ಹೊಂದುತ್ತಾನೆ.

೭. ಒಬ್ಬ ರಾಜರ್ಷಿಯ ಮಗನು ಸತ್ತುಹೋಗಲು ಅವನು ಇಲ್ಲಿಗೆ ಬಂದು ತಪಸ್ಸುಮಾಡಿದನು. ಅದರಿಂದ ಮತ್ತೆ ಮಗನನ್ನು ಆ ಸ್ವಾಮಿಯ ಅನುಗ್ರಹದಿಂದ ಹೊಂದಿದನು.

೮. ಅಲ್ಲಿಗೆ ಹೋದವನು ಜಿತೇಂದ್ರಿಯನಾಗಿ ಉಪವಾಸವಿದ್ದುಕೊಂಡು ಆ ಮಾಲಾರ್ಕನನ್ನು ಪೂಜಿಸಿದರೆ ಮುಕ್ತಿಯನ್ನು ಹೊಂದುತ್ತಾನೆ.

ವಸಿಷ್ಠಪ್ರಮುಖಾ ವಿಪ್ರಾ ದೇವಾ ಇಂದ್ರಾದಯಸ್ಸದಾ ।
ನಿವಸಂತಿ ಸುರಶ್ರೇಷ್ಠೇ ಮಾಲಾರ್ಕೇ ರವಿಸನ್ನಿಧೌ ॥ ೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಹಾತ್ಮ್ಯೇ ಮಾಲಾರ್ಕ ತೀರ್ಥ ವರ್ಣನಂ ನಾಮ ಏಕಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯. ವಸಿಷ್ಠನೇ ಮುಂತಾದ ಬ್ರಾಹ್ಮಣರೂ ಇಂದ್ರಾದಿ ದೇವತೆಗಳೂ ಈ ಮಾಲಾರ್ಕನ ಬಳಿಯಲ್ಲಿ ಯಾವಾಗಲೂ ವಾಸಿಸುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಮಾಲಾರ್ಕ ತೀರ್ಥ ವರ್ಣನ ಎಂಬ ನೂರ ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಚತ್ವಾರಿಂಶದಧಿಕಶತತಮೋऽಧ್ಯಾಯಃ ॥



॥ ಮಹಾದೇವ ಉವಾಚ ॥

**ತೀರ್ಥಾದಸ್ಮಾತ್ಪರಂ ತೀರ್ಥಂ ಮಾಲಾರ್ಕೋತ್ತರತಃ ಸ್ಥಿತಂ ।**
**ಚಂದನೇಶ್ವರಮಾಗಚ್ಛೇನ್ನಾಮೋದೀಸ್ಥಾನಮುತ್ತಮಂ ॥ ೧ ॥**

**ದುಶ್ಶಾಸನಸ್ಯ ರುಧಿರಂ ಪೀತ್ವಾ ಭೀಮೋ ಮಹಾಬಲಃ ।**
**ಪ್ರತಿಜ್ಞಾಮಾತ್ಮನಸ್ಸರ್ವಾಂ ಪೂರಯಿತ್ವಾ ಸುದಾರುಣಾಂ ॥ ೨ ॥**

**ಕರಾಭ್ಯಾಂ ರುಧಿರಾಕ್ತಾಭ್ಯಾಂ ದ್ರೌಪದ್ಯಾಃ ಕೇಶಬಂಧನಂ ।**
**ಕೃತ್ವಾ ದತ್ವಾ ದ್ವಿಜಾತಿಭ್ಯಸ್ತೀರ್ಥಯಾತ್ರಾಂ ತತೋಗಮತ್ ॥ ೩ ॥**

---

## ನೂರ ನಲವತ್ತೆರಡನೆಯ ಅಧ್ಯಾಯವು



೧. ಮಹಾದೇವನು ಹೇಳಿದನು- ಈ ಮಾಲಾರ್ಕತೀರ್ಥದಿಂದ ಮುಂದಕ್ಕೆ ಹೋದರೆ ಚಂದನೇಶ್ವರವೆಂಬ ತೀರ್ಥವಿರುವುದು. ಆ ಜಾಗವು ಒಳ್ಳೆಯ ಸುವಾಸನೆಯಿಂದ ಕೂಡಿರುವುದು.

೨-೩. ಭೀಮನು ಭಾರತ ಮಹಾಯುದ್ಧದಲ್ಲಿ ದುಶ್ಶಾಸನನ ರಕ್ತವನ್ನು ಕುಡಿದು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡು ಆ ರಕ್ತದ ಕೈಗಳಿಂದಲೇ ದ್ರೌಪದಿಯ ತಲೆಗೂದಲನ್ನು ಕಟ್ಟಿ ಆ ಕೈರಕ್ತವನ್ನು ಇಲ್ಲಿ ತೊಳೆದು ಅನಂತರ ಮುಂದೆ ತೀರ್ಥಯಾತ್ರೆಗೆ ಹೊರಟನು.

ಸಾಭ್ರಮತ್ಯಾಸ್ತಟೇ ರಮ್ಯೇ ಗತೋ ವೈ ಭ್ರಾತೃಭಿಸ್ಸಹ ।
ಆನೀತಸ್ಸಾಭ್ರಮತ್ಯಾ ಯಃ ಸ್ವರ್ಗಾಚ್ಚಂದನಪಾದಪಃ ॥ ೪ ॥

ಸ ತು ಲಿಂಗತಯಾ ಜಾತಃ ಪುಣ್ಯತೀರ್ಥಪ್ರಭಾವತಃ ।
ತತಃ ಪ್ರಭೃತಿ ತೀರ್ಥಂ ಚ ಚಂದನಾಹ್ವಯಸಂಜ್ಞಿತಂ ॥ ೫ ॥

ಚಂದನೇಶ ಇತಿ ಖ್ಯಾತೋ ರುದ್ರೋ ವೈ ಪಾರ್ವತೀಪತಿಃ ।
ತತ್ರ ಸ್ನಾತ್ವಾ ಜಪ ಪೀತ್ವಾ ಚ ಕೃತ್ವಾ ವೈ ಪಿತೃತರ್ಪಣಂ ॥ ೬ ॥

ಸ ನರೋ ನಿರಯಂ ಗಚ್ಛೇದ್ರುದ್ರಲೋಕಮವಾಪ್ನುಯಾತ್ ।
ಚಂದನೇಶಂ ತತೋ ದೃಷ್ಟ್ವಾ ವಿಶ್ವೇಶಂ ಲೋಕಶಂಕರಂ । ॥ ೭ ॥

ಪೂಜಯೇಚ್ಚ ಯಥಾಶಕ್ತಿ ರುದ್ರಲೋಕಮಭೀಪ್ಸುಕಃ ।
ಯತ್ರ ತ್ರೈವರ್ತಕೋ ರಾಜಾ ಪೂಜಾಂ ಕೃತ್ವಾ ಹ್ಯನೇಕಶಃ ॥ ೮ ॥

ಸ ಗತಶ್ಶಿವಲೋಕಂ ತಂ ಯತ್ರ ಗತ್ವಾ ನ ಶೋಚತಿ ।
ಮಜ್ಜಂತಿ ಋಷಯೋ ಯತ್ರ ಯತ್ರ ದೇವಸ್ಸನಾತನಃ ॥ ೯ ॥

---

೪-೫. ಆ ಮೇಲೆ ಆ ಭೀಮನು ಸಹೋದರರೊಡನೆ ಆ ಸಾಭ್ರಮತಿಯ ದಡದಲ್ಲಿ ಮುಂದಕ್ಕೆ ಹೋದನು. ಶ್ರೀಕೃಷ್ಣನು ಸ್ವರ್ಗದಿಂದ ಇದೇ ಜಾಗದಲ್ಲಿ ಚಂದನ ಕಲ್ಪವೃಕ್ಷವನ್ನು ತಂದನು. ಅದೇ ಈ ತೀರ್ಥದ ಪ್ರಭಾವದಿಂದ ಲಿಂಗವಾಯಿತು. ಅದೇ ಕಾರಣವಾಗಿ ಇದಕ್ಕೆ ಚಂದನ ತೀರ್ಥವೆಂಬ ಹೆಸರು ಬಂದಿರುವುದು. ಇಲ್ಲಿರುವ ಈಶ್ವರನಿಗೆ ಚಂದನೇಶ್ವರನೆಂದು ಹೆಸರು.

೬-೧೦. ಆ ಪಾರ್ವತೀಪತಿಯಾದ ಚಂದನೇಶನನ್ನು ಪೂಜಿಸಬೇಕು. ಅಲ್ಲಿ ಸ್ನಾನಮಾಡಿ ನೀರನ್ನು ಕುಡಿದು ಪಿತೃತರ್ಪಣಗಳನ್ನು ಮಾಡಿದರೆ ಅವನು ನರಕವನ್ನು ಹೊಂದುವುದಿಲ್ಲ. ರುದ್ರನ ಸಮೀಪಕ್ಕೆ ಹೋಗುತ್ತಾನೆ. ಚಂದನೇಶನ ದರ್ಶನವನ್ನು ಮಾಡಿಕೊಂಡು ಅನಂತರ ವಿಶ್ವೇಶ್ವರನ ದರ್ಶನಕ್ಕೆ ಹೋಗಬೇಕು. ರುದ್ರಲೋಕವನ್ನು ಹೊಂದಬೇಕೆನ್ನುವವನು ಶಕ್ತಿಗನುಗುಣವಾಗಿ ಆ ವಿಶ್ವೇಶನನ್ನು ಪೂಜಿಸಬೇಕು. ಅಲ್ಲಿಯೇ ಬೇಡರ ದೊರೆಯು ಆ ಶಿವನನ್ನು ಅನೇಕಬಾರಿ ಪೂಜಿಸಿ ದುಃಖರಹಿತವಾದ ಶಿವಲೋಕವನ್ನು ಹೊಂದಿದನು. ಅಲ್ಲಿಯೇ ಋಷಿಗಳು ಸ್ನಾನಮಾಡುತ್ತಾರೆ. ಸನಾತನನಾದ ವಿಶ್ವೇಶ್ವರಸ್ವಾಮಿಯು ಅಲ್ಲಿರುವನು

**ಸಾಕ್ಷಾದ್ವಿಷ್ಣುಃ ಪರಮಾತ್ಮಾ ನಿತ್ಯಂ ತಿಷ್ಠತಿ ಭೂತಿದಃ ।**
**ಇಯಂ ಸಾಭ್ರಮತೀ ಧನ್ಯಾ ಧನ್ಯೋ ವಿಶ್ವೇಶ್ವರಃ ಪ್ರಭುಃ ॥ ೧೦ ॥**

**ಯತ್ರ ತೀರ್ಥಾನ್ಯನೇಕಾನಿ ಜಾತಾನಿ ಭುವಿ ಪಾರ್ವತಿ ।**
**ಅತ್ರ ಚಾಮರ್ದಕೈಃ ಪುಣ್ಯೈಃ ಫಲೈರ್ನಾನಾವಿಧೈಶ್ಶುಭೈಃ ॥ ೧೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಚಂದನೇಶ್ವರ ಮಾಹಾತ್ಮ್ಯ ಕಥನಂ ನಾಮ ದ್ವಿಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

ಅಲ್ಲಿರುವ ಸಾಭ್ರಮತಿಯು ಧನ್ಯವಾದುದು. ವಿಶ್ವೇಶ್ವರನೂ ಉತ್ತಮೋತ್ತಮನು. ಇದರಿಂದ ಆ ಸ್ಥಳವು ಬಹು ಉತ್ತಮವಾದುದು.

೧೧. ಆ ಜಾಗದಲ್ಲಿಯೇ ಅನೇಕ ತೀರ್ಥಗಳು ಹುಟ್ಟಿದುವು. ಇಲ್ಲಿ ನೆಲ್ಲಿ ಕಾಯನ್ನೂ ಇತರ ಹಣ್ಣುಗಳನ್ನೂ ಸೇರಿಸಿಕೊಂಡು ಅರ್ಘ್ಯದಾನವನ್ನು ಮಾಡಬೇಕು. ಇದು ಬಹು ಪುಣ್ಯಕರವಾದುದು

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಚಂದನೇಶ್ವರ ಮಹಿಮೆಯ ಕಥನ ಎಂಬ ನೂರ ನಲವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಃ ||



॥ ಮಹಾದೇವ ಉವಾಚ ॥

ಜಂಬುತೀರ್ಥಂ ತತೋ ಗಚ್ಛೇತ್ ಸ್ನಾನಾರ್ಥಂ ಪಾಪನಾಶನಂ ।
ಕಲಿಕಾಲೇ ಚ ಯತ್ಪುಂಸಾಂ ಸ್ವರ್ಗಸೋಪಾನವತ್ ಸ್ಥಿತಂ ॥ ೧ ॥

ಯತ್ರ ಜಾಂಬವತಾ ಪೂರ್ವಂ ದಶಾಂಗೇ ಪರ್ವತೋತ್ತಮೇ ।
ಸ್ಥಾಪಿತಂ ಋಕ್ಷರಾಜೇನ ಲಿಂಗಂ ಸುರಗಣಾರ್ಚಿತಂ ॥ ೨ ॥

ರಾಮೇಣ ಹಿ ಯದಾ ಪೂರ್ವಂ ಹತೋ ವೈ ರಾವಣೋಽಸುರಃ ।
ತದಾ ಜಾಂಬವತಾ ದಿಕ್ಷು ಭೇರೀಘೋಷೈಃ ಪ್ರಘೋಷಿತಂ ॥ ೩ ॥

---

## ನೂರ ನಲವತ್ತಮೂರನೆಯ ಅಧ್ಯಾಯವು



೧. ಮಹಾದೇವನು ಹೇಳಿದನು–ಅಲ್ಲಿಂದ ಮುಂದೆ ಜಂಬುತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದರೆ ಪಾಪವು ನಾಶವಾಗುತ್ತದೆ. ಕಲಿಕಾಲದಲ್ಲಿ ಈ ಜಂಬುತೀರ್ಥವು ಸ್ವರ್ಗವನ್ನು ಹತ್ತಲು ಸೋಪಾನದಂತಿರುವುದು

೨. ಇಲ್ಲಿರುವ ದಶಾಂಗವೆಂಬ ಪರ್ವತದಲ್ಲಿ ಜಾಂಬವನು ದೇವತೆಗಳಿಂದ ಪೂಜಿತವಾದ ಒಂದು ಲಿಂಗವನ್ನು ಸ್ಥಾಪಿಸಿದನು. ಬಹುಪುಣ್ಯ ಪ್ರದವಾದುದು.

೩–೪. ರಾಮನು ಪೂರ್ವದಲ್ಲಿ ರಾವಣನನ್ನು ಕೊಂದಾಗ ಜಾಂಬವಂತನು "ರಾಮನು ರಾವಣನನ್ನು ಯುದ್ಧದಲ್ಲಿ ಕೊಂದನು. ಸೀತೆಯು ಸಿಕ್ಕಿದಳು"

ಜಿತಂ ವೈ ರಾಮಚಂದ್ರೇಣ ರಾವಣೋ ನಿಹತೋ ರಣೇ ।
ಲಬ್ಧಾ ಸೀತೇತಿ ಸಂಘೋಷ್ಯ ಸ್ನಾತಂ ತೀರ್ಥವರೇ ಶುಭೇ ॥ ೪ ॥

ಸ್ಥಾಪಿತಂ ತತ್ರ ಲಿಂಗಂ ತು ಸ್ವನಾಮ್ನಾ ತು ಸುರೇಶ್ವರಿ ।
ತತ್ರ ಸ್ನಾತ್ವಾ ನರಸ್ಸದ್ಯಃ ಸ್ಮೃತ್ವಾ ರಾಮಂ ಸಹಾನುಜಂ
ಜಾಂಬವಂತೇಶ್ವರಂ ನತ್ವಾ ರುದ್ರಲೋಕೇ ಮಹೀಯತೇ ॥ ೫ ॥

॥ ಮಹಾದೇವ ಉವಾಚ ॥

ಯತ್ರ ಯತ್ರ ಹಿ ಭೋ ದೇವಿ ಶ್ರೀರಾಮಸ್ಮರಣಂ ಕೃತಂ ।
ಭವಬಂಧವಿಮೋಕ್ಷೋ ಹಿ ದೃಶ್ಯತೇ ಸಚರಾಚರೇ ॥ ೬ ॥

ಅಹಂ ರಾಮಸ್ತು ವಿಜ್ಞೇಯೋ ರಾಮೋ ವೈ ರುದ್ರ ಏವ ಚ ।
ಏವಂ ಜ್ಞಾತ್ವಾ ತು ದೇವೇಶಿನ ಭೇದೋ ವರ್ತತೇ ಕ್ವಚಿತ್ ॥ ೭ ॥

---

ಎಂಬದಾಗಿ ಎಲ್ಲಾ ಕಡೆಯಲ್ಲಿಯೂ ಭೇರಿಯನ್ನು ಬಡಿಯುತ್ತಾ ಸಾರಿಸಿದನು. ಅನಂತರ ಇಲ್ಲಿಗೆ ಬಂದು ಇಲ್ಲಿನ ತೀರ್ಥದಲ್ಲಿ ಸ್ನಾನಮಾಡಿದರು.

೫. ಆ ರೀತಿಯಾಗಿ ಸಾರಿಸಿ ಅಲ್ಲಿ ತನ್ನ ಹೆಸರಿನಿಂದ ಜಾಂಬವತೇಶ್ವರ ನೆಂಬ ಈಶ್ವರನನ್ನು ಸ್ಥಾಪಿಸಿದನು. ಅಲ್ಲಿ ಮನುಷ್ಯನು ಸ್ನಾನಮಾಡಿ ರಾಮ ಲಕ್ಷ್ಮಣರನ್ನು ಸ್ಮರಿಸಿಕೊಂಡು ಜಾಂಬವತೇಶ್ವರನ ದರ್ಶನವನ್ನು ಮಾಡಿದರೆ ರುದ್ರ ಲೋಕದಲ್ಲಿ ಸುಖಿಸುತ್ತಾನೆ.

೬. ಮಹಾದೇವನು ಹೇಳಿದನು–ಎಲೈ ದೇವಿಯೇ! ಎಲ್ಲೆಲ್ಲಿ ರಾಮಸ್ಮರಣೆ ನಡೆಯುತ್ತದೆಯೋ ಅಲ್ಲೆಲ್ಲವೂ ಹುಟ್ಟುವುದು ಸಾಯುವುದರ ರೂಪವಾದ ಬಂಧವೇ ಇಲ್ಲವೆಂದು ಚರಾಚರರೂಪವಾದ ಈಪ್ರಪಂಚದಲ್ಲಿ ಕಾಣುತ್ತಿದೆ.

೭. ಎಲೈ ದೇವಿಯೇ! ನಾನೇ ರಾಮನು. ರಾಮನೇ ರುದ್ರನಾದ ನಾನು. ಈ ರೀತಿಯಾಗಿ ಅಭೇದವನ್ನು ತಿಳಿದುಕೊಳ್ಳಬೇಕು. ನಮ್ಮಿಬ್ಬರಿಗೂ ಬೇಧವೇ ಇರುವುದಿಲ್ಲ.

ರಾಮ ರಾಮೇತಿ ರಾಮೇತಿ ಮನಸಾ ಯೇ ಜಪಂತಿ ಚ ।
ತೇಷಾಂ ಸರ್ವಾರ್ಥಸಿದ್ಧಿಶ್ಚ ಭವಿಷ್ಯತಿ ಯುಗೇ ಯುಗೇ ॥ ೮ ॥

ಅಹಂ ಹಿ ಸರ್ವದಾ ದೇವಿ ಶ್ರೀರಾಮಸ್ಮರಣಂ ಚರೇ ।
ಯಂ ಶ್ರುತ್ವಾ ತು ಪುನರ್ದೇವಿ ನ ಭವೋ ಜಾಯತೇ ಕ್ವಚಿತ್ ॥ ೯ ॥

ಕಾಶ್ಯಾಂ ಹಿ ನಿವಸನ್ನಿತ್ಯಂ ಶ್ರೀರಾಮಂ ಕಮಲೇಕ್ಷಣಂ ।
ಸ್ಮರಾಮಿ ಸತತಂ ದೇವಿ ಭಕ್ತ್ಯಾ ಚ ವಿಧಿಪೂರ್ವಕಂ ॥ ೧೦ ॥

ತದಾ ಜಾಂಬವತಾ ಪೂರ್ವಂ ಸ್ಮೃತ್ವಾ ರಾಮಂ ಸುಶೋಭನಂ ।
ಜಾಂಬವಂತಮಿತಿ ಖ್ಯಾತಂ ಪ್ರಸ್ಥಾಪ್ಯ ಜಗತಾಂ ಗುರುಂ ॥ ೧೧ ॥

ತತ್ರ ಸ್ನಾತ್ವಾ ಚ ಭುಕ್ತ್ವಾ ಚ ಕೃತ್ವಾ ದೇವಸ್ಯ ಪೂಜನಂ ।
ಶಿವಲೋಕಮವಾಪ್ನೋತಿ ಯಾವದಿಂದ್ರಾಶ್ಚತುರ್ದಶ ॥ ೧೨ ॥

---

೮. ರಾಮ, ರಾಮ, ರಾಮ ಎಂಬುದಾಗಿ ಯಾರು ಮನಸ್ಸಿನಲ್ಲಿಯೇ ಜಪಿಸುತ್ತಾರೆಯೋ ಅವರಿಗೆ ಎಲ್ಲಾ ಯುಗದಲ್ಲಿಯೂ ಇಷ್ಟಾರ್ಥಸಿದ್ಧಿಯುಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

೯. ಎಲೈ ದೇವಿಯೇ ! ನಾನೂ ಕೂಡ ಶ್ರೀರಾಮಸ್ಮರಣೆಯನ್ನು ಮಾಡುತ್ತಲೇ ಇರುತ್ತೇನೆ. ಆ ರಾಮಸ್ಮರಣೆ ಕೇಳಿದರೇನೇ ಸಂಸಾರದಲ್ಲಿ ಮತ್ತೆ ಹುಟ್ಟುವಿಕೆಯೆಂಬುದೇ ಇರುವುದಿಲ್ಲ.

೧೦. ಎಲೈ ದೇವಿಯೇ ! ನಾನು ಕಾಶಿಯಲ್ಲಿ ವಾಸವಾಗಿದ್ದರೂ ಆ ಸ್ವಾಮಿಯಾದ ಶ್ರೀರಾಮನನ್ನು ಸ್ಮರಿಸುತ್ತಿರುತ್ತೇನೆ. ಅದರಲ್ಲಿಯೂ ಭಕ್ತಿಯಿಂದ ವಿಧಿಯಂತೆ ಸ್ಮರಿಸುತ್ತಿರುತ್ತೇನೆ.

೧೧. ಅಲ್ಲಿ ಜಾಂಬವನು ಆ ಸ್ವಾಮಿಯನ್ನು ಊರಿಗೆ ಕಳುಹಿಸಿ ಆ ಜಗದ್ಗುರುವನ್ನು ಧ್ಯಾನಮಾಡಿದನು. ಆದ್ದರಿಂದ ಅಲ್ಲಿರುವ ತೀರ್ಥಕ್ಕೆ ಜಾಂಬವ ತೀರ್ಥವೆಂದು ಹೆಸರು ಬಂದಿತು.

೧೨. ಅಲ್ಲಿ ಸ್ನಾನಮಾಡಿ ಪ್ರಸಾದವನ್ನು ಸ್ವೀಕರಿಸಿ ದೇವರನ್ನು ಪೂಜಿಸಿದವನಿಗೆ ಶಿವಲೋಕವು ಹದಿನಾಲ್ಕು ಜನ ಇಂದ್ರರಿರುವವರೆಗೂ ಲಭಿಸುತ್ತದೆ.

**ಅತ್ರ ಹಿ ಸ್ನಾನಮಾತ್ರೇಣ ಯಥಾ ಜಾಂಬವತೋ ಬಲಂ ।**
**ತಥಾ ವೈ ಬಲಮಾಪ್ನೋತಿ ವಿಶ್ವೇಶ್ವರಪ್ರಸಾದತಃ　　॥ ೧೩ ॥**

**ಅತ್ರ ಗತ್ವಾ ತು ಭೂದಾನಂ ಪುಮಾನ್ಯಶ್ಚ ಕರೋತಿ ವೈ ।**
**ಫಲಂ ಸಹಸ್ರಗುಣಿತಂ ಜಾಂಬವಂತೇಶದರ್ಶನಾತ್　　॥ ೧೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಜಂಬುತೀರ್ಥ ಮಹಾತ್ಮ್ಯ ಕಥನಂ ನಾಮ ತ್ರಿಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೧೩. ಇಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಜಾಂಬವನಿಗಿರುವಂತೆ ಬಲವು ಆ ವಿಶ್ವೇಶ್ವರನ ಅನುಗ್ರಹದಿಂದ ಬರುತ್ತದೆ.

೧೪. ಅಲ್ಲಿಗೆ ಹೋಗಿ ಯಾವನು ಭೂದಾನವನ್ನು ಮಾಡುತ್ತಾನೆಯೋ ಅವನು ಆ ಜಾಂಬವಂತೇಶನ ದರ್ಶನದಿಂದ ಸಾವಿರದಷ್ಟು ಫಲವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ಜಂಬುತೀರ್ಥ ಮಹಿಮೆಯ ಕಥನ ಎಂಬ ನೂರ ನಲವತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ ||



**॥ ಮಹಾದೇವ ಉವಾಚ ॥**

**ಅಸ್ಮಾತ್ತೀರ್ಥಾತ್ಪರಂ ತೀರ್ಥಮಿಂದ್ರಗ್ರಾಮಮಿತಿ ಸ್ಮೃತಂ ।**
**ಯತ್ರ ಸ್ನಾತ್ವಾ ಪುರಾ ಶಕ್ರೋ ವಿಮುಕ್ತೋ ಘೋರಕಿಲ್ಬಿಷಾತ್ ॥ ೧ ॥**

**॥ ಶ್ರೀ ಪಾರ್ವತ್ಯುವಾಚ ॥**

**ಕೇನೇಹ ಕರ್ಮಣಾ ಶಕ್ರಃ ಪ್ರಾಪ್ತವಾನ್ ಘೋರಕಿಲ್ಬಿಷಂ ।**
**ವಿಪಾಪ್ಮಾ ಚ ಕಥಂ ಸೋಽಭೂದಿತಿ ವಿಸ್ತರಶೋ ವದ ॥ ೨ ॥**

---

## ನೂರ ನಲವತ್ತನಾಲ್ಕನೆಯ ಅಧ್ಯಾಯವು



೧. ಮಹಾದೇವನು ಹೇಳಿದನು– ಇದಕ್ಕಿಂತಲೂ ಮುಂದಿನ ತೀರ್ಥವು ಇಂದ್ರಗ್ರಾಮವೆಂಬುದು ಇರುವುದು. ಅಲ್ಲಿಯೇ ಪೂರ್ವದಲ್ಲಿ ಇಂದ್ರನು ಸ್ನಾನ ಮಾಡಿ ಶಾಪದಿಂದ ಮುಕ್ತನಾದನು

೨. ಪಾರ್ವತಿಯು ಹೇಳಿದಳು-ಎಲೈ ಶಿವನೆ! ಯಾವ ಕರ್ಮದಿಂದ ಇಂದ್ರನು ಮಹಾಪಾಪವನ್ನು ಹೊಂದಿದನು? ಆ ಪಾಪವನ್ನು ಹೇಗೆ ಕಳೆದು ಕೊಂಡನು? ಎಂಬುದನ್ನು ವಿಸ್ತಾರವಾಗಿ ಹೇಳು.

॥ ಶ್ರೀ ಮಹಾದೇವ ಉವಾಚ ॥

ಇಂದ್ರಃ ಸುರೇಶ್ವರಃ ಪೂರ್ವಂ ನಮುಚಿಶ್ಚಾಸುರೇಶ್ವರಃ ।
ಅಶಸ್ತ್ರವಧಮನ್ಯೋನ್ಯಂ ಸಮಯಂ ತೌ ಪ್ರಚಕ್ರತುಃ ॥ ೩ ॥

ಅಥೇಂದ್ರಸ್ತು ನಭೋವಾಣೀನಿರ್ದೇಶಾನ್ನಮುಚಿಂ ತದಾ ।
ಜಘಾನ ಫೇನಮಾದಾಯ ಬ್ರಹ್ಮಹತ್ಯಾ ತದಾಭವತ್ ॥ ೪ ॥

ಪಪ್ರಚ್ಛ ಚ ಗುರುಂ ಶಕ್ರಃ ಪಾಪನಿರ್ವಾಣಕಾರಣಂ ।
ಬೃಹಸ್ಪತೇರಥಾದೇಶಾತ್ಸಾಭ್ರಮತ್ಯುತ್ತರೇ ತಟೇ ॥ ೫ ॥

ಅಸ್ಮಿನ್ ಸ್ಥಾನೇ ಸಮಾಗತ್ಯ ಸ್ನಾನಂ ಚಕ್ರೇ ಸುರೇಶ್ವರಃ ।
ತಸ್ಯೇಹ ಸ್ನಾನಮಾತ್ರೇಣ ಗತಪಾಪಸ್ಯ ತತ್‍ಕ್ಷಣಾತ್ ॥ ೬ ॥

ಪೂರ್ಣೇಂದುಧವಳಾ ಕಾಂತಿಃ ಶರೀರೇ ಸಮಜಾಯತ ।
ಧವಳೇಶ್ವರಮೀಶಾನಂ ಸ್ಥಾಪಯಾಮಾಸ ವೃತ್ರಹಾ ॥ ೭ ॥

---

೩. ಶ್ರೀ ಮಹಾದೇವನು ಹೇಳಿದನು–ದೇವಾಧಿಪನಾದ ಇಂದ್ರನೂ, ಅಸುರೇಶ್ವರನಾದ ನಮುಚಿಯೂ ಒಬ್ಬರಿಗೊಬ್ಬರು ಶಸ್ತ್ರ ವಧೆಯಿಂದ ಸಾಯಕೂಡದೆಂದು ಪ್ರತಿಜ್ಞೆಮಾಡಿಕೊಂಡು ಕಟ್ಟನ್ನು ಮಾಡಿಕೊಂಡರು.

೪. ಹೀಗೆ ಅವರಿಬ್ಬರಿಗೂ ಯುದ್ಧ ನಡೆಯುತ್ತಿದ್ದಾಗ ಆಕಾಶವಾಣಿಯ ಸಹಾಯದಿಂದ ಇಂದ್ರನು ಒಂದು ವಿಷಯವನ್ನು ಕೇಳಿದನು. ಅದರಂತೆಯೇ ನೊರೆಯನ್ನು ತೆಗೆದುಕೊಂಡು ಆ ನಮುಚಿಯನ್ನು ಕೊಂದನು. ಅದರಿಂದ ಇಂದ್ರನಿಗೆ ಬಹ್ಮಹತ್ಯೆಯು ಬಂದಿತು.

೫-೭. ಆಗ ಇಂದ್ರನು ಪಾಪನಾಶವಾಗುವುದು ಹೇಗೆಂದು ಗುರುವನ್ನು ಕೇಳಿದನು. ಅದಕ್ಕೆ ನಿವಾರಣೋಪಾಯವನ್ನು ಗುರುವು ಹೇಳಲು ಅದರಂತೆ ಇಂದ್ರನು ಈ ಸಾಭ್ರಮತಿಯ ಉತ್ತರ ದಡಕ್ಕೆ ಬಂದು ಈ ಜಾಗದಲ್ಲಿ ಸ್ನಾನವನ್ನು ಮಾಡಿದನು. ಅವನು ಅಲ್ಲಿ ಸ್ನಾನಮಾಡಿದ ಒಡನೆಯೇ ಪಾಪವು ಹೊರಟು ಹೋಯಿತು. ದೇಹದಲ್ಲಿ ಕಾಂತಿಯು ಚಂದ್ರನಂತೆ ಪ್ರಕಾಶಮಾನವಾಗಿ ಉಂಟಾಯಿತು. ಆಗ ಅಲ್ಲಿ ಧವಳೇಶ್ವರನೆಂಬ ಒಂದು ಈಶ್ವರನನ್ನು ಸ್ಥಾಪಿಸಿದನು.

ಇಂದ್ರನಾಮ್ನಾ ಚ ತಲ್ಲಿಂಗಂ ಪ್ರಸಿದ್ಧಂ ಪೃಥಿವೀತಳೇ ।
ಪೌರ್ಣಮಾಸ್ಯಾಂ ತಥಾದರ್ಶೇ ಸಂಕ್ರಾನ್ತೌ ಗ್ರಹಣೇ ತಥಾ ॥ ೮ ॥

ಶ್ರಾದ್ಧೇ ಕೃತೇ ಪಿತೃಣಾಂ ತು ತೃಪ್ತಿರ್ದ್ವಾದಶವಾರ್ಷಿಕೀ ।
ಧವಳೇಶ್ವರಮಾಸಾದ್ಯ ಯಃ ಕುರ್ಯಾದ್ವಿಪ್ರಭೋಜನಂ ॥ ೯ ॥

ಏಕಸ್ಮಿನ್ ಭೋಜಿತೇ ವಿಪ್ರೇ ಸಹಸ್ರಂ ಭೋಜಿತಂ ಭವೇತ್ ।
ಹಿರಣ್ಯಭೂಮಿವಾಸಾಂಸಿ ದಾತವ್ಯಾನಿ ಸ್ವಶಕ್ತಿತಃ ॥ ೧೦ ॥

ಶುಕ್ಲಾ ಗೌಃ ಬ್ರಾಹ್ಮಣೇ ದೇಯಾ ಸವತ್ಸಾ ಚ ಪಯಸ್ವಿನೀ ।
ಅತ್ರಾಗತ್ಯ ತು ಯೋ ವಿಪ್ರೋ ರುದ್ರಜಾಪ್ಯಾದಿಕಂ ಚರೇತ್ ॥ ೧೧ ॥

ತತ್ಕೃತಂ ಕೋಟಿಗುಣಿತಂ ಶ್ರೀಮಹೇಶಪ್ರಸಾದತಃ ।
ಅತ್ರ ತೀರ್ಥೇ ನರೋ ಯಸ್ತು ಉಪವಾಸಾದಿಕಂ ಚರೇತ್ ॥ ೧೨ ॥

ಸ ಏವ ಸರ್ವಕಾಮಾಪ್ತೋ ಭವತ್ಯೇವ ನ ಸಂಶಯಃ ।
ಬಿಲ್ವಪತ್ರಂ ಸಮಾನೀಯ ಯಃ ಪೂಜಯತಿ ತಂ ಪ್ರಭುಂ ॥ ೧೩ ॥

---

೮-೧೦. ಆಗ ಇಂದ್ರನ ಹೆಸರಿನಿಂದಲೇ ಆ ಲಿಂಗವು ಪ್ರಸಿದ್ಧವಾಯಿತು. ಅಮಾವಾಸ್ಯೆ ಹುಣ್ಣಿಮೆಗಳಲ್ಲಿಯೂ, ಸಂಕ್ರಾನ್ತಿಗಳಲ್ಲಿಯೂ, ಗ್ರಹಣಗಳಲ್ಲಿಯೂ ಇಲ್ಲಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಹನ್ನೆರಡುವರ್ಷಗಳವರೆವಿಗೆ ತೃಪ್ತಿಯುಂಟಾಗುತ್ತದೆ. ಧವಳೇಶ್ವರನಲ್ಲಿಗೆ ಹೋಗಿ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಅಲ್ಲಿ ಒಬ್ಬ ಬ್ರಾಹ್ಮಣನಿಗೆ ಅನ್ನಹಾಕಿದರೂ ಸಾವಿರ ಜನಕ್ಕೆ ಊಟಮಾಡಿಸಿದ ಪುಣ್ಯವು ಬರುತ್ತದೆ. ಚಿನ್ನ, ಭೂಮಿ, ಬಟ್ಟೆಗಳನ್ನು ತನ್ನ ಶಕ್ತಿಗಳಿಗನುಗುಣವಾಗಿ ದಾನಮಾಡಬೇಕು.

೧೧-೧೨. ಬಿಳಿಯ ಬಣ್ಣದ ಕರೆಯುತ್ತಿರುವ ಕರುವು ಇರುವ ಹಸುವನ್ನು ಬ್ರಾಹ್ಮಣನಿಗೆ ಇಲ್ಲಿ ದಾನಮಾಡಬೇಕು. ಇಲ್ಲಿ ರುದ್ರನನ್ನು ಯಾರು ಜಪಿಸುತ್ತಾರೆಯೋ ಅವರು ಒಂದಕ್ಕೆ ಕೋಟಿ ಪಾಲು ಹೆಚ್ಚಾದ ಫಲವನ್ನು ಈ ಮಹೇಶ್ವರನ ಅನುಗ್ರಹದಿಂದ ಹೊಂದುತ್ತಾರೆ.

೧೨-೧೪. ಈ ತೀರ್ಥದಲ್ಲಿ ಯಾವನು ಉಪವಾಸವನ್ನು ಮಾಡುತ್ತಾನೆಯೋ ಅವನು ಎಲ್ಲಾ ಇಷ್ಟಗಳನ್ನೂ ಹೊಂದುತ್ತಾನೆ. ಖಂಡಿತವಾಗಿಯೂ ಸ್ವಲ್ಪವೂ ಸಂಶಯವಿಲ್ಲ. ಯಾವನು ಬಿಲ್ವಪತ್ರೆಯನ್ನು ತಂದು ಆ ಸ್ವಾಮಿಯನ್ನು

ಧರ್ಮಮರ್ಥಂ ಚ ಕಾಮಂ ಚ ಲಭತೇ ಮಾನವೋ ಭುವಿ ।
ಸೋಮವಾರೇ ವಿಶೇಷೇಣ ಯೇ ಗಚ್ಛಂತಿ ನರೋತ್ತಮಾಃ ॥ ೧೪ ॥

ತೇಷಾಂ ರೋಗಂ ತಥಾ ದೋಷಂ ಶಮಯೇದ್ಧವಳೇಶ್ವರಃ ।
ರವೌ ವಾಥ ವಿಶೇಷೇಣ ಅರ್ಚನಂ ಕುರುತೇ ಸದಾ ॥ ೧೫ ॥

ತೇಷಾಂ ಭೋ ಮಹಿಮಾ ದೇವಿ ನ ಜ್ಞಾತಃ ಕರ್ಹಿಚಿನ್ಮಯಾ ।
ದೂರ್ವಯಾ ಚಾರ್ಕಪುಷ್ಪೈರ್ವಾ ಕಹ್ಲಾರೈಃ ಕೋಮಲೈರ್ದಳೈಃ ॥ ೧೬ ॥

ಪೂಜನಂ ಕುರ್ವತೇ ಯತ್ರ ತೇ ನರಾಃ ಪುಣ್ಯಭಾಗಿನಃ ।
ಶ್ವೇತಾರ್ಕಪುಷ್ಪಮಾನೀಯ ಧವಳೇಶಂ ಪ್ರಪೂಜ್ಯ ತು ॥ ೧೭ ॥

ವಾಂಛಿತಂ ಲಭತೇ ನಿತ್ಯಂ ಧವಳೇಶಪ್ರಸಾದತಃ ।
ಕೃತೇ ವೈ ನೀಲಕಂಠಸ್ತು ಸರ್ವೇಷಾಂ ಶಂಕರಃ ಸ್ಸದಾ ॥ ೧೮ ॥

ತ್ರೇತಾಯುಗೇ ಸ ವಿಖ್ಯಾತೋ ಹರೋ ವೈ ಭಗವಾನ್ಪ್ರಭುಃ ।
ದ್ವಾಪರೇ ಶರ್ವಸಂಜ್ಞಸ್ತು ಕಲೌ ವೈ ಧವಳೇಶ್ವರಃ ॥ ೧೯ ॥

---

ಪೂಜಿಸುತ್ತಾನೆಯೋ ಅವನು ಧರ್ಮವನ್ನೂ ಅರ್ಥವನ್ನೂ ಹೊಂದುತ್ತಾನೆ ಖಂಡಿತ ವಾಗಿ ಸಂಶಯವಿಲ್ಲ.

೧೫-೧೭. ಅಲ್ಲಿಗೆ ಸೋಮವಾರದ ದಿವಸ ಅಗತ್ಯವಾಗಿ ಯಾರು ಹೋಗಿ ಆ ಸ್ವಾಮಿಯನ್ನು ಪೂಜಿಸುವರೋ ಅವರಿಗೆ ರೋಗಗಳೂ ದೋಷಗಳೂ ಹೋಗು ವಂತೆ ಆ ಧವಳೇಶ್ವರನು ಅನುಗ್ರಹಿಸುತ್ತಾನೆ. ಭಾನುವಾರದ ದಿವಸ ಅಲ್ಲಿಗೆಹೋಗಿ ಆ ಸ್ವಾಮಿಯನ್ನು ಪೂಜಿಸಿದವರ ಮಹಿಮೆಯು ನನಗೆ ಗೊತ್ತಾಗುವುದಿಲ್ಲ. ಗರಿಕೆ, ಎಕ್ಕದಹೂ, ಕಹ್ಲಾರಕುಸುಮಗಳಿಂದ ಯಾವನು ಆ ಸ್ವಾಮಿಯನ್ನು ಪೂಜಿಸು ವನೋ ಅವನೇ ಪುಣ್ಯವಂತನು

೧೮-೧೯. ಬಿಳಿಯ ಎಕ್ಕದ ಹೂವನ್ನು ತಂದು ಆ ಧವಳೇಶನನ್ನು ಪೂಜಿಸಿ ದರೆ ಆ ಸ್ವಾಮಿಯ ಅನುಗ್ರಹದಿಂದ ಇಷ್ಟಾರ್ಥವನ್ನು ಹೊಂದುತ್ತಾನೆ. ಕೃತ ಯುಗದಲ್ಲಿ ನೀಲಕಂಠ ಸಂಜ್ಞೆಯ ದೇವರೂ, ತ್ರೇತಾಯುಗದಲ್ಲಿ ಹರಸಂಜ್ಞೆಯ ಶಿವನೂ, ದ್ವಾಪರಯುಗದಲ್ಲಿ ಶರ್ವನೆಂಬ ಹೆಸರಿನ ಶಿವನೂ ಕಲಿಯುಗದಲ್ಲಿ ಧವಳೇಶ್ವರನೆಂಬ ಶಿವನೂ ಮೋಕ್ಷವನ್ನು ಕೊಡತಕ್ಕವರು.

ಅತ್ರಾರ್ಥೇ ಯತ್ಪುರಾವೃತ್ತಂ ತಚ್ಛೃಣುಷ್ವ ಸುರೇಶ್ವರಿ ।
ನಂದಿನಾಮಾ ಪುರಾ ವೈಶ್ಯಃ ಇಂದ್ರಗ್ರಾಮೇ ಸಮಾವಸತ್ ॥ ೨೦ ॥

ಶಿವಧ್ಯಾನಪರೋ ಭೂತ್ವಾ ಶಿವಸಂಜ್ಞಾಂ ಚಕಾರ ಸಃ ।
ನಿತ್ಯಂ ತಪೋವನಸ್ಥಂ ಹಿ ಲಿಂಗಂ ಧವಳಸಂಜ್ಞಕಂ ॥ ೨೧ ॥

ಉಷಸ್ಯುಷಸಿ ಚೋತ್ಥಾಯ ಪ್ರತ್ಯಹಂ ಶಿವವಲ್ಲಭಃ ।
ನಂದೀ ಲಿಂಗಾರ್ಚನರತೋ ಬಭೂವಾತಿಶಯೇನ ಹಿ ॥ ೨೨ ॥

ಯಥಾಶಾಸ್ತ್ರೇಣ ವಿಧಿನಾ ಪುಷ್ಪಾರ್ಚನಪರೋಽಭವತ್ ।
ಏಕದಾ ಮೃಗಯಾ ಲುಬ್ಧಃ ಕಿರಾತೋ ಭೂತಹಿಂಸಕಃ ॥ ೨೩ ॥

ಪಾಪೀ ಪಾಪಸಮಾಚಾರಃ ಚರನ್ ಸಾಭ್ರಮತೀ ತಟೇ ।
ಅನೇಕಶ್ವಾಪದಾಕೀರ್ಣೇ ಹನ್ಯಮಾನೋ ಮೃಗಾನ್ ಶಶಾನ್ ॥ ೨೪ ॥

ಏವಂ ವಿಚರಮಾಣೋಽಸೌ ಕಿರಾತೋ ಭೂತಹಿಂಸಕಃ ।
ಯದೃಚ್ಛಯಾ ಗತಸ್ತತ್ರ ಯತ್ರ ಲಿಂಗಂ ಸುಪೂಜಿತಂ ॥ ೨೫ ॥

---

೨೦. ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತೇನೆ. ಕೇಳು. ಪೂರ್ವದಲ್ಲಿ ನಂದಿಯೆಂಬ ಒಬ್ಬ ವೈಶ್ಯನು ಇಂದ್ರಗ್ರಾಮದಲ್ಲಿದ್ದನು

೨೧-೨೨. ಆ ನಂದಿಯು ಯಾವಾಗಲೂ ಶಿವಧ್ಯಾನವನ್ನು ಮಾಡುತ್ತ ಶಿವನನ್ನೇ ಮನಸ್ಸಿನಲ್ಲಿಟ್ಟಿದ್ದನು. ಇವನು ನಿತ್ಯವೂ ತಪೋವನದಲ್ಲಿದ್ದು ಈ ಧವಳ ಸಂಜ್ಞೆಯುಳ್ಳ ಲಿಂಗವನ್ನು ಬೆಳಗ್ಗೆ ಮುಂಚೆ ಎದ್ದು ಪೂಜಿಸುತ್ತ ಇದ್ದನು. ಈರೀತಿಯಲ್ಲಿ ನಂದಿಯು ಶಿವಾರ್ಚನೆಯಲ್ಲಿ ಆಸಕ್ತನಾಗಿ ಇದ್ದುಕೊಂಡಿದ್ದನು.

೨೩-೨೪. ಶಾಸ್ತ್ರದಲ್ಲಿ ಹೇಳುವಂತೆ ಆ ಸ್ವಾಮಿಯನ್ನು ಹೂವಿನಿಂದ ಪೂಜಿಸುತ್ತಿದ್ದನು. ಹೀಗಿರಲು ಒಂದುಬಾರಿ ಆ ಕಿರಾತರಾಜನು ಬೇಟೆಯಾಡುತ್ತ ಪ್ರಾಣಿಹಿಂಸಕನಾಗಿ ಬಹುಕಾಲ ಕಾಡುಮೃಗಗಳನ್ನೂ ಹಂದಿ, ಮೊಲ, ಮುಂತಾದುವುಗಳನ್ನೂ ಕೊಲ್ಲುತ್ತ ಈ ಸಾಭ್ರಮತಿಯ ದಡಕ್ಕೆ ಬಂದನು

೨೫. ಈ ಪ್ರಾಣಿಹಿಂಸಕನಾದ ಕಿರಾತರಾಜನು ಹೀಗೆ ಪ್ರಾಣಿಗಳನ್ನು ನಾಶಮಾಡಿಕೊಂಡು ಸುತ್ತುತ್ತ ಆ ಧವಳೇಶ್ವರನಿರುವ ಸಾಭ್ರಮತಿಯ ದಡಕ್ಕೆ ಹೋದನು.

ಧವಳೇಶ್ವರವಿಖ್ಯಾತಮನೇಕಾಶ್ಚರ್ಯಮಂಡಿತಂ ।
ದೃಷ್ಟಂ ಸುಪೂಜಿತಂ ಲಿಂಗಂ ನಾನಾಪುಷ್ಪೈಃ ಫಲೈಸ್ತಥಾ || ೨೬ ||

ಏವಂ ಲಿಂಗಂ ಸಮಾಲಿಂಗ್ಯ ಗತಸ್ಸಾಭ್ರಮತೀತಟೇ ।
ತತ್ರ ಪೀತ್ವಾ ಪಯಸ್ತೋಥ ಮುಖಂ ಗಂಡೂಷಪೂರಿತಂ || ೨೭ ||

ಕೃತ್ವಾ ಚೈಕೇನ ಹಸ್ತೇನ ಮೃಗಮಾಂಸಂ ಸಮುದ್ವಹನ್ ।
ಕರೇಣೈಕೇನ ಪೂಜಾರ್ಥಂ ಬಿಲ್ವಪತ್ರಾಣಿ ವೈ ದಧತ್ || ೨೮ ||

ಶೀಘ್ರಮಾಗತ್ಯ ಲಿಂಗಾಂತೇ ತದಾ ಪೂಜಾಂ ಸಮಾಹರತ್ ।
ಪುಷ್ಪಾಣಿ ತಾನಿ ಸರ್ವಾಣಿ ವಿಧೂತಾನಿ ಇತಸ್ತತಃ || ೨೯ ||

ಸ್ನಪನಂ ತಸ್ಯ ಲಿಂಗಸ್ಯ ಕೃತಂ ಗಂಡೂಷವಾರಿಣಾ ।
ಕರೇಣೈಕೇನ ಪೂಜಾರ್ಥಂ ಬಿಲ್ವಪತ್ರಾಣಿ ಸೋರ್ಪಯತ್ || ೩೦ ||

ದ್ವಿತೀಯೇನ ಕರೇಣೈವ ಮೃಗಮಾಂಸಂ ಸಮರ್ಪಯತ್ ।
ದಂಡಪ್ರಣಾಮಸಂಯುಕ್ತಃ ಸಂಕಲ್ಪಂ ಮನಸಾ ಕರೋತ್ || ೩೧ ||

---

೨೬. ಅಲ್ಲಿ ಈ ಧವಳೇಶ್ವರನನ್ನು ನೋಡಲು ಅದು ಅನೇಕ ಆಶ್ಚರ್ಯಗಳಿಂದ ಕೂಡಿಯೂ ಅನೇಕ ಹೂಗಳಿಂದಲೂ, ಹಣ್ಣುಗಳಿಂದಲೂ ಪೂಜಿಸಲ್ಪಟ್ಟುದಾಗಿಯೂ ಕಂಡು ಬಂದಿತು.

೨೭-೨೮. ಈ ರೀತಿಯಾಗಿದ್ದ ಧವಳೇಶ್ವರ ಲಿಂಗವನ್ನು ನೋಡಿ ಅದನ್ನು ತಬ್ಬಿಕೊಂಡು ನೋಡಿ ಅನಂತರ ಸಾಭ್ರಮತಿಗೆ ಹೋದನು ಅಲ್ಲಿ ನೀರನ್ನು ಕುಡಿದು, ಬಾಯಿತುಂಬ ನೀರನ್ನು ತುಂಬಿಕೊಂಡು, ಒಂದು ಕೈಯ್ಯಲ್ಲಿ ಮೃಗಗಳ ಮಾಂಸವನ್ನು ತೆಗೆದುಕೊಂಡು, ಮತ್ತೊಂದು ಕೈಯ್ಯಲ್ಲಿ ಪೂಜೆಗೋಸ್ಕರ ಬಿಲ್ವ ಪತ್ರೆಯನ್ನು ತೆಗೆದುಕೊಂಡು ಬೇಗ ಬಂದು ಆ ಲಿಂಗಕ್ಕೆ ಪೂಜೆಯನ್ನು ಮಾಡಿದನು.

೨೯-೩೧. ಆ ಲಿಂಗದ ಮೇಲಿದ್ದ ಹೂಗಳನ್ನು ಅತ್ತಿತ್ತಲಾಗಿ ತಳ್ಳಿದನು. ತಾನು ಬಾಯಿಯಲ್ಲಿ ತುಂಬಿಕೊಂಡು ಬಂದಿದ್ದ ನೀರಿನಿಂದ ಆ ಲಿಂಗಕ್ಕೆ ಸ್ನಾನ ಮಾಡಿಸಿದನು. ಒಂದು ಕೈಯ್ಯಲ್ಲಿದ್ದ ಬಿಲ್ವಪತ್ರೆಗಳಿಂದ ಪೂಜೆಮಾಡಿದನು. ಇನ್ನೊಂದು ಕೈಯ್ಯಲ್ಲಿದ್ದ ಮಾಂಸವನ್ನು ನಿವೇದನಮಾಡಿದನು. ದೀರ್ಘದಂಡವಾಗಿ ನಮಸ್ಕಾರಮಾಡುತ್ತ, ಮನಸ್ಸಿನಲ್ಲಿಯೇ ನಮಸ್ಕಾರವನ್ನು ಮಾಡಿದನು.

ಅದ್ಯಪ್ರಭೃತಿ ಪೂಜಾಂ ವೈ ಕರಿಷ್ಯಾಮಿ ಪ್ರಯತ್ನತಃ ।
ತ್ವಂ ಮೇ ಸ್ವಾಮೀ ಚ ಭಕ್ತೋऽಹಮದ್ಯಪ್ರಭೃತಿ ಶಂಕರ ॥ ೩೨ ॥

ಏವಂ ನಿಯಮಕೋ ಭೂತ್ವಾ ಕಿರಾತೋ ಗೃಹಮಾಗಮತ್ ।
ತಥಾ ಪ್ರಭಾತಸಮಯೇ ದೇವಾಯತನಮಾಗತಃ ॥ ೩೩ ॥

ನಂದೀ ದದರ್ಶ ತತ್ಸರ್ವಂ ಕಿರಾತೇನ ಚ ಯತ್ಕೃತಂ ।
ಅವ್ಯವಸ್ಥಂ ಚ ತದ್ದೃಷ್ಟ್ವಾ ಅಮೇಧ್ಯಂ ಶಿವಸನ್ನಿಧೌ ॥ ೩೪ ॥

ವಿಧೂತಾನಿ ಚ ಪುಷ್ಪಾಣಿ ಹಿಂಸಕೇನ ದುರಾತ್ಮನಾ ।
ಚಿಂತಾಯುಕ್ತೋऽಭವಾನ್ನಂದೀ ಜಾತಂ ಕಿಂ ಚಿತ್ರಮದ್ಯ ಮೇ ॥ ೩೫ ॥

ಕಥಿತಾನಿ ಚ ವಿಘ್ನಾನಿ ಶಿವಪೂಜಾರತಸ್ಯ ಹ ।
ಉಪಸ್ಥಿತಾನಿ ತಾನ್ಯೇವ ಮಮ ಭಾಗ್ಯವಿಪರ್ಯಯಾತ್ ॥ ೩೬ ॥

ಏವಂ ವಿಮೃಶ್ಯ ಸುಚಿರಂ ಪ್ರಕ್ಷಾಲ್ಯ ಶಿವಮಂದಿರಂ ।
ಯಥಾಗತೇನ ಮಾರ್ಗೇಣ ನಂದೀ ಸ್ವಗೃಹಮಾಗಮತ್ ॥ ೩೭ ॥

---

೩೨–೩೫. ಇಂದಿನಿಂದ ಮೊದಲುಗೊಂಡು ನಿನ್ನ ಪೂಜೆಯನ್ನು ದಿನವೂ ಎಷ್ಟೇ ಕಷ್ಟ ಬಂದರೂ ಮಾಡುತ್ತೇನೆ. ನೀನು ನನಗೆ ಸ್ವಾಮಿಯು. ನಾನು ನಿನಗೆ ಭಕ್ತನು. ಈ ರೀತಿಯಾಗಿ ಈ ದಿನದಿಂದ ಆಗಿದ್ದೇನೆ. ಎಂದು ಮನಸ್ಸಿನಲ್ಲಿಯೇ ಸಂಕಲ್ಪಮಾಡಿಕೊಂಡು ಅದೇ ರೀತಿ ನಿಯಮವನ್ನು ಹೊಂದಿ ಮನೆಗೆ ಬಂದನು. ನಿತ್ಯವಂತೆಯೇ ಆ ವೈಶ್ಯನಾದ ನಂದಿಯು ದೇವಸ್ಥಾನಕ್ಕೆ ಬಂದನು. ಕಿರಾತನು ಮಾಡಿರುವ ಈ ಅವ್ಯವಸ್ಥೆಗಳೆಲ್ಲವನ್ನೂ ನೋಡಿದನು. ಹೂವೆಲ್ಲವೂ ಅತ್ತಿತ್ತ ಬಿದ್ದಿದ್ದಿತು. ಅಪವಿತ್ರವಾದ ಮಾಂಸವು ಅಲ್ಲಿ ಬಿದ್ದಿದ್ದಿತು ಈ ರೀತಿಯಾಗಿ ಯಾವನೋ ದುಷ್ಟನು ಮಾಡಿರಬೇಕೆಂದು ನಂದಿಯು ಯೋಚಿಸುತ್ತ ಇದೇನು ? ಈ ದಿನ ಈ ವಿಚಿತ್ರವು ? ಎಂದುಕೊಳ್ಳುತ್ತಿದ್ದನು.

೩೬. ಶಿವಪೂಜೆಯಲ್ಲಿ ನಿರತನಾದವನಿಗೆ ಯಾವ ಯಾವ ವಿಘ್ನಗಳು ಬರುತ್ತವೆಂದು ಹೇಳಿರುವರೋ ಅವೆಲ್ಲವೂ ನನ್ನ ದುರದೃಷ್ಟದಿಂದ ಬಂದಿರುವುವು. ಎಂಬುದಾಗಿ ಯೋಚನೆಯನ್ನು ಮಾಡುತ್ತಿದ್ದನು.

೩೭. ಹೀಗೆ ಯೋಚಿಸಿ ನೋಡಿ ಕೊನೆಗೆ ಆ ದೇವಸ್ಥಾನವೆಲ್ಲವನ್ನೂ ತೊಳೆದು ತಾನು ಬಂದ ದಾರಿಯಿಂದಲೇ ಮನೆಗೆ ಹೊರಟು ಹೋದನು.

**ತತೋ ನಂದಿನಮಾಲಕ್ಷ್ಯ ಪುರೋಧಾ ಗತಮಾನಸಂ ।**
**ಅಬ್ರವೀದ್ವಚನಂ ತಂ ತು ಕಸ್ಮಾತ್ತ್ವಂ ಗತಮಾನಸಃ ।**
**ಪುರೋಹಿತಂ ಪ್ರತಿ ತದಾ ನಂದೀ ವಚನಮಬ್ರವೀತ್ ॥ ೩೮ ॥**

**॥ ನಂದ್ಯುವಾಚ ॥**

**ಅದ್ಯ ದೃಷ್ಟಂ ಮಯಾ ವಿಪ್ರ ಅಮೇಧ್ಯಂ ಶಿವಸನ್ನಿಧೌ ।**
**ಕೇನೇದಂ ಕಾರಿತಂ ತತ್ರ ಜಾನಾಮೀಹ ಕಥಂಚ ನ ॥ ೩೯ ॥**

**॥ ಮಹಾದೇವ ಉವಾಚ ॥**

**ತತಃ ಪುರೋಧಾ ವಚನಂ ನಂದಿನಂ ಚಾಬ್ರವಿತ್ತದಾ ॥ ೪೦ ॥**

**॥ ಪುರೋಧಾ ಉವಾಚ ॥**

**ಯೇನ ವಿಸ್ಖಲಿತಂ ತತ್ರ ಪುಷ್ಪಾದೀನಾಂ ಪ್ರಪೂಜನಂ ।**
**ಸೋಽಪಿ ಮೂಢೋ ನ ಸಂದೇಹಃ ಕಾರ್ಯ್ಯಾಕಾರ್ಯ್ಯೇಷು ಮಂದಧೀಃ ॥ ೪೧ ॥**

---

೩೮. ನಂದಿಯು ಊರನ್ನು ಸೇರುತ್ತಲೂ ಅವನ ಪುರೋಹಿತನು ಅವನ್ನು ನೋಡಿ ಮನಸ್ಸು ಕೆಟ್ಟಿರುವುದಾಗಿ ತಿಳಿದುಕೊಂಡು ನಂದಿಯೇ ! ಇದೇನೆಂದು ಕೇಳಲು ಅವನು ಆ ಪುರೋಹಿತನಿಗೆ ಎಲ್ಲವನ್ನೂ ಹೇಳಿದನು.

೩೯. ನಂದಿಯು ಹೇಳಿದನು- ಎಲೈ ಪುರೋಹಿತನೇ ! ಈ ದಿನ ದೇವ ಸ್ಥಾನದಲ್ಲಿ ಅಪವಿತ್ರವಾದ ಮಾಂಸವು ಬಿದ್ದಿರುವುದನ್ನು ನೋಡಿದೆನು. ಇವನ್ನು ಯಾರು ಮಾಡಿದರೆಂದು ಗೊತ್ತೇ ಆಗಲಿಲ್ಲ.

೪೦. ಮಹಾದೇವನು ಹೇಳಿದನು– ಆಗ ಪುರೋಹಿತನು ನಂದಿಯನ್ನು ಕುರಿತು ಇಂತೆಂದನು.

೪೧. ಪುರೋಹಿತನು ಹೇಳಿದನು–ಯಾವನು ಪೂಜೆಮಾಡಿರುವ ಹೂವನ್ನು ಕೆದರಿರುತ್ತಾನೆಯೋ ಅವನು ದಡ್ಡನು. ಸಂದೇಹವಿಲ್ಲ. ಒಳ್ಳೆಯದು ಕೆಟ್ಟದ್ದನ್ನು ತಿಳಿಯದವನು.

ತಸ್ಮಾಚ್ಚಿಂತಾ ನ ಕರ್ತವ್ಯಾ ತ್ವಯಾ ಅಣುರಪಿ ಪ್ರಭೋ ।
ಪ್ರಭಾತೇ ಚ ಮಯಾ ಸಾರ್ಧಂ ಗಮ್ಯತಾಂ ತಚ್ಛಿವಾಲಯಂ ।
ನಿರೀಕ್ಷಣಾರ್ಥಂ ದುಷ್ಟಸ್ಯ ತಸ್ಯ ದಂಡಂ ಕರೋಮ್ಯಹಂ ॥ ೪೨ ॥

॥ ಮಹಾದೇವ ಉವಾಚ ॥

ಏತಚ್ಛ್ರುತ್ವಾ ತು ವಚನಂ ನಂದೀ ತಸ್ಯ ಪುರೋಧಸಃ ।
ಆಸ್ಥಿತಸ್ಸ್ವಗೃಹೇ ನಕ್ತಂ ದೂಯಮಾನೇನ ಚೇತಸಾ ॥ ೪೩ ॥

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಮಾಹೂಯ ಚ ಪುರೋಧಸಂ ।
ಗತಶ್ಶಿವಾಲಯಂ ನಂದೀ ಸಮಂ ತೇ ನ ಮಹಾತ್ಮನಾ ॥ ೪೪ ॥

ಪ್ರಕ್ಷಾಳ್ಯ ಪೂಜನಂ ಕೃತ್ವಾ ನಾನಾರತ್ನಪರಿಚ್ಛದಂ ।
ಪಂಚೋಪಚಾರಸಂಯುಕ್ತಂ ಕೃತ್ವಾ ವೈ ಬ್ರಾಹ್ಮಣೈಸ್ಸಹ ॥ ೪೫ ॥

---

೪೨. ಎಲೈ ನಂದಿಯೇ ! ನೀನು ಸ್ವಲ್ಪವೂ ಯೋಚಿಸಬೇಡ. ಬೆಳಗ್ಗೆ ನಾನೂ ಆ ಶಿವಾಲಯಕ್ಕೆ ಬರುತ್ತೇನೆ. ಅನಂತರ ಅವನಿಗೆ ಶಿಕ್ಷೆಯನ್ನು ಮಾಡುತ್ತೇನೆ.

೪೩. ಮಹಾದೇವನು ಹೇಳಿದನು- ನಂದಿಯು ಆ ಪುರೋಹಿತನ ಮಾತನ್ನು ಕೇಳಿ ಆ ರಾತ್ರಿಯೆಲ್ಲವೂ ಚಿಂತೆಯಿಂದ ಕೂಡಿದ ಮನಸ್ಸಿನಿಂದಲೇ ಕಾಲವನ್ನು ಕಳೆದನು.

೪೪. ಆ ರಾತ್ರಿಯು ಕಳೆಯಲು ನಂದಿಯು ಪುರೋಹಿತನನ್ನು ಕರೆದು ಕೊಂಡು ಅವನೊಡನೆ ಶಿವಾಲಯಕ್ಕೆ ಹೋದನು.

೪೫. ಆ ದೇವಸ್ಥಾನವನ್ನೆಲ್ಲಾ ತೊಳೆದು ಅನೇಕ ಪದಾರ್ಥಗಳನ್ನೂ ರತ್ನಗಳನ್ನೂ ತಂದು ಆ ಲಿಂಗವನ್ನು ಬ್ರಾಹ್ಮಣರೊಡನೆ ಪೂಜಿಸಿದನು.

ಏವಂ ಯಾಮದ್ವಯಂ ಜಾತಂ ಸ್ತೋತ್ರಯಮಾನಸ್ಯ ನಂದಿನಃ ।
ಆಯಾತೋಽಸೌ ಮಹಾಕಾಲಸ್ತಥಾರೂಪೋ ಮಹಾಬಲಃ ॥ ೪೬ ॥

ಕಾಲರೂಪೋ ಮಹಾರೌದ್ರೋ ಧನುಷ್ಪಾಣಿಃ ಪ್ರತಾಪವಾನ್ ।
ತಂ ದೃಷ್ಟ್ವಾ ಭಯಸಂತ್ರಸ್ತೋ ನಂದೀ ತತ್ರ ವ್ಯಲೀಯತ ॥ ೪೭ ॥

ಪುರೋಧಾಶ್ಚೈವ ಸಹಸಾ ಭಯಭೀತಸ್ತದಾಭವತ್ ।
ಕಿರಾತೇನ ಕೃತಂ ತತ್ರ ಯಥಾಪೂರ್ವಮಪಿ ಸ್ಖಲನ್ ॥ ೪೮ ॥

ತಾಂ ಪೂಜಾಂ ಸ ತದಾಽಹೃತ್ಯ ಬಿಲ್ವಪತ್ರಂ ಸಮರ್ಪಯನ್ ।
ನೈವೇದ್ಯೇನ ಪಲೇನೈವ ಕಿರಾತಶ್ಶಿವಮರ್ಚಯನ್ ॥ ೪೯ ॥

ದಂಡವತ್ಪತಿತೋ ಭೂಮಾವುತ್ಥಾಯ ಸ್ವಗೃಹಂ ಗತಃ ।
ತದ್ದೃಷ್ಟ್ವಾ ಮಹದಾಶ್ಚರ್ಯಂ ಚಿಂತಯಾಮಾಸ ವೈ ಚಿರಂ ॥ ೫೦ ॥

ಪುರೋಧಸಾ ತದಾ ನಂದೀ ಸಹ ವ್ಯಾಕುಲಚೇತಸಾ ।
ತೇನಾಹೂತಾಸ್ತದಾ ವಿಪ್ರಾ ಬಹವೋ ವೇದವಾದಿನಃ ॥ ೫೧ ॥

---

೪೬. ಈ ರೀತಿ ಪೂಜೆಮಾಡಿ ಆ ನಂದಿಯು ಸ್ತೋತ್ರಮಾಡುತ್ತ ಎರಡು ಜಾವಗಳನ್ನು ಕಳೆದನು. ಆಗ ಕಪ್ಪಗಿರುವ ಬಹು ಬಲಿಷ್ಠನಾದವನೊಬ್ಬನು ಬಂದನು.

೪೭. ಅವನು ಭಯಂಕರನಾಗಿ ಯಮನಂತಿದ್ದು ಕೈಯ್ಯಲ್ಲಿ ಧನುಸ್ಸನ್ನು ಹಿಡಿದುಕೊಂಡಿದ್ದನು. ಅವನನ್ನು ನೋಡಿ ಹೆದರಿ ಆ ನಂದಿಯು ಅಲ್ಲಿಯೇ ಭಯದಿಂದ ಮರೆಯಾದನು.

೪೮. ಪುರೋಹಿತನೂ ಕೂಡ ಭಯದಿಂದ ಅವಿತುಕೊಂಡನು. ಆಗ ಆ ಕಿರಾತನು ಮೊದಲಿನಂತೆಯೇ ಅತ್ತಿತ್ತಲಾಗಿ ಕೆಡವುತ್ತ ಪೂಜಿಸಿದನು

೪೯-೫೦. ಅವರು ಮಾಡಿದ ಪೂಜೆಯನ್ನು ಆ ಕಿರಾತನು ತೆಗೆದುಹಾಕಿ ಬಿಲ್ವಪತ್ರೆಯನ್ನು ಪೂಜಿಸಿದನು. ತಾನು ತಂದಿದ್ದ ಮಾಂಸವನ್ನೇ ನೈವೇದ್ಯಕ್ಕೆ ಅರ್ಪಿಸಿದನು ಅನಂತರ ದೀರ್ಘದಂಡ ನಮಸ್ಕಾರವನ್ನು ಮಾಡಿ ಮನೆಗೆ ಹೊರಟು ಹೋದನು ಅದನ್ನು ನೋಡಿ ಬಹು ಆಶ್ಚರ್ಯಪಟ್ಟು ಪುರೋಹಿತನೂ ನಂದಿಯೂ ಬಹುವಾಗಿ ಯೋಚಿಸಿದರು. ಆಗ ನಂದಿಯು ಬಹುಜನ ಬ್ರಾಹ್ಮಣರನ್ನು

ನಿವೇದಿತಂ ಚ ತತ್ಸರ್ವಂ ಕಿರಾತೇನ ಚ ಯತ್ಕೃತಂ ।
ಕಿಂ ಕಾರ್ಯಮದ್ಯ ಭೋ ವಿಪ್ರಾಃ ಕಥ್ಯತಾಂ ಚ ಯಥಾ ತಥಂ ॥ ೫೨ ॥

ಸಂಪ್ರಧಾರ್ಯ ತತಸ್ಸರ್ವೇ ಮಿಳಿತ್ವಾ ಧರ್ಮಶಾಸ್ತ್ರತಃ ।
ಊಚುಃ ಸರ್ವೇ ತದಾ ವಿಪ್ರಾ ನಂದಿನಂ ಜಾತಶಂಕಿತಂ ॥ ೫೩ ॥

॥ ವಿಪ್ರಾ ಊಚುಃ ॥

ಈಶಘ್ನಂ ಚ ಸಮುತ್ಪನ್ನಂ ದುರ್ನಿವಾರ್ಯಂ ಸುರೈರಪಿ ।
ತಸ್ಮಾದಾನಯ ಲಿಂಗಂ ತ್ವಂ ಸ್ವಗೃಹೇ ವೈಶ್ಯಸತ್ತಮ ॥ ೫೪ ॥

॥ ಮಹಾದೇವ ಉವಾಚ ॥

ತಥೇತಿ ಮತ್ವಾಸೌ ನಂದೀ ಶಿವಸ್ಯೋತ್ಪಾಟನಂ ಮಹತ್ ।
ಕೃತ್ವಾ ಸ್ವಗೃಹಮಾನೀಯ ಪ್ರಕ್ಷಾಳ್ಯ ಚ ಯಥಾವಿಧಿ ॥ ೫೫ ॥

ಸುವರ್ಣಪಿಂಡಿಕಾಂ ಕೃತ್ವಾ ನವರಂಭಾಸುಶೋಭಿತಾಂ ।
ಉಪಹಾರೈರನೇಕೈಶ್ಚ ಪೂಜಯಾಮಾಸ ವೈ ತದಾ ॥ ೫೬ ॥

---

ಕರೆಯಿಸಿದನು. ಅವರಿಗೆ ಆ ಕಿರಾತನು ಮಾಡಿದುದೆಲ್ಲವನ್ನೂ ಹೇಳಿದನು. ಈಗ ಏನು ಮಾಡಬೇಕೆಂಬುದನ್ನು ಯೋಚಿಸಿ ಹೇಳಬೇಕೆಂದು ಪ್ರಾರ್ಥಿಸಿ ಕೊಂಡನು.

೫೩. ಆಗ ಅವರೆಲ್ಲರೂ ಸೇರಿ ಧರ್ಮಶಾಸ್ತ್ರವನ್ನು ನೋಡಿ ಆಲೋಚಿಸಿ ಸಂದೇಹಪಲ್ಲಿರುವ ಆ ನಂದಿಗೆ ಇಂತೆಂದು ಹೇಳಿದರು.

೫೪. ಬ್ರಾಹ್ಮಣರು ಹೇಳಿದನು- ಎಲೈ ನಂದಿಯೇ! ದೇವರನ್ನು ಹಾಳು ಮಾಡುವ ಈ ಕೆಲಸವು ಉಂಟಾಯಿತು. ಇದನ್ನು ದೇವತೆಗಳೂ ತಪ್ಪಿಸಲಾರರು. ಆದ್ದರಿಂದ ಆ ಲಿಂಗವನ್ನೇ ಕಿತ್ತುಕೊಂಡು ಮನೆಗೆ ತಂದಿರಿಸು.

೫೫-೫೬. ಮಹಾದೇವನು ಹೇಳಿದನು-ನಂದಿಯು ಹಾಗೆಯೇ ಆಗಲೆಂದು ಆ ಶಿವಲಿಂಗವನ್ನು ಕಿತ್ತುಕೊಂಡು ತನ್ನ ಮನೆಗೆ ತಂದು ಶಾಸ್ತ್ರೋಕ್ತವಾಗಿ ಅಭಿಷೇಕಾದಿಗಳನ್ನು ಮಾಡಿ ಚಿನ್ನದ ಪಾನಬಟ್ಟಲನ್ನು ಅದರಲ್ಲಿಯೇ ಒಂಭತ್ತು ಅಂತಸ್ತುಗಳೂ ಇರುವಂತೆ ಮಾಡಿಸಿ ಅದರಲ್ಲಿಟ್ಟು ಅನೇಕವಾದ ನೈವೇದ್ಯಗಳಿಂದಲೂ ಹೂವುಗಳಿಂದಲೂ ಪೂಜಿಸಿದನು.

ಅಥಾಪರೇದ್ಯುರಾಯಾತಃ ಕಿರಾತಶ್ಶಿವಮಂದಿರಂ ।
ಯಾವದ್ವಿಲೋಕಯಾಮಾಸ ಲಿಂಗನ್ಮೈಶಂ ನ ದೃಷ್ಟವಾನ್ ।
ಮೌನಂ ವಿಹಾಯ ಸಹಸಾ ಸಾಕ್ರೋಶಮಿದಮಬ್ರವೀತ್ ॥ ೫೭ ॥

॥ ಕಿರಾತ ಉವಾಚ ॥

ಹೇ ಶಂಭೋ ಕ್ವ ಗತೋಽಸಿ ತ್ವಂ ದರ್ಶಯಾತ್ಮಾನಮದ್ಯ ವೈ ।
ಯದಿ ನೋ ದರ್ಶನಂ ಮಹ್ಯಂ ತ್ಯಕ್ಷ್ಯಾಮ್ಯದ್ಯ ಕಳೇಬರಂ ॥ ೫೮ ॥

ಹೇ ಶಂಭೋ ಹೇ ಜಗನ್ನಾಥ ತ್ರಿಪುರಾಂತಕ ಶಂಕರ ।
ಹೇ ರುದ್ರ ಹೇ ಮಹಾದೇವ ದರ್ಶಯಾತ್ಮಾನಮಾತ್ಮನಾ ॥ ೫೯ ॥

॥ ಮಹಾದೇವ ಉವಾಚ ॥

ಏವಂ ಸಾಕ್ಷೇಪಮಧುರೈರ್ವಾಕ್ಯೈಃ ಕ್ಷಿಪ್ತ್ವಾ ಸದಾಶಿವಂ ।
ಕಿರಾತೋಽಸೌ ಕ್ಷುರಿಕಯಾ ಧೀರೋ ವೈ ಜಠರಂ ಸ್ವಕಂ ।
ವಿಭಿದ್ಯಾಶು ತತೋ ಬಾಹುಮಾಸ್ಫೋಟ್ಯ ವೈ ರುಷಾಬ್ರವೀತ್ ॥ ೬೦ ॥

---

೫೭. ಮಾರನೆಯದಿನ ಆ ಕಿರಾತನು ದೇವಸ್ಥಾನಕ್ಕೆ ಬಂದನು. ಅಲ್ಲಿ ನೋಡುವಾಗ ಆ ಶಿವಲಿಂಗವಿರಲಿಲ್ಲ. ಮೌನವನ್ನು ಒಡನೆಯೇ ಬಿಟ್ಟು ಗಟ್ಟಿಯಾಗಿ ಹೀಗೆ ಕೂಗಲು ಮೊದಲುಮಾಡಿದನು.

೫೮. ಕಿರಾತನು ಹೇಳಿದನು–ಎಲೈ ಶಂಭುವೇ! ನೀನೆಲ್ಲಿಗೆ ಹೋದೆ? ನಿನ್ನ ಸ್ವರೂಪವನ್ನು ಈಗಲೇ ತೋರಿಸು. ನೀನು ದರ್ಶನವನ್ನು ಕೊಡದಿದ್ದರೆ ನಾನು ಈ ದೇಹವನ್ನು ಬಿಟ್ಟುಬಿಡುತ್ತೇನೆ.

೫೯. ಎಲೈ ಶಂಭುವೆ! ಜಗನ್ನಾಥನೇ! ತ್ರಿಪುರಾಂತಕನೇ! ಶಂಕರನೇ! ರುದ್ರನೇ! ಮಹಾದೇವನೇ! ನೀನು ನಿನ್ನ ಸ್ವರೂಪನ್ನು ಈಗಲೇ ನನಗೆ ತೋರಿಸು

೬೦. ಮಹಾದೇವನು ಹೇಳಿದನು–ಈ ರೀತಿಯಾಗಿ ಆ ಕಿರಾತನು ಹಂಗಿಸಿಯೂ ಮೃದುವಾಗಿಯೂ ಇರುವ ಮಾತುಗಳಿಂದ ಆ ಶಿವನನ್ನು ಬೈದು ಚೂರಿಯನ್ನು ತೆಗೆದುಕೊಂಡು ತನ್ನ ಹೊಟ್ಟೆಯನ್ನು ಶೀಳಿಕೊಂಡು ಅನಂತರ ತೋಳುಗಳನ್ನು ಅಪ್ಪಳಿಸಿಕೊಳ್ಳುತ್ತಾ ಮತ್ತೆ ಕೋಪದಿಂದ ಇಂತೆಂದನು.

॥ ಕಿರಾತ ಉವಾಚ ॥

ಹೇ ಶಂಭೋ ದರ್ಶಯಾತ್ಮಾನಂ ಕುತೋ ಮಾಂ ತ್ಯಜ್ಯ ಯಾಸ್ಯಸಿ ॥ ೬೧ ॥

॥ ಮಹಾದೇವ ಉವಾಚ ॥

ಇತಿ ಕ್ಷಿಪ್ತ್ವಾ ತತೋಂತ್ರಾಣಿ ಮಾಂಸಮುದ್ಧೃತ್ಯ ಸರ್ವತಃ ।
ತಸ್ಮಿನ್ಗರ್ತೇ ಕರೇಣೈವ ಕಿರಾತಸ್ಸಹಸಾಕ್ಷಿಪತ್ ॥ ೬೨ ॥

ಸ್ವಚ್ಛಂ ಚ ಹೃದಯಂ ಕೃತ್ವಾ ಸಾಭ್ರಮತ್ಯಾಂ ನ್ಯಮಜ್ಜತ ।
ತಥೈವ ಜಲಮಾನೀಯ ಬಿಲ್ವಪತ್ರಂ ತ್ವರಾನ್ವಿತಃ ॥ ೬೩ ॥

ಪೂಜಯಿತ್ವಾ ಯಥಾನ್ಯಾಯಂ ದಂಡವತ್ಪತಿತೋ ಭುವಿ ।
ಯದಾ ಧ್ಯಾನಸ್ಥಿತಸ್ತತ್ರ ಕಿರಾತಶ್ಶಿವಸನ್ನಿಧೌ ॥ ೬೪ ॥

ಪ್ರಾದುರ್ಭೂತಸ್ತದಾ ರುದ್ರಃ ಪ್ರಮಥೈಃ ಪರಿವಾರಿತಃ ।
ಕರ್ಪೂರಗೌರೋ ದ್ಯುತಿಮಾನ್ ಕಪರ್ದೀ ಚಂದ್ರಶೇಖರಃ ।
ತಂ ಗೃಹೀತ್ವಾ ಕರೇ ರುದ್ರಃ ಉವಾಚ ಪರಿಸಾಂತ್ವಯನ್ ॥ ೬೫ ॥

---

೬೧. ಕಿರಾತನು ಹೇಳಿದನು–ಎಲೈ ಶಂಭುವೆ ! ನಿನ್ನ ದರ್ಶನವನ್ನು ಕೊಡು ನನ್ನನ್ನು ಬಿಟ್ಟು ಎಲ್ಲಿಗೆ ಹೋಗಿದ್ದೀಯೆ ?

೬೨ ಮಹಾದೇವನು ಹೇಳಿದನು–ಈರೀತಿ ಬೈದು ಕರುಳನ್ನೂ ಮಾಂಸವನ್ನೂ ತನ್ನ ಕೈಯಿಂದಲೇ ತೆಗೆದು ಆ ಲಿಂಗವನ್ನು ತೆಗೆದಿರುವ ಗುಳಿಯೊಳಕ್ಕೆ ಹಾಕಿ ಮುಚ್ಚಿದನು.

೬೩–೬೫. ಮನಸ್ಸನ್ನು ನಿರ್ಮಲವಾಗಿ ಮಾಡಿಕೊಂಡು ಹೋಗಿ ಸಾಭ್ರಮತಿನದಿಯಲ್ಲಿ ಸ್ನಾನಮಾಡಿದನು. ಹಾಗೆಯೇ ನೀರನ್ನೂ ಬಿಲ್ವಪತ್ರೆಯನ್ನೂ ತಂದು ಪೂಜಿಸಿ ಧೀರ್ಘದಂಡ ನಮಸ್ಕಾರ ಮಾಡಿದನು. ಈ ರೀತಿಯಾಗಿ ಶಿವ ಸನ್ನಿಧಿಯಲ್ಲಿ ಆ ಕಿರಾತನು ಧ್ಯಾನಾಸಕ್ತನಾಗಿರಲು ರುದ್ರನು ಪ್ರಮಥಗಳೊಡನೆ ಕೂಡಿಕೊಂಡು ಸಮಾಧಾನ ಪಡಿಸಲು ಬಂದನು. ಅವನು ಕರ್ಪೂರದಂತೆ ಬೆಳ್ಳಗಿರುವ ಕಾಂತಿಯುಳ್ಳವನಾಗಿ ಜಟೆಯನ್ನು ಧರಿಸಿಕೊಂಡು ಚಂದ್ರನನ್ನು ತಲೆಯಲ್ಲಿ ಧರಿಸಿಕೊಂಡು ಇದ್ದನು. ಅಂತಹ ಶಿವನು ಅವನನ್ನು ಕೈಯಲ್ಲಿ ಹಿಡಿದು ಕೊಂಡು ಸಮಾಧಾನಪಡಿಸುತ್ತ ಇಂತೆಂದನು.

॥ ರುದ್ರ ಉವಾಚ ॥

ಭೋ ಭೋ ವೀರ ಮಹಾಪ್ರಾಜ್ಞ ಮದ್ಭಕ್ತೋಽಸಿ ಮಹಾಮತೇ ।
ವರಂ ವೃಣೀಷ್ವ ಭೋ ಭಕ್ತ ಯತ್ತೇ ಮನಸಿ ವರ್ತತೇ ॥ ೬೬ ॥

॥ ಮಹಾದೇವ ಉವಾಚ ॥

ಏವಮುಕ್ತಸ್ಸ ರುದ್ರೇಣ ಮಹಾಕಾಲೋ ಮುದಾನ್ವಿತಃ ।
ಪಪಾತ ದಂಡವದ್ಭೂಮೌ ಭಕ್ತ್ಯಾ ಪರಮಯಾ ಯುತಃ ॥ ೬೭ ॥

ತತೋ ರುದ್ರಂ ಬಭಾಷೇದಂ ನ ವರಂ ಪ್ರಾರ್ಥಯಾಮ್ಯಹಂ ।
ಅಹಂ ದಾಸೋಽಸ್ಮಿ ತೇ ರುದ್ರ ತ್ವಂ ಮೇ ಸ್ವಾಮೀ ನ ಸಂಶಯಃ ॥ ೬೮ ॥

ಏತತ್ ಶ್ಲಾಘ್ಯತಮಂ ಲೋಕೇ ದೇಹಿ ಜನ್ಮನಿ ಜನ್ಮನಿ ।
ತ್ವಂ ಮಾತಾ ಚ ಪಿತಾ ತ್ವಂ ಚ ತ್ವಂ ಬಂಧುಶ್ಚ ಸಖಾ ಚ ಮೇ ।
ತ್ವಂ ಗುರುಸ್ತ್ವಂ ಮಹಾಮಂತ್ರೋ ಮಂತ್ರೈರ್ವೇದ್ಯೋಽಸಿ ಸರ್ವದಾ ॥೬೯॥

---

೬೬. ರುದ್ರನು ಹೇಳಿದನು–ಎಲೈ ವೀರನೇ ! ಬುದ್ಧಿವಂತನೇ ! ನನಗೆ ಭಕ್ತನಾಗಿದ್ದೀಯೆ ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೋ. ವರವನ್ನು ಕೊಡುತ್ತೇನೆ. ಎಂದು ಹೇಳಿದನು.

೬೭. ಮಹಾದೇವನು ಹೇಳಿದನು–ರುದ್ರನು ಸಂತೋಷದಿಂದ ಹೀಗೆ ಹೇಳಲು ಆಗ ಕಿರಾತನು ಬಹು ಭಕ್ತಿಯಿಂದ ನೆಲದಮೇಲೆ ಧೀರ್ಘದಂಡ ನಮಸ್ಕಾರವನ್ನು ಮಾಡಿದನು.

೬೮. ಆಗ ಆ ಕಿರಾತನು ರುದ್ರನನ್ನು ಕುರಿತು ನನಗೆ ವರಬೇಕಾಗಿಲ್ಲ. ನಾನು ಅದನ್ನು ಕೇಳಿಕೊಳ್ಳುವುದೂ ಇಲ್ಲ. ಎಲೈ ರುದ್ರನೇ ! ನಾನು ನಿನಗೆ ದಾಸನಾಗಿದ್ದೇನೆ. ನೀನು ನನಗೆ ಸ್ವಾಮಿಯಾಗಿದ್ದೀಯೆ. ಇದರಲ್ಲಿ ಸಂಶಯವಿಲ್ಲ

೬೯. ಇದೇ ಲೋಕದಲ್ಲಿ ಬಹು ಶ್ಲಾಘ್ಯವಾದುದು ಇದನ್ನೇ ನನಗೆ ಜನ್ಮ ಜನ್ಮದಲ್ಲಿಯೂ ಕೊಡು. ನೀನೇ ತಂದೆಯು. ನೀನೇ ತಾಯಿಯು. ನೀನು ಬಂಧುವೂ ಸ್ನೇಹಿತನೂ ಆಗಿದ್ದೀಯೆ. ನೀನೇ ಗುರುವು. ನೀನೇ ಮಹಾ ಮಂತ್ರವು. ಮಂತ್ರಗಳಿಂದಲೇ ನಿನ್ನನ್ನು ತಿಳಿಯಲು ಸಾಧ್ಯ.

|| ಮಹಾದೇವ ಉವಾಚ ||

ನಿಷ್ಕಾಮಂ ವಾಕ್ಯಮಾಕರ್ಣ್ಯ ಕಿರಾತಸ್ಯ ತದಾ ಭವಃ ।
ದದೌ ಪಾರ್ಷದಮುಖ್ಯತ್ವಂ ದ್ವಾರಪಾಲತ್ವಮೇವ ಚ || ೭೦ ||

ತದಾ ಡಮರುನಾದೇನ ನಾದಿತಂ ಭುವನತ್ರಯಂ ।
ಭೇರೀ ಭಾಂಕಾರಶಬ್ದೇನ ಶಂಖಾನಾಂ ನಿನದೇನ ಚ || ೭೧ ||

ತದಾ ದುಂದುಭಯೋ ನೇದುಃ ಪಟಹಾಶ್ಚ ಸಹಸ್ರಶಃ ।
ನಂದೀ ತಂ ನಾದಮಾಕರ್ಣ್ಯ ವಿಸ್ಮಯಾತ್ತ್ವರಿತೋ ಯಯೌ || ೭೨ ||

ತಪೋವನಂ ಯತ್ರ ಶಿವಃ ಸ್ಥಿತಃ ಪ್ರಮಥಸಂವೃತಃ ।
ಕಿರಾತೋ ಹಿ ತಥಾ ದೃಷ್ಟೋ ನಂದಿನಾ ಚ ತಥಾ ಭೃಶಂ || ೭೩ ||

ಉವಾಚ ಪ್ರಶ್ರಿತೋ ವಾಕ್ಯಂ ಸ ನಂದೀ ವಿಸ್ಮಯಾನ್ವಿತಃ ।
ಕಿರಾತಂ ಸ್ತೋತುಕಾಮೋಽಸೌ ಪರಮೇಣ ಸಮಾಧಿನಾ || ೭೪ ||

---

೭೦. ಈಶ್ವರನು ನಿಷ್ಕಾಮವಾದ ಅವರ ಮಾತನ್ನು ಕೇಳಿ ಅವನಿಗೆ ಪಾರ್ಷದರಲ್ಲಿ ಮುಖ್ಯತ್ವವನ್ನು ಕೊಟ್ಟು ದ್ವಾರಪಾಲರಲ್ಲಿ ಮುಖ್ಯನನ್ನಾಗಿಯೂ ಮಾಡಿದನು.

೭೧. ಆಗ ಡಮರುಗದ ಸದ್ದಿನಿಂದ ಮೂರು ಲೋಕವನ್ನೂ ತುಂಬಿದನು. ಅಲ್ಲದೆ ಭೇರಿಯ ಶಬ್ದದಿಂದಲೂ ಶಂಖ ಧ್ವನಿಯಿಂದಲೂ ಕೂಡ ಎಲ್ಲಾ ಕಡೆಗೂ ತುಂಬುವಂತೆ ಸದ್ದು ಮಾಡಿದನು.

೭೨–೭೩. ಆಗ ದುಂದುಭಿಗಳೂ ತಮಟೆಗಳೂ ಧ್ವನಿಮಾಡಿದುವು. ಆ ಧ್ವನಿಯನ್ನು ಕೇಳಿ ನಂದಿಯು ಆಶ್ಚರ್ಯಪಡುತ್ತ ಆ ರುದ್ರನು ಪ್ರಮಥಗಳಿಂದ ಕೂಡಿರುವ ಆ ತಪೋವನಕ್ಕೆ ಹೋದನು. ಆ ರೀತಿಯಾಗಿ ಕಿರಾತನು ಗೌರವಿಸಲ್ಪಡುತ್ತಿರುವುದನ್ನು ಆ ನಂದಿಯು ನೋಡಿದನು.

೭೪. ಆಗ ನಂದಿಯು ನಮ್ರತೆಯಿಂದಲೂ ಆಶ್ಚರ್ಯದಿಂದಲೂ ಕೂಡಿಕೊಂಡು ಆ ಕಿರಾತನನ್ನು ಸ್ತೋತ್ರ ಮಾಡಲು ಮೊದಲು ಮಾಡಿದನು.

|| ಸಂದ್ಯುವಾಚ ||

ಇಹಾನೀತಸ್ತ್ವಯಾ ಶಂಭುಸ್ತ್ವಂ ಭಕ್ತೋಽಸಿ ಪರಂತಪ ।
ತ್ವದ್ಭಕ್ತೋಽಹಮಿಹ ಪ್ರಾಪ್ತೋ ಮಾಂ ನಿವೇದಯ ಶಂಕರೇ || ೭೫ ||

|| ಮಹಾದೇವ ಉವಾಚ ||

ತಚ್ಛ್ರುತ್ವಾ ವಚನಂ ತಸ್ಯ ಕಿರಾತಸ್ತ್ವರಯಾನ್ವಿತಃ ।
ನಂದಿನಂ ಚ ಕರೇ ಗೃಹ್ಯ ಶಂಕರಂ ಸಮುಪಾಗತಃ ।
ಪ್ರಹಸ್ಯ ಭಗವಾನ್ರುದ್ರಃ ಕಿರಾತಂ ವಾಕ್ಯಮಬ್ರವೀತ್ || ೭೬ ||

|| ರುದ್ರ ಉವಾಚ ||

ಬ್ರೂಹಿ ಕೋಽಸೌ ತ್ವಯಾಽಽನೀತೋ ಗಣಾನಾಮಿಹ ಸನ್ನಿಧೌ || ೭೭ ||

|| ಕಿರಾತ ಉವಾಚ ||

ತವ ಭಕ್ತಸ್ಸದಾ ದೇವ ತವ ಪೂಜಾರತೋ ಹ್ಯಸೌ ।
ಪ್ರತ್ಯಹಂ ರತ್ನಮಾಣಿಕ್ಯಪುಷ್ಪೈಶ್ಚೋಚ್ಚಾವಚೈರಿಹ || ೭೮ ||

---

೭೫. ನಂದಿಯು ಹೇಳಿದನು—ಎಲೈ ಕಿರಾತನೇ! ನೀನು ಇಲ್ಲಿಗೆ ಶಂಭುವನ್ನು ಬರುವಂತೆ ಮಾಡಿದ್ದೀಯೆ. ನೀನು ಉತ್ತಮವಾದ ಭಕ್ತನಾಗಿದ್ದೀಯೆ. ನಾನು ನಿನ್ನ ಭಕ್ತನಾಗಿ ಇಲ್ಲಿಗೆ ಬಂದಿದ್ದೇನೆ. ನನ್ನನ್ನು ನೀನು ಆ ಸ್ವಾಮಿಗೆ ತಿಳಿಸು.

೭೬. ಮಹಾದೇವನು ಹೇಳಿದನು—ಆ ನಂದಿಯ ಮಾತನ್ನು ಕಿರಾತನು ಕೇಳಿ ಅವಸರದಿಂದ ಆತನ ಕೈಯ್ಯನ್ನು ಹಿಡಿದುಕೊಂಡು ಶಂಕರನ ಬಳಿಗೆ ಹೋದನು. ಆಗ ರುದ್ರನು ನಕ್ಕು, ಕಿರಾತನನ್ನು ಕುರಿತು ಇಂತೆಂದನು.

೭೭. ರುದ್ರನು ಹೇಳಿದನು—ಎಲೈ ಕಿರಾತನೆ! ನೀನು ಈ ಗಣಗಳ ಹತ್ತಿರಕ್ಕೆ ಕರೆದುಕೊಂಡು ಬಂದಿರುವ ಈತನಾರು? ಹೇಳು.

೭೮–೭೯. ಕಿರಾತನು ಹೇಳಿದನು—ಎಲೈ ದೇವನೇ! ಇವನು ಯಾವಾಗಲೂ ನಿನ್ನ ಭಕ್ತನು. ನಿನ್ನ ಪೂಜೆಯಲ್ಲಿಯೇ ಆಸಕ್ತನು. ಇವನು ಪ್ರತಿದಿನವೂ ಉತ್ತಮವಾದ ರತ್ನ ಮಾಣಿಕ್ಯಗಳಿಂದಲೂ ಅನೇಕ ಬಗೆಯಾದ

ಜೀವಿತೇನ ಧನೇನಾಪಿ ಪೂಜಿತೋಽಸಿ ನ ಸಂಶಯಃ ।
ತಸ್ಮಾಜ್ಜಾನೀಹಿ ಭೋ ಸ್ವಾಮಿನ್ನಂದಿನಂ ಭಕ್ತವತ್ಸಲ ॥ ೭೯ ॥

॥ ಮಹಾದೇವ ಉವಾಚ ॥

ಜಾನಾಮ್ಯಹಂ ಮಹಾಭಾಗ ನಂದಿನಂ ವೈಶ್ಯವರ್ತನಂ ।
ತ್ವಂ ಮೇ ಭಕ್ತಸ್ಸಖಾ ಚೇತಿ ಮಹಾಕಾಲ ಮಹಾಮತೇ ॥ ೮೦ ॥

ಉಪಾಧಿರಹಿತಾ ಯೇ ಚ ಯೇ ನಿಷ್ಕಪಟಮಾನಸಾಃ ।
ತೇ ವಿಪ್ರಾಸ್ತೇ ಚ ಮೇ ಭಕ್ತಾಸ್ತೇ ವಿಶಿಷ್ಟಾ ನರೋತ್ತಮಾಃ ॥ ೮೧ ॥

॥ ಮಹಾದೇವ ಉವಾಚ ॥

ತಾವುಭೌ ಸ್ವೀಕೃತೌ ತೇನ ಪಾರ್ಷದತ್ವೇನ ಶಂಭುನಾ ॥ ೮೨ ॥

ತತೋ ವಿಮಾನಾನಿ ಬಹೂನಿ ತತ್ರ ಸಮಾಗತಾನ್ಯೇವ ಮಹಾಪ್ರಭಾಣಿ ।
ಕಿರಾತವರ್ಯೇಣ ಸ ವೈಶ್ಯವರ್ಯಃ ಉದ್ಧಾರಿತಸ್ತೇನ ಮಹಾಪ್ರಭೇಣ ॥ ೮೩ ॥

---

ಹೂವುಗಳಿಂದಲೂ ನಿನ್ನನ್ನು ಪೂಜಿಸುತ್ತಿದ್ದನು. ಇವನು ತನ್ನ ಜೀವಿತದಿಂದಲೂ ಹಣದಿಂದಲೂ ಕೂಡ ನಿನ್ನನ್ನು ಪೂಜಿಸಿದ್ದಾನೆ. ಸಂಶಯವಿಲ್ಲ. ಎಲೈ ಭಕ್ತವತ್ಸಲನೆ ! ಅಂತಹ ಭಕ್ತನಾದ ನಂದಿಯೆಂದು ಇವನನ್ನು ತಿಳಿದುಕೋ.

೮೦. ಮಹಾದೇವನು ಹೇಳಿದನು–ಎಲೈ ಮಹಾನುಭಾವನೇ ! ಇವನು ವೈಶ್ಯನಾದ ನಂದಿ ಎಂಬುದನ್ನು ಬಲ್ಲೆನು. ಆದರೆ ಎಲೈ ಮಹಾಕಾಲನೇ ! ನೀನೇ ನನಗೆ ಭಕ್ತನೂ ಮತ್ತು ಸ್ನೇಹಿತನೂ ಎಂಬುವುದನ್ನು ಬಲ್ಲೆನು.

೮೧. ಯಾರು ನನ್ನನ್ನು ಹೊರತು ಮತ್ತೊಂದನ್ನು ಅವಲಂಬಿಸಿ ಕೊಂಡು ಇರುವುದಿಲ್ಲವೋ ಯಾರು ಪರಿಶುದ್ಧವಾದ ಮನಸ್ಸುಳ್ಳವರೋ ಅವರೇ ಬ್ರಾಹ್ಮಣರು. ಅವರೇ ನನ್ನ ಭಕ್ತರು. ಅವರೇ ನನಗೆ ಪ್ರೀತಿಪಾತ್ರರಾದವರು. ಮತ್ತು ಉತ್ತಮರಾದವರು

೮೨. ಮಹಾದೇವನು ಹೇಳಿದನು-ಆಗ ಶಂಭುವು ಅವರಿಬ್ಬರನ್ನೂ ಪಾರ್ಷದ ಗಣಗಳನ್ನಾಗಿ ಸ್ವೀಕರಿಸಿದನು.

೮೩. ಅನಂತರ ಅಲ್ಲಿಗೆ ಬಹುವಾದ ಕಾಂತಿಗಳುಳ್ಳ ಅನೇಕ ವಿಮಾನಗಳು ಬಂದುವು. ಮಹಿಮಾಶಾಲಿಯಾದ ಆ ಕಿರಾತನಿಂದ ಆ ವೈಶ್ಯನಾದ ನಂದಿಯೂ ಕೂಡ ಕೈಲಾಸವನ್ನು ಹೊಂದಿದನು.

ಕೈಲಾಸಲೋಕಮಾಪನ್ನೋ ವಿಮಾನೈರ್ವೇಗವತ್ತರೈಃ ।
ಸಾರೂಪ್ಯಮೇವ ಸಂಪ್ರಾಪ್ತಾವೀಶ್ವರಸ್ಯ ಮಹಾತ್ಮನಃ ॥ ೮೪ ॥

ನೀರಾಜಿತೋ ಗಿರಿಜಯಾ ಪುತ್ರವತ್ತೌ ಗಣಾವುಭೌ ।
ಉವಾಚೇದಂ ತತೋ ದೇವೀ ಪ್ರಹಸ್ಯ ಗಜಗಾಮಿನೀ ॥ ೮೫ ॥

॥ ಪಾರ್ವತ್ಯುವಾಚ ॥

ಯಥಾ ತ್ವಂ ಹಿ ಮಹಾದೇವ ತಥಾ ಚೈತೌ ನ ಸಂಶಯಃ ।
ಸಾರೂಪ್ಯೇಣ ಚ ಗತ್ಯಾ ಚ ಹಾಸ್ಯಭಾವೈಃ ಸುಪೂಜಿತೈಃ ॥ ೮೬ ॥

॥ ಮಹಾದೇವ ಉವಾಚ ॥

ದೇವ್ಯಾಸ್ತದ್ವಚನಂ ಶ್ರುತ್ವಾ ಕಿರಾತೋ ವೈಶ್ಯ ಏವ ಚ ।
ಸದ್ಯಃ ಪರಾಙ್ಮುಖೋ ಭೂತ್ವಾ ಶಂಕರಸ್ಯ ಚ ಪಶ್ಯತಃ ।
ಊಚತುಸ್ತ್ವರಯಾ ಯುಕ್ತೌ ಗಣೌ ರುದ್ರಸ್ಯ ಪಶ್ಯತಃ ॥ ೮೭ ॥

---

೮೪. ಅವರಿಬ್ಬರೂ ಕೂಡ ವಿಮಾನದಿಂದ ಕೈಲಾಸವನ್ನು ಹೊಂದಿದರು. ಅಲ್ಲಿ ಆ ಮಹಾತ್ಮನಾದ ಈಶ್ವರ ಸಾರೂಪ್ಯವನ್ನೇ ಹೊಂದಿದರು.

೮೫. ಆ ಗಿರಿಜೆಯು ಅವರಿಬ್ಬರಿಗೂ ಮಕ್ಕಳಿಗೆ ಆರತಿ ಎತ್ತುವಂತೆ ಆರತಿಯೆತ್ತಿದಳು. ಅನಂತರ ಅವರನ್ನು ಕುರಿತು ಇಂತೆಂದಳು.

೮೬. ಪಾರ್ವತಿಯು ಹೇಳಿದಳು- ಎಲೈ ಮಹಾದೇವನೇ ! ನೀನು ಹೇಗೋ ಇವರಿಬ್ಬರೂ ನನಗೂ ಹಾಗೆಯೇ. ಸಂಶಯವಿಲ್ಲ. ಸಾರೂಪ್ಯದಿಂದಲೂ ಗತಿಯಿಂದಲೂ ಹಾಸ್ಯದಿಂದಲೂ ಪೂಜೆಯಿಂದಲೂ ಇವರು ನಿನ್ನಂತೆಯೇ ಎಂದು ತಿಳಿ.

೮೭. ಮಹಾದೇವನು ಹೇಳಿದನು- ದೇವಿಯೂ ಆ ಮಾತನ್ನು ವೈಶ್ಯನೂ ಕಿರಾತನೂ ಕೇಳಿ ಒಡನೆಯೇ ಹಿಂತಿರುಗಿಕೊಂಡು ಶಂಕರನನ್ನು ನೋಡಿದರು. ಮತ್ತು ಆ ಶಂಕರನನ್ನು ನೋಡಿ ಆ ಗಣಗಳು ಜಾಗ್ರತೆಯಾಗಿ ಇಂತೆಂದರು.

॥ ವೈಶ್ಯಕಿರಾತೌ ಊಚತುಃ ॥

ಉಭಾವಪ್ಯನುಕಂಪ್ಯೌ ಚ ಭವತಾ ಹಿ ತ್ರಿಲೋಚನ ।
ತವ ದ್ವಾರಿ ಸ್ಥಿತೌ ನಿತ್ಯಂ ಭವಾವಸ್ತೇ ನಮೋ ನಮಃ । ॥ ೮೮ ॥

॥ ಮಹಾದೇವ ಉವಾಚ ॥

ತಯೋರ್ಭಾವಂ ಸ ಭಗವಾನ್ ವಿದಿತ್ವಾ ಪ್ರಹಸನ್ ಭವಃ ।
ಉವಾಚ ಪರಯಾ ಭಕ್ತ್ಯಾ ಭವತೋರಸ್ತು ವಾಂಛಿತಂ ॥ ೮೯ ॥

ತತಃ ಪ್ರಭೃತಿ ದ್ವಾವೇತೌ ದ್ವಾರಪಾಲೌ ಬಭೂವತುಃ ।
ಶಿವದ್ವಾರಿ ಸ್ಥಿತೌ ದೇವಿ ಮಧ್ಯಾಹ್ನೇ ಶಿವದರ್ಶಿನೌ ॥ ೯೦ ॥

ಏಕೋ ನಂದೀ ಮಹಾಕಾಲೋ ದ್ವಾವೇತೌ ಶಿವವಲ್ಲಭೌ ।
ಯೇ ಪಾಪಿನೋಽಪ್ಯಧರ್ಮಿಷ್ಠಾ ಅಂಧಾ ಮೂಕಾಶ್ಚ ಪಂಗವಃ ॥ ೯೧ ॥

---

೮೮. ವೈಶ್ಯಕಿರಾತರು ಹೇಳಿದರು- ಎಲೈ ತ್ರಿಲೋಚನನೇ! ನಮ್ಮಲ್ಲಿ ಕರುಣೆಯನ್ನು ತೋರಿಸು. ನಾವಿಬ್ಬರೂ ನಿನ್ನ ಮನೆಯ ಬಾಗಿಲಿನಲ್ಲಿ ಬಾಗಿಲು ಕಾಯುವವರು ಆಗಿರುತ್ತೇವೆ. ನಿನಗೆ ನಮಸ್ಕಾರ.

೮೯. ಮಹಾದೇವನು ಹೇಳಿದನು- ಆಗ ಭಗವಂತನು ಅವರ ಅಭಿಪ್ರಾಯ ವನ್ನು ತಿಳಿದು ನಗುತ್ತ ಎಲೈ ಭಕ್ತರಿರ! ಭಕ್ತಿಯಿಂದ ನೀವು ಕೇಳಿಕೊಂಡಂತೆಯೇ ಆಗಲಿ.

೯೦. ಅದು ಮೊದಲುಗೊಂಡು ಅವರಿಬ್ಬರೂ ದ್ವಾರಪಾಲಕರಾದರು. ಶಿವನ ಬಾಗಿಲನ್ನು ಕಾಯುವವರಾದರು. ಮಧ್ಯಾಹ್ನದಲ್ಲಿ ಶಿವನ ದರ್ಶನವನ್ನು ಮಾಡುವವರೂ ಸಹ ಆದರು.

೯೧-೯೭. ಈ ರೀತಿಯಾಗಿ ಒಬ್ಬನು ನಂದಿಯೂ, ಮತ್ತೊಬ್ಬನು ಮಹಾ ಕಾಳನೂ ಆಗಿ ಈಶ್ವರನಿಗೆ ಭಕ್ತರಾಗಿ ಬಾಗಿಲು ಕಾಯುವವರಾದರು. ಈ ರೀತಿ ಯಾಗಿ ಆ ದೇವರು ಉತ್ಕೃಷ್ಟನಾದುದು. ಪಾಪಿಗಳು ಅಧರ್ಮಿಗಳು ಕುರುಡರು, ಮೂಕರು, ಕುಂಟರು, ಕುಲಭ್ರಷ್ಟರು, ದುಷ್ಟರು, ನೀಚ ಜಾತಿಯವರು, ಮತ್ತೆ

**ಕುಲಹೀನಾ ದುರಾತ್ಮಾನಃ ಶ್ವಪಚಾದ್ಯಾ ಹಿ ಮಾನವಾಃ ।**
**ಯಾದೃಶಾಸ್ತಾದೃಶಾಶ್ಚಾಸ್ಯ ಆರಾಧ್ಯ ಧವಳೇಶ್ವರಂ || ೯೨ ||**

**ಗತಾಸ್ತೇಽಪಿ ಗಮಿಷ್ಯಂತಿ ನಾತ್ರ ಕಾರ್ಯಾ ವಿಚಾರಣಾ ।**
**ಅತ್ರ ಸ್ನಾನಂ ಚ ದಾನಂ ಚ ಯೇ ಕುರ್ವಂತಿ ನರೋತ್ತಮಾಃ || ೯೩ ||**

**ಧರ್ಮಾರ್ಥಕಾಮಭೋಗಾಂಶ್ಚ ಭುಕ್ತ್ವಾ ಯಾಂತಿ ಹರಾಲಯಂ ।**
**ಚಂದ್ರಸೂರ್ಯೋಪರಾಗೇ ಚ ಪಿತುಸ್ಸಾಂವತ್ಸರೇ ದಿನೇ || ೯೪ ||**

**ಯತ್ಫಲಂ ಲಭತೇ ಮರ್ತ್ಯಃ ತತ್ಫಲಂ ಪ್ರಾಪ್ನುಯಾದ್ಧ್ರುವಂ ।**
**ಸ್ವರ್ಗಾತ್ಕಾಮದುಘಾ ದೇವಿ ನಿತ್ಯಮಾಯಾತಿ ಸರ್ವಥಾ || ೯೫ ||**

**ಆಗತ್ಯ ತಂ ಶಿವಂ ದೇವಂ ಸಮಭ್ಯರ್ಚ್ಯ ಯಥಾವಿಧಿ ।**
**ಸಾ ಗಚ್ಛತಿ ಸುರಶ್ರೇಷ್ಠೇ ಸ್ವರ್ಗಂ ಪ್ರತಿ ನ ಸಂಶಯಃ || ೯೬ ||**

**ತೇನ ದುಗ್ಧಾಭಿಯೋಗೇನ ಲಿಂಗಂ ತದ್ಧವಳೀಕೃತಂ ।**
**ಧವಳೇಶ್ವರಂ ನಾಮ ತತಃ ಸಂಜಾತಂ ಭುವಿ ಸರ್ವದಾ || ೯೭ ||**

---

ಯಾರಾದರೂ ಆಗಲಿ ಈ ಧವಳೇಶ್ವರನನ್ನು ಆರಾಧಿಸಿದರೆ ಕೈಲಾಸವನ್ನು ಹೊಂದುತ್ತಾರೆ. ಎಷ್ಟೋ ಜನರು ಹೊಂದಿಯೂ ಇದ್ದಾರೆ. ಈ ವಿಷಯದಲ್ಲಿ ವಿಚಾರವೇ ಬೇಕಿಲ್ಲ. ಯಾರು ಈ ಜಾಗದಲ್ಲಿ ಸ್ನಾನದಾನಗಳನ್ನು ಮಾಡುತ್ತಾರೆಯೋ ಅವರು ಧರ್ಮ ಅರ್ಥ, ಕಾಮ, ಭೋಗಗಳನ್ನು ಅನುಭವಿಸಿ ಕೈಲಾಸವನ್ನು ಸೇರುತ್ತಾರೆ. ಸೂರ್ಯ ಚಂದ್ರ ಗ್ರಹಣಗಳಲ್ಲಿ ಪಿತೃಗಳ ಸಾಂವತ್ಸರಿಕ ಶ್ರಾದ್ಧದ ದಿನದಲ್ಲಿ ಧರ್ಮಗಳನ್ನು ಆಚರಿಸಿದರೆ ಮನುಷ್ಯನಿಗೆ ಯಾವ ಪುಣ್ಯವು ಬರುತ್ತದೆಯೋ ಅಂತಹ ಫಲವನ್ನು ಇಲ್ಲಿನ ಸ್ನಾನದಿಂದ ಮನುಷ್ಯನು ಹೊಂದುತ್ತಾನೆ ಸಂಶಯವಿಲ್ಲ. ಎಲೈ ದೇವಿಯೇ! ಸ್ವರ್ಗದಿಂದ ಕಾಮಧೇನುವು ನಿತ್ಯವೂ ಇಲ್ಲಿಗೆ ಬರುತ್ತದೆ. ಬಂದು ಈ ಧವಳೇಶ್ವರನನ್ನು ಕ್ರಮವಾಗಿ ಪೂಜಿಸುತ್ತದೆ. ಅನಂತರ ಅದು ಸ್ವರ್ಗಕ್ಕೆ ಹೊರಟು ಹೋಗುತ್ತದೆ. ಸಂಶಯವಿಲ್ಲ.

೯೭. ಆ ಕಾಮಧೇನುವಿನ ಹಾಲಿನ ಸಂಬಂಧದಿಂದ ಆ ಲಿಂಗವು ಬೆಳ್ಳಗಾಗಿ ಅದರಿಂದಲೇ ಧವಳೇಶ್ವರನೆಂದು ಲೋಕದಲ್ಲಿ ಹೆಸರನ್ನು ಹೊಂದಿದೆ.

**ಜಂತವೋತ್ರ ಸದಾ ದೇವಿ ಮ್ರಿಯಂತೇ ಕಾಲನೋದಿತಾಃ ।**
**ತೇ ವೈ ಶಿವಪದಂ ಯಾನ್ತಿ ಯಾವಚ್ಚಂದ್ರದಿವಾಕರೌ ॥ ೯೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಧವಳೇಶ್ವರ ಮಹಾತ್ಮ್ಯಂ ನಾಮ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೯೮. ಇಲ್ಲಿ ಎಷ್ಟೋ ಪ್ರಾಣಿಗಳು ಕಾಲಾಧೀನದಿಂದ ಸಾಯುತ್ತವೆ. ಅವೆಲ್ಲವೂ ಕೂಡ ಸೂರ್ಯಚಂದ್ರರಿರುವವರೆಗೂ ಕೈವಲ್ಯವನ್ನು ಹೊಂದುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ಧವಳೇಶ್ವರ ಮಹಿಮೆ ಎಂಬ ನೂರ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ತೀರ್ಥಾನಾಂ ಪ್ರವರಂ ತೀರ್ಥಂ ಸಾಭ್ರಮತ್ಯಾ ತಟೇ ಸ್ಥಿತಂ ।**
**ಬಾಲಾಪ ಇತಿ ವಿಖ್ಯಾತಂ ಭುಕ್ತಿಮುಕ್ತಿಪ್ರದಾಯಕಂ ॥ ೧ ॥**

**ತಪಸ್ವಿಧಾರಿತಂ ತೀರ್ಥಂ ವಿಬುಧಾನಾಂ ಸಮಾಶ್ರಯಂ ।**
**ತತ್ರ ಕನ್ಯಾ ತಪಸ್ತೇಪೇ ಪರಮಂ ಸುದೃಢವ್ರತಾ ॥ ೨ ॥**

**ಕನ್ಯಾ ಕಣ್ವಮುನೇಃ ಸಾಧ್ವೀ ರೂಪೇಣಾಪ್ರತಿಮಾ ಭುವಿ ।**
**ಬಾಲಾ ಬಾಲಾವತೀ ನಾಮ ಕುಮಾರೀ ಬ್ರಹ್ಮಚಾರಿಣೀ ॥ ೩ ॥**

---

## ನೂರ ನಲವತ್ತೈದನೆಯ ಅಧ್ಯಾಯವು



೧. ಮಹಾದೇವನು ಹೇಳಿದನು- ಈ ಸಾಭ್ರಮತಿಯ ದಡದಲ್ಲಿ ತೀರ್ಥಗಳಲ್ಲೆಲ್ಲಾ ಉತ್ತಮವಾದ ತೀರ್ಥವಿದೆ. ಬಾಲಾಪ ಎಂಬುದಾಗಿ ಅದು ಹೆಸರನ್ನು ಪಡೆದಿದೆ. ಮುಕ್ತಿ ಭುಕ್ತಿಗಳನ್ನು ಅದು ಕೊಡುತ್ತದೆ.

೨. ಆ ತೀರ್ಥವು ತಪಸ್ವಿಗಳಿರತಕ್ಕ ತೀರ್ಥವು. ದೇವತೆಗಳಿಗೂ ಆಶ್ರಯವಾದುದು. ಅಲ್ಲಿ ಒಬ್ಬ ಕನ್ಯೆಯು ವ್ರತವನ್ನು ಧರಿಸಿ ಉತ್ತಮವಾದ ತಪಸ್ಸನ್ನು ಮಾಡಿದಳು.

೩. ಆ ಕನ್ಯೆಯು ಕಣ್ವಮುನಿಯ ಪುತ್ರಿಯು. ಸಾಧುಮಣಿಯು. ಒಳ್ಳೆ ಸುಂದರಿಯು. ಅವಳ ಹೆಸರು ಬಾಲವತಿ ಎಂಬುದಾಗಿ. ಆಕೆಯು ಕೌಮಾರದಲ್ಲಿಯೇ ಬ್ರಹ್ಮಚಾರಿಣಿಯಾಗಿ ತಪಸ್ಸನ್ನು ಮಾಡಿದಳು.

ವ್ರತಂ ಚಚಾರ ಸಾವಿತ್ರ್ಯಾ ನಿಯಮೈರ್ಬಹುಭಿರ್ವೃತಾ ।
ಭರ್ತಾ ಮೇ ಭಾಸ್ಕರೋ ಭೂಯಾದಿತಿ ನಿಶ್ಚಿತ್ಯ ಭಾಮಿನೀ ॥ ೪ ॥

ಸಮಾಸ್ತಸ್ಯಾಸ್ಸಮಾಕ್ರಾಂತಾ ದಶ ಸಾಭ್ರಮತೀತಟೇ ।
ಚರಂತ್ಯಾ ನಿಯಮಾಂಸ್ತಾಂಸ್ತಾನ್ ಭಕ್ತ್ಯಾ ಪರಮದುಶ್ಚರಾನ್ ॥ ೫ ॥

ತಸ್ಯಾಸ್ತು ತೇನ ವೃತ್ತೇನ ತಪಸಾ ವ್ರತಚರ್ಯಯಾ ।
ಭಕ್ತ್ಯಾ ಚ ಭಗವಾನ್ ಪ್ರೀತಃ ಪರಯಾ ಭಕ್ತಿಸಂಪದಾ ॥ ೬ ॥

ಆಜಗಾಮಾಶ್ರಮಪದಂ ದೇವದೇವೋ ದಿವಾಕರಃ ।
ಆಸ್ಥಾಯ ರೂಪಂ ವಿಪ್ರರ್ಷೇಃ ಪ್ರವಿಷ್ಟಸ್ತು ಮಹಾಮುನಾಃ ॥ ೭ ॥

ಸಾ ತಂ ದೃಷ್ಟ್ವೋಗ್ರತಪಸಾ ವರಿಷ್ಠಂ ಬ್ರಹ್ಮವಿತ್ತಮಂ ।
ವಾನಪ್ರಸ್ಥವಿಧಾನೇನ ಪೂಜಯಾಮಾಸ ತಂ ದ್ವಿಜಂ ।
ಉವಾಚ ರವಿಭಕ್ತಾ ಸಾ ಕಲ್ಯಾಣೀ ತಂ ತಪೋಧನಂ ॥ ೮ ॥

---

೪. ನನಗೆ ಸೂರ್ಯನು ಗಂಡನಾಗಬೇಕೆಂದು ನಿಶ್ಚಯಿಸಿಕೊಂಡು ಆಕೆಯು ಅನೇಕ ನಿಯಮಗಳನ್ನು ಹೊಂದಿ ಸಾವಿತ್ರಿ ವ್ರತವನ್ನು ಮಾಡಿದಳು.

೫. ಭಕ್ತಿಯಿಂದ ಅಂತಹ ಕಷ್ಟವಾದ ವ್ರತಗಳನ್ನು ಸಾಭ್ರಮತಿ ನದಿಯ ದಡದಲ್ಲಿ ಮಾಡುತ್ತಿರಲು ಹತ್ತು ವರ್ಷಗಳು ಕಳೆದುಹೋದುವು.

೬-೭. ಆಕೆಯ ಆ ನಡತೆಯಿಂದಲೂ ತಪಸ್ಸಿನಿಂದಲೂ ಹೆಚ್ಚಾದ ಭಕ್ತಿಯಿಂದಲೂ ಆ ಸೂರ್ಯನು ಸಂತೋಷಪಟ್ಟು ಆ ಆಶ್ರಮಕ್ಕೆ ಬಂದನು. ಮತ್ತು ಒಬ್ಬ ಬ್ರಾಹ್ಮಣ ಋಷಿಯ ವೇಷವನ್ನು ಹಾಕಿಕೊಂಡು ಆಕೆಯ ಆಶ್ರಮವನ್ನು ಹೊಕ್ಕನು.

೮. ಅವಳು ಆತನನ್ನು ನೋಡಿ ದೊಡ್ಡ ತಪಸ್ವಿಯೆಂದೂ ಬ್ರಾಹ್ಮಣಶ್ರೇಷ್ಠನೆಂದೂ ತಿಳಿದು ವಾನಪ್ರಸ್ಥರೀತಿಯಿಂದ ಆತನನ್ನು ಪೂಜಿಸಿದಳು. ಮತ್ತು ಸೂರ್ಯಭಕ್ತೆಯಾದ ಆಕೆಯು ಆತನನ್ನು ಕುರಿತು ಇಂತೆಂದಳು.

॥ ಕನ್ಯೋವಾಚ ॥

ಭಗವನ್ ಮುನಿಶಾರ್ದೂಲ ಕಿಮಾಜ್ಞಾಪಯಸಿ ಪ್ರಭೋ ।
ಸರ್ವಂ ತುಭ್ಯಂ ಯಥಾಶಕ್ತಿ ದಾಸ್ಯಾಮಿ ಸ್ವತನುಂ ವಿನಾ ॥ ೯ ॥

ಸೂರ್ಯಭಕ್ತಾಸ್ಮಿ ತೇ ಪಾಣಿಂ ದಾಸ್ಯಾಮಿ ನ ಕಥಂಚನ ।
ವ್ರತೈಶ್ಚ ನಿಯಮೈಶ್ಚಾಪಿ ತಪೋಭಿಶ್ಚ ತಪೋಧನ ।
ಸೂರ್ಯಸ್ತೋಷಯಿತವ್ಯೋ ಮೇ ದೇವಸ್ತ್ರಿಭುವನೇಶ್ವರಃ ॥ ೧೦ ॥

॥ ಮಹಾದೇವ ಉವಾಚ ॥

ಇತ್ಯುಕ್ತವತ್ಯಾಂ ತಸ್ಯಾಂ ತು ಸ್ಮಯನ್ನಿವ ನಿರೀಕ್ಷ್ಯ ತಾಂ ।
ಉವಾಚ ನಿಯಮಸ್ಥಾಂ ತಾಂ ಸಾಂತ್ವಯನ್ನಿವ ಭಾಸ್ಕರಃ ॥ ೧೧ ॥

॥ ಸೂರ್ಯ ಉವಾಚ ॥

ಉಗ್ರಂ ಚರಸಿ ಕಲ್ಯಾಣಿ ತಪಃ ಪರಮದುಷ್ಕರಂ ।
ಯದರ್ಥಂ ಚ ಸಮಾರಂಭಸ್ತವ ಬಾಲ್ಯೇ ತಥೈವ ತತ್ ॥ ೧೨ ॥

---

೯. ಕನ್ಯೆಯು ಹೇಳಿದಳು- ಎಲೈ ಮುನಿಶ್ರೇಷ್ಠನೆ! ಏನು ಬೇಕು? ಅಪ್ಪಣೆ ಮಾಡು. ನನ್ನ ದೇಹವೊಂದನ್ನು ಹೊರತಾಗಿ ನನ್ನ ಕೈಲಾದಮಟ್ಟಿಗೂ ಎಲ್ಲವನ್ನೂ ನಿನಗೆ ಕೊಡುತ್ತೇನೆ.

೧೦. ನಾನು ಸೂರ್ಯಭಕ್ತಳಾಗಿರುತ್ತೇನೆ. ಆದ್ದರಿಂದ ನಿನ್ನ ಪಾಣಿಗ್ರಹಣ ಮಾಡಲಾರೆನು. ಅವನಿಗೋಸ್ಕರವೇ ಅನೇಕ ವ್ರತಗಳನ್ನೂ ನಿಯಮಗಳನ್ನೂ ತಪಸ್ಸುಗಳನ್ನೂ ಮಾಡುತ್ತಿದ್ದೇನೆ. ದೇವದೇವನೂ ಮೂರು ಲೋಕಗಳಿಗೂ ಒಡೆಯನೂ ಆದ ಆ ಸೂರ್ಯನೇ ನನ್ನನ್ನು ಸಂತೋಷಪಡಿಸಬೇಕು

೧೧. ಮಹಾದೇವನು ಹೇಳಿದನು- ಆಕೆಯು ಹೀಗೆ ಹೇಳಲು ನಗುತ್ತ ಆಕೆಯನ್ನು ನೋಡಿ ನಿಯಮವನ್ನು ಹೊಂದಿರುವ ಆಕೆಯನ್ನು ಸಮಾಧಾನಪಡಿಸುವಂತೆ ಸೂರ್ಯನು ಇಂತೆಂದನು.

೧೨. ಸೂರ್ಯನು ಹೇಳಿದನು- ಎಲೈ ಕಲ್ಯಾಣಿಯೇ ! ದುಷ್ಕರವಾದ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದೀಯೆ. ನಿನ್ನ ಮನಸ್ಸಿನಲ್ಲಿರುವುದಕ್ಕೆ ಅನುಸಾರವಾಗಿ ತಪಸ್ಸನ್ನು ಉಗ್ರವಾಗಿ ಮಾಡುತ್ತಿದ್ದೀಯೆ. ಅದಕ್ಕೆ ಆ ಮಾತು ಸರಿಯಾಗಿ ಇದೆ.

ತಪಸಾ ಲಭ್ಯತೇ ಸರ್ವಂ ಸರ್ವಂ ತಪಸಿ ತಿಷ್ಠತಿ |
ದೇವತ್ವಂ ಪ್ರಾಪ್ಯತೇ ಭದ್ರೇ ತಪಸಾ ಮೋಕ್ಷ ಏವ ಚ ।
ಇಮಾನಿ ಪಂಚ ಸುಭಗೇ ಬದರಾಣಿ ಪ್ರತೀಚ್ಛ ಮೇ ॥ ೧೩ ॥

॥ ಮಹಾದೇವ ಉವಾಚ ॥

ದತ್ವಾ ಸ ಬದರಾಣ್ಯಸ್ಯೈ ಪಚೇತ್ಯುಕ್ತ್ವಾ ರವಿರ್ಯಯೌ |
ಅಪೃಷ್ಟ್ವಾ ತಾಂ ತು ಕಲ್ಯಾಣೀಂ ಬ್ರಹ್ಮರೂಪೀ ವಿಹಾಯಸಾ ॥ ೧೪ ॥

ಸ್ಥಿತೋಽಸೌ ನಾತಿದೂರೇಣ ಇಂದ್ರಗ್ರಾಮೇ ಮಹಾಯಶಾಃ ।
ಭಾವಂ ಜಿಜ್ಞಾಸಮಾನೋಽಸೌ ತಸ್ಯಾಶ್ಚ ಬ್ರಾಹ್ಮಣೋ ರವಿಃ ॥ ೧೫ ॥

ಬದರಾಣಾಮುಪವನಂ ಕಾರಯಾಮಾಸ ಭಾಸ್ಕರಃ ।
ತತಸ್ಸಾ ಪ್ರಯತಾ ಬಾಲಾ ಪ್ರಾಂಜಲಿರ್ವಿಗತಶ್ರಮಾ ॥ ೧೬ ॥

ಪಾಕಾಯ ಬದರಾಣಾಂ ಸಾ ಪಾವಕಂ ಸಮುಶಿಶ್ರಿಯತ್ ।
ಅಪಚತ್ಪರಮಾ ದೇವಿ ಬದರಾಣಿ ಮಹಾಪ್ರಭಾ ॥ ೧೭ ॥

---

೧೩. ತಪಸ್ಸಿನಿಂದಲೇ ಎಲ್ಲವೂ ಸಿಕ್ಕುತ್ತವೆ. ಎಲ್ಲವೂ ತಪಸ್ಸಿನಲ್ಲಿಯೇ ನಿಂತಿದೆ. ದೇವತ್ವವಾಗಲೀ ಮೋಕ್ಷವಾಗಲಿ ತಪಸ್ಸಿನಿಂದಲೇ ಸಿಕ್ಕುತ್ತದೆ. ಎಲೈ ಕಲ್ಯಾಣಿಯೇ! ಇಲ್ಲಿರುವ ಈ ಐದು ಯುಗಚಿ ಹಣ್ಣುಗಳನ್ನು ನಾನು ಕೊಡುತ್ತೇನೆ. ತೆಗೆದುಕೋ.

೧೪. ಮಹಾದೇವನು ಹೇಳಿದನು- ರವಿಯು ಈ ಐದು ಯುಗಚಿ ಹಣ್ಣುಗಳನ್ನು ಆಕೆಗೆ ಕೊಟ್ಟು ಬೇಯಿಸೆಂದು ಹೇಳಿ ಆಕೆಗೆ ಹೇಳದೇನೇ ಆತನು ಆಕಾಶ ಮಾರ್ಗದಿಂದ ಹೊರಟು ಹೋದನು

೧೫. ಅನಂತರ ಈ ಸೂರ್ಯನು ಈಕೆಯ ಅಭಿಪ್ರಾಯವನ್ನು ತಿಳಿಯಲು ಅಲ್ಲಿಯೇ ಹತ್ತಿರದಲ್ಲಿರುವ ಇಂದ್ರಗ್ರಾಮದಲ್ಲಿ ಬ್ರಾಹ್ಮಣ ರೂಪಿನಿಂದ ನಿಂತನು.

೧೬-೧೭. ಅಲ್ಲಿಯೇ ಆ ಸೂರ್ಯನು ಯುಗಚಿಯ ಮರಗಳಿಂದ ಕೂಡಿದ ಒಂದು ಸಣ್ಣ ತೋಟವನ್ನು ಮಾಡಿದನು. ಅನಂತರ ಆಕೆಯು ನಿಯಮದಿಂದ ಶ್ರಮವನ್ನು ಲೆಕ್ಕಿಸದೆ ತೆಗೆದುಕೊಂಡು ಅವನ್ನು ಬೇಯಿಸುವುದಕ್ಕೆ ಬೆಂಕಿಯನ್ನು ಹಚ್ಚಿದಳು. ಅವನ್ನು ಬೇಯಿಸುವುದಕ್ಕೂ ಮೊದಲು ಮಾಡಿದಳು

ತಸ್ಯಾಃ ಪಚಂತ್ಯಾಸ್ಸುಮಹಾನ್ ಕಾಲೋಽ ಗಚ್ಛತ್ ಸುರೇಶ್ವರಿ ।
ಭಸ್ಮಪುಂಜೋ ಮಹಾನ್ ಜಾತೋ ದಿನಂ ಚ ಕ್ಷಯಮಸ್ವಗಾತ್ ॥ ೧೮ ॥

ಹುತಾಶನೇನ ದಗ್ಧಸ್ತು ಮಹಾನ್ವೈ ಕಾಷ್ಠಸಂಚಯಃ ।
ಪಾದೌ ಪ್ರಕ್ಷಾಳ್ಯ ಸಾ ಪಶ್ಚಾತ್ ಪಾವಕೇ ಚಾರುದರ್ಶನೇ ॥ ೧೯ ॥

ದದಾಹ ಬದರಾರ್ಥಂ ಚ ಬ್ರಾಹ್ಮಣಪ್ರಿಯಕಾಮ್ಯಯಾ ।
ದಗ್ಧೌ ದಗ್ಧೌ ಪುನಃ ಪಾದಾವುಪರ್ಯಾಧಾಯ ಚಾನಘೇ ॥ ೨೦ ॥

ಅಥಾಸ್ಯಾಃ ಕರ್ಮ ತದ್ದೃಷ್ಟ್ವಾ ಪ್ರೀತೋ ದೇವೋ ದಿವಾಕರಃ ।
ತತಸ್ಸಂದರ್ಶಯಾಮಾಸ ಕನ್ಯಾಯೈ ರೂಪಮಾತ್ಮನಃ ।
ಉವಾಚ ಪರಮಪ್ರೀತಸ್ತಾಂ ಕನ್ಯಾಂ ಸುದೃಢವ್ರತಾಂ ॥ ೨೧ ॥

॥ ಸೂರ್ಯ ಉವಾಚ ॥

ಪ್ರೀತೋಸ್ಮಿ ಬಾಲೇ ಭಕ್ತ್ಯಾ ತೇ ತಪಸಾ ಬ್ರಹ್ಮಚರ್ಯಯಾ ।
ತಸ್ಮಾದಭಿಮತಃ ಕಾಮೋ ಬಾಲೇ ಸಂಪದ್ಯತಾಂ ತವ ॥ ೨೨ ॥

---

೧೮. ಹಾಗೆ ಬೇಯಿಸುತ್ತಿರಲು ಬಹಳ ಹೊತ್ತು ಆಯಿತು. ಬೂದಿಯ ರಾಶಿಯೇ ಬಿದ್ದು ಹೋಯಿತು. ಹಗಲೂ ಕಳೆಯುತ್ತ ಬಂದಿತು.

೧೯-೨೦. ಅವಳು ತಂದ ಸೌದೆಯೆಲ್ಲವೂ ಬೆಂಕಿಯಲ್ಲಿ ಸುಟ್ಟು ಮುಗಿದು ಹೋಗಲು ಅನಂತರ ಆಕೆಯು ಕಾಲುಗಳನ್ನು ತೊಳೆದುಕೊಂಡು ತನ್ನ ಕಾಲುಗಳನ್ನೇ ಆ ಬೆಂಕಿಯಲ್ಲಿ ಸೌದೆಯಾಗಿ ಉಪಯೋಗಿಸಿದಳು. ಬ್ರಾಹ್ಮಣನಿಗೋಸ್ಕರ ಆ ಹಣ್ಣುಗಳನ್ನು ಬೇಯಿಸಲು ತನ್ನ ಕಾಲುಗಳನ್ನು ಉರಿಸುತ್ತಿದ್ದಳು. ಅವು ಸುಡುತ್ತಿದ್ದುವು. ಅವು ಸುಟ್ಟಂತೆಲ್ಲಾ ಮುಂದು ಮುಂದಕ್ಕೆ ಚಾಚುತ್ತಿದ್ದಳು.

೨೧. ಆಕೆಯ ಈ ಕೆಲಸವನ್ನು ನೋಡಿ ಆ ಸೂರ್ಯನು ಸಂತೋಷಪಟ್ಟನು. ಅನಂತರದಲ್ಲಿ ಆಕೆಗೆ ತನ್ನ ರೂಪವನ್ನು ತೋರಿಸಿ ಆಕೆಯ ತಪಸ್ಸಿಗೆ ಮೆಚ್ಚಿ ಇಂತೆಂದನು.

೨೨. ಸೂರ್ಯನು ಹೇಳಿದನು– ಎಲೈ ಬಾಲೆಯೇ! ನಿನ್ನ ಈ ಬ್ರಹ್ಮಚರ್ಯೆಯಿಂದಲೂ, ತಪಸ್ಸಿನಿಂದಲೂ, ಸಂತುಷ್ಟನಾಗಿದ್ದೇನೆ. ಆದ್ದರಿಂದ ನಿನಗೆ ಬೇಕಾದ ಇಷ್ಟಾರ್ಥಗಳು ನೆರವೇರಲಿ.

ಅಸ್ಮಿನ್ ತೀರ್ಥೇ ತಪೋಯುಕ್ತಾ ಮದ್ಗೃಹೇ ತ್ವಂ ನಿವತ್ಸ್ಯಸಿ ।
ಇದಂ ಚ ತೀರ್ಥಪ್ರವರಂ ತವ ನಾಮ್ನಾ ಚ ಲಕ್ಷಿತಂ ॥ ೨೩ ॥

ಬಾಲಾಪ ಇತಿ ವಿಖ್ಯಾತಂ ಸಾಭ್ರಮತ್ಯಾಸ್ತಟೇ ಸ್ಥಿತಂ ।
ವಿಖ್ಯಾತಂ ತ್ರಿಷು ಲೋಕೇಷು ಪುರಾ ಬ್ರಹ್ಮರ್ಷಿಭಿಸ್ತುತಂ ॥ ೨೪ ॥

ಬಾಲತೀರ್ಥೇ ನರಸ್ಸ್ನಾತ್ವಾ ತ್ರಿರಾತ್ರಮುಷಿತಶ್ಶುಚಿಃ ।
ರಕ್ತಾದಿತ್ಯಮುಖಂ ದೃಷ್ಟ್ವಾ ಸೂರ್ಯಸ್ಯೋದಯನಂ ಪ್ರತಿ ॥ ೨೫ ॥

ಸೂರ್ಯಲೋಕಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಸೂರ್ಯವಾರೇಥ ಸಂಕ್ರಾಂತೌ ಸಪ್ತಮ್ಯಾಂ ತು ವಿಶೇಷತಃ ॥ ೨೬ ॥

ವಿಷುವತ್ಯಯನೇ ಚಾಪಿ ಚಂದ್ರಸೂರ್ಯಗ್ರಹೇಪಿ ಚ ।
ಸ್ನಾತ್ವಾ ಸಂತರ್ಪಯೇದ್ದೇವಾನ್ ಪಿತೄನಥ ಪಿತಾಮಹಾನ್ ॥ ೨೭ ॥

ಗುಡಧೇನುಂ ತತೋ ದದ್ಯಾತ್ ಬ್ರಾಹ್ಮಣೇಭ್ಯೋ ಗುಡೌದನಂ ।
ಕರವೀರೈರ್ಜಪಾಪುಷ್ಪೈಃ ರಕ್ತಾದಿತ್ಯಪ್ರಪೂಜನಂ ॥ ೨೮ ॥

---

೨೩. ಈ ತೀರ್ಥದಲ್ಲಿ ನೀನು ತಪಸ್ಸುಮಾಡಿದುದರಿಂದ ನನ್ನ ಮನೆಯಲ್ಲಿಯೇ ವಾಸಿಸುತ್ತೀಯೆ ಈ ತೀರ್ಥವು ನಿನ್ನ ಹೆಸರಿನಿಂದ ಪ್ರಸಿದ್ಧವಾಗುತ್ತದೆ.

೨೪. ಈ ತೀರ್ಥವು ಸಾಭ್ರಮತಿಯ ದಡದಲ್ಲಿ ಬಾಲಾಪ ಎಂಬ ಹೆಸರಿನಿಂದ ಪ್ರಸಿದ್ಧವಾಗಿ ನಿನ್ನ ಹೆಸರಿನಿಂದಲೇ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುತ್ತದೆ. ಬ್ರಹ್ಮಋಷಿಗಳೂ ಕೂಡ ಇದನ್ನು ಹೊಗಳುತ್ತಾರೆ.

೨೫-೨೭. ಈ ಬಾಲ ತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಶುಚಿಯಾಗಿ ಮೂರು ರಾತ್ರಿಗಳು ಉಪವಾಸವಿದ್ದು ಉದಯಕಾಲದಲ್ಲಿ ಕೆಂಪಗಿರುವ ಸೂರ್ಯನ ದರ್ಶನವನ್ನು ಮಾಡುತ್ತಿದ್ದರೆ ಸೂರ್ಯಲೋಕವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ. ಭಾನುವಾರದ ಸಪ್ತಮಿಯ ದಿವಸವೂ ವಿಷುವತ್ಪುಣ್ಯಕಾಲದಲ್ಲಿಯೂ ಸೂರ್ಯ ಚಂದ್ರಗ್ರಹಣದಲ್ಲಿಯೂ ಸ್ನಾನಮಾಡಿ ಪಿತೃಗಳಿಗೆ ತರ್ಪಣಕೊಡಬೇಕು.

೨೮-೩೦ ಅನಂತರ ಗುಡಧೇನುವನ್ನೂ ಬೆಲ್ಲದ ಅನ್ನವನ್ನೂ ಬ್ರಾಹ್ಮಣನಿಗೆ ದಾನಮಾಡಬೇಕು. ಮತ್ತು ಕೆಂಪು ಕಣಿಗಲೆ ಹೂವಿನಿಂದಲೂ ಕೆಂಪುದಾಸವಾಳದ

ಯೇ ಕುರ್ವಂತಿ ನರಾಸ್ತೇ ವೈ ಸೂರ್ಯಲೋಕೇ ವಸಂತಿ ವೈ ।
ರಕ್ತಾಂ ಧೇನುಂ ನರೋ ದದ್ಯಾದೇಕಂ ಚೈವ ಧುರಂಧರಂ ॥ ೨೯ ॥

ಸ ಯಜ್ಞಫಲಮಾಪ್ನೋತಿ ನ ನರೋ ನಿರಯಂ ವ್ರಜೇತ್ ।
ವ್ಯಾಧಿತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।
ತೀರ್ಥೇಽಸ್ಮಿನ್ ಪಿಂಡದಾನೇನ ತೃಪ್ತಿಂ ಯಾಂತಿ ಪಿತಾಮಹಾಃ ॥ ೩೦ ॥

॥ ಶ್ರೀ ಮಹಾದೇವ ಉವಾಚ ॥

ತಥಾನ್ಯದಪಿ ಮಾಹಾತ್ಮ್ಯಂ ತೀರ್ಥಸ್ಯಾಸ್ಯ ತಪೋಧನೇ ।
ಶ್ರೂಯತಾಂ ಯತ್ಪುರಾ ವೃತ್ತಂ ವ್ಯಾಸೇನ ಕಥಿತಂ ಮಹತ್ ॥ ೩೧ ॥

ಪುರಾತ್ರ ಮಹಿಷೋ ವೃದ್ಧೋ ಜರಯಾ ಜರ್ಜರೀಕೃತಃ ।
ಅಶಕ್ತೋ ಭಾರಮುದ್ವೋಢುಂ ಸಾರ್ಥವಾಹಸ್ತಮುತ್ಯಜತ್ ॥ ೩೨ ॥

ಸ ನಿದಾಘೇ ಜಲಂ ಪಾತುಂ ಜಗಾಮ ಚ ಮಹಾನದೀಂ ।
ದೈವಾತ್ಪಂಕೇ ನಿಮಗ್ನೋಽಸೌ ತತೋ ಮೃತ್ಯುವಶಂ ಗತಃ ॥ ೩೩ ॥

---

ಹೂವಿನಿಂದಲೂ ಕೆಂಪು ಬಣ್ಣದ ಆದಿತ್ಯನನ್ನು ಪೂಜಿಸಬೇಕು. ಹೀಗೆ ಮಾಡಿದವರು ಸೂರ್ಯಲೋಕವನ್ನು ಹೊಂದುತ್ತಾರೆ. ಒಂದು ಒಳ್ಳೆಯ ಕೆಂಪು ಹಸುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಅವನಿಗೆ ಯಾಗ ಮಾಡಿದ ಫಲವು ಬರುತ್ತದೆ. ಅವನು ನರಕವನ್ನು ಹೊಂದುವುದೇ ಇಲ್ಲವು. ರೋಗಿಯಾದವನು ರೋಗದಿಂದಲೂ, ಬಂಧನದಲ್ಲಿರುವವನು ಬಂಧನದಿಂದಲೂ ಬಿಡಲ್ಪಡುತ್ತಾರೆ. ಈ ತೀರ್ಥದಲ್ಲಿ ಪಿಂಡವನ್ನು ಕೊಡುವುದರಿಂದ ಪಿತೃಗಳು ತೃಪ್ತರಾಗುತ್ತಾರೆ.

೩೧. ಶ್ರೀ ಮಹಾದೇವನು ಹೇಳಿದನು- ಈ ತೀರ್ಥದ ಮತ್ತೊಂದು ಮಹಿಮೆಯನ್ನು ಹೇಳುತ್ತೇನೆ. ಕೇಳು. ಆ ಹಿಂದೆ ನಡೆದುದನ್ನು ವ್ಯಾಸನೇ ಹೀಗೆ ಹೇಳಿರುವನು.

೩೨. ಹಿಂದೆ ಇಲ್ಲಿ ಒಂದು ಮುದಿಯಾದ ಕೋಣವಿದ್ದಿತು. ಅದು ಮುಪ್ಪಿನಿಂದ ಗಳಿತವಾಗಿದ್ದಿತು. ಅದು ಭಾರವನ್ನು ಹೊರಲು ಅಸಮರ್ಥವಾಗಿ ಇದ್ದುದರಿಂದ ವರ್ತಕನು ಅದನ್ನು ಇಲ್ಲಿ ಬಿಟ್ಟು ಬಿಟ್ಟನು.

೩೩. ಅದು ಒಂದು ಬಾರಿ ಬೇಸಗೆಯಲ್ಲಿ ನೀರನ್ನು ಕುಡಿಯಲು ಆ ನದಿಗೆ ಹೋಯಿತು. ದೈವಯೋಗದಿಂದ ಅಲ್ಲಿದ್ದ ಕೆಸರಿನಲ್ಲಿ ಹೂತುಕೊಂಡು ಸತ್ತಿತು.

ಪ್ಲಾವಿತಾಸ್ಥಿರ್ಜಲೇ ಪುಣ್ಯೇ ತೀರ್ಥಸ್ಯಾಸ್ಯ ಪ್ರಭಾವತಃ ।
ಕಾನ್ಯಕುಬ್ಜೇಶ್ವರಸುತೋ ರಾಜಾ ಜಾತಿಸ್ಮರೋಽಭವತ್ ॥ ೩೪ ॥

ಸಂಸ್ಮೃತ್ಯ ಚ ಸ್ವವೃತ್ತಾಂತಂ ಪ್ರಭಾವಂ ತೀರ್ಥಜಂ ಸ ಹ ।
ಆಗತ್ಯ ತಜ್ಜಲೇ ಸ್ನಾತ್ವಾ ಪದೌ ದಾನಾನ್ಯನೇಕಶಃ ॥ ೩೫ ॥

ಸ ತತ್ರ ಸ್ಥಾಪಯಾಮಾಸ ದೇವದೇವಂ ಮಹೇಶ್ವರಂ ।
ಅತ್ರ ತೀರ್ಥೇ ನರಃ ಸ್ನಾತ್ವಾ ಸಂಪೂಜ್ಯ ಮಹಿಷೇಶ್ವರಂ ॥ ೩೬ ॥

ರಕ್ತಾದಿತ್ಯಮುಖಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಸರ್ವಾ ಸಾಭ್ರಮತೀ ಪುಣ್ಯಾ ರವಿಕ್ಷೇತ್ರೇ ವಿಶೇಷತಃ ॥ ೩೭ ॥

ಅಸ್ಯಾಸ್ಸಂಕೀರ್ತನಾದೇವ ಮಹಾಪಾಪಾತ್ಪ್ರಮುಚ್ಯತೇ ।
ಸಾಭ್ರಮತ್ಯುದಕಂ ಯತ್ರ ಪೂರ್ವತಃ ಪಶ್ಚಿಮಂ ವ್ರಜೇತ್ ।
ಪ್ರಯಾಗಾದಪಿ ತತ್ಪುಣ್ಯಂ ಸರ್ವಕಾಮಪ್ರದಂ ಮಹತ್ ॥ ೩೮ ॥

---

೩೪. ಆ ನದಿಯ ನೀರಿನಲ್ಲಿ ಅದರ ಮೂಳೆಯು ತೊಳೆಯಲ್ಪಟ್ಟಿತ್ತು. ಈ ತೀರ್ಥದ ನೀರಿನ ಪ್ರಭಾವದಿಂದ ಅದು ಕನ್ಯಕುಬ್ಜಪಟ್ಟಣದ ರಾಜನಾಗಿ ಹುಟ್ಟಿದ್ದ ಹಿಂದಿನ ಜನ್ಮವನ್ನು ಜ್ಞಾಪಿಸಿಕೊಳ್ಳುವ ಯೋಗ್ಯತೆಯನ್ನು ಪಡೆಯಿತು.

೩೫. ಆಗ ತನ್ನ ವೃತ್ತಾಂತವನ್ನು ಜ್ಞಾಪಿಸಿಕೊಂಡು ಆ ತೀರ್ಥದ ಮಹಿಮೆಯನ್ನು ತಿಳಿದುಕೊಂಡನು. ಆಮೇಲೆ ಅವನು ಆ ತೀರ್ಥಕ್ಕೆ ಬಂದು ಅಲ್ಲಿ ಸ್ನಾನ ಮಾಡಿ ಅನೇಕ ದಾನಗಳನ್ನು ಕೊಟ್ಟನು.

೩೬-೩೮. ಆಗ ಅಲ್ಲಿ ಒಂದು ದೇವದೇವನಾದ ಶಂಕರನ ಲಿಂಗವನ್ನು ಸ್ಥಾಪಿಸಿದನು. ಈ ತೀರ್ಥದಲ್ಲಿ ಸ್ನಾನಮಾಡಿ ಮಹಿಷೇಶ್ವರನನ್ನು ಪೂಜಿಸಿ ರಕ್ತಾದಿತ್ಯನ ದರ್ಶನವನ್ನು ಮಾಡಿದರೆ ಅವನ ಪಾಪವೆಲ್ಲವೂ ಖಂಡಿತವಾಗಿಯೂ ಹೋಗುತ್ತದೆ ಸಾಭ್ರಮತಿಯ ನೀರೆಲ್ಲವೂ ಪುಣ್ಯವಾದುದೇ. ಆದರೆ ಈ ರವಿಯ ಕ್ಷೇತ್ರದಲ್ಲಿ ಬಹು ಪುಣ್ಯವಾದುದು. ಇದನ್ನು ಬಾಯಲ್ಲಿ ಹೇಳುವುದರಿಂದಲೇ ಮಹಾಪಾಪವೆಲ್ಲವೂ ಹೋಗುತ್ತವೆ. ಸಾಭ್ರಮತಿ ನೀರು ಎಲ್ಲಿ ಪೂರ್ವದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಹರಿಯುತ್ತದೆಯೋ ಅಲ್ಲಿ ಸ್ನಾನ ಮಾಡಿದರೆ ಪ್ರಯಾಗಕ್ಕಿಂತಲೂ ಹೆಚ್ಚು ಪುಣ್ಯವನ್ನು ಕೊಡುತ್ತದೆ. ಅಲ್ಲದೆ ಸಕಲ ಇಷ್ಟಗಳನ್ನೂ ಕೊಡುತ್ತದೆ.

ದತ್ತಂ ದ್ವಿಜೇಂದ್ರೇಷು ಹುತಂ ಯುದಗ್ನೌ ।
ಶ್ರಾದ್ಧಂ ಕೃತಂ ಜಾಪ್ಯಮಿಹಾಕ್ಷಯಂ ಸ್ಯಾತ್ ।
ಗೋಭೂತಿಲಾಃ ಕಾಂಚನವಸ್ತ್ರಧಾನ್ಯಂ ।
ಶಯ್ಯಾಶನಂವಾಹಸಚ್ಛತ್ರದಾನಂ ॥ ೩೯ ॥

ಯಂ ಯಂ ವಾಂಛಯತೇ ಕಾಮಂ ತಂ ತಂ ಪ್ರಾಪ್ನೋತಿ ಮಾನವಃ ।
ಶ್ರೀ ಮಹೇಶ ಪ್ರಸಾದಾಚ್ಚ ತೀರ್ಥಸ್ಯಾಸ್ಯ ಪ್ರಭಾವತಃ ॥ ೪೦ ॥

ಬಾಲಾಪೇಂದ್ರಮಿದಂ ತೀರ್ಥಂ ಪುಣ್ಯಂ ಪಾಪಹರಂ ಸದಾ ।
ಯದ್ದೃಷ್ಟ್ವಾ ಮುನಯಸ್ಸರ್ವೇ ವೀತರಾಗಾಸ್ಸದೈವ ತು ॥ ೪೧ ॥

ಯತ್ರ ಮಹಿಷನಾಮಾ ವೈ ಈಶ್ವರಃ ಕ್ಲೇಶನಾಶನಃ ।
ಯಂ ದೃಷ್ಟ್ವಾ ಮುಚ್ಯತೇ ಪಾಪೀ ಸತ್ಯಂ ಸತ್ಯಂ ಸುರೇಶ್ವರಿ ॥ ೪೨ ॥

---

೩೯. ಗೋವು, ಭೂಮಿ, ಎಳ್ಳು, ಚಿನ್ನ, ವಸ್ತ್ರ, ಧಾನ್ಯ, ಶಯ್ಯೆ, ಅನ್ನ ಹಾಕುವುದು, ಛತ್ರ ಇವನ್ನು ಇಲ್ಲಿ ಬ್ರಾಹ್ಮಣರಿಗೆ ಕೊಟ್ಟರೆ ಅದೂ ಇಲ್ಲಿ ಮಾಡಿದ ಶ್ರಾದ್ಧಗಳೂ, ಜಪಗಳೂ ಅನಂತವಾಗುತ್ತವೆ. ಇದರಲ್ಲಿ ಸಂದೇಹವೇ ಇಲ್ಲ.

೪೦. ಯಾವ ಯಾವ ಇಚ್ಛೆಯಿಂದ ಇಲ್ಲಿ ತಪಸ್ಸು ಮಾಡುತ್ತಾನೆಯೋ ಅವೆಲ್ಲವನ್ನೂ ಮಹೇಶ್ವರನ ಅನುಗ್ರಹದಿಂದಲೂ ಈ ತೀರ್ಥದ ಮಹಿಮೆಯಿಂದಲೂ ಹೊಂದುತ್ತಾನೆ.

೪೧. ಈ ಬಾಲಾಪವೆಂಬ ತೀರ್ಥವು ಪುಣ್ಯಕರವಾದುದು. ಪಾಪನಾಶಕವಾದುದು. ಇದನ್ನು ನೋಡಿದ ಒಡನೆಯೇ ಮುನಿಗಳೂ ಕೂಡ ಮಿಕ್ಕುವರಲ್ಲಿ ಆಸೆಯನ್ನು ಬಿಟ್ಟು ಇಲ್ಲಿಯೇ ಇರುತ್ತಾರೆ.

೪೨. ಇಲ್ಲಿ ಮಹೀಷೇಶ್ವರನೆಂಬ ಈಶ್ವರನು ಇರುತ್ತಾನೆ. ಅವನು ಕಷ್ಟಗಳನ್ನೆಲ್ಲಾ ಪರಿಹರಿಸುತ್ತಾನೆ. ಈ ಸ್ವಾಮಿಯ ದರ್ಶನವನ್ನು ಮಾಡಿದರೆ ಪಾಪಿಯೂ ಪಾಪಗಳನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಇದು ಖಂಡಿತವಾಗಿಯೂ ಸತ್ಯವು.

**ತೀರ್ಥಾನಾಂ ಪ್ರವರಂ ತೀರ್ಥಂ ಶ್ವೇತಾಖ್ಯಂ ಪುಣ್ಯದಂ ಮಹತ್ ।**
**ಯತ್ರ ಸ್ನಾತ್ವಾ ತು ದೇವೇಶಿ ಪುನರ್ಜನ್ಮ ನ ವಿದ್ಯತೇ ॥ ೪೩ ॥**

**ಗೋದಾವರ್ಯಾಂ ಕೃತೇ ಸ್ನಾನೇ ಯತ್ಫಲಂ ಲಭತೇ ನರಃ ।**
**ತತ್ಫಲಂ ಲಭತೇ ದೇವಿ ಅತ್ರ ತೀರ್ಥೇ ನ ಸಂಶಯಃ ॥ ೪೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಬಾಲಪೇಂದ್ರತೀರ್ಥ ವರ್ಣನಂ ನಾಮ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೪೩. ತೀರ್ಥಗಳೊಳಗೆಲ್ಲಾ ಶ್ವೇತ ತೀರ್ಥವೆಂಬುದು ಉತ್ತಮವಾದುದು. ಅಲ್ಲಿ ಸ್ನಾನಮಾಡಿದರೆ ಮತ್ತೆ ಜನ್ಮವನ್ನು ಹೊಂದುವುದಿಲ್ಲ.

೪೪. ಗೋದಾವರಿಯಲ್ಲಿ ಸ್ನಾನವನ್ನು ಮಾಡಿದರೆ ಯಾವ ಫಲವನ್ನು ಮನುಷ್ಯನು ಹೊಂದುತ್ತಾನೆಯೋ ಆ ಫಲವನ್ನು ಇಲ್ಲಿ ಸ್ನಾನಮಾಡುವುದರಿಂದಲೇ ಮನುಷ್ಯನು ಹೊಂದುತ್ತಾನೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮೆಯಲ್ಲಿ ಬಾಲಾಪತೀರ್ಥ ವರ್ಣನೆ ಎಂಬ ನೂರ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಅನ್ಯತ್ತೀರ್ಥಂ ಪ್ರವಕ್ಷ್ಯಾಮಿ ದುರ್ಧರ್ಷೇಶ್ವರಮುತ್ತಮಂ ।**
**ಯಸ್ಯ ಸ್ಮರಣಮಾತ್ರೇಣ ಪಾಪೋಽಪಿ ಪುಣ್ಯವಾನ್ಭವೇತ್ ॥ ೧ ॥**

**ವೃತ್ತೇ ದೇವಾಸುರೇ ಯುದ್ಧೇ ದೈತ್ಯೇ ಚ ನಿಧನಂ ಗತೇ ।**
**ದುರ್ಧರ್ಷಂ ಚ ವ್ರತಂ ಕೃತ್ವಾ ಯತ್ರ ಭಾರ್ಗವನಂದನಃ ॥ ೨ ॥**

**ಸಮಾರಾಧ್ಯ ಮಹಾದೇವಂ ದುರ್ಧರ್ಷಂ ಲೋಕಕಾರಣಂ ।**
**ಮೃತಸಂಜೀವಿನೀಮಾಪ ಯತ್ರ ವಿದ್ಯಾಂ ಹಿ ತ್ರ್ಯಂಬಕಾತ್ । ॥ ೩ ॥**

---

### ನೂರ ನಲವತ್ತಾರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ದುರ್ಧರ್ಷೇಶ್ವರವೆಂಬ ಮತ್ತೊಂದು ತೀರ್ಥವನ್ನು ಹೇಳುತ್ತೇನೆ. ಅದು ಉತ್ತಮವಾದುದು ಅದರ ಸ್ಮರಣೆಯಿಂದಲೇ ಪಾಪಿಯೂ ಕೂಡ ಪುಣ್ಯವನ್ನು ಹೊಂದುತ್ತಾನೆ.

೨-೩. ದೇವತೆಗಳಿಗೂ ಅಸುರರಿಗೂ ಯುದ್ಧವು ನಡೆದಮೇಲೆ ಅಸುರರೆಲ್ಲರೂ ಸತ್ತುಹೋಗಲು ಶುಕ್ರಾಚಾರ್ಯನು ಈ ಜಾಗದಲ್ಲಿ ಉಗ್ರವಾದ ತಪಸ್ಸನ್ನಾಚರಿಸಿ ಮುಕ್ಕಣ್ಣನಾದ ಈಶ್ವರನಿಂದ ಇಲ್ಲಿ ಮೃತಸಂಜೀವಿನಿಯೆಂಬ ವಿದ್ಯೆಯನ್ನು ಹೊಂದಿದನು.

ದೈತ್ಯಾರ್ಥಮುಶನಾ ತೀರ್ಥಂ ವಿಖ್ಯಾತಂ ಜಗತೀತಲೇ ।
ಕಾವ್ಯತೀರ್ಥೇ ಕೃತಸ್ನಾನಃ ಪೂಜ್ಯ ದೇವಂ ಮಹೇಶ್ವರಂ ॥ ೪ ॥

ದುರ್ಧರ್ಷೇಶ್ವರಸಂಜ್ಞಂ ವೈ ಸರ್ವಪಾಪೈಃ ಪ್ರಮುಚ್ಯತೇ ।
ಅತ್ರ ವೃತ್ತಂ ತು ಶ್ರೋತವ್ಯಂ ತ್ವಯಾ ಚ ನಗನಂದಿನಿ ॥ ೫ ॥

ಪುರಾ ಯದಾಭವದ್ಯುದ್ಧಂ ವೃತ್ರವಾಸವಯೋರಿಹ ।
ಕದಾಸುರೈರ್ಜಿತಾ ದೇವಾ ಮಘವಾನ್ಸ್ವೈ ಸುರೇಶ್ವರಃ ।
ಕಿಂ ಕರ್ತವ್ಯಮಿತಿ ಧ್ಯಾತ್ವಾ ಗತೋ ಸೌ ತಂ ಗುರುಂ ಪ್ರತಿ ॥ ೬ ॥

॥ ಇಂದ್ರ ಉವಾಚ ॥

ಅಸ್ಮಾಕಂ ತ್ವಂ ಗುರುಸ್ಸಾಕ್ಷಾದ್ದೇವಾನಾಂ ಪಾಲಕಸ್ಸದಾ ।
ಋಷೀಣಾಂ ಪ್ರವರಶ್ಶ್ರೀಮನ್ ಕೃಪಾಂ ಕುರು ದಯಾನಿಧೇ ।
ವೃತ್ರೇಣ ನಿರ್ಜಿತೋಽಹಂ ಚ ಕ್ವ ಗಚ್ಛಾಮಿ ಚ ಸುವ್ರತ ॥ ೭ ॥

---

೪-೬. ಈ ರೀತಿಯಾಗಿ ಈ ಉಶನಾ ತೀರ್ಥವು ದೈತ್ಯರಿಗೋಸ್ಕರ ಲೋಕದಲ್ಲಿ ಪ್ರಸಿದ್ಧವಾಗಿದೆ. ಈ ಕಾವ್ಯ ತೀರ್ಥದಲ್ಲಿ ಸ್ನಾನಮಾಡಿ ದುರ್ಧರ್ಷೇಶ್ವರನ ಪೂಜೆಮಾಡಿದರೆ ಎಲ್ಲಾ ಪಾಪಗಳೂ ಹೋಗುತ್ತವೆ. ಎಲೈ ಪಾರ್ವತಿಯೆ! ಇಲ್ಲಿ ನಡೆದ ವಿಷಯವನ್ನು ನೀನು ಕೇಳಬೇಕು. ಹಿಂದೆ ವೃತ್ರಾಸುರನಿಗೂ ಇಂದ್ರನಿಗೂ ಯುದ್ಧವು ನಡೆದಾಗ ಅಸುರರು ದೇವತೆಗಳೆಲ್ಲರನ್ನೂ ಸೋಲಿಸಿದರು ಆಗ ದೇವತೆಗಳಿಗೆ ಒಡೆಯನಾದ ಇಂದ್ರನು ಏನು ಮಾಡಬೇಕೆಂದು ಯೋಚಿಸುತ್ತಾ ಗುರುವಾದ ಬೃಹಸ್ಪತಿಯ ಬಳಿಗೆ ಹೋದನು.

೭. ಇಂದ್ರನು ಹೇಳಿದನು– ಎಲೈ ಬೃಹಸ್ಪತಿಯೇ! ನೀನು ನಮಗೆಲ್ಲಾ ಗುರುವು. ದೇವತೆಗಳನ್ನು ಯಾವಾಗಲೂ ರಕ್ಷಿಸತಕ್ಕವನು. ಋಷಿಗಳಲ್ಲಿ ಉತ್ತಮವಾದ ಋಷಿಯು. ನಮ್ಮ ಮೇಲೆ ದಯೆಯನ್ನಿಡು. ವೃತ್ರಾಸುರನು ನನ್ನನ್ನು ಸೋಲಿಸಿರುವನು. ಈಗ ನಾನೇನು ಮಾಡಲಿ ? ಎಲ್ಲಿಗೆ ಹೋಗಲಿ ?

॥ ಬೃಹಸ್ಪತಿರುವಾಚ ॥

ಶೃಣು ದೇವೇಂದ್ರ ವಕ್ಷ್ಯಾಮಿ ಯೇನ ತ್ವಂ ಹಿ ಸದಾ ಸುಖೀ ।
ಮಮ ವಾಕ್ಯಂ ಕುರುಷ್ವೇಹ ಯದೀಚ್ಛೇಃಶ್ಯುಭಮಾತ್ಮನಃ ॥ ೮ ॥

ಸಾಭ್ರಮತ್ಯಾಂ ತದಾ ಗಚ್ಛ ತತ್ರ ಗತ್ವಾ ಸುಖೀ ಭವ ।
ದುರ್ಧರ್ಷಾಖ್ಯೋ ಯತ್ರ ದೇವೋ ನಿತ್ಯಂ ತಿಷ್ಠತಿ ಭೂತಿದಃ ।
ದದಾತಿ ವಾಂಛಿತಾನ್ಕಾಮಾನ್ಸತ್ಯಂ ಸತ್ಯಂ ಸುರೇಶ್ವರ ॥ ೯ ॥

॥ ಮಹಾದೇವ ಉವಾಚ ॥

ಗುರೋರ್ವಚನಮಾಕರ್ಣ್ಯ ಸ ಗತಸ್ತಾಂ ನದೀಂ ಪ್ರತಿ ।
ತತ್ರ ಸ್ನಾತ್ವಾ ತು ದೇವೇಶೋ ಮಹೇಶಂ ತಮಪೂಜಯತ್ ।
ಸ್ನಾನಾಚ್ಚ ಪೂಜನಾದೇವ ಸಂತುಷ್ಟಃ ಶ್ರೀಮಹೇಶ್ವರಃ ॥ ೧೦ ॥

॥ ಮಹೇಶ್ವರ ಉವಾಚ ॥

ಯಂ ಯಂ ಪ್ರಾರ್ಥಯಸೇ ನಿತ್ಯಂ ತತ್ಸರ್ವಂ ಹಿ ದದಾಮ್ಯಹಂ ॥ ೧೧ ॥

---

೮. ಬೃಹಸ್ಪತಿಯು ಹೇಳಿದನು- ಎಲೈ ದೇವೇಂದ್ರನೇ! ನೀನು ಯಾವಾಗಲೂ ಸುಖವಾಗಿರುವಂತೆ ಒಂದು ಮಾತನ್ನು ಹೇಳುತ್ತೇನೆ. ಕೇಳು ನಿನಗೆ ಒಳ್ಳೆಯದಾಗಬೇಕಾದರೆ ನನ್ನ ಈ ಮಾತಿನಂತೆ ನಡೆಸು.

೯. ಎಲೈ ಸುರೇಶ್ವರನೇ ! ಸಾಭ್ರಮತೀ ನದಿಯ ಬಳಿಗೆ ಹೋಗು. ಅಲ್ಲಿಗೆ ಹೋದರೆ ನಿನಗೆ ಸೌಖ್ಯವು ಸಿಕ್ಕುತ್ತದೆ. ಅಲ್ಲಿ ಯಾವಾಗಲೂ ದುರ್ಧರ್ಷನೆಂಬ ಸ್ವಾಮಿಯಿರುವನು. ಆತನು ನಿನಗೆ ಬೇಕಾದುದೆಲ್ಲವನ್ನೂ ಕೊಡುವನು. ಇದು ನಿಶ್ಚಯವು.

೧೦. ಮಹಾದೇವನು ಹೇಳಿದನು–ದೇವತೆಗಳಿಗೆ ಒಡೆಯನಾದ ಇಂದ್ರನು ಗುರುವಿನ ಮಾತನ್ನು ಕೇಳಿ ಆ ಸಾಭ್ರಮತಿಗೆ ಹೋದನು. ಅಲ್ಲಿ ಸ್ನಾನಮಾಡಿ ದುರ್ಧರ್ಷನೆಂಬ ಈಶ್ವರನನ್ನು ಪೂಜಿಸಿದನು ಈ ಸ್ನಾನದಿಂದಲೂ, ಜಪದಿಂದಲೂ, ಪೂಜೆಯಿಂದಲೂ ಕೂಡ ಅವನಿಗೆ ಸಂತೋಷವಾಯಿತು.

೧೧. ಮಹೇಶ್ವರನು ಹೇಳಿದನು-ಎಲೈ ದೇವೇಂದ್ರನೇ! ನೀನು ಏನೇನನ್ನು ಕೇಳುತ್ತೀಯೋ ಅವೆಲ್ಲವನ್ನೂ ಯಾವಾಗಲೂ ಕೊಡುತ್ತೇನೆ.

|| ಮಹಾದೇವ ಉವಾಚ ||

ಶ್ರುತ್ವಾ ವಾಕ್ಯಂ ತು ದೇವೇಶೋ ಹ್ಯುವಾಚ ಪರಮಂ ವಚಂ || ೧೨ ||

|| ಇಂದ್ರ ಉವಾಚ ||

ತ್ವಂ ನಾಥಸ್ಸರ್ವಲೋಕಾನಾಂ ತ್ವಮೇವ ಕಾರಣಂ ಪರಂ |
ತ್ವಂ ಹಿ ವಿಶ್ವೇಶ್ವರೋ ದೇವಃ ಸರ್ವದಾ ಲಕ್ಷ್ಯಸೇ ಮಯಾ || ೧೩ ||

ಯದಿ ತ್ವಂ ಮೇ ಪ್ರಸನ್ನೋಽಸಿ ವಿಶ್ವೇಶ್ವರ ಸುರೇಶ್ವರ |
ವೃತ್ರಂ ಹನ ಮಹಾದೇವ ಏಷ ಕಾಮೋ ಮಹಾನ್ಮಮ || ೧೪ ||

|| ಮಹೇಶ್ವರ ಉವಾಚ ||

ತವ ವಾಕ್ಯಾತ್ತು ದೇವೇಶ ವೃತ್ರೋಽಸೌ ನಿಹತೋ ಮಯಾ |
ಮಯಾ ಯದ್ದೀಯತೇ ಶಸ್ತ್ರಂ ತದ್ಗೃಹ್ಣೀಷ್ವ ಸುರೇಶ್ವರ ||
ತೇನೈವ ಚಾಸ್ತ್ರಯೋಗೇಣ ಹನ್ಯಸೇ ತ್ವಂ ನ ಸಂಶಯಃ || ೧೫ ||

---

೧೨. ಮಹಾದೇವನು ಹೇಳಿದನು–ಇಂದ್ರನು ಮಹೇಶ್ವರನು ಹೀಗೆ ಹೇಳಿದುದನ್ನು ಕೇಳಿ ಇಂತೆಂದನು.

೧೩. ಇಂದ್ರನು ಹೇಳಿದನು-ಎಲೈ ದೇವದೇವನೇ ! ನೀನೇ ಎಲ್ಲಾ ಲೋಕಕ್ಕೂ ಒಡೆಯನು. ನೀನೇ ಎಲ್ಲಾದಕ್ಕೂ ಕಾರಣನು. ನೀನೇ ಪ್ರಪಂಚಕ್ಕೆಲ್ಲಾ ದೇವರೆಂದು ನನಗೆ ಕಾಣುತ್ತಿದ್ದೀಯೆ.

೧೪. ಎಲೈ ವಿಶ್ವೇಶ್ವರನಾದ ಸ್ವಾಮಿಯೇ! ನೀನು ನನಗೆ ಪ್ರಸನ್ನನಾಗಿದ್ದರೆ ಈ ವೃತ್ರಾಸುರನನ್ನು ಕೊಂದುಹಾಕು. ಇದೇ ನನಗೆ ಆಗಬೇಕಾದ ಕೆಲಸವು.

೧೫. ಮಹೇಶ್ವರನು ಹೇಳಿದನು-ಎಲೈ ಇಂದ್ರನೇ ! ನಿನ್ನ ಮಾತಿನಂತೆ ವೃತ್ರನನ್ನು ನಾನು ಕೊಂದೆನೆಂದು ತಿಳಿ. ನಾನು ಕೊಡುವ ಶಸ್ತ್ರವನ್ನು ತೆಗೆದುಕೋ. ಆ ಅಸ್ತ್ರದ ಸಂಬಂಧದಿಂದ ನೀನು ಆತನನ್ನು ಕೊಲ್ಲುತ್ತೀಯೆ. ಸಂಶಯವಿಲ್ಲ.

॥ ಇಂದ್ರ ಉವಾಚ ॥

ಕಿಮಸ್ತ್ರಂ ವದ ವಿಶ್ವೇಶ ಯೇನ ವೃತ್ರಂ ನಿಹನ್ಮ್ಯಹಂ |
ವಜ್ರಾದಪ್ಯಧಿಕಂ ಕಿಂ ತನ್ನಿರ್ಮಿತಂ ತು ತ್ವಯಾ ಕದಾ ॥ ೧೬ ॥

॥ ಮಹೇಶ್ವರ ಉವಾಚ ॥

ಇದಂ ಪಾಶುಪತಂ ಹ್ಯಸ್ತ್ರಂ ನಿರ್ಮಿತಂ ತು ಮಯಾ ಪುರಾ |
ನ ದತ್ತಂ ಕಸ್ಯ ಚಿಚ್ಛಸ್ತ್ರಂ ತವಾರ್ಥೇ ರಕ್ಷಿತಂ ಮಯಾ ॥ ೧೭ ॥

ಅತ್ರ ಸ್ನಾನಂ ತ್ವಯಾ ದೇವ ಪೂಜನಂ ವೈ ತಥಾ ಕೃತಂ |
ಅತೋ ಗೃಹ್ಣೀಷ್ವ ಮೇ ಶಸ್ತ್ರಂ ಯೇನ ವೃತ್ರಂ ಹನಿಷ್ಯಸಿ ॥ ೧೮ ॥

॥ ಮಹಾದೇವ ಉವಾಚ ॥

ಶ್ರೀಮಹೇಶಪ್ರಸಾದಾಚ್ಚ ಪ್ರಾಪ್ತಂ ಮಘವತಾ ತತಃ |
ತೇನ ಪಾಶುಪತಾಸ್ತ್ರೇಣ ಹತೋ ವೃತ್ರೋ ಮಹಾಬಲಃ ॥ ೧೯ ॥

---

೧೬. ಇಂದ್ರನು ಹೇಳಿದನು-ಎಲೈ ವಿಶ್ವೇಶ್ವರನೇ ! ನಾನು ಆ ವೃತ್ರನನ್ನು ಕೊಲ್ಲುವ ಅಸ್ತ್ರವು ಯಾವುದು ? ಅದನ್ನು ಹೇಳು. ವಜ್ರಾಯುಧಕ್ಕಿಂತ ಉತ್ತಮವಾದ ಯಾವ ಅಸ್ತ್ರವನ್ನು ನೀನು ಯಾವಾಗ ಸೃಷ್ಟಿಮಾಡಿದ್ದೀಯೆ ? ಅದನ್ನು ನನಗೆ ತಿಳಿಸು.

೧೭. ಮಹೇಶ್ವರನು ಹೇಳಿದನು-ಇಗೋ ಇದು ಪಾಶುಪತ ಅಸ್ತ್ರವು. ನಿನಗೋಸ್ಕರವೇ ಇದನ್ನು ನಾನು ಸೃಷ್ಟಿಮಾಡಿದ್ದೇನೆ. ಯಾರಿಗೂ ಕೊಡಲಿಲ್ಲ. ನಿನಗೋಸ್ಕರಲೇ ಕಾಪಾಡಿ ಇಟ್ಟುಕೊಂಡಿರುತ್ತೇನೆ.

೧೮. ಎಲೈ ಇಂದ್ರನೇ ! ಇಲ್ಲಿ ನೀನು ಸ್ನಾನಮಾಡಿ ನನ್ನನ್ನು ಪೂಜಿಸಿದ್ದೀಯೆ. ಆದ್ದರಿಂದ ಈ ಅಸ್ತ್ರವನ್ನು ತೆಗೆದುಕೋ. ಇದರಿಂದ ವೃತ್ರನನ್ನು ಕೊಲ್ಲುವೆ.

೧೯. ಮಹಾದೇವನು ಹೇಳಿದನು-ಅನಂತರ ಮಹಾದೇವನ ಅನುಗ್ರಹದಿಂದ ಆ ಪಾಶುಪತಾಸ್ತ್ರವನ್ನು ಇಂದ್ರನು ಹೊಂದಿದನು. ಆ ಅಸ್ತ್ರದಿಂದಲೈ ಮಹಾಬಲಿಷ್ಠನಾದ ವೃತ್ರಾಸುರನನ್ನು ಸುಲಭವಾಗಿ ಕೊಂದನು.

ತತ್ಸರ್ವಮತ್ರ ಸಂಜಾತಂ ದುರ್ಧರ್ಷೇಶಪ್ರಸಾದತಃ ।
ಸ್ನಾನಮಾತ್ರಾತ್ತು ದೇವೇಶಿ ಪೂಜನಾದೇವ ಸಾಂಪ್ರತಂ ॥ ೨೦ ॥

ತೀರ್ಥಪ್ರಭಾವಾತ್ಸಂಪ್ರಾಪ್ತಂ ಸತ್ಯಂ ಸತ್ಯಂ ವರಾನನೇ ।
ಏವಂ ಜ್ಞಾತ್ವಾ ತು ದೇವೇಶಿ ತತ್ರ ವೈ ಸ್ನಾನಮಾಚರೇತ್ ॥
ದರ್ಶನಂ ತು ಮಹೇಶಸ್ಯ ಸರ್ವಪಾಪಪ್ರಣಾಶನಂ ॥ ೨೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ದುರ್ಧರ್ಷೇಶ್ವರ ಮಾಹಾತ್ಮ್ಯಂ ನಾಮ ಷಟ್‌ಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೦. ಇಲ್ಲಿ ಸ್ನಾನಮಾಡಿ ಆ ದುರ್ಧರ್ಷೇಶ್ವರನನ್ನು ಪೂಜೆಮಾಡಿದುದರಿಂದ ಆ ಸ್ವಾಮಿಯ ಅನುಗ್ರಹದಿಂದ ಇವೆಲ್ಲವೂ ಉಂಟಾದುವು.

೨೧. ಈ ತೀರ್ಥದ ಪ್ರಭಾವದಿಂದ ಎಲ್ಲವೂ ಕೂಡ ಇಲ್ಲಿ ಸಿಕ್ಕುವುವು. ಇದನ್ನು ತಿಳಿದು ಇಲ್ಲಿ ಸ್ನಾನಮಾಡಬೇಕು. ಈ ಮಹೇಶನ ದರ್ಶನವು ಪಾಪಗಳೆಲ್ಲವನ್ನೂ ನಾಶಮಾಡುತ್ತದೆ-

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ದುರ್ಧರ್ಷೇಶ್ವರನ ಮಹಿಮೆ ಎಂಬ ನೂರ ನಲವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ ||



|| ಮಹಾದೇವ ಉವಾಚ ||

ಸಾಭ್ರಮತ್ಯಾಸ್ತಟೇ ಗುಪ್ತಂ ತೀರ್ಥಂ ಪರಮಪಾವನಂ ।
ಖಡ್ಗಧಾರಮಿತಿ ಖ್ಯಾತಂ ಕಲೌ ಗುಪ್ತಂ ಭವಿಷ್ಯತಿ || ೧ ||

ಯತ್ರ ಪ್ರಸಂಗತಸ್ಸ್ನಾತ್ವಾ ಪೀತ್ವಾ ವಾಪ್ಯೋ ಯದೃಚ್ಛಯಾ ।
ಸರ್ವಪಾಪವಿನಿರ್ಮುಕ್ತೋ ರುದ್ರಲೋಕೇ ಮಹೀಯತೇ || ೨ ||

ಯತ್ರ ಸಾಭ್ರಮತೀ ಪುಣ್ಯಾ ಕಶ್ಯಪಾನುಗತಾ ಸತೀ ।
ರುದ್ರೇಣ ಹಿ ಜಟಾಜೂಟೇ ಧೃತಾ ಪಾತಾಳಗಾಮಿನೀ || ೩ ||

---

## ನೂರ ನಲವತ್ತೇಳನೆಯ ಅಧ್ಯಾಯವು



೧ ಮಹಾದೇವನು ಹೇಳಿದನು-ಈ ಸಾಭ್ರಮತಿಯ ದಡದಲ್ಲಿ ಪರಮ ಪಾವನವಾದ ಖಡ್ಗಧಾರೆಯೆಂಬ ತೀರ್ಥವು ಇರುವುದು. ಕಲಿಯುಗದಲ್ಲಿ ಅದು ಅಲ್ಲಿ ಮರೆಯಾಗಿದೆ.

೨. ಅಕಸ್ಮಾತ್ತಾಗಿ ಅಲ್ಲಿಗೆ ಹೋಗಿ ಸ್ನಾನಮಾಡಿದರೂ ನೀರನ್ನು ಕುಡಿದರೂ ಪಾಪಗಳೆಲ್ಲವೂ ಹೋಗಿ ರುದ್ರಲೋಕದಲ್ಲಿ ಸುಖಿಸುತ್ತಾನೆ.

೩. ಸಾಭ್ರಮತೀ ನದಿಯು ಕಶ್ಯಪನ ಹಿಂದೆ ಹೋಗುತ್ತಿದ್ದು ಪಾತಾಳಕ್ಕೆ ಹೋಗಲು ದ್ಯುಕ್ತಳಾದಾಗ ರುದ್ರನು ತನ್ನ ಜಟೆಯಲ್ಲಿ ಆಕೆಯನ್ನು ಧರಿಸಿದನು.

ಖಡ್ಗಧಾರೇತಿ ವೈ ನಾಮ್ನಾ ರುದ್ರಸ್ತತ್ರೈವ ಸಂಸ್ಥಿತಃ ।
ಯತ್ರ ಸ್ನಾತಾ ದಿವಂ ಯಾತಾಃ ಪಾಪಿನೋಽಪಿ ಸುರೇಶ್ವರಿ ॥ ೪ ॥

ಅತ್ರೈವೋದಾಹರನ್ತೀಮಮಿತಿಹಾಸಂ ಪುರಾತನಂ ।
ಕಿರಾತೇನ ಕೃತಂ ಯಚ್ಚ ವ್ರತಂ ಪರಮದುಷ್ಕರಂ ॥ ೫ ॥

॥ ಶ್ರೀ ಪಾರ್ವತ್ಯುವಾಚ ॥

ಕಿಂ ನಾಮಾ ವೈ ಕಿರಾತೋಽಭೂತ್ಕಿಂ ತೇನ ವ್ರತಮಾಹಿತಂ ।
ತತ್ಸರ್ವಂ ಶ್ರೋತುಮಿಚ್ಛಾಮಿ ಯಾಥಾತಥ್ಯೇನ ಕಥ್ಯತಾಂ ॥ ೬ ॥

ನ ಹ್ಯನ್ಯೋ ವಿದ್ಯತೇ ಲೋಕೇ ತ್ವಾಂ ವಿನಾ ವದತಾಂ ವರಃ ।
ತಸ್ಮಾತ್ಕಥಯ ಭೋ ದೇವ ಸರ್ವಂ ಶುಶ್ರೂಷವೇ ಹಿತಂ ॥ ೭ ॥

॥ ಶ್ರೀ ಮಹಾದೇವ ಉವಾಚ ॥

ಆಸೀತ್ಪುರಾ ಮಹಾರೌದ್ರಶ್ಚಂಡೋ ನಾಮ ದುರಾತ್ಮವಾನ್ ।
ಕ್ರೂರಃ ಶಠೋ ನೈಕೃತಿಕೋ ಭೂತಾನಾಂ ಚ ಭಯಾವಹಃ ॥ ೮ ॥

---

೪. ಖಡ್ಗಧಾರನೆಂಬ ರುದ್ರನೂ ಕೂಡ ಅಲ್ಲಿಯೇ ಇರುವನು. ಅಲ್ಲಿ ಸ್ನಾನಮಾಡಿದ ಪಾಪಿಗಳೂ ಕೂಡ ಸ್ವರ್ಗವನ್ನು ಹೊಂದುತ್ತಾರೆ. ಹೊಂದಿದ್ದಾರೆ.

೫ ಈ ವಿಷಯದಲ್ಲಿ ಇಲ್ಲಿ ನಡೆದ ಒಂದು ಇತಿಹಾಸವನ್ನು ಹೇಳುತ್ತೇನೆ. ಕೇಳು. ಇಲ್ಲಿ ಒಬ್ಬ ಕಿರಾತನು ಪೂರ್ವದಲ್ಲಿ ಉಗ್ರವಾದ ತಪಸ್ಸು ಮಾಡುತ್ತಿದ್ದನು.

೬ ಶ್ರೀ ಪಾರ್ವತಿಯು ಹೇಳಿದಳು–ಆ ಕಿರಾತನ ಹೆಸರೇನು ? ಅವನು ಮಾಡುತ್ತಿದ್ದ ವ್ರತವಾವುದು ? ಅವೆಲ್ಲವನ್ನೂ ಕೇಳಲು ಇಚ್ಛಿಸುತ್ತೇನೆ. ಕ್ರಮವಾಗಿ ಹೇಳು.

೭. ಎಲೈ ದೇವನೇ ! ನಿನ್ನನ್ನು ಬಿಟ್ಟರೆ ಇವೆಲ್ಲವನ್ನೂ ಹೇಳುವವನು ಮತ್ತೊಬ್ಬನಿರುವುದಿಲ್ಲ. ಅವೆಲ್ಲವನ್ನೂ ಕೇಳಲು ನನಗೆ ಆಸೆಯಾಗುತ್ತಿದೆ. ಅವೆಲ್ಲವನ್ನೂ ಹೇಳು.

೮. ಶ್ರೀ ಮಹಾದೇವನು ಹೇಳಿದನು–ಪೂರ್ವಕಾಲದಲ್ಲಿ ಚಂಡನೆಂಬ ಒಬ್ಬ ಬೇಡರವನಿದ್ದನು. ಅವನು ಭಯಂಕರನೂ, ದುಷ್ಟನೂ, ಕ್ರೂರನೂ, ವಂಚಕನೂ, ತಿರಸ್ಕಾರಮಾಡುವವನೂ, ಆಗಿ ಎಲ್ಲಾ ರೀತಿಯಲ್ಲಿಯೂ ಪ್ರಾಣಿಗಳಿಗೆ ಭಯಂಕರನಾಗಿ ಇದ್ದನು.

ಜಾಲೇನ ಮತ್ಸ್ಯಾನ್ ದುಷ್ಟಾತ್ಮಾ ಘಾತಯತ್ಯನಿಶಂ ತತಃ |
ಭಲ್ಲೈರ್ಮೃಗಾನ್ ಶ್ವಾಪದಾಂಶ್ಚ ಕೃಷ್ಣಸಾರಾನ್ ಸಶಲ್ಲಕಾನ್ || ೯ ||

ಖಗಾನ್ ನಾನಾವಿಧಾಂಶ್ಚೈವ ಬದ್ಧ್ವಾ ಕಾಂಶ್ಚಿತ್ಪ್ರತಾಪಯೇತ್ |
ಪಕ್ಷಿಣೋ ಘಾತಯನ್ ಕ್ರುದ್ಧೋ ಬರ್ಹಿಣಶ್ಚ ವಿಶೇಷತಃ || ೧೦ ||

ಲುಬ್ಧಕೋ ಹಿ ಮಹಾಪಾಪೋ ದುಷ್ಟೋ ದುಷ್ಟಜನಪ್ರಿಯಃ |
ಭಾರ್ಯಾ ತಥಾ ವಿಧಾ ತಸ್ಯ ಪುಂಶ್ಚಲೀ ಚ ಮಹಾಭಯಾ || ೧೧ ||

ಏವಂ ವಿಹರತಸ್ತಸ್ಯ ಬಹುಕಾಲೋ ವ್ಯವರ್ತತ |
ಏಕದಾ ನಿಶಿ ಪಾಪೀಯಾನ್ ಶ್ರೀವೃಕ್ಷೋಪರಿ ಸಂಸ್ಥಿತಃ || ೧೨ ||

ಕೋಲಂ ಹಂತುಂ ಧನುಷ್ಪಾಣಿಃ ಶರಂ ಸಂಯೋಜ್ಯ ಕಾರ್ಮುಕೇ |
ಏವಂ ನಿಶಾ ಗತಾ ತಸ್ಯ ಜಾಗ್ರತೋಽನಿಮಿಷಸ್ಯ ಹಿ |
ಮಾಘಮಾಸೇಽಸಿತಾಯಾಂ ವೈ ಚತುರ್ದಶ್ಯಾಂ ನಗಾತ್ಮಜೇ || ೧೩ ||

---

೯. ಆ ದುಷ್ಟನು ಬಲೆಗಳಿಂದ ಮೀನುಗಳನ್ನೂ ಭಲ್ಲೆಯಿಂದ ಜಿಂಕೆಗಳನ್ನೂ ಮೃಗಗಳನ್ನೂ ಕ್ರೂರಜಂತುಗಳನ್ನೂ ನಿತ್ಯವೂ ಕೊಲ್ಲುತ್ತಿದ್ದನು.

೧೦. ಬಗೆ ಬಗೆಯಾದ ಅಂತರಿಕ್ಷದಲ್ಲಿ ಹಾರಾಡುವ ಹಕ್ಕಿಗಳನ್ನೂ ಹಿಡಿಯುತ್ತಿದ್ದನು. ಅಲ್ಲದೆ ರೆಕ್ಕೆಗಳು ಹೆಚ್ಚಾಗಿರುವ ಅಂತರಿಕ್ಷದಲ್ಲಿ ಹೆಚ್ಚಾಗಿ ಹಾರಲಾಗದ ನವಿಲೇ ಮುಂತಾದ ಹಕ್ಕಿಗಳನ್ನೂ ಹಿಡಿಯುತ್ತಿದ್ದನು.

೧೧. ಈ ರೀತಿಯಾದ ಆ ಬೇಡನು ಮಹಾಪಾಪಿಯಾಗಿದ್ದು ದುಷ್ಟನೂ ದುಷ್ಟಜನರ ಸ್ನೇಹವುಳ್ಳವನೂ ಆಗಿದ್ದನು. ಅವನ ಹೆಂಡತಿಯೂ ಕೂಡ ಅವನಂತೆಯೇ ಬಹು ಭಯಂಕರಳಾಗಿ ಗಂಡುಬೀರಿಯಾಗಿದ್ದಳು.

೧೨-೧೩. ಹೀಗೆ ಬೇಟೆಯಾಡಿಕೊಂಡು ಇವನು ಬಹುಕಾಲವಿದ್ದನು. ಒಂದು ದಿವಸ ಇವನು ಒಂದು ಹಂದಿಯನ್ನು ಹೊಡೆಯಲು ಧನುಸ್ಸಿನಲ್ಲಿ ಬಾಣವನ್ನು ಹೂಡಿಕೊಂಡು ಒಂದು ಬಿಲ್ವಪತ್ರದ ಮರದಮೇಲೆ ಕುಳಿತಿದ್ದನು. ಆದಿನ ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಾಗಿದ್ದಿತು. ಆ ಹಂದಿಯನ್ನು ಹೊಡೆಯಲು ಕಾಯುತ್ತಿದ್ದುದರಿಂದ ಅವನಿಗೆ ನಿದ್ದೆಯಿಲ್ಲದೆ ಆ ರಾತ್ರಿಯೆಲ್ಲವನ್ನೂ ಹಾಗೆಯೇ ಕಳೆದನು.

ಶ್ರೀವೃಕ್ಷಪರ್ಣಾನಿ ಬಹೂನಿ ತತ್ರ
ಸಂಛೇದಯಾಮಾಸ ರುಷಾನ್ವಿತೋಽಪಿ ॥
ಶ್ರೀವೃಕ್ಷಮೂಲೇ ಪರಿವರ್ತಮಾನಂ
ಲಿಂಗಸ್ಯ ತಸ್ಯೋಽಪರಿ ತಾನಿ ಪೇತುಃ ॥
ಶ್ರೀವೃಕ್ಷಪರ್ಣಾನಿ ಚ ದೈವಯೋಗಾತ್
ಜಾತಂ ಚ ಸರ್ವಂ ಶಿವಪೂಜನಂ ತತ್ ॥ ೧೪ ॥

ಗಂಡೂಷಕಾರಿಣಾ ತೇನ ಸ್ನಪನಂ ಚ ಮಹತ್ಕೃತಂ ।
ಅಜ್ಞಾನಿನಾ ಹಿ ತೇನೈವ ಪುಲ್ಕಸೇನ ದುರಾತ್ಮನಾ ॥ ೧೫ ॥

ಮಾಘಮಾಸೇಽಸಿತೇ ಪಕ್ಷೇ ಚತುರ್ದಶ್ಯಾಂ ವಿಧೂದಯೇ ।
ಪುಲ್ಕಸೋ ಹಿ ದುರಾಚಾರೋ ನಿಷ್ಪನ್ನೋ ಗತಕಲ್ಮಷಃ ॥ ೧೬ ॥

ನ ಪ್ರಾಪ್ತಃ ಸೂಕರಸ್ತೇನ ಮೃಗೋಽಪಿ ಮಹಿಷೋಽಪಿ ವಾ ।
ಅಶನಾರ್ಥಂ ಚ ತಸ್ಯೈವ ಅನ್ನಮಾದಾಯ ಭಾಮಿನಿ ॥ ೧೭ ॥

---

೧೪. ಅವನು ತನ್ನ ಬೇಟೆಯಾದ ಹಂದಿಯು ಬರಲಿಲ್ಲವೆಂಬ ಕೋಪದಿಂದ ಬಿಲ್ವಪತ್ರೆ ಮರದ ಎಲೆಗಳನ್ನು ಕತ್ತರಿಸಿ ಹಾಕುತ್ತಿದ್ದನು. ಆ ಬಿಲ್ವಪತ್ರೆಗಳು ಗಿರ್ರೆಂದು ಸುತ್ತುತ್ತ ಆ ಮರದ ಕೆಳಗಿದ್ದ ಲಿಂಗದಮೇಲೆ ಬೀಳುತ್ತಿದ್ದುವು. ಆ ಬಿಲ್ವಪತ್ರೆಗಳು ಅದೃಷ್ಟವಶದಿಂದ ಶಿವನ ಮೇಲೆ ಬೀಳುತ್ತ ಇದ್ದುದರಿಂದ ಶಿವಪೂಜೆಯನ್ನು ಮಾಡಿದಂತೆ ಆಯಿತು.

೧೫. ಅಜ್ಞಾನಿಯಾದ ದುಷ್ಟನಾದ ಆ ಬೇಡನು ಮೇಲಿನಿಂದಲೇ ಬಾಯಿಮುಕ್ಕಳಿಸುತ್ತಿದ್ದುದರಿಂದ ಆ ನೀರು ಆ ಶಿವಲಿಂಗದಮೇಲೆ ಬೀಳುತ್ತ ಅದಕ್ಕೆ ಸ್ನಾನವಾಗುತ್ತಿದ್ದಿತು.

೧೬. ಈ ರೀತಿಯಾಗಿ ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನ ಚಂದ್ರೋದಯದ ವೇಳೆಗೆ ಹೀಗೆ ಮಾಡುತ್ತಿದ್ದ ಆ ಬೇಡನು ಪಾಪವನ್ನೆಲ್ಲಾ ಕಳೆದುಕೊಂಡನು.

೧೭–೧೮. ಆದಿನ ಅವನಿಗೆ ಹಂದಿಯಾಗಲಿ, ಕಾಡೆಮ್ಮೆಯಾಗಲಿ, ಮತ್ತಾವುದಾದರೂ ಮೃಗವೇ ಆಗಲಿ ಸಿಕ್ಕಲಿಲ್ಲ. ಈರೀತಿಯಾಗಿ ಯಾವ

ತಸ್ಯ ಭಾರ್ಯಾ ಪ್ರಚಂಡಾ ಚ ಆಗತಾ ತಸ್ಯ ಸನ್ನಿಧೌ ।
ನಿರಾಶಶ್ಚ ನಿರಾಹಾರಃ ಯತ್ರಾಸೌ ಪುಲ್ಕಸಃ ಸ್ಥಿತಃ ॥ ೧೮ ॥

ತೇನ ದೃಷ್ಟ್ವಾ ಪ್ರಚಂಡಾ ಸಾ ಆಯಾನ್ತೀ ಕ್ರೂರಲೋಚನಾ ।
ಸಾ ತಸ್ಯ ಭಾರ್ಯಾ ನದ್ಯಾಂ ವೈ ಜಲಮಧ್ಯೇ ಪಪಾತ ಹ ॥ ೧೯ ॥

ತಾವತ್ತಯೋಕ್ತಶ್ಚಂಡಾತ್ಮಾ ಏಹಿ ಶೀಘ್ರಂ ಚ ಭಕ್ಷಯ ।
ಸಮಾನೀತಂ ತ್ವದರ್ಥಂ ಚ ಮತ್ಸ್ಯಮಾಂಸಂ ಮಯಾಧುನಾ ॥ ೨೦ ॥

ಕೃತಂ ಕಿಂ ಮೂಢ ಪೂರ್ವೇದ್ಯುರ್ಮಾಂಸಂ ಪಾರ್ಶ್ವೇ ನ ದೃಶ್ಯತೇ ।
ನಾಶಿತಂ ಚ ತ್ವಯಾ ಮೂಢ ಕುಟುಂಬಂ ಲಂಘಯೇತ್ತ್ವ ॥ ೨೧ ॥

ಏತಚ್ಛ್ರುತ್ವಾ ತು ವಚನಂ ಚಂಡಾಯಾಶ್ಚಂಡರೂಪವಾನ್ ।
ಶಿವರಾತ್ರ್ಯುಪವಾಸೇನ ರಾತ್ರೌ ಜಾಗರಣೇನ ಚ ॥ ೨೨ ॥

---

ಪ್ರಾಣಿಯೂ ಸಿಕ್ಕದಿದ್ದುದರಿಂದ ಬೇಸರ ಪಟ್ಟುಕೊಂಡು ಉಪವಾಸವಿದ್ದ ಆ ಬೇಡನ ಬಳಿಗೆ ಅವನ ಹೆಂಡತಿಯಾದ ಪ್ರಚಂಡಳೆಂಬುವಳು ಅವನಿಗೆ ಊಟಕ್ಕೋಸ್ಕರ ಅನ್ನವನ್ನು ತೆಗೆದುಕೊಂಡು ಬಂದಳು.

೧೯. ದೂರದಿಂದ ಬರುತ್ತಿರುವ ಕಣ್ಣನ್ನು ಕೆಂಪಗೆ ಮಾಡಿಕೊಂಡಿರುವ ಆ ಪ್ರಚಂಡೆಯೆಂಬ ಹೆಂಡತಿಯನ್ನು ದೂರದಿಂದಲೇ ನೋಡಿದನು. ಅವನ ಹೆಂಡತಿಯು ನೀರಿನ ಮಧ್ಯದಲ್ಲಿ ಬರುತ್ತ ಬಿದ್ದುಬಿಟ್ಟಳು. (ಇದರಿಂದ ಅವಳು ಸ್ನಾನಮಾಡಿದಂತಾಯಿತು.)

೨೦. ಅಷ್ಟರೊಳಗೆ ಆಕೆಯು ಎಲೈ ಚಂಡಾಲನೇ! ಬೇಗಬಾ. ತಿನ್ನು. ನಿನಗೋಸ್ಕರ ಈ ಮೀನಿನ ಮಾಂಸವನ್ನು ಈಗ ನಾನು ತಂದಿದ್ದೇನೆ. ಎಂದು ಹೇಳಿದಳು.

೨೧. ಎಲೈ ಮೂಢನೇ! ನೆನ್ನೆಯದಿನ ಏನು ಮಾಡಿದೆ? ನಿನ್ನ ಹತ್ತಿರ ಮಾಂಸವು ಕಾಣುವುದಿಲ್ಲವಲ್ಲ! ನೀನು ಹಾಳುಮಾಡಿಬಿಟ್ಟೆ. ನಿನಗೆ ಬುದ್ಧಿಯಿಲ್ಲ. ನಿನ್ನ ಕುಟುಂಬವು ಉಪವಾಸವಿರಬೇಕಾದೀತು.

೨೨-೨೩. ಚಂಡನು ಈಕೆಯ ಈ ಮಾತನ್ನು ಕೇಳಿದನು. ಶಿವರಾತ್ರಿಯ ಉಪವಾಸದಿಂದಲೂ ರಾತ್ರಿಯಲ್ಲಿ ಜಾಗರಣೆ ಮಾಡಿದ್ದುದರಿಂದಲೂ ಮನಸ್ಸು

ಶುದ್ಧಾಂತಃಕರಣೋ ಯಾತಃ ಸ್ನಾತುಂ ನದ್ಯಾಂ ಶುಚಿವ್ರತಃ ।
ಯಾವತ್ ಸ್ನಾತಿ ಸ ದುಷ್ಟಾತ್ಮಾ ತಾವಚ್ಛಾ್ವ ತತ್ರ ಚಾಗತಃ ॥ ೨೩ ॥

ಶುನಾ ತದಾ ಭಕ್ಷಿತಂ ಚ ಸರ್ವಂ ಮಾಂಸಂ ಸುರೇಶ್ವರಿ ।
ಚಂಡಾ ಪ್ರಕುಪಿತಾ ತಂ ಚ ಶ್ವಾನಂ ಹಂತುಮುಪಸ್ಥಿತಾ ॥ ೨೪ ॥

ನಿವಾರಿತಾ ಹಿ ಚಂಡೇನ ಚಂಡಾ ಪ್ರಕುಪಿತಾ ತದಾ ।
ನ ಹಂತವ್ಯಸ್ತ್ವಯಾ ಚೈಷ ಕಿಮನೇನಾಶುಭಂ ಕೃತಂ ॥ ೨೫ ॥

ತಯೋಕ್ತಂ ಭಕ್ಷಿತಂ ಚಾನ್ನಮನೇನೈವ ದುರಾತ್ಮನಾ ।
ಕಿಂ ತ್ವಂ ಭಕ್ಷಯಿತಾ ಮೂಢ ಭವಿತಾದ್ಯ ಬುಭುಕ್ಷಿತಃ ॥ ೨೬ ॥

॥ ಪುಲ್ಕಸ ಉವಾಚ ॥

ಯಚ್ಛುನಾ ಭಕ್ಷಿತಂ ಚಾನ್ನಂ ತೇನಾಹಂ ಪರಿತೋಷಿತಃ ।
ಕಿಮನೇನ ಶರೀರೇಣ ನಶ್ವರೇಣ ಗತಾಯುಷಾ ॥ ೨೭ ॥

---

ಶುದ್ಧವಾಗಿತ್ತು. ಆದ್ದರಿಂದ ನದಿಗೆ ಸ್ನಾನಮಾಡಲು ಹೋದನು. ಅವನು ಸ್ನಾನಮಾಡುವಷ್ಟರಲ್ಲಿ ಅಲ್ಲಿಗೊಂದು ನಾಯಿಯು ಬಂದಿತು.

೨೪. ಆಗ ಆ ನಾಯಿಯು ಆ ಮಾಂಸವೆಲ್ಲವನ್ನೂ ತಿಂದುಬಿಟ್ಟಿತು. ಚಂಡೆಯು ಕೋಪಗೊಂಡು ಆ ನಾಯಿಯನ್ನು ಹೊಡೆಯುವುದಕ್ಕೆ ಬಂದಳು.

೨೫. ಕೋಪಗೊಂಡು ಹೊಡೆಯಲು ಹೋಗುತ್ತಿರುವ ಆ ಚಂಡೆಯನ್ನು ಆ ಚಂಡನು ಇದನ್ನು ನೀನು ಹೊಡೆಯಬೇಡ. ಇದು ಏನು ಕೆಡಕನ್ನು ನಿನಗೆ ಮಾಡಿತು ? ಎಂದು ತಡೆದನು.

೨೬. ಈ ದುಷ್ಟವಾದ ನಾಯಿಯು ನಿನ್ನ ಅನ್ನವೆಲ್ಲವನ್ನೂ ತಿಂದುಬಿಟ್ಟಿತು. ಎಲೈ ದಡ್ಡನೆ ! ನೀನು ಹಸಿದಿರುವೆಯಲ್ಲ ! ಈಗ ಏನನ್ನು ತಿನ್ನುತ್ತೀಯೆ ? ಎಂಬುದಾಗಿ ಆಕೆಯು ಕೇಳಿದಳು.

೨೭–೨೮. ಬೇಡನು ಹೇಳಿದನು–ನಾಯಿಯು ನಾನು ತಿನ್ನಬೇಕಾಗಿದ್ದ ಈ ನನ್ನ ಆಹಾರವನ್ನು ತಿಂದುದರಿಂದ ನನಗೆ ಸಂತೋಷವಾಯಿತು. ನಾಶವಾಗುವ ಆಯುಸ್ಸನ್ನು ಕಳೆದುಕೊಂಡ ಈ ಶರೀರದಿಂದೇನು ಪ್ರಯೋಜನ ?

ಯೇ ಪುಷ್ಯಂತಿ ಶರೀರಂ ವೈ ಸರ್ವಭಾವೇನ ಭಾಮಿನಿ ।
ಮೂಢಾಸ್ತೇ ಪಾಪಿನೋ ಜ್ಞೇಯಾ ಲೋಕದ್ವಯಬಹಿಷ್ಕೃತಾಃ ॥ ೨೮ ॥

ತಸ್ಮಾನ್ಮಾನಂ ಪರಿತ್ಯಜ್ಯ ಕಾಮಂ ಚಾಪಿ ದುರಾತ್ಮತಾಂ ।
ಸ್ವಸ್ಥಾ ಭವ ವಿಮರ್ಶೇನ ತತ್ವಬುದ್ಧ್ಯಾ ಸ್ಥಿರಾ ಭವ ॥ ೨೯ ॥

ಅಹಮೇತಚ್ಛರೀರಂ ವೈ ಖಡ್ಗಧಾರವ್ರತೇನ ಚ ।
ತ್ಯಜಾಮ್ಯದ್ಯ ವರಾರೋಹೇ ಕಿಂ ಚಿರಂಜೀವನೇನ ಮೇ ॥ ೩೦ ॥

ಇತ್ಯುಕ್ತ್ವಾ ಖಡ್ಗಮಾಕೃಷ್ಯ ಯಾವಚ್ಛಿನತ್ತಿ ಕಂ ಸ್ವಕಂ ।
ಆಗತಾಶ್ಚ ಗಣಾಸ್ತಾವದ್ಬಹವಃ ಶಿವನೋದಿತಾಃ ॥ ೩೧ ॥

ವಿಮಾನಾನಿ ಬಹೂನ್ಯತ್ರ ಆಗತಾನಿ ತದಂತಿಕೇ ।
ದೃಷ್ಟ್ವಾ ಸ ಚೈವ ತಾನ್ಯೇವಂ ವಿಮಾನಾನಿ ಗಣಾಂಸ್ತಥಾ
ಉವಾಚ ಪರಯಾ ಭಕ್ತ್ಯಾ ಪುಲ್ಕಸೋಽಪಿ ಚ ತಾನ್ ಪ್ರತಿ ॥ ೩೨ ॥

---

ಎಲೈ ಭಾಮಿನಿಯೆ! ಯಾರು ಸರ್ವ ಪ್ರಕಾರದಿಂದಲೂ ಈ ಶರೀರವನ್ನು ಪೋಷಿಸು ತ್ತಾರೆಯೋ ಅವರನ್ನು ಮೂಢರೆಂದೂ ಪಾಪಿಗಳೆಂದೂ ತಿಳಿ. ಅವರು ಇಹಲೋಕ ಪರಲೋಕಗಳೆರಡನ್ನೂ ಕಳೆದುಕೊಳ್ಳುತ್ತಾರೆ.

೨೯. ಆದ್ದರಿಂದ ಈ ಅಹಂಕಾರವನ್ನೂ ಆಶೆಯನ್ನೂ ದುಷ್ಟತನವನ್ನೂ ಬಿಟ್ಟು ಯೋಚಿಸಿ ಒಳ್ಳೆಯದು ಕೆಟ್ಟದ್ದನ್ನು ತಿಳಿದುಕೊಂಡು ಸುಖವಾಗಿರು. ಸರಿಯಾದ ಜ್ಞಾನವನ್ನು ಹೊಂದಿ ಮನಸ್ಸನ್ನು ಸ್ಥಿಮಿತದಲ್ಲಿ ಇಟ್ಟುಕೋ.

೩೦. ನಾನು ಈ ಶರೀರವನ್ನು ಖಡ್ಗಧಾರೆಯ ವ್ರತದಿಂದ (ಕತ್ತನ್ನು ಕತ್ತರಿಸಿಕೊಳ್ಳುವುದರಿಂದ) ಬಿಟ್ಟುಬಿಡುತ್ತೇನೆ. ಎಲೈ ವರಾರೋಹೆಯೆ! ನಾನು ಬಹುಕಾಲ ಬದುಕಿದ್ದುದರಿಂದ ಪ್ರಯೋಜನವೇನು?

೩೧. ಹೀಗೆಂದು ಹೆಂಡತಿಗೆ ಅವನು ಹೇಳಿ ತನ್ನ ಕತ್ತನ್ನು ಕತ್ತರಿಸಿಕೊಳ್ಳು ವಷ್ಟರಲ್ಲಿಯೇ ಶಿವನಿಂದ ಆಜ್ಞಾಪಿಸಲ್ಪಟ್ಟ ಶಿವಗಣಗಳು ಅಲ್ಲಿಗೆ ಬಹಳ ಜನರು ಬಂದರು.

೩೨. ಅನೇಕವಾದ ವಿಮಾನಗಳು ಅವನ ಬಳಿಗೆ ಬಂದುವು. ಆ ಚಂಡನು ಆ ವಿಮಾನಗಳನ್ನು ನೋಡಿ ಬಹಳ ಭಕ್ತಿಯಿಂದ ಅವರನ್ನು ಕುರಿತು ಇಂತೆಂದನು.

॥ ಪುಲ್ಕಸ ಉವಾಚ ॥

ಕಸ್ಮಾತ್ಸಮಾಗತಾ ಯೂಯಂ ಸರ್ವೇ ರುದ್ರಾಕ್ಷಧಾರಿಣಃ ।
ಸರ್ವೇ ಸ್ಫಟಿಕಸಂಕಾಶಾಃ ಸರ್ವೇ ಚಂದ್ರಾರ್ಧಶೇಖರಾಃ ॥ ೩೩ ॥

ಕಪರ್ದಿನಶ್ಚರ್ಮಪರೀತವಾಸಸೋ
ಭುಜಂಗಭೋಗೈಃ ಕೃತಹಾರಭೂಷಣಾಃ ।
ಶ್ರೀಯಾನ್ವಿತಾ ರುದ್ರಸಮಾನವೀರ್ಯಾ
ಯಥಾ ತಥಂ ಭೋ ವದತಾಂ ಮಮೋಚಿತ ॥ ೩೪ ॥

॥ ಮಹಾದೇವ ಉವಾಚ ॥

ಪುಲ್ಕಸೇನ ತದಾ ಪೃಷ್ಟಾ ಊಚುಸ್ತೇ ರುದ್ರಪಾರ್ಷದಾಃ ॥ ೩೫ ॥

॥ ಗಣಾ ಊಚತುಃ ॥

ಪ್ರೇಷಿತಾಸ್ತ್ವೇ ವಯಂ ಚಂಡ ಶಿವೇನ ಪರಮೇಷ್ಠಿನಾ ।
ಆಗಚ್ಛ ತ್ವರಿತೋ ಭೂತ್ವಾ ಸಸ್ತ್ರೀಕೋ ಯಾನಮಾರುಹ ॥ ೩೬ ॥

---

೩೩. ಬೇಡನು ಹೇಳಿದನು–ರುದ್ರಾಕ್ಷಿಯನ್ನು ಧರಿಸಿ ಬೆಳ್ಳಗಿರುವ ಬಣ್ಣವನ್ನು ಹೊಂದಿ ಅರ್ಧಚಂದ್ರನನ್ನು ತಲೆಯಲ್ಲಿ ಉಳ್ಳ ನೀವೆಲ್ಲರೂ ಇಲ್ಲಿಗೇಕೆ ಬಂದಿದ್ದೀರಿ ?

೩೪. ನೀವೆಲ್ಲರೂ ಜಡೆಯನ್ನು ಧರಿಸಿದ್ದೀರಿ. ಚರ್ಮವನ್ನು ಹೊಂದಿದ್ದೀರಿ. ಹಾವನ್ನು ಮೈಕೈಗೆಲ್ಲಾ ಕಟ್ಟಿಕೊಂಡು ಒಡವೆಯನ್ನಾಗಿ ಮಾಡಿಕೊಂಡಿದ್ದೀರಿ. ಒಳ್ಳೆಯ ಕಾಂತಿಯನ್ನು ಹೊಂದಿದ್ದೀರಿ. ರುದ್ರನಿಗೆ ಸಮಾನವಾದ ಶಕ್ತಿಯುಳ್ಳವರಾಗಿದ್ದೀರಿ. ಇಂತಹ ನೀವು ನನಗೆ ನ್ಯಾಯವಾದ ಯೋಗ್ಯವಾದ ವಿಷಯವನ್ನು ಹೇಳಿರಿ.

೩೫. ಮಹಾದೇವನು ಹೇಳಿದನು–ಈ ಬೇಡನು ಹೀಗೆಂದು ಕೇಳುತ್ತಲೂ ಆ ರುದ್ರಗಣಗಳು ಅವನಿಗೆ ಇಂತೆಂದರು.

೩೬. ಗಣಗಳು ಹೇಳಿದರು–ಎಲೈ ಚಂಡನೇ ! ಉತ್ತಮೋತ್ತಮನಾದ ಶಿವನು ನಮ್ಮನ್ನು ಕಳುಹಿಸಿರುವನು. ಹೆಂಡತಿಯನ್ನು ಕರೆದುಕೊಂಡು ಜಾಗ್ರತೆಯಾಗಿ ಬಾ. ಈ ವಿಮಾನವನ್ನು ಹತ್ತು.

ಲಿಂಗಾರ್ಚನಂ ಕೃತಂ ಯಚ್ಚ ತ್ವಯಾ ರಾತ್ರೌ ಶಿವಸ್ಯ ಚ ।
ತೇನ ಕರ್ಮವಿಪಾಕೇನ ಪ್ರಾಪ್ತೋಽಸಿ ಪರಮಾಂ ಗತಿಂ ॥ ೩೭ ॥

॥ ಮಹಾದೇವ ಉವಾಚ ॥

ತಥೋಕ್ತೋ ವೀರಭದ್ರೇಣ ಉವಾಚ ಪ್ರಹಸನ್ನಿವ ॥ ೩೮ ॥

॥ ಪುಲ್ಕಸ ಉವಾಚ ॥

ಕಿಂ ಮಯಾ ಸುಕೃತಂ ಚೀರ್ಣಂ ಪಾಪಿನಾ ಪುಲ್ಕಸೇನ ಹಿ ।
ಮೃಗಯಾರಸಿಕೇನೈವ ಮೂಢೇನ ಚ ದುರಾತ್ಮನಾ ॥ ೩೯ ॥

ಪಾಪಾಚಾರೋಽಹ್ಯಹಂ ನಿತ್ಯಂ ಕಥಂ ಸ್ವರ್ಗೇ ವಸಾಮ್ಯಹಂ ।
ಕಥಂ ಲಿಂಗಾರ್ಚನಂ ಚಾದ್ಯ ಕೃತಮಸ್ತಿ ತದುಚ್ಯತಾಂ ।
ಪರಂಕೌತುಕಮಾಪನ್ನಃ ಪೃಚ್ಛಾಮಿ ಕೃಪಯಾ ವದ ॥ ೪೦ ॥

---

೩೭. ನೀನು ರಾತ್ರಿಯಲ್ಲಿ ಶಿವಲಿಂಗವನ್ನು ಪೂಜಿಸಿದ್ದೀಯೆ. ಆ ಪುಣ್ಯಫಲದಿಂದ ಉತ್ತಮವಾದ ಗತಿಯು ನಿನಗೆ ಸಿಕ್ಕಿದೆ

೩೮. ಮಹಾದೇವನು ಹೇಳಿದನು-ವೀರಭದ್ರನು ಆ ಚಂಡನನ್ನು ಕುರಿತು ಹೀಗೆ ಹೇಳುತ್ತಲೂ ಅವನು ನಗುತ್ತ ವೀರಭದ್ರನಿಗೆ ಇಂತೆಂದನು.

೩೯. ಬೇಡನು ಹೇಳಿದನು-ನಾನು ಪಾಪಿಯು. ಬೇಡನು. ಯಾವಾಗಲೂ ಬೇಟೆಯಲ್ಲಿ ಆಸೆಯುಳ್ಳವನು, ಮೂಢನು, ದುಷ್ಟನು, ಇಂತಹ ನಾನು ಯಾವ ಪುಣ್ಯವನ್ನು ತಾನೆ ಮಾಡಿದ್ದೇನೆ?

೪೦. ನಾನು ಯಾವಾಗಲೂ ಕೆಟ್ಟಕೆಲಸವನ್ನೇ ಮಾಡುವವನು. ಇಂತಹ ನಾನು ಸ್ವರ್ಗದಲ್ಲಿ ಹೇಗೆ ವಾಸಮಾಡಲಿ? ನಾನು ಲಿಂಗಾರ್ಚನೆಯನ್ನು ಎಲ್ಲಿ ಹೇಗೆ ದುಡಿದ್ದೇನೆಂಬುದನ್ನು ಹೇಳಿರಿ! ಬಹು ಆಶ್ಚರ್ಯವಾಗಿದೆ. ದಯವಿಟ್ಟು ಅದನ್ನು ಹೇಳಿರಿ.

॥ ವೀರಭದ್ರ ಉವಾಚ ॥

ದೇವದೇವೋ ಮಹಾದೇವೋ ಯೋ ಗಂಗಾಧರ ಸಂಜ್ಞಕಃ ।
ಪರಿತುಷ್ಟೋದ್ಯ ತೇ ಚಂಡ ಸಭಾರ್ಯಶ್ಚ ಉಮಾಪತಿಃ ॥ ೪೧ ॥

ಪ್ರಾಸಂಗಿಕಂ ತ್ವಯಾ ಚಾದ್ಯ ಕೃತಮರ್ಚನಮೇವ ಚ ।
ಕೋಲಂ ನಿರೀಕ್ಷಮಾಣೇನ ಬಿಲ್ವಪತ್ರಾಣಿ ಚೈವ ಹಿ ॥ ೪೨ ॥

ಛೇದಿತಾನಿ ತ್ವಯಾ ಚಂಡ ಪಾತಿತಾನಿ ತದೈವ ಹಿ ।
ಲಿಂಗಸ್ಯ ಮಸ್ತಕೇ ತಾನಿ ತೇನ ತ್ವಂ ಸುಕೃತೀ ಪ್ರಭೋಃ ॥ ೪೩ ॥

ತವೈವಂ ಜಾಗರೋ ಜಾತೋ ಮಹಾವೃಕ್ಷೋಪರಿ ಧ್ರುವಂ ।
ತೇನೈವ ಜಾಗರೇಣೈವ ತುತೋಷ ಜಗದೀಶ್ವರಃ ॥ ೪೪ ॥

ಛಲೇನೈವ ಮಹಾಭಾಗ ಕೋಲಸಂದರ್ಶನೇನ ಹಿ ।
ಶಿವರಾತ್ರಿದಿನಂ ವ್ಯಾಧ ಪ್ರಸಂಗೇನಾಪ್ಯುಪೋಷಿತಂ ॥ ೪೫ ॥

---

೪೧. ವೀರಭದ್ರನು ಹೇಳಿದನು-ಎಲೈ ಚಂಡನೆ ! ದೇವ ದೇವನೂ ಉಮಾಪತಿಯೂ ಗಂಗಾಧರನೂ ಆದ ಈಶ್ವರನು ನಿನ್ನ ವಿಷಯದಲ್ಲಿ ಈಗ ಸಂತೋಷಗೊಂಡಿದ್ದಾನೆ

೪೨-೪೩ ಎಲೈ ಚಂಡನೇ ! ಪ್ರಾಸಂಗಿಕವಾಗಿ ಇಂದು ಲಿಂಗಾರ್ಚನೆಯನ್ನು ಮಾಡಿದ್ದೀಯೆ. ಮರದ ಮೇಲೆ ಕುಳಿತು ಹಂದಿಯನ್ನು ನಿರೀಕ್ಷಿಸುತ್ತ ಆ ಮರದ ಬಿಲ್ವಪತ್ರೆಗಳನ್ನು ಕೊಯ್ದು ಹಾಕಿದುದರಿಂದ ಅವು ಲಿಂಗದ ಮೇಲೆ ಬೀಳುತ್ತಿದ್ದುವು. ಆದ್ದರಿಂದ ನೀನು ಪುಣ್ಯವನ್ನು ಹೊಂದಿದ್ದೀಯೆ.

೪೪. ನೀನು ಆ ಹಂದಿಯನ್ನು ನಿರೀಕ್ಷಿಸುತ್ತ ನಿದ್ದೆಮಾಡದಿದ್ದುದರಿಂದ ಅದೇ ಜಾಗರಣೆಯಾಯಿತು. ಅದರಿಂದ ಈಶ್ವರನು ಸಂತೋಷಗೊಂಡನು.

೪೫. ಆ ಹಂದಿಯ ನಿರೀಕ್ಷಣೆಯ ಒಂದು ನೆಪದಿಂದ ನೀನು ನಿದ್ದೆಮಾಡದಿದ್ದ ಆ ದಿನವು ಶಿವರಾತ್ರಿಯಾಗಿದ್ದಿತು. ಆ ದಿನದ ಉಪವಾಸವು ಶ್ರೇಷ್ಠವಾದುದು.

ತೇನೋಪವಾಸೇನ ಚ ಜಾಗರೇಣ
ತುಷ್ಟೋಽಹ್ಯಸೌ ದೇವವರೋ ಮಹಾತ್ಮಾ ।
ತವ ಪ್ರಸಾದಾಯ ಮಹಾನುಭಾವೋ
ದದಾತಿ ಸರ್ವಾನ್ ವರದೋ ವರಾಂಶ್ಚ || ೩೬ ||

|| ಮಹಾದೇವ ಉವಾಚ ||

ಏವಮುಕ್ತಸ್ತದಾ ತೇನ ವೀರಭದ್ರೇಣ ಧೀಮತಾ ।
ಪುಲ್ಕಸೋಽಪಿ ವಿಮಾನಾಗ್ರ್ಯಮಾರುರೋಹ ಚ ಪಶ್ಯತಾಂ || ೩೭ ||

ಗಣಾನಾಂ ದೇವತಾನಾಂ ಚ ಸರ್ವೇಷಾಂ ಪ್ರಾಣಿನಾಮಪಿ ।
ತದಾ ದುಂದುಭಯೋ ನೇದುರ್ಭೇರೀತೂರ್ಯಾಣ್ಯನೇಕಶಃ || ೩೮ ||

ವೀಣಾವೇಣುಮೃದಂಗಾನಿ ಲಾಸ್ಯನಾಟ್ಯಯುತಾನಿ ಚ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ || ೩೯ ||

ಚಾಮರೈರ್ವಿಜ್ಯಮಾನೋ ಹಿ ಚ್ಛತ್ರೈಶ್ಚ ವಿವಿಧೈರಪಿ ।
ಮಹೋತ್ಸವೇನ ಮಹತಾ ಹ್ಯಾನೀತಶ್ಶಿವಸನ್ನಿಧೌ || ೫೦ ||

---

೩೬. ಆ ದಿನದ ಉಪವಾಸದಿಂದಲೂ, ಜಾಗರಣೆಯಿಂದಲೂ, ಮಹಾದೇವನು ಸಂತೋಷಗೊಂಡನು. ಹಾಗೆ ನಿನ್ನಲ್ಲಿ ಕಂಡುಬಂದ ಗುಣಕ್ಕೋಸ್ಕರ ದೇವನು ನಿನಗೆ ವರಗಳನ್ನು ಕೊಡುವನು.

೩೭. ಮಹಾದೇವನು ಹೇಳಿದನು-ಆ ಚಂಡನನ್ನು ಕುರಿತು ವೀರಭದ್ರನು ಇಂತೆಂದು ಹೇಳಲು ಆಗ ಅವನು ಎಲ್ಲರೆದುರಿಗೂ ವಿಮಾನವನ್ನು ಹತ್ತಿದನು.

೩೮. ಅವನ ಹತ್ತುವಿಕೆಯನ್ನು ಗಣಗಳೂ, ದೇವತೆಗಳೂ, ಎಲ್ಲಾ ಪ್ರಾಣಿಗಳೂ ನೋಡಿದುವು. ಆಗ ದೇವದುಂದುಭಿಗಳು ಧ್ವನಿಮಾಡಿದುವು.

೩೯. ವೀಣೆ, ಕೊಳಲು, ಮೃದಂಗಗಳೂ, ಧ್ವನಿಮಾಡಿದವು. ಅಪ್ಸರಸ್ತ್ರೀಯರು ನಾಟ್ಯವಾಡಿದರು. ಗಂಧರ್ವರು ಹಾಡುತ್ತಾ ಇದ್ದರು

೫೦. ಚಾಮರಗಳನ್ನು ಬೀಸುತ್ತಿದ್ದರು. ಛತ್ರಿಗಳನ್ನು ಹಿಡಿದಿದ್ದರು ಈ ರೀತಿಯಾಗಿ ದೊಡ್ಡ ಉತ್ಸವವನ್ನು ಮಾಡಿಕೊಂಡು ಆತನನ್ನು ಶಿವನ ಬಳಿಗೆ ಕರೆದುಕೊಂಡು ಬಂದರು.

ಪುಲ್ಕಸೋಽಪಿ ತದಾ ಪ್ರಾಪ್ತಸ್ತೀರ್ಥಸ್ನಾನಂ ಶಿವಾರ್ಚನಾತ್ ।
ಕಿಂ ಪುನಃ ಶ್ರದ್ಧಯಾ ಭಕ್ತ್ಯಾ ಶಿವಾಯ ಪರಮಾತ್ಮನೇ ॥ ೫೧ ॥

ಪುಷ್ಪಾದಿಕಂ ಫಲಂ ಗಂಧತಾಂಬೂಲಾಕ್ಷತಮೇವ ಚ ।
ಯೇ ಪ್ರಯಚ್ಛಂತಿ ಲೋಕೇಽಸ್ಮಿಂಸ್ತೇರುದ್ರಾ ನಾತ್ರ ಸಂಶಯಃ ॥ ೫೨ ॥

ತದಾ ಪ್ರಭೃತಿ ತತ್ತೀರ್ಥಂ ಖಡ್ಗಧಾರೇತಿ ವಿಶ್ರುತಂ ।
ಗಂಗಾಧರೋಽಪಿ ದೇವೇಶಃ ಖಡ್ಗಧಾರೇತಿ ವಿಶ್ರುತಃ ॥ ೫೩ ॥

ಏತತ್ತೀರ್ಥಂ ಕಲೌ ಗುಪ್ತಂ ಭವಿಷ್ಯತಿ ಸುರೇಶ್ವರಿ ।
ಮಾಘಮಾಸೇಽಥ ವೈಶಾಖೇ ಕಾರ್ತಿಕ್ಯಾಂ ಚ ವಿಶೇಷತಃ ॥ ೫೪ ॥

ಸ್ನಾನಂ ಯೇ ಚ ಪ್ರಕುರ್ವಂತಿ ಮುಕ್ತಾಸ್ತೇ ನಗನಂದಿನಿ ।
ವಶಿಷ್ಠೋ ವಾಮದೇವಶ್ಚ ಭರದ್ವಾಜೋಽಥ ಗೌತಮಃ ॥ ೫೫ ॥

---

೫೧-೫೨. ಈ ರೀತಿ ತಿಳಿಯದೆ ಜಾಗರಣೆ, ಶಿವಾರ್ಚನೆ, ಸ್ನಾನಗಳನ್ನು ಮಾಡಿದುದರಿಂದ ಬೇಡನು ಕೈಲಾಸವನ್ನು ಹೊಂದಿರುವಾಗ, ಶ್ರದ್ಧೆಯಿಂದ ಶಿವನನ್ನು ಹೂವು, ಹಣ್ಣು, ಗಂಧ, ಅಕ್ಷತೆ, ತಾಂಬೂಲಗಳಿಂದ ಪೂಜಿಸಿದರೆ ಅವರು ಪ್ರತ್ಯಕ್ಷರಾಗಿ ರುದ್ರನಲ್ಲಿ ಸೇರಿಕೊಳ್ಳಲು ಸಂಶಯವು ಏನು ಇರುವುದು?

೫೩. ಅದು ಮೊದಲುಗೊಂಡು ಈ ತೀರ್ಥಕ್ಕೆ ಖಡ್ಗಧಾರಾ ತೀರ್ಥವೆಂದೂ ಅಲ್ಲಿರುವ ಶಿವನಿಗೆ ಖಡ್ಗಧಾರೇಶ್ವರನೆಂದೂ ಹೆಸರು ಬಂದು ಪ್ರಸಿದ್ಧವಾಯಿತು.

೫೪-೫೬. ಎಲೈ ಪಾರ್ವತಿಯೇ! ಈ ತೀರ್ಥವು ಕಲಿಯುಗದಲ್ಲಿ ಗುಪ್ತವಾಗಿರುತ್ತದೆ. ಮಾಘ, ವೈಶಾಖ ಕಾರ್ತಿಕ ಮಾಸಗಳಲ್ಲಿ ಇಲ್ಲಿ ಸ್ನಾನಮಾಡಿದವರು ಮುಕ್ತಿಯನ್ನು ಖಂಡಿತವಾಗಿಯೂ ಹೊಂದಿಯೇ ಹೊಂದುತ್ತಾರೆ. ವಸಿಷ್ಠ, ವಾಮದೇವ, ಭರದ್ವಾಜ, ಗೌತಮ, ಇವರೆಲ್ಲರೂ ಇಲ್ಲಿಗೆ ಸ್ನಾನಕ್ಕೆ

ಸ್ನಾನಾರ್ಥೇ ವೈ ಸಮಾಯಾಂತಿ ದೇವಂ ದ್ರಷ್ಟುಂ ಪಿನಾಕಿನಂ ।
ತ್ರಿಯುಗೇ ವರ್ತತೇ ಲಿಂಗಂ ಕಲೌ ನೈವ ತು ಪಾರ್ವತಿ ।
ವಿಶ್ವಾಮಿತ್ರೇಣ ಋಷಿಣಾ ದತ್ತಶಾಪೋ ಹ್ಯಹಂತ ತದಾ || ೫೭ ||

|| ಪಾರ್ವತ್ಯುವಾಚ ||

ಕಥಂ ಶಾಪಸ್ತು ಋಷಿಣಾ ದತ್ತಶ್ಚೈವ ಸುರೇಶ್ವರ ।
ತದಹಂ ಶ್ರೋತುಮಿಚ್ಛಾಮಿ ತ್ವತ್ತೋ ದೇವ ನ ಸಂಶಯಃ || ೫೭ ||

|| ಶ್ರೀ ಮಹಾದೇವ ಉವಾಚ ||

ಏಕಸ್ಮಿನ್ಸಮಯೇ ದೇವಿ ವಿಶ್ವಾಮಿತ್ರೋ ಮಹಾತಪಾಃ ।
ಆಗತಃ ಖಡ್ಗಧಾರೇಸ್ಮಿ ತೀರ್ಥೇ ವೈ ಪರಮಾದ್ಭುತೇ || ೫೮ ||

ಸಾಭ್ರಮತ್ಯಾಂ ಕೃತಸ್ನಾನೋ ದರ್ಶನಂ ಕೃತವಾನ್ಮಮ ।
ತತ್ರ ತಿಷ್ಠತಿ ನಿತ್ಯಂ ವೈ ಪೂಜಾಂ ಕುರ್ವನ್ನನೇಕಧಾ || ೫೯ ||

---

ಬರುತ್ತಾರೆ. ಈ ಸ್ವಾಮಿಯ ದರ್ಶನವನ್ನೂ ಮಾಡಿಕೊಂಡು ಹೋಗುತ್ತಾರೆ. ಎಲೈ ಪಾರ್ವತಿಯೇ ! ಕೃತ, ತ್ರೇತಾ, ದ್ವಾಪರಯುಗಗಳಲ್ಲಿ ಈ ಲಿಂಗವು ಇರುತ್ತದೆ. ಕಲಿಯುಗದಲ್ಲಿ ಇರುವುದಿಲ್ಲ. ವಿಶ್ವಾಮಿತ್ರ ಋಷಿಯು ಅದಕ್ಕೆ ಶಾಪವನ್ನು ಕೊಟ್ಟಿರುವನು.

೫೭. ಪಾರ್ವತಿಯು ಹೇಳಿದಳು- ಎಲೈ ಸುರೇಶ್ವರನೇ ! ಆ ಋಷಿಯು ಶಾಪವನ್ನು ಹೇಗೆ ಕೊಟ್ಟನು ? ಅದನ್ನು ನಿನ್ನಿಂದ ಕೇಳಬೇಕೆಂದು ಇದ್ದೇನೆ. ಸಂಶಯವಿಲ್ಲ.

೫೮. ಶ್ರೀಮಹಾದೇವನು ಹೇಳಿದನು– ಎಲೈ ದೇವಿಯೇ ! ಒಂದು ಸಾರಿ ಮಹಾ ತಪಸ್ವಿಯಾದ ವಿಶ್ವಾಮಿತ್ರನು ಈ ಉತ್ತಮೋತ್ತಮವಾದ ಖಡ್ಗ ಧಾರಾ ತೀರ್ಥಕ್ಕೆ ಬಂದನು.

೫೯. ಅವನು ಸಾಭ್ರಮತಿಯಲ್ಲಿ ಸ್ನಾನವನ್ನು ಮಾಡಿಕೊಂಡು, ಖಡ್ಗ ಧಾರೇಶ್ವರನ ದರ್ಶನವನ್ನು ಮಾಡಿದನು. ಹಾಗೆಯೇ ಸ್ನಾನ, ಪೂಜೆ, ದರ್ಶನ ಗಳನ್ನು ಮಾಡಿಕೊಂಡನು. ಅನೇಕ ದಿವಸಗಳು ಇಲ್ಲಿ ಇದ್ದನು.

ತತ್ರ ಕೋಽಪಿ ಮಹಾದುಷ್ಟಃ ಕೋಲಿಕಃ ಪಾಪರೂಪಧೃಕ್ ।
ಮಾಂಸಂ ದತ್ತಂ ತದಾ ತೇನ ಶಿವಸ್ಯೋಽಪರಿ ಭಾಮಿನಿ ॥ ೬೦ ॥

ದೃಷ್ಟ್ವಾ ತದಪಿ ಮಾಂಸಂ ಚ ವಿಶ್ವಾಮಿತ್ರೋಽಥ ವೈ ಪುನಃ ।
ಅಬ್ರವೀಚ್ಚ ತದಾ ತತ್ರ ದುಷ್ಕೃತಂ ಪಾಪಿನಾಂ ಕೃತಂ ॥ ೬೧ ॥

ನ ದತ್ತಸ್ತಸ್ಯ ದಂಡೋ ಹಿ ಶರ್ವೇಣ ಪರಮಾತ್ಮನಾ ।
ತಸ್ಮಾದಹಂ ಹಿ ನಿಶ್ಚಿತ್ಯ ಶಾಪಂ ದಾಸ್ಯೇ ನ ಸಂಶಯಃ ॥ ೬೨ ॥

ವಿಚಾರ್ಯೈವಂ ತದಾ ತೇನ ಶಪ್ತೋಽಹಂ ದೇವಿ ವೈ ತದಾ ।
ಅಸ್ಮಿನ್ಕಲಿಯುಗೇ ಘೋರೇ ಗುಪ್ತಸ್ತ್ವಂ ಭವ ಸರ್ವದಾ ॥ ೬೩ ॥

ಇತಿ ದತ್ವಾಥ ವೈ ಶಾಪಂ ಗತವಾನ್ಮುನಿಸತ್ತಮಃ ।
ತದಾ ಪ್ರಭೃತಿ ಭೋ ದೇವಿ ಗುಪ್ತೋಽಹಮೃಷಿಶಾಪತಃ ॥ ೬೪ ॥

---

೬೦ ಅಲ್ಲಿ ಬಹು ದುಷ್ಟನಾದ, ಪಾಪಿಯಾದ ಹಂದಿ ಕಾಯುವವನು, ಆ ಲಿಂಗದ ಮೇಲೆ ಮಾಂಸವನ್ನು ಹಾಕಿದ್ದನು.

೬೧-೬೨. ಆ ಮಾಂಸವನ್ನು ವಿಶ್ವಾಮಿತ್ರನು ನೋಡಿ ಯಾವನೋ ಪಾಪಿಯು ಈ ಕೆಟ್ಟ ಕೆಲಸವನ್ನು ಮಾಡಿರುವನು. ಮಹಾತ್ಮನಾದ ಈಶ್ವರನು ಅವನಿಗೆ ಸರಿಯಾದ ಶಿಕ್ಷೆಯನ್ನು ಕೊಡಲಿಲ್ಲ. ಆದ್ದರಿಂದ ಆ ಶಿವನಿಗೆ ನಾನು ಶಾಪವನ್ನು ಕೊಡಲೇಬೇಕೆಂದು ನಿಶ್ಚಯಿಸಿಕೊಂಡನು.

೬೩. ಈ ರೀತಿಯಾಗಿ ಅವನು ಯೋಚಿಸಿ ಈ ಘೋರವಾದ ಕಲಿಯುಗ ದಲ್ಲಿ ನೀನು ಗುಪ್ತನಾಗಿ ಇಲ್ಲಿ ಇರಬೇಕೇ ಹೊರತು ಕಾಣಲೇ ಕೂಡದೆಂದು ಶಪಿಸಿದನು.

೬೪. ವಿಶ್ವಾಮಿತ್ರನು ಈ ರೀತಿಯಾಗಿ ಶಾಪವನ್ನು ಕೊಟ್ಟು ಹೊರಟು ಹೋದನು. ಎಲೈ ದೇವಿಯೇ ! ಅದು ಮೊದಲುಗೊಂಡು ನಾನುಆ ಋಷಿಯ ಶಾಪದಿಂದ ಮರೆಯಾಗಿದ್ದೇನೆ.

ಮಮ ಸ್ಥಾನೇ ವಿಶೇಷೇಣ ಪೂಜನಂ ಕುರುತೇ ಯದಿ ।
ತೇಷಾಂ ಹಿ ದುರಿತಂ ಯಚ್ಚ ನಶ್ಯತೇ ತತ್ ಕ್ಷಣಾದಪಿ ॥ ೬೫ ॥

ಮೃಣ್ಮಯೀಂ ಮಾಮಕೀಂ ಮೂರ್ತಿಂ ಕೃತ್ವಾ ಯೇ ಪೂಜಯನ್ತಿ ವೈ ।
ಅತ್ರ ಸ್ಥಾನೇ ವಿಶೇಷೇಣ ಮಾಮಕೇ ತು ವಸಂತಿ ಹಿ ॥ ೬೬ ॥

ಖಡ್ಗಧಾರೇಶ್ವರ ಇತಿ ನಾಮ್ನಾ ಖ್ಯಾತಃ ಕಲೌ ಯುಗೇ ।
ಕೃತೇ ವೈ ಮಂದಿರೋ ನಾಮ ತ್ರೇತಾಯಾಂ ಗೌರವಃ ಸ್ಮೃತಃ ॥ ೬೭ ॥

ದ್ವಾಪರೇ ವಿಶ್ವವಿಖ್ಯಾತಃ ಕಲೌ ಖಡ್ಗೇಶ್ವರಸ್ಸ್ಮೃತಃ ।
ದಕ್ಷಿಣಂ ಭಾಗಮಾಶ್ರಿತ್ಯ ಮಮ ಸ್ಥಾನಂ ಸುರೇಶ್ವರೀ ॥ ೬೮ ॥

ಇತಿ ಜ್ಞಾತ್ವಾ ತು ತತ್ರೈವ ಕೃತ್ವಾ ಮೂರ್ತಿಂ ಸದಾ ಬುಧಃ ।
ಪೂಜನಂ ಕುರುತೇ ನಿತ್ಯಂ ವಾಂಛಿತಂ ಫಲಮಾಪ್ನುಯಾತ್ ॥ ೬೯ ॥

ತೇ ಪುತ್ರಾಃ ಪುತ್ರಿಣೋ ಯತ್ರ ನಿರ್ಧನೋ ಧನಮಾಪ್ನುಯಾತ್
ಧರ್ಮಾರ್ಥಕಾಮಮೋಕ್ಷಾಂಶ್ಚ ಲಭತೇ ಮಾನವೋ ಭುವಿ ॥ ೭೦ ॥

---

೬೫. ಆದರೂ ಕೂಡ ಈ ನನ್ನ ಜಾಗದಲ್ಲಿ ಯಾರು ಪೂಜೆಯನ್ನು ಮಾಡುತ್ತಾರೆಯೋ ಅವರ ಪಾಪಗಳೆಲ್ಲವೂ ಒಡನೆಯೇ ನಾಶವಾಗಿ ಹೋಗುತ್ತವೆ.

೬೬. ಆ ಜಾಗದಲ್ಲಿ ಮಣ್ಣಿನಲ್ಲಿ ಲಿಂಗವನ್ನು ಮಾಡಿ ಯಾರು ಇಲ್ಲಿ ಪೂಜಿಸುತ್ತಾರೆಯೋ ಅವರು ನನ್ನನ್ನೇ ಹೊಂದುತ್ತಾರೆ.

೬೭–೬೯. ಈ ಜಾಗದಲ್ಲಿರುವ ಲಿಂಗವು ಕೃತಯುಗದಲ್ಲಿ ಮಂದಿರವೆಂದೂ ತ್ರೇತಾಯುಗದಲ್ಲಿ ಗೌರವವೆಂದೂ, ದ್ವಾಪರದಲ್ಲಿ ವಿಶ್ವವಿಖ್ಯಾತವೆಂದೂ, ಕಲಿಯುಗದಲ್ಲಿ ಖಡ್ಗಧಾರೇಶ್ವರನೆಂದೂ ಪ್ರಸಿದ್ಧಿಯನ್ನು ಹೊಂದಿದೆ. ಆ ಸಾಭ್ರಮತಿಯ ಬಲಗಡೆಯ ದಡದಲ್ಲಿ ನನ್ನ ಜಾಗವಿರುವುದು. ಅದನ್ನು ತಿಳಿದುಕೊಂಡು ಅಲ್ಲಿ ನನ್ನ ಮೂರ್ತಿಯನ್ನು ಮಾಡಿ ಪೂಜಿಸಿದರೆ ಅವರುಗಳಿಗೆ ಬೇಕಾದ ಇಷ್ಟವನ್ನು ಕೊಡುತ್ತೇನೆ.

೭೦. ಇಲ್ಲಿ ನನ್ನ ಪೂಜೆಯನ್ನು ಮಾಡಿದರೆ ಬಡವರಾದವರು ಹಣವನ್ನೂ ಮಕ್ಕಳಿಲ್ಲದವರು ಮಕ್ಕಳನ್ನೂ, ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಅಪೇಕ್ಷಿಸುವವರು ಅವರವರಿಗೆ ಬೇಕಾದುವನ್ನೂ ಹೊಂದುತ್ತಾರೆ.

**ಧೂಪಂ ದೀಪಂ ಚ ನೈವೇದ್ಯಂ ತಥಾ ವೈ ಚಂದನಾದಿಕಂ ।**
**ಯೇಽರ್ಪಯಂತಿ ಚ ದೇವೇಶಿ ಲೋಕಾನಾಥೇ ಮಹಾಶ್ವರಿ ॥**
**ನ ದುಃಖಂ ತು ಭವೇತ್ತೇಷಾಂ ಸತ್ಯಂ ಸತ್ಯಂ ವರಾನನೇ ॥ ೭೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾ ಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಖಡ್ಗಧಾರೇಶ್ವರ ಮಾಹಾತ್ಮ್ಯಂ ನಾಮ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೭೧. ಧೂಪ, ದೀಪ, ನೈವೇದ್ಯ ಮುಂತಾದುವನ್ನು ಇಲ್ಲಿ ಆ ಸ್ವಾಮಿಯಾದ ಮಹೇಶ್ವರನಿಗೆ ಯಾರು ಅರ್ಪಿಸುತ್ತಾರೆಯೋ ಅವರಿಗೆ ದುಃಖವೆಂಬುದು ಇಲ್ಲ. ಇದು ಸತ್ಯವಾದುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಸಾಭ್ರಮತೀ ಮಹಿಮೆಯಲ್ಲಿ ಖಡ್ಗಧಾರೇಶ್ವರ ಮಹಿಮೆ ಎಂಬ ನೂರ ನಲವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ ||



|| ಮಹಾದೇವ ಉವಾಚ ||

ಖಡ್ಗಧಾರಾದ್ದಕ್ಷಿಣತಸ್ತೀರ್ಥಂ ವರಮುಪಾವನಂ |
ದುಗ್ಧೇಶ್ವರಮಿತಿ ಪ್ರೋಕ್ತಂ ಸರ್ವಪಾಪಪ್ರಣಾಶನಂ || ೧ ||

ಯಸ್ಮಿನ್ ತೀರ್ಥೇ ನರಸ್ಸ್ನಾತ್ವಾ ದೃಷ್ಟ್ವಾ ದುಗ್ಧೇಶ್ವರಂ ಹರಂ |
ಪುಮಾನ್ ಸದ್ಯೋ ವಿಮುಚ್ಯೇತ ದುಃಖಾತ್ಪಾಪಸಮುದ್ಭವಾತ್ || ೨ ||

ದಧೀಚಿನಾ ತಪಸ್ತಪ್ತಂ ಸಾಭ್ರಮತ್ಯಾಸ್ತಟೇ ಶುಭೇ |
ಚಂದ್ರಭಾಗಾ ಮಹಾಪುಣ್ಯಾ ಗಂಗಯಾ ಸಂಗತಾ ಯತಃ || ೩ ||

---

## ನೂರ ನಲವತ್ತೆಂಟನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಈ ಖಡ್ಗಧಾರೆಯ ತೀರ್ಥದಿಂದ ಬಲಗಡೆಗೆ ಬಹು ಶ್ರೇಷ್ಠವಾದ ದುಗ್ಧೇಶ್ವರವೆಂಬ ತೀರ್ಥವಿದೆ. ಅದು ಪಾಪಗಳನ್ನೆಲ್ಲಾ ನಾಶಮಾಡುವಂತಹುದು.

೨. ಆ ದುಗ್ಧತೀರ್ಥದಲ್ಲಿ ಸ್ನಾನಮಾಡಿ ದುಗ್ಧೇಶ್ವರನ ದರ್ಶನವನ್ನು ಮಾಡಿದರೆ ಮಾನವನು ಸಮಸ್ತ ಪಾಪಗಳನ್ನೂ ಕಳೆದುಕೊಳ್ಳುವನು.

೩. ಈ ಜಾಗವಲ್ಲಿ ಸಾಭ್ರಮತಿಯ ದಡದಲ್ಲಿ ದಧೀಚಿ ಋಷಿಯು ತಪಸ್ಸು ಮಾಡಿದನು. ಇಲ್ಲಿ ಚಂದ್ರಭಾಗೆಯೆಂಬ ಬಹುಪುಣ್ಯಪ್ರದವಾದ ನದಿಯು ಗಂಗೆ (ಸಾಭ್ರಮತಿ) ಯೊಡನೆ ಸೇರುತ್ತದೆ.

ತತ್ರ ಸ್ನಾನಂ ಚ ದಾನಂ ಚ ಜಪಃ ಪೂಜಾ ತಪಸ್ತಥಾ ।
ಸರ್ವಮಕ್ಷಯತಾಂ ಯಾತಿ ದುಗ್ಧತೀರ್ಥಪ್ರಭಾವತಃ ॥ ೪ ॥

॥ ಶ್ರೀ ಪಾರ್ವತ್ಯುವಾಚ ॥

ದುಗ್ಧೇಶ್ವರಸಮುತ್ಪತ್ತಿಂ ಶ್ರೋತುಮಿಚ್ಛಾಮಿ ವೈ ಪ್ರಭೋ ।
ಮಹಿಮಾ ದುಗ್ಧತೀರ್ಥಸ್ಯ ಕಥ್ಯತಾಂ ಚ ಸುರೇಶ್ವರ ॥ ೫ ॥

॥ ಶ್ರೀ ಮಹಾದೇವ ಉವಾಚ ॥

ಪುರಾ ದೇವಾಸುರೇ ಯುದ್ಧೇ ದೈತ್ಯೈರ್ದೇವಾಃ ಪರಾಜಿತಾಃ ।
ಪಲಾಯನಪರಾ ಭೂತ್ವಾ ದಧೀಚ್ಯಾಶ್ರಮಮಾಗತಾಃ ॥ ೬ ॥

ಮುಕ್ತ್ವಾ ತತ್ರಾಯುಧಾನ್ಯೇವ ಗತಾ ದೇವಾ ದಿಶೋ ದಶ ।
ಪಶ್ಚಾತ್ಕೋಲಾಹಲಂ ಶ್ರುತ್ವಾ ದಧೀಚಿರ್ದೈತ್ಯಸಂಭವಮ್ ॥ ೭ ॥

ಪೀತವಾಂಸ್ತಾನಿ ಶಸ್ತ್ರಾಣಿ ಜಲೇನಾಪ್ಲಾವ್ಯ ಭಾರ್ಗವಃ ।
ಕಾಲೇನ ತೇ ಸುರಾಸ್ಸರ್ವೇ ಅಸ್ತ್ರಾಣ್ಯಾದಾತುಮುತ್ಸುಕಾಃ ॥ ೮ ॥

---

೪ ಆ ದುಗ್ಧತೀರ್ಥದ ಪ್ರಭಾವದಿಂದ ಅಲ್ಲಿ ಮಾಡಿದ ಸ್ನಾನ, ದಾನ, ಜಪ, ಪೂಜೆ, ತಪಸ್ಸುಗಳೆಲ್ಲವೂ ಅಕ್ಷಯವಾಗಿ ಆಗುತ್ತವೆ.

೫. ಶ್ರೀ ಪಾರ್ವತಿಯು ಹೇಳಿದಳು–ಎಲೈ ಸುರೇಶ್ವರನೇ ? ದುಗ್ಧೇಶ್ವರನು ಹುಟ್ಟಿದುದನ್ನು ಕೇಳಲು ಇಚ್ಛಿಸುತ್ತೇನೆ. ಅದರಂತೆಯೇ ಆ ದುಗ್ಧತೀರ್ಥದ ಮಹಿಮೆಯನ್ನೂ ಹೇಳು.

೬. ಶ್ರೀ ಮಹಾದೇವನು ಹೇಳಿದನು–ಹಿಂದೆ ದೇವಾಸುರರ ಯುದ್ಧವು ನಡೆದಾಗ ದೈತ್ಯರು ದೇವತೆಗಳನ್ನು ಸೋಲಿಸಿದರು. ಹಾಗೆ ಸೋತ ದೇವತೆಗಳು ಓಡಿಹೋಗುತ್ತಾ ದಧೀಚಿ ಮಹರ್ಷಿಯ ಆಶ್ರಮಕ್ಕೆ ಬಂದರು.

೭-೧೧. ಆ ಆಶ್ರಮದಲ್ಲಿ ದೇವತೆಗಳು ತಮ್ಮ ಆಯುಧಗಳನ್ನೆಲ್ಲಾ ಬಿಸುಟು ಸಿಕ್ಕಿದ ಕಡೆಗೆ ಹೊರಟು ಹೋದರು. ಅನಂತರ ಆ ಆಶ್ರಮಕ್ಕೆ ಆ ದೇವತೆಗಳನ್ನು ಹುಡುಕಿಕೊಂಡು ದೈತ್ಯರು ಬಂದರು ಈ ದೈತ್ಯರು ಬಂದ ಶಬ್ದವನ್ನು ಕೇಳಿ ದಧೀಚಿಋಷಿಯು ಆ ಶಸ್ತ್ರಗಳೆಲ್ಲವನ್ನೂ ನೀರಿನಲ್ಲಿ ತೇದು ಕುಡಿದುಬಿಟ್ಟನು. ಕೆಲವು ಕಾಲವನ್ನು ಬಿಟ್ಟುಕೊಂಡು ಆ ದೇವತೆಗಳು ತಮ್ಮ ತಮ್ಮ ಅಸ್ತ್ರಗಳನ್ನು

ಗುರುಣಾ ಸಹಿತಾಸ್ಸರ್ವೇ ದಧೀಚ್ಯಾಶ್ರಮಮಾಗಮನ್ ।
ನಾನಾಸತ್ವಸಮಾಕೀರ್ಣಂ ನಾನಾವೈರವಿವರ್ಜಿತಂ ॥ ೯ ॥

ಮಾರ್ಜಾರಮೂಷಕಾಶ್ಚೈವ ಪರಸ್ಪರಮುದಾನ್ವಿತಾಃ ।
ನಕುಲೈಸ್ಸಹ ಸರ್ಪಾಶ್ಚ ಕ್ರೀಡಂತೇ ತೇ ಪರಸ್ಪರಂ ॥ ೧೦ ॥

ಏವಂವಿಧಾನ್ಯನೇಕಾನಿ ಸಾಶ್ಚರ್ಯಾಣಿ ತದಾಶ್ರಮೇ ।
ಪಶ್ಯಂತೋ ವಿಬುಧಾಃ ಸರ್ವೇ ವಿಸ್ಮಯಂ ಪರಮಂ ಗತಾಃ ॥ ೧೧ ॥

ದದೃಶುಸ್ತೇ ಮುನಿವರಮಾಸನೋಪರಿ ಸಂಸ್ಥಿತಂ ।
ಯತ್ರ ಸಾಭ್ರಮತೀ ಪುಣ್ಯಾ ಮಿಳಿತಾ ಚಂದ್ರಭಾಗಯಾ ॥ ೧೨ ॥

ವರ್ಚಸಾ ಪರಮೇಣೈವ ಭ್ರಾಜಮಾನಂ ಯಥಾ ರವಿಃ !
ವಿಭಾವಸುದ್ವಿತೀಯಂ ಚ ಸುವರ್ಚಾಭಾರ್ಯಯಾ ಸಹ ॥ ೧೩ ॥

---

ತೆಗೆದುಕೊಳ್ಳಲು ಗುರುವಾದ ಬೃಹಸ್ಪತಿಯೊಡನೆ ದಧೀಚಿಯ ಆಶ್ರಮಕ್ಕೆ ಬಂದರು. ಆಗ ಆ ಆಶ್ರಮವು ಬಗೆ ಬಗೆಯಾದ ಪ್ರಾಣಿಗಳಿಂದ ಕೂಡಿದ್ದರೂ ಯಾವ ವಿಧವಾದ ವೈರವನ್ನೂ ಹೊಂದಿರಲಿಲ್ಲ. ಬೆಕ್ಕು, ಇಲಿಗಳು ಸ್ವಭಾವ ವೈರವನ್ನು ಬಿಟ್ಟು ಅನ್ಯೋನ್ಯ ಪ್ರೀತಿಯಿಂದಿದ್ದವು ಹಾವು ಮುಂಗಸಿಗಳು ಜೊತೆಯಲ್ಲಿ ಆಟವಾಡುತ್ತಿದ್ದವು. ಈ ರೀತಿಯಾದ ಅನೇಕ ಬಗೆಯ ಆಶ್ಚರ್ಯವನ್ನು ಆ ಆಶ್ರಮದಲ್ಲಿ ನೋಡುತ್ತಾ ಆ ದೇವತೆಗಳು ಬಹು ಆಶ್ಚರ್ಯವನ್ನು ಹೊಂದಿದರು

೧೨. ಸಾಭ್ರಮತಿಯು ಚಂದ್ರಭಾಗ ನದಿಯೊಡನೆ ಸಂಗಮವಾಗಿದ್ದ ಸ್ಥಳದಲ್ಲಿ ಆ ಆಶ್ರಮವಿದ್ದಿತು. ಆ ಆಶ್ರಮದಲ್ಲಿ ಆಸನದಲ್ಲಿ ಕುಳಿತಿದ್ದ ದಧೀಚಿಯನ್ನು ದೇವತೆಗಳು ಕಂಡರು.

೧೩. ಆತನು ತನ್ನ ಉತ್ತಮವಾದ ಹೊಳೆಯುವ ಬ್ರಹ್ಮತೇಜಸ್ಸಿನಿಂದ ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ತನ್ನ ಹೆಂಡತಿಯಾದ ಸುವರ್ಚೆಯೊಡನೆ ಕೂಡಿಕೊಂಡು ಅಗ್ನಿ ಶುಶ್ರೂಷೆಯನ್ನು ಮಾಡುತ್ತಿದ್ದನು.

ಯಥಾ ಬ್ರಹ್ಮಾ ಹಿ ಸಾವಿತ್ರ್ಯಾ ತಥಾಽಸೌ ಮುನಿಸತ್ತಮಃ ।
ದೃಷ್ಟಸ್ಸುರವರೈಸ್ಸರ್ವೈಃ ಪ್ರಣಿಪಾತಪುರಸ್ಸರಂ ।
ಊಚಿರೇ ತಂ ತದಾ ದೇವಾಃ ಬೃಹಸ್ಪತಿಪುರೋಗಮಾಃ ॥ ೧೪ ॥

॥ ದೇವಾ ಊಚುಃ ॥

ತ್ವಂ ದಾತಾ ತ್ರಿಷು ಲೋಕೇಷು ವಿದಿತಃ ಪೂರ್ವಮೇವ ಚ ।
ಯಾಚ್ಞಾರ್ಥಂ ಚ ವಯಂ ಸರ್ವೇ ತ್ವತ್ಸಕಾಶಂ ಸಮಾಗತಾಃ ।
ಭಯಭೀತಾ ವಯಂ ಸರ್ವೇ ಶಸ್ತ್ರಾಣಿ ದಾತುಮರ್ಹಸಿ ॥ ೧೫ ॥

॥ ಮಹಾದೇವ ಉವಾಚ ॥

ಇತ್ಯುಕ್ತೋ ಮುನಿವರ್ಯೋಽಸೌ ದೇವಾನಾಹ ಮಹಾಮತಿಃ ॥ ೧೬ ॥

॥ ದಧೀಚಿರುವಾಚ ॥

ಪೀತಾನಿ ತಾನಿ ಭೋ ದೇವಾ ಜಲೇನಾಪ್ಲಾವ್ಯ ಮಂತ್ರತಃ ॥ ೧೭ ॥

---

೧೪. ಈರೀತಿ ಕುಳಿತಿರುವ ದಧೀಚಿಋಷಿಯು ಬ್ರಹ್ಮನು ಸಾವಿತ್ರಿಯೊಡನೆ ಕುಳಿತಂತೆ ಕಂಡುಬರುತ್ತಿದ್ದನು. ನೋಡಿದೊಡನೆಯೇ ಆತನಿಗೆ ನಮಸ್ಕರಿಸಿ ಬೃಹಸ್ಪತಿಯೇ ಮುಂತಾದ ದೇವತೆಗಳು ಅವನನ್ನು ಕುರಿತು ಇಂತೆಂದರು.

೧೫. ದೇವತೆಗಳು ಹೇಳಿದರು–ಎಲೈ ಋಷಿಯೆ! ಮೂರು ಲೋಕಗಳಲ್ಲಿಯೂ ನೀನು ದಾನಿಯೆಂದು ಪ್ರಸಿದ್ಧಿಯಾಗಿದೆ. ನಿನ್ನ ಬಳಿಗೆ ನಾವು ಯಾಚನೆಗೋಸ್ಕರ ಬಂದಿದ್ದೇವೆ. ನಾವು ಬಹು ಹೆದರಿಕೆಯುಳ್ಳವರಾಗಿದ್ದೇವೆ. ನಮ್ಮ ನಮ್ಮ ಶಸ್ತ್ರಗಳನ್ನು ನಮ ನಮಗೆ ಕೊಡು.

೧೬. ಮಹಾದೇವನು ಹೇಳಿದನು-ದೇವತೆಗಳು ಹೀಗೆಂದು ಕೇಳುತ್ತಲೂ ಬುದ್ಧಿವಂತನಾದ ಆ ಋಷಿಯು ದೇವತೆಗಳನ್ನು ಕುರಿತು ಇಂತೆಂದನು.

೧೭. ದಧೀಚಿಯು ಹೇಳಿದನು-ಎಲೈ ದೇವತೆಗಳಿರ! ಮಂತ್ರದಿಂದ ಅವೆಲ್ಲವನ್ನೂ ನೀರಿನಲ್ಲಿ ಕರಗಿಸಿ ಕುಡಿದುಬಿಟ್ಟೆನು.

|| ಮಹಾದೇವ ಉವಾಚ ||

ದೇವಾಸ್ತತೋಽಬ್ರುವನ್ ವಿಪ್ರಂ ದೈತ್ಯಾನಾಂ ನಿಧನಾಯ ಚ ।
ದೇಹ್ಯಸ್ಥೀನಿ ತ್ವರಾ ವಿಪ್ರ ದತ್ತಾನೀತಿ ದ್ವಿಜೋಽವದತ್ || ೧೮ ||

ಇತ್ಯುಕ್ತ್ವಾ ತಾನ್ ಸ್ವಪತ್ನೀಂ ಸ ಪ್ರೇಷಯಾಮಾಸ ಚಾಶ್ರಮಂ ।
ತದೋವಾಚ ದ್ವಿಜೋ ಹೃಷ್ಟೋ ದೇವಾನ್ ಸ್ಮಿತ್ವಾ ಮಹಾಮತಿಃ || ೧೯ ||

|| ದಧೀಚಿರುವಾಚ ||

ಪೀತಾನಿ ತಾನಿ ಭೋ ದೇವಾಃ ಗೃಹ್ಣೀಧ್ವಂ ಚ ಯಥಾತಥಂ || ೨೦ ||

|| ಮಹಾದೇವ ಉವಾಚ ||

ತತೋಽಬ್ರುವನ್ ಸುರಾ ವಿಪ್ರಂ ಸ್ಮಯಂತಂ ಛಲಯಾ ಗಿರಾ || ೨೧ ||

---

೧೮. ಮಹಾದೇವನು ಹೇಳಿದನು-ಆಗ ದೇವತೆಗಳು ನಾವು ದೈತ್ಯರನ್ನು ನಿಗ್ರಹಿಸಬೇಕು. ಆದುದರಿಂದ ಆ ಅಸ್ತ್ರಗಳನ್ನು ನುಂಗಿರುವ ನೀನು ನಿನ್ನ ಮೂಳೆಗಳನ್ನೇ ಕೊಡು ಎಂದರು. ಅದಕ್ಕೆ ಆ ಋಷಿಯು ಹಾಗೆಯೇ ಆಗಲಿ. ಕೊಟ್ಟಿದ್ದೇನೆ. ಎಂದನು.

೧೯. ಈ ಋಷಿಯು ಆ ದೇವತೆಗಳಿಗೆ ಹೀಗೆ ಹೇಳಿ ತನ್ನ ಹೆಂಡತಿಯನ್ನು ಪರ್ಣಶಾಲೆಗೆ ಕಳುಹಿಸಿ ಆ ದೇವತೆಗಳನ್ನು ನೋಡಿ ನಗುತ್ತಾ ಸಂತೋಷದಿಂದ ಇಂತೆಂದನು.

೨೦. ದಧೀಚಿಯು ಹೇಳಿದನು-ಎಲೈ ದೇವತೆಗಳಿರ ! ನಾನು ನಿಮ್ಮ ಆ ಅಸ್ತ್ರಗಳನ್ನು ಕುಡಿದಿದ್ದೇನೆ. ಈಗ ಯಥೇಚ್ಛವಾಗಿ ನಿಮ್ಮ ನಿಮ್ಮದನ್ನು ನೀವು ತೆಗೆದುಕೊಳ್ಳಿರಿ.

೨೧. ಮಹಾದೇವನು ಹೇಳಿದನು-ಆಗ ಆ ದೇವತೆಗಳು ಈ ಋಷಿಯು ಹುಸಿನಗು ನಗುತ್ತಲೇ ಅವು ಇಲ್ಲವೆಂದು ಹೇಳುತ್ತಿರುವ ಅಭಿಪ್ರಾಯವನ್ನು ತಿಳಿದು ಇಂತೆಂದರು.

|| ದೇವಾ ಊಚುಃ ||

ತ್ವಯಿ ಜೀವತಿ ಭೋ ಬ್ರಹ್ಮನ್ ಕುತೋಽಸ್ಥೀನಿ ಲಭಾಮಹೇ || ೨೨ ||

|| ಮಹಾದೇವ ಉವಾಚ ||

ಪ್ರಹಸ್ಯೋವಾಚ ವಿಪ್ರರ್ಷಿಃ ತಿಷ್ಠಧ್ವಂ ಕ್ಷಣಮೇಕತಃ ।
ಸ್ವಯಮೇವ ಚ ಭೋ ದೇವಾಃ ತ್ಯಕ್ಷ್ಯಾಮ್ಯದ್ಯ ಕಳೇಬರಂ || ೨೩ ||

ಇತ್ಯುಕ್ತ್ವಾ ಚ ದ್ವಿಜೋ ದೇವಿ ಯೋಗಮಾಸ್ಥಾಯ ಯೋಗವಿತ್ ।
ಬ್ರಹ್ಮಲೋಕಂ ಗತಸ್ಸದ್ಯಃ ಯತೋ ನಾಽಽವರ್ತತೇ ಪುನಃ || ೨೪ ||

ತತಸ್ಸರ್ವೇ ಸುರಾಸ್ತತ್ರ ದೃಷ್ಟ್ವಾ ತಂ ವಿಲಯಂ ಗತಂ ।
ಚಿಂತಯಂತಸ್ಸುರಗುಣಾಃ ಕಥಂ ಚ ವಿಶಸಾಮಹೇ ।
ಸುರಭಿಂ ಚಾಹ್ವಯಾಮಾಸುಸ್ತಾಮುವಾಚ ಶಚೀಪತಿಃ || ೨೫ ||

---

೨೨. ದೇವತೆಗಳು ಹೇಳಿದರು-ಎಲೈ ಬ್ರಾಹ್ಮಣನೆ! ನೀನು ಬದುಕಿರುವಾಗಲೇ ನಿನ್ನ ಮೂಳೆಗಳನ್ನು ನಾವು ಹೇಗೆ ತೆಗೆದುಕೊಳ್ಳಲು ಸಾಧ್ಯವಾಗುವುದು.

೨೩. ಮಹಾದೇವನು ಹೇಳಿದನು-ಆಗ ಆ ಋಷಿಯು ನಗುತ್ತ ಎಲೈ ದೇವತೆಗಳಿರ! ಒಂದು ಕ್ಷಣಕಾಲ ನೀವೆಲ್ಲರೂ ಒಂದು ಕಡೆಯಲ್ಲಿರಿ- ನಾನೇನೇ ಈ ದೇಹವನ್ನು ಬಿಟ್ಟು ಬಿಡುತ್ತೇನೆ.

೨೪. ಆ ಋಷಿಯು ಹೀಗೆಂದು ಹೇಳಿ ಯೋಗಾಭ್ಯಾಸಕ್ಕೆ ಕುಳಿತು ಎಲ್ಲಿಗೆ ಹೋದರೆ ಮತ್ತೆ ಜನ್ಮಾದಿಗಳಿರುವುದಿಲ್ಲವೋ ಅಂತಹ ಬ್ರಹ್ಮಲೋಕಕ್ಕೆ ಹೊರಟು ಹೋದನು.

೨೫. ಆಗ ದೇವತೆಗಳು ಆತನು ಯೋಗದಿಂದ ಹೊರಟುಹೋದುದನ್ನು ತಿಳಿದರು. ಇತ್ತ ಈ ದೇಹವನ್ನು ಕೊಲ್ಲುವುದು ಹೇಗೆಂದು ಯೋಚಿಸುತ್ತಿದ್ದರು. ಆಗ ಅವರು ಸುರಭಿಯೆಂಬ ಕಾಮಧೇನುವನ್ನು ಕರೆಸಿದರು. ಅದನ್ನು ಕುರಿತು ಇಂದ್ರನು ಹೀಗೆಂದು ಹೇಳಿದನು.

|| ಇಂದ್ರ ಉವಾಚ ||

ಕಳೇಬರಂ ದ್ವಿಜೇಂದ್ರಸ್ಯ ಲಿಹ ತ್ವಂ ವಚಸಾ ಮಮ || ೨೬ ||

|| ಮಹಾದೇವ ಉವಾಚ ||

ತಥೇತಿ ಚ ವಚೋ ಮತ್ವಾ ತತ್‍ಕ್ಷಣಾದವಲಿಹ್ಯ ತತ್ ।
ನಿರ್ಮಾಂಸಂ ಚ ಕೃತಂ ಸದ್ಯಃ ತಯಾ ಧೇನ್ವಾ ಕಳೇಬರಂ || ೨೭ ||

ಜಗೃಹುಸ್ತಾನಿ ಚಾಸ್ಥೀನಿ ಚಕ್ರುಶ್ಚಕ್ರಾಣಿ ವೈ ಸುರಾಃ ।
ತಸ್ಯ ವಂಶೋದ್ಭವಂ ವಜ್ರಂ ಆಸೀದ್ಬ್ರಹ್ಮಶಿರಸ್ತಥಾ || ೨೮ ||

ಶಸ್ತ್ರಾಣ್ಯಸ್ತ್ರಾಣಿ ಕೃತ್ವಾಸನ್ ಮಹಾಬಲಪರಾಕ್ರಮಾಃ ।
ಯಯುರ್ದೇವಾಸ್ತ್ವರಾಯುಕ್ತಾ ವೃತ್ರಘಾತನತತ್ಪರಾಃ || ೨೯ ||

---

೨೬. ಇಂದ್ರನುಹೇಳಿದನು–ಎಲೈ ಸುರಭಿಯೇ ! ನೀನು ನನ್ನ ಮಾತಿನಂತೆ ಈ ದಧೀಚಿಯ ದೇಹವನ್ನು ನೆಕ್ಕು.

೨೭. ಮಹಾದೇವನು ಹೇಳಿದನು– ಆ ಸುರಭಿಯು ಇಂದ್ರನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಆಕ್ಷಣದಲ್ಲಿಯೇ ಆ ಶರೀರವನ್ನು ನೆಕ್ಕಿ ಮಾಂಸವಿಲ್ಲದಂತೆ ಮಾಡಿತು.

೨೮. ದೇವತೆಗಳು ಅವನ ಮೂಳೆಗಳನ್ನೆಲ್ಲಾ ತೆಗೆದುಕೊಂಡರು. ಆ ಬೆನ್ನುಮೂಳೆಯೇ ವಜ್ರವಾಯಿತು. (ವಜ್ರಾಯುಧವಾಯಿತು) ಬ್ರಹ್ಮ ಶಿರಸ್ಸೆಂಬ ಅಸ್ತ್ರವೂ ಆಯಿತು.

೨೯. ಉಳಿದ ಮೂಳೆಗಳಿಂದಲೂ ಶಸ್ತ್ರಗಳನ್ನೂ ಅಸ್ತ್ರಗಳನ್ನೂ ಮಾಡಿಕೊಂಡರು. ಇದರಿಂದ ಹೆಚ್ಚು ಬಲವನ್ನು ಹೊಂದಿದವರಾಗಿ ಆ ವೃತ್ರಾಸುರನನ್ನು ಕೊಲ್ಲಲು ಅವಸರದಿಂದ ಹೋದರು.

ತತಸ್ಸುವರ್ಚಾ ತು ದಧೀಚಿಪತ್ನೀ
ಸಂಪ್ರೇಷಿತಾ ಯಾ ಸುರಕಾರ್ಯಸಿದ್ಧಯೇ ॥
ವಿಲೋಕಯಾಮಾಸ ಸಮೇತ್ಯ ತತ್ರ
ಮೃತಂ ಪತಿಂ ದೇಹಮಥೋ ವಿಶಸ್ತಂ ॥ ೩೦ ॥

ಜ್ಞಾತ್ವಾ ತು ತತ್ಸರ್ವಮಥೋ ಸುರಾಣಾಂ
ಕೃತಂ ತದಾನೀಂ ಚ ಚುಕೋಪ ಸಾಧ್ವೀ ॥
ದದೌ ತದಾ ಶಾಪಮತೀವ ರುಷ್ಟಾ
ತದಾ ಸುವರ್ಚಾ ಋಷಿವರ್ಯಪತ್ನೀ ॥ ೩೧ ॥

ಅಹೋ ಸುರಾ ದುಷ್ಟಚರಾಶ್ಚ ಸರ್ವೇ
ಹ್ಯನೇಕಶಸ್ತ್ರಾಶ್ಚ ತಥೈವ ಲುಬ್ಧಾಃ ॥
ತಸ್ಮಾತ್ತು ಸರ್ವೇ ಹ್ಯಪ್ರಜಾ ಭವಂತು
ಸೇಂದ್ರಾಸ್ಸುರಾದ್ಯಪ್ರಭೃತೀತ್ಯುವಾಚ ॥ ೩೨ ॥

---

೩೦. ದೇವತೆಗಳು ತಮ್ಮ ಕಾರ್ಯಸಿದ್ಧಿಗೋಸ್ಕರ ಕಾಣದಂತೆ ದೂರಕ್ಕೆ ಕಳುಹಿಸಿದ್ದ ಆ ದಧೀಚಿಯ ಹೆಂಡತಿಯಾದ ಸುವರ್ಚೆಯು ಅಲ್ಲಿಗೆ ಬಂದು ಗಂಡನು ಸತ್ತಿರುವುದನ್ನೂ ಅವನ ದೇಹವು ಚೂರು ಚೂರಾಗಿರುವುದನ್ನೂ ನೋಡಿದಳು.

೩೧. ಆಗ ಈ ಕೆಲಸವೆಲ್ಲವೂ ಈ ದೇವತೆಗಳಿಂದಲೇ ನಡೆದಿರತಕ್ಕದ್ದೆಂದು ಆಕೆಗೆ ತಿಳಿಯಿತು. ತಿಳಿದೊಡನೆಯೇ ಸಂಕಟವೂ ಕೋಪವೂ ಬಂದು ಅವರನ್ನು ಶಪಿಸಿದಳು.

೩೨. ಎಲೈ ಸುರರಿರಾ ! ನೀವೆಲ್ಲರೂ ದುಷ್ಟರು. ಅತ್ಯಾಶೆಯುಳ್ಳವರು. ಎಂದಿವೇ ಮೊದಲಾದ ಮಾತುಗಳಿಂದ ತಿರಸ್ಕರಿಸುತ್ತಾ ನೀವೆಲ್ಲರೂ ಕೂಡ ಇಂದಿನಿಂದ ಮೊದಲುಗೊಂಡು ಮಕ್ಕಳಿಲ್ಲದವರಾಗಿರಿ. ಎಂದಳು.

ಏವಂ ಶಾಪಂ ದದೌ ತೇಷಾಂ ಸುರಾಣಾಂ ಸಾ ತಪಸ್ವಿನೀ ।
ಉಪವಿಶ್ಯಾಶ್ವತ್ಥಮೂಲೇ ಸಾಭ್ರಮುತ್ಯಾಸ್ತಟೇ ಸ್ಥಿತಾ ॥ ೩೩ ॥

ಸಗರ್ಭಾ ಸಾ ಸತೀ ಸಾಧ್ವೀ ಸ್ವೋದರಂ ವಿದದಾರ ಹ ।
ನಿರ್ಗತೋ ಜಠರಾದ್ಗರ್ಭೋ ದಧೀಚಸ್ಯ ಮಹಾತ್ಮನಃ ॥ ೩೪ ॥

ಸಾಕ್ಷಾದ್ರುದ್ರಾವತಾರೋಽಸೌ ಪಿಪ್ಪಲಾದೋ ಮಹಾಪ್ರಭುಃ ।
ಪ್ರಹಸ್ಯ ಜನನೀ ಗರ್ಭಮುವಾಚ ವಚನಂ ಮಹತ್ ॥ ೩೫ ॥

ಸುವರ್ಚಾ ತಂ ಪಿಪ್ಪಲಾದಂ ಚಿರಂ ತಿಷ್ಠಾಸ್ಯ ಸನ್ನಿಧೌ ।
ಅಶ್ವತ್ಥಸ್ಯ ಮಹಾಭಾಗ ಸರ್ವೇಷಾಂ ಶುಭದೋ ಭವ ॥ ೩೬ ॥

ತಥೈವ ಭಾಷಮಾಣಾ ಸಾ ಸುವರ್ಚಾ ತನಯಂ ಪ್ರತಿ ।
ಪತಿಂ ಪ್ರತ್ಯಗಮತ್ಸಾಧ್ವೀ ಪರಮೇಣ ಸಮಾಧಿನಾ ॥ ೩೭ ॥

---

೩೩. ಈ ರೀತಿಯಾಗಿ ಅವರಿಗೆಲ್ಲರಿಗೂ ಆ ತಪಸ್ವಿನಿಯು ಶಾಪವನ್ನು ಕೊಟ್ಟು ಅಲ್ಲಿನ ಸಾಭ್ರಮತೀ ನದಿಯ ತೀರದಲ್ಲಿರುವ ಅರಳಿಯ ಮರದ ಬುಡದಲ್ಲಿ ಕುಳಿತಳು.

೩೪. ಆಗ ಆಕೆಯು ಗರ್ಭಿಣಿಯಾಗಿದ್ದಳು. ದುಃಖದಿಂದ ತನ್ನ ಹೊಟ್ಟೆಯನ್ನು ಸೀಳಿಕೊಂಡಳು. ಅದರಿಂದ ಆ ದಧೀಚಿಯ ವೀರ್ಯದಿಂದ ಕೂಡಿದ ಗರ್ಭವು ಹೊರಗೆ ಬಂದಿತು.

೩೫. ಅವನೇನೇ ಪ್ರತ್ಯಕ್ಷನಾದ ರುದ್ರನ ಅವತಾರಿಯಾದ ಪಿಪ್ಪಲಾದನೆಂಬ ಋಷಿಯು. ಆಗ ಆ ಮಗುವನ್ನು ನೋಡಿ ಆಕೆಯು ನಗುತ್ತ ಇಂತೆಂದಳು.

೩೬. ಎಲೈ ಮಗುವೇ! ನೀನು ಯಾವಾಗಲೂ ಈ ಅರಳಿಯ ಮರದ ಬುಡದಲ್ಲಿಯೇ ಕುಳಿತಿರು. ಎಲ್ಲರಿಗೂ ಒಳ್ಳೆಯದನ್ನುಂಟುಮಾಡು.

೩೭. ದಧೀಚಿ ಪತ್ನಿಯಾದ ಈ ಸುವರ್ಚೆಯು ಮಗನಿಗೆ ಹೀಗೆ ಹೇಳಿ ಯೋಗಾಭ್ಯಾಸದಿಂದ ಈ ದೇಹವನ್ನು ತ್ಯಜಿಸಿ ಪತಿಯನ್ನು ಅನುಸರಿಸಿ ಹೋದಳು.

ಏವಂ ದಧೀಚಿಪತ್ನೀ ಸ್ವಪತಿನಾ ಸ್ವರ್ಗಮಾಸ್ಥಿತಾ |
ತೇ ದೇವಾಃ ಕೃತಶಸ್ತ್ರಾಸ್ತ್ರಾ ದೈತ್ಯಾನ್ಪ್ರತಿ ಸಮುತ್ಸುಕಾಃ || ೩೮ ||

ಆಜಗ್ಮುಶ್ಚೇಂದ್ರಮುಖ್ಯಾಶ್ಚ ಮಹಾಬಲಪರಾಕ್ರಮಾಃ |
ಕಾಮಧೇನುಃ ಪ್ರಸುಸ್ರಾವ ಯಯೌ ಯತ್ರ ದ್ವಿಜಕ್ಷಯಃ || ೩೯ ||

ಮುನೇಃ ಪ್ರಭಾವತೋ ದುಗ್ಧಂ ಲಿಂಗರೂಪಂ ವ್ಯಜಾಯತ |
ದುಗ್ಧೇಶ್ವರಮಿತಿ ಖ್ಯಾತಂ ದೇವಿ ಸಾಭ್ರಮತೀ ತಟೇ || ೪೦ ||

ತದಾಪ್ರಭೃತಿ ತೀರ್ಥಂ ಹಿ ತನ್ನಾಮ್ನಾ ಪ್ರಥಿತಂ ಭುವಿ |
ಅತುಲಂ ಯಸ್ಯ ಮಾಹಾತ್ಮ್ಯಂ ಶ್ರವಣಾತ್ಪಾತಕಾಪಹಂ || ೪೧ ||

---

೩೮. ಈ ರೀತಿಯಾಗಿ ಆ ಸುವರ್ಚೆಯು ತನ್ನ ಗಂಡನನ್ನು ಅನುಸರಿಸಿ ಹೋದಳು. ಅತ್ತ ದೇವತೆಗಳು ಶಸ್ತ್ರಾಸ್ತ್ರಗಳನ್ನು ಮಾಡಿಕೊಂಡು ದೈತ್ಯರಮೇಲೆ ಬೀಳಲನುವಾದರು.

೩೯. ಈ ರೀತಿ ಪರಾಕ್ರಮವನ್ನು ಹೊಂದಿ ಆ ದೇವತೆಗಳು ಹೊರಟು ಹೋದರು. ಕಾಮಧೇನುವು ಯಾವ ಜಾಗದಲ್ಲಿ ಆ ದಧೀಚಿಯು ಸತ್ತನೋ ಆ ಜಾಗದಲ್ಲಿ ಹಾಲನ್ನು ಬಹುವಾಗಿ ಸುರಿಸಿತು.

೪೦. ಆ ಕಾಮಧೇನುವು ಸುರಿಸಿದ ಹಾಲು ಆ ಋಷಿಯ ಪ್ರಭಾವದಿಂದ ಲಿಂಗಾಕಾರವಾಗಿ ಪರಿಣಮಿಸಿತು. ಅದು ಆ ಸಾಭ್ರಮತಿಯ ದಡದಲ್ಲಿ ದುಗ್ಧೇಶ್ವರನೆಂದು ಹೆಸರುಗೊಂಡಿದೆ.

೪೧. ಅದು ಮೊದಲುಗೊಂಡು ಆ ತೀರ್ಥವೂ ದುಗ್ಧತೀರ್ಥವೆಂದೇ ಹೆಸರನ್ನು ಹೊಂದಿತು. ಈ ಲಿಂಗ ಮತ್ತು ತೀರ್ಥಗಳ ಉತ್ತಮವಾದ ಮಹಿಮೆಯನ್ನು ಕೇಳಿದರೆ ಸಮಸ್ತ ಪಾಪಗಳೂ ಹೋಗುತ್ತವೆ.

**ಯೇ ಶೃಣ್ವಂತಿ ನರಾ ಭಕ್ತ್ಯಾ ದುಗ್ಧೇಶ್ವರಮುಹಶ್ಶುಭಂ ।**
**ತೇಽಪಿ ಪಾಪವಿನಿರ್ಮುಕ್ತಾ ಯಾಂತಿ ರುದ್ರಪದಂ ಮಹತ್ ॥ ೪೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ದುಗ್ಧೇಶ್ವರ ಮಹಾತ್ಮ್ಯಂ ನಾಮ ಅಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೪೨. ಈ ದುಗ್ಧೇಶ್ವರನ ಪುಣ್ಯಕರವಾದ ವಿಷಯವನ್ನು ಯಾರು ಕೇಳು ತ್ತಾರೆಯೋ ಅವರೂ ಕೂಡ ಪಾಪವನ್ನು ಕಳೆದುಕೊಂಡು ರುದ್ರನ ಉತ್ತಮ ಸ್ಥಾನವಾದ ಕೈಲಾಸವನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ದುಗ್ಧೇಶ್ವರ ಮಹಿಮೆ ಎಂಬ ನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನಪಂಚಾಶದಧಿಕಶತತಮೋऽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ದುಗ್ಧೇಶ್ವರಸ್ಯ ಪೂರ್ವೇ ತು ತೀರ್ಥಂ ಪರಮಪಾವನಂ ।
ಚಂದ್ರಭಾಗೇತಿ ವೈ ನಾಮ್ನಾ ನದೀ ಯತ್ರ ತು ಸಂಗತಾ ॥ ೧ ॥

ತತ್ರ ಚಂದ್ರೇಶ್ವರೋ ದೇವೋ ನಿತ್ಯಂ ತಿಷ್ಠತಿ ಪುಣ್ಯದಃ ।
ಯೋ ಹರಸ್ಸರ್ವದಾ ವ್ಯಾಪೀ ಲೋಕಾನಾಂ ಸುಖದೋ ಮಹಾನ್ ॥ ೨ ॥

ಅತ್ರ ಸ್ನಾನಂ ಪ್ರಕುರ್ವಂತಿ ಧ್ಯಾನಂ ಕುರ್ವಂತಿ ನಿತ್ಯಶಃ ।
ತತ್ಫಲಂ ಪ್ರಾಪ್ನುಯುಸ್ತೇ ವೈ ಸಾಭ್ರಮತ್ಯಾಂ ಶಿವಾರ್ಚನಾತ್ ॥ ೩ ॥

---

## ನೂರ ನಲವತ್ತೊಂಭತ್ತನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು– ಈ ದುಗ್ಧೇಶ್ವರನಿಗಿಂತಲೂ ಪೂರ್ವಕ್ಕೆ ಹೋದರೆ ಪರಮಪಾವನವಾದ ತೀರ್ಥವೊಂದಿರುವುದು. ಅಲ್ಲಿ ಚಂದ್ರಭಾಗೆಯೆಂಬ ನದಿಯು ಸಾಭ್ರಮತಿಯೊಡನೆ ಸಂಗಮವಾಗುತ್ತದೆ.

೨. ಆ ಜಾಗದಲ್ಲಿ ಚಂದ್ರೇಶ್ವರನೆಂಬ ಸ್ವಾಮಿಯು ಯಾವಾಗಲೂ ಇದ್ದಾನೆ. ಅವನೇ ಅಲ್ಲಿ ಪುಣ್ಯವನ್ನು ಕೊಡತಕ್ಕವನು. ಅವನು ಅಲ್ಲಿದ್ದುಕೊಂಡು ಸರ್ವವ್ಯಾಪಿಯಾಗಿ ಲೋಕಕ್ಕೆಲ್ಲಾ ಸುಖವನ್ನು ಕೊಡುತ್ತಾನೆ.

೩. ಇಲ್ಲಿ ಸ್ನಾನಮಾಡಬೇಕು. ಮತ್ತು ದಾನಮಾಡಬೇಕು. ಈ ಶಿವನನ್ನು ಅರ್ಚಿಸಬೇಕು. ಅವರು ಇಲ್ಲಿಯ ಫಲವನ್ನು ಹೊಂದುತ್ತಾರೆ.

ಸೋಮೇನಾತ್ರ ತಪಸ್ತಪ್ತಂ ಕಾಲಂ ಬಹುತರಂ ಕಿಲ ।
ತಸ್ಮಾಚ್ಚಂದ್ರೇಶ್ವರೋ ನಾಮ ಸ್ಥಾಪಿತೋ ವೈ ಮಹೇಶ್ವರಃ ॥ ೪ ॥

ಶುಕ್ರೇಣಾಪಿ ತಪಸ್ತಪ್ತಂ ಚಂದ್ರಭಾಗಾಸಮೀಪತಃ ।
ಅತಸ್ತೀರ್ಥಾಧಿಕಂ ತೀರ್ಥಂ ಪಾವನಂ ಸರ್ವದಾ ಭುವಿ ॥ ೫ ॥

ಕಲೌ ಗುಪ್ತಂ ತು ಋಷಿಣಾ ಕಾರಿತಂ ವೈ ಸುರೇಶ್ವರಿ ।
ಯತ್ರ ಹೇಮಮಯಂ ಲಿಂಗಂ ದೃಶ್ಯತೇ ನಾಽತ್ರ ಸಂಶಯಃ ॥ ೬ ॥

ಅತ್ರ ಸ್ನಾತ್ವಾ ಚ ಪೀತ್ವಾ ಚ ಕೃತ್ವಾ ವೈ ಶಿವಪೂಜನಂ ।
ಯೇ ನರಾಸ್ಸಂಗಮಿಷ್ಯಂತಿ ಧರ್ಮಾನರ್ಥಾನ್ ಲಭಂತಿ ತೇ ॥ ೭ ॥

ವೃಷೋತ್ಸರ್ಗಾದಿಕಂ ಕರ್ಮ ಯೇ ಕುರ್ವಂತಿ ವಿಶೇಷತಃ ।
ಭುಕ್ತ್ವಾ ಸ್ವರ್ಗಪದಂ ತೇ ವೈ ಪಶ್ಚಾದ್ಯಾಂತಿ ಹರಾಲಯಂ ॥ ೮ ॥

---

೪. ಇಲ್ಲಿ ಚಂದ್ರನು ಬಹುಕಾಲದವರೆಗೆ ತಪಸ್ಸನ್ನು ಮಾಡಿದನು ಮತ್ತು ಅವನು ಇಲ್ಲಿ ಒಂದು ಲಿಂಗವನ್ನು ಸ್ಥಾಪಿಸಿದನು. ಆದುದರಿಂದಲೇ ಇದಕ್ಕೆ ಚಂದ್ರೇಶ್ವರನೆಂದು ಹೆಸರು ಬಂದಿದೆ.

೫. ಈ ಚಂದ್ರಭಾಗೆಯ ಸಮೀಪದಲ್ಲಿ ಶುಕ್ರನು ತಪಸ್ಸುಮಾಡಿದನು. ಆದುದರಿಂದಲೇ ಇದನ್ನು ಎಲ್ಲಾ ತೀರ್ಥಗಳಿಗಿಂತಲೂ ಉತ್ತಮವೆಂದು ಹೇಳ ತಕ್ಕದ್ದು.

೬. ಅಲ್ಲಿ ಶುಕ್ರನು ಪೂಜಿಸುತ್ತಿದ್ದ ಲಿಂಗವು ಚಿನ್ನದ ಲಿಂಗವು. ಇದರಲ್ಲಿ ಸಂಶಯವಿಲ್ಲ. ಇದು ಕಲಿಯುಗದಲ್ಲಿ ಕಾಣದೆ ಮರೆಯಾಗಿರುವಂತೆ ಮಾಡಿದ್ದಾನೆ.

೭. ಇಲ್ಲಿ ಸ್ನಾನಮಾಡಿ ಶಿವಪೂಜೆಯನ್ನು ಮಾಡಿ ತೀರ್ಥವನ್ನು ತೆಗೆದು ಕೊಂಡರೆ ಅವರು ಧರ್ಮ ಅರ್ಥಗಳನ್ನು ಹೊಂದುತ್ತಾರೆ.

೮. ಈ ಜಾಗದಲ್ಲಿ ವೃಷೋತ್ಸರ್ಗವನ್ನು ಮಾಡುವವರು ಸ್ವರ್ಗಸುಖವನ್ನು ಅನುಭವಿಸಿ ಅನಂತರ ಕೈಲಾಸಕ್ಕೆ ಹೋಗುತ್ತಾರೆ.

ಸ್ನಾನಾರ್ಥಂ ಪ್ರತ್ಯಹಂ ದೇವಿ ಚಂದ್ರಭಾಗಾಸಮೀಪತಃ ।
ಆಗಮಿಷ್ಯಂತಿ ಯೇ ಲೋಕಾಸ್ತೇ ಜ್ಞೇಯಾ ಪುಣ್ಯಭಾಗಿನಃ ॥ ೯ ॥

ಗತ್ವಾ ಪರತಟೇ ಯೇ ವೈ ಹ್ಯರ್ಚಯಂತಿ ಚ ತಂ ಶಿವಂ ।
ಚಂದ್ರೇಶ್ವರೇತಿ ನಾಮಾನಂ ಶ್ರೀಹರಂ ಪಾಪಕೃಂತನಂ ॥ ೧೦ ॥

ಅತ್ರ ಗತ್ವಾ ವಿಶೇಷೇಣ ರುದ್ರಜಾಪ್ಯಾದಿಕಂ ತಥಾ ।
ಯೇ ಕುರ್ವಂತಿ ನರಶ್ರೇಷ್ಠಾಸ್ತೇ ಜ್ಞೇಯಾಶ್ಶಿವರೂಪಿಣಃ ॥ ೧೧ ॥

ಸರ್ವದಾ ತು ಸುರಶ್ರೇಷ್ಠೇ ಯೇಽತ್ರ ಸ್ನಾನಂ ಪ್ರಕುರ್ವತೇ ।
ತೇ ನರಾ ವಿಷ್ಣುರೂಪಾಶ್ಚ ವಿಜ್ಞೇಯಾ ನಾತ್ರ ಸಂಶಯಃ ॥ ೧೨ ॥

ಯೇಽತ್ರ ಶ್ರಾದ್ಧಂ ಪ್ರಕುರ್ವಂತಿ ತಿಲಪಿಂಡೇನ ವಾ ಪುನಃ ।
ತೇಽಪಿ ವಿಷ್ಣುಪದಂ ಯಾಂತಿ ಪಿಂಡದಾನಪ್ರಭಾವತಃ ॥ ೧೩ ॥

---

೯. ಯಾರು ಈ ಚಂದ್ರಭಾಗೆಯ ಸಮೀಪಕ್ಕೆ ಸ್ನಾನಕ್ಕಾಗಿ ಬರುವರೋ ಅವರನ್ನು ಪುಣ್ಯವಂತರನ್ನಾಗಿ ತಿಳಿಯಬೇಕು.

೧೦. ಅನಂತರ ಮತ್ತೊಂದು ದಡಕ್ಕೆ ಹೋಗಿ ಪಾಪನಾಶಕನಾದ ಚಂದ್ರೇಶ್ವರನನ್ನು ಪೂಜಿಸಬೇಕು ಅವನು ಪಾಪವನ್ನು ನಾಶಮಾಡುತ್ತಾನೆ.

೧೧. ಈ ಜಾಗದಲ್ಲಿ ರುದ್ರಾಧ್ಯಾಯವೇ ಮುಂತಾದುವನ್ನು ಜಪಮಾಡುವವರು ನರಶ್ರೇಷ್ಠರು. ಅವರನ್ನು ಶಿವರೂಪಿಗಳೆಂದೇ ತಿಳಿಯಬೇಕು

೧೨. ಈ ಜಾಗದಲ್ಲಿ ಯಾವಾಗಲೂ ಯಾರು ಸ್ನಾನಮಾಡುತ್ತಾರೆಯೋ ಅವರು ವಿಷ್ಣುರೂಪರೆಂದು ತಿಳಿಯಬೇಕು. ಇದರಲ್ಲಿ ಸಂಶಯವಿಲ್ಲ.

೧೩. ಯಾರು ಇಲ್ಲಿ ಶ್ರಾದ್ಧವನ್ನು ಮಾಡಿ ಚಿಗುಳಿಯಿಂದ ಪಿಂಡವನ್ನು ಹಾಕುತ್ತಾರೆಯೋ ಅವರು ಆ ಪಿಂಡದಾನದ ಮಹಿಮೆಯಿಂದ ವೈಕುಂಠವನ್ನು ಹೊಂದುತ್ತಾರೆ.

ಅತ್ರ ದಾನಂ ಪ್ರಕರ್ತವ್ಯಂ ಸ್ನಾನಂ ವೈ ವಿಧಿಪೂರ್ವಕಂ ।
ಯತ್ರ ಸ್ನಾತ್ವಾ ತು ಮುಚ್ಯಂತೇ ಬ್ರಹ್ಮಹತ್ಯಾದಿಕಿಲ್ಬಿಷಾತ್ ॥ ೧೪ ॥

ತಟೇಽಸ್ಮಿನ್ ಯೇ ವಿಶೇಷೇಣ ವಟಂ ವಾಽಽರೋಪಯಂತಿ ತೇ ।
ಸ್ವತಾಶ್ಶಿವಪದಂ ಯಾಂತಿ ಯಾವಚ್ಚಂದ್ರದಿವಾಕರೌ ॥ ೧೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಚಂದ್ರೇಶ್ವರ ಚಂದ್ರಭಾಗಾ ಮಾಹಾತ್ಮ್ಯ ವರ್ಣನ ಕಥನಂ ನಾಮ ಏಕೋನಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೪. ಇಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಿ ದಾನಗಳನ್ನು ಮಾಡಬೇಕು. ಇಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಪಾಪಗಳೂ ಕೂಡ ಹೋಗುತ್ತವೆ.

೧೫. ಈ ಚಂದ್ರಭಾಗೆಯ ದಡದಲ್ಲಿ ಯಾರು ಆಲದಮರವನ್ನು ಎಬ್ಬಿಸುತ್ತಾರೆಯೋ ಅವರು ಸತ್ತನಂತರ ಕೈಲಾಸವನ್ನು ಹೊಂದಿ ಸೂರ್ಯಚಂದ್ರರಿರುವವರೆಗೂ ಅಲ್ಲಿರುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಚಂದ್ರೇಶ್ವರ ಚಂದ್ರಭಾಗೆಗಳ ಮಹಿಮೆಯ ವರ್ಣನ ಎಂಬ ನೂರ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

॥ ಪಂಚಾಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ದುಗ್ಧೇಶ್ವರಸಮೀಪೇ ತು ತೀರ್ಥಂ ಚಾತೀವ ಪಾವನಂ ।
ರಮ್ಯಂ ತತ್ಪಿಪ್ಪಲಾದಸ್ಯ ನಾಮ್ನಾ ವೈ ಪ್ರಥಿತಂ ಭುವಿ ॥ ೧ ॥

ಯತ್ರ ಕೃತ್ವಾ ತಪಃ ಪೂರ್ವಂ ಮಾತುರ್ವಚನತೋ ಮುನಿಃ ।
ಉತ್ಪಾದಯಾಮಾಸ ಕೃತ್ಯಾಂ ಬಡಬಾನಲಸನ್ನಿಭಾಂ ॥ ೨ ॥

ಪಿತುರಾನೃಣ್ಯಮನ್ವಿಚ್ಛನ್ ದಧೀಚಸ್ಯ ಮಹಾತ್ಮನಃ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಹತ್ಯಾಂ ವ್ಯಪೋಹತಿ ॥ ೩ ॥

---

## ನೂರ ಐವತ್ತನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ದುಗ್ಧೇಶ್ವರನ ಸಮೀಪದಲ್ಲಿ ಒಂದು ತೀರ್ಥವಿರುವುದು. ಅದು ಪಾವನವಾದುದು. ರಮ್ಯವಾದುದು ಅದು ಪಿಪ್ಪಲಾದ ತೀರ್ಥವೆಂದು ಪ್ರಸಿದ್ಧವಾಗಿದೆ.

೨. ಆ ಜಾಗದಲ್ಲಿ ಪಿಪ್ಪಲಾದನು ತಪಸ್ಸುಮಾಡುತ್ತ ತಾಯಿಯ ಅಪ್ಪಣೆಯ ಮೇರೆಗೆ ಬಡಬಾನಲವೆಂಬ ಬೆಂಕಿಗೆ ಸಮಾನವಾದ ಮಾಟದ ಬೊಂಬೆಯನ್ನು ಉತ್ಪತ್ತಿಮಾಡಿದನು.

೩. ತಂದೆಯ ಋಣವನ್ನು ತೀರಿಸಿಕೊಳ್ಳಲು ಆ ಪಿಪ್ಪಲಾದನು ಆ ರೀತಿಯಾಗಿ ಆ ಶಕ್ತಿಯನ್ನುಂಟುಮಾಡಿದನು ಅಲ್ಲಿ ಸ್ನಾನಮಾಡಿದರೂ ಪಾನಮಾಡಿದರೂ ಬ್ರಹ್ಮಹತ್ಯಾದಿ ಪಾಪಗಳು ಹೋಗುತ್ತವೆ.

ಸಾಭ್ರಮತ್ಯಾಸ್ತಟೇ ಗುಪ್ತಂ ಪಿಪ್ಪಲಾದಂ ಸುರೇಶ್ವರಿ ।
ತತ್ರ ಸ್ನಾತ್ವಾ ತು ಭೋ ದೇವಿ ಮುಕ್ತಿಭಾಗೀ ಭವೇನ್ನರಃ ॥ ೪ ॥

ಆರೋಪಣಂ ಪಿಪ್ಪಲಾನಾಂ ಕರ್ತವ್ಯಂ ವಿಧಿಪೂರ್ವಕಂ ।
ಕೃತೇ ಸತಿ ಮಹಾದೇವಿ ಮುಚ್ಯತೇ ಸರ್ವಬಂಧನಾತ್ ॥ ೫ ॥

॥ ಶ್ರೀ ಪಾರ್ವತ್ಯುವಾಚ ॥

ಕಿಮರ್ಥಂ ಸಾ ತು ಕೃತ್ಯಾ ವೈ ಉತ್ಪನ್ನಾ ತಾಂ ವಿಬೋಧಯ ।
ತಯಾ ವೈ ಕೃತ್ಯಯಾ ಪೂರ್ವಂ ಕಿಂ ಕೃತಂ ವದ ಮೇ ಪ್ರಭೋ ॥
ಯೇನ ಪುತ್ರೇಣ ಸಾಽಽನೀತಾ ಪಿತುರಾನೃಣ್ಯಕಾರಣಾತ್ ॥ ೬ ॥

॥ ಶ್ರೀಮಹಾದೇವ ಉವಾಚ ॥

ದಧೀಚಮುನಿವರ್ಯೋಽಸೌ ಹ್ಯಾಗತಸ್ತಪಕಾರಣಾತ್ ।
ಅತ್ರ ತೇನ ಮಹತ್ತಪ್ತಮ್ಮೃಷಿಣಾ ಪರಮಾತ್ಮನಾ ॥ ೭ ॥

---

೪. ಈ ಸಾಭ್ರಮತಿಯ ದಡದಲ್ಲಿ ಪಿಪ್ಪಲಾದವೆಂಬ ತೀರ್ಥವು ಗುಟ್ಟಾಗಿ ಇರುವುದು. ಅಲ್ಲಿ ಸ್ನಾನಮಾಡಿದವನು ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ.

೫. ಈ ಜಾಗದಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ನಿಯಮದಿಂದ ಅರಳಿಯ ಮರಗಳನ್ನು ನೆಟ್ಟು ಎಬ್ಬಿಸಬೇಕು. ಹಾಗೆ ಮಾಡಿದರೆ ಈ ಕರ್ಮಬಂಧನಗಳು ಹೋಗಿ ಮುಕ್ತಿಯು ಸಿಕ್ಕುತ್ತದೆ.

೬. ಶ್ರೀ ಪಾರ್ವತಿಯು ಹೇಳಿದಳು– ಎಲೈ ಪರಮೇಶ್ವರನೇ ! ಆ ಶಕ್ತಿಯನ್ನು ಏತಕ್ಕೋಸ್ಕರ ಉತ್ಪತ್ತಿಮಾಡಿದನು? ಎಂಬುದನ್ನು ತಿಳಿಸು. ಹುಟ್ಟಿದ ಆ ಶಕ್ತಿಯು ಏನು ಕೆಲಸವನ್ನು ಮಾಡಿತು? ಆದರಿಂದ ತಂದೆಯ ಋಣವನ್ನು ಹೇಗೆ ತೀರಿಸಿಕೊಂಡನು ?

೭. ಶ್ರೀ ಮಹಾದೇವನು ಹೇಳಿದನು–ಹಿಂದೆ ಮಹಾತ್ಮನಾದ ದಧೀಚಿಯು ತಪಸ್ಸಿಗೋಸ್ಕರ ಇಲ್ಲಿಗೆ ಬಂದು ಉಗ್ರವಾದ ತಪಸ್ಸನ್ನು ಮಾಡಿದನು.

ತತ್ರ ಕೋಲಾಸುರೋ ನಾಮ ವಿಘ್ನಾರ್ಥಂ ವೈ ಸಮಾಗತಃ ।
ತೇನ ವಿಘ್ನಂ ಬಹುತರಂ ಕೃತಂ ವೈ ನಾತ್ರ ಸಂಶಯಃ ॥ ೮ ॥

ತದ್ದೃಷ್ಟಂ ತು ಸುಪುಣ್ಯೇನ ಕಹೋಡೇನ ಚ ಧೀಮತಾ ।
ಕೃತ್ಯಾ ಹ್ಯುತ್ಪಾದಿತಾ ತತ್ರ ಹನನಾರ್ಥಂ ಸುರೇಶ್ವರಿ ॥ ೯ ॥

ತಯಾ ವೈ ನಿಹತೋ ದೈತ್ಯಃ ಕೋಲೋ ನಾಮ ಮಹಾಸುರಃ ।
ತಸ್ಮಾತ್ತೀರ್ಥಂ ಮಹಜ್ಜಾತಂ ಕಲೌ ಗುಪ್ತಂ ತು ಪಾರ್ವತಿ ॥ ೧೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಪಿಪ್ಪಲಾದತೀರ್ಥ ವರ್ಣನಂ ನಾಮ ಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೮. ಅಲ್ಲಿ ಕೋಲಾಸುರನೆಂಬ ರಾಕ್ಷಸನು ಅನೇಕ ಬಾರಿ ಬಂದು ವಿಘ್ನಗಳನ್ನು ಮಾಡುತ್ತಲೇ ಇದ್ದನು.

೯. ಅದನ್ನು ಕಹೋಡನೆಂಬ ಆ ದಧೀಚಿಯ ಮಗನು ನೋಡಿದನು. ಆಗ ಆತನನ್ನು ಕೊಲ್ಲಲು ಶಕ್ತಿಯನ್ನು ಉತ್ಪತ್ತಿಮಾಡಿದನು.

೧೦. ಆ ಕೃತ್ಯೆಯು ಹೋಗಿ ಆ ರಾಕ್ಷಸನನ್ನು ಕೊಂದಿತು. ಆದುದ ರಿಂದಲೂ ಈ ತೀರ್ಥವು ಉತ್ತಮವಾಯಿತು- ಅಲ್ಲದೇ ಗುಪ್ತವೂ ಆಯಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ ಮಹೇಶ್ವರ ಸಂವಾದದಲ್ಲಿ ಸಾಭ್ರಮತಿಯ ಮಹಿಮೆಯಲ್ಲಿ ಪಿಪ್ಪಲಾದತೀರ್ಥ ವರ್ಣನ ಎಂಬ ನೂರ ಐವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಪಂಚಾಶದಧಿಕಶತತಮೋಽಧ್ಯಾಯಃ ॥



ಪಿಪ್ಪಲಾದಾತ್ತತಸ್ತೀರ್ಥಾತ್ ಪಿಚುಮುಂದಾರ್ಕಮುತ್ತಮಂ ।
ತೀರ್ಥಂ ಸಾಭ್ರಮತೀತೀರೇ ವ್ಯಾಧಿದೌರ್ಗಂಧ್ಯನಾಶನಂ ॥ ೧ ॥

ಪುರಾ ಕೋಲಾಹಲೇ ಯುದ್ಧೇ ದಾನವೈರ್ನಿರ್ಜಿತಾಸ್ಸುರಾಃ ।
ವೃಕ್ಷೇಷು ವಿವಿಶುಃ ತತ್ರ ಸೂಕ್ಷ್ಮಾಃ ಪ್ರಾಣಪರೀಪ್ಸಯಾ ॥ ೨ ॥

ತತ್ರ ಬಿಲ್ವೇ ಸ್ಥಿತಶ್ಶಂಭುರಶ್ವತ್ಥೇ ಹರಿರವ್ಯಯಃ ।
ಶಿರೀಷೇಽಭೂತ್ಸಹಸ್ರಾಕ್ಷೋ ನಿಂಬೇ ದೇವಃ ಪ್ರಭಾಕರಃ ॥ ೩ ॥

---

## ನೂರ ಐವತ್ತೊಂದನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು—ಈ ಪಿಪ್ಪಲಾದ ತೀರ್ಥದಿಂದ ಮುಂದಕ್ಕೆ ಹೋದರೆ ನಿಂಬಾರ್ಕವೆಂಬ ಉತ್ತಮ ತೀರ್ಥವಿರುವುದು. ಅದು ರೋಗ ದುರ್ವಾಸನೆಗಳನ್ನು ಹೋಗಲಾಡಿಸುತ್ತದೆ.

೨. ಹಿಂದೆ ಕೋಲಾಹಲನೆಂಬ ದೈತ್ಯನೊಡನೆ ಮಹಾ ಯುದ್ಧವು ನಡೆಯಲು ದಾನವರು ದೇವತೆಗಳನ್ನು ಜಯಿಸಿದರು. ಆಗ ಅವರೆಲ್ಲರೂ ತಮ್ಮ ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಲು ಒಬ್ಬರು ಒಂದೊಂದು ಮರವನ್ನು ಸೇರಿಕೊಂಡರು.

೩. ಆಗ ಶಂಭುವು ಬಿಲ್ವಪತ್ರೆಯ ಮರವನ್ನೂ ಹರಿಯು ಅರಳಿಯ ಮರವನ್ನೂ ಇಂದ್ರನು ಬಾಗೆಯ ಮರವನ್ನೂ ಸೂರ್ಯನು ಬೇವಿನ ಮರವನ್ನೂ ಹೊಕ್ಕರು.

ಏವಮಾದಿಯಥಾಯೋಗ್ಯವೃಕ್ಷೇಷು ವಿವಿಧಾಸ್ತಥಾ ।
ಯಾವತ್ಕೋಲಾಹಲೋ ದೈತ್ಯೋ ವಿಷ್ಣುನಾ ಪ್ರಭವಿಷ್ಣುನಾ ॥ ೪ ॥

ಹತೋ ಮಹಾಹವೇ ತಾವತ್ ಸ್ಥಿತಾಸ್ತೇ ವೃಕ್ಷಮಾಸ್ಥಿತಾಃ ।
ಯೇನ ಯೇನ ಹಿ ಯೋ ವೃಕ್ಷೋ ವಿಬುಧೇನ ಸಮಾಶ್ರಿತಃ ॥ ೫ ॥

ಸ ತು ತನ್ಮಯತಾಂ ಯಾತಃ ತಸ್ಮಾತ್ತಂ ನ ವಿನಾಶಯೇತ್ ।
ಇತಿ ಸೂರ್ಯಸ್ಯ ವಿಶ್ರಾಮಾತ್ಪಿಚುಮಂದಾರ್ಕಮುತ್ತಮಂ ॥ ೬ ॥

ತೀರ್ಥಂ ರೋಗಹರಂ ಸ್ನಾನಾತ್ ಸಾಭ್ರಮತ್ಯಾಸ್ತಟೇಭವತ್ ।
ಅತ್ರ ಗತ್ವಾ ವಿಶೇಷೇಣ ತಂ ರವಿಂ ಸಂಪ್ರಪೂಜಯೇತ್ ॥ ೭ ॥

ಪೂಜಯಿತ್ವಾ ಸುರಶ್ರೇಷ್ಠೇ ಲಭತೇ ವಾಂಛಿತಂ ಫಲಂ ।
ಅತ್ರ ದ್ವಾದಶನಾಮಾನಿ ಗತ್ವಾ ಯೋ ವೈ ಪಠಂತಿ ಚ ॥ ೮ ॥

---

೪–೬ ಹೀಗೆ ತಮತಮಗೆ ಬೇಕಾದ ಮರವನ್ನು ಸೇರಿಕೊಂಡಿದ್ದರು. ಕಡೆಗೆ ಆ ಕೋಲಾಹಲನೆಂಬ ದೈತ್ಯನನ್ನು ವಿಷ್ಣುವು ಕೊಲ್ಲುವವರೆಗೂ ಹಾಗೇಯೇ ಇದ್ದರು. ಯಾವ ಯಾವ ದೇವತೆಗಳು ಯಾವ ಯಾವ ಮರವನ್ನು ಆ ಶ್ರಯಿಸಿದರೋ ಅವುಗಳು ಆ ದೇವತೆಗಳ ಸ್ವರೂಪವೇ ಆದುವು. ಈ ಬೇವಿನ ಮರವು ಸೂರ್ಯನಿಗೆ ಆಶ್ರಯವಾಗಿ ಸೂರ್ಯ ರೂಪವಾದುದರಿಂದ ಅಂತಹ ಮರಗಳು ಇಲ್ಲಿ ಹೆಚ್ಚಾಗಿ ಇರುವುದರಿಂದ ಈ ತೀರ್ಥವು ನಿಂಬಾರ್ಕವೆಂದು ಪ್ರಸಿದ್ಧವಾಯಿತು. ಉತ್ತಮವೂ ಆಯಿತು.

೭. ಈ ತೀರ್ಥವು ಸಾಭ್ರಮತಿಯ ದಡದಲ್ಲಿದೆ. ಇಲ್ಲಿ ಸ್ನಾನಮಾಡು ವುದರಿಂದ ರೋಗಗಳು ಹೋಗುತ್ತವೆ. ಇಲ್ಲಿ ಸ್ನಾನಮಾಡಿ ಆ ಸೂರ್ಯನನ್ನು ಪೂಜಿಸಬೇಕು.

೮–೧೧. ಆ ಸ್ವಾಮಿಯನ್ನು ಪೂಜಿಸಿದರೆ ಇಷ್ಟವಾದ ಫಲವನ್ನು ಹೊಂದುತ್ತಾನೆ. ಇಲ್ಲಿ ಆ ಸೂರ್ಯನ ಹನ್ನೆರಡು ನಾಮಗಳನ್ನು ಪಠಿಸಿದರೆ

ತೇ ನರಾಃ ಪುಣ್ಯಕರ್ಮಾಣಃ ಯಾವಜ್ಜೀವಂ ನ ಸಂಶಯಃ ।
ಆದಿತ್ಯಂ ಭಾಸ್ಕರಂ ಭಾನುಂ ರವಿಂ ವಿಶ್ವಪ್ರಕಾಶಕಂ ॥ ೯ ॥

ತೀಕ್ಷ್ಣಾಂಶುಂ ಚೈವ ಮಾರ್ತಾಂಡಂ ಸೂರ್ಯಂ ಚೈವ ಪ್ರಭಾಕರಂ ।
ವಿಭಾವಸುಂ ಸಹಸ್ರಾಕ್ಷಂ ತಥಾ ಪೂಷಣಮೇವ ಚ ॥ ೧೦ ॥

ಏವಂ ದ್ವಾದಶನಾಮಾನಿ ಯಃ ಪಠೇತ್ಪ್ರಯತಸ್ಸುಧೀಃ ।
ಧನಂ ವೈ ಪುತ್ರಪೌತ್ರಾಂಶ್ಚ ಲಭತೇ ನಗನಂದಿನಿ ॥ ೧೧ ॥

ಏಕೈಕಂ ನಾಮಮಾಶ್ರಿತ್ಯ ಯೋಽರ್ಚಯೇತ ನರೋ ಭುವಿ ।
ಸಪ್ತಜನ್ಮ ಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ ॥ ೧೨ ॥

ಕ್ಷತ್ರಿಯೋ ಲಭತೇ ರಾಜ್ಯಂ ವೈಶ್ಯೋ ಧನಮವಾಪ್ನುಯಾತ್ ।
ಶೂದ್ರೋ ವೈ ಲಭತೇ ಭಕ್ತಿಂ ತಸ್ಮಾತ್ಸೂಕ್ತಂ ಪರಂ ಜಪೇತ್ ॥ ೧೩ ॥

---

ಅವರು ಜೀವವಿರುವವರೆಗೂ ಪುಣ್ಯವನ್ನು ಮಾಡಿದಂತಾಗುತ್ತದೆ. ಆದಿತ್ಯ, ಭಾಸ್ಕರ, ಭಾನು, ರವಿ, ವಿಶ್ವಪ್ರಕಾಶಕ, ತೀಕ್ಷ್ಣಾಂಶು, ಮಾರ್ತಾಂಡ, ಸೂರ್ಯ, ಪ್ರಭಾಕರ, ವಿಭಾವಸು, ಸಹಸ್ರಾಕ್ಷ, ಪೂಷಣ ಎಂಬುದಾಗಿ ಈ ಹನ್ನೆರಡು ನಾಮಗಳನ್ನು ಪಠಿಸಬೇಕು. ಅವನು ಧನ ಮತ್ತು ಪುತ್ರ ಪೌತ್ರರನ್ನು ಹೊಂದುತ್ತಾನೆ.

೧೨–೧೩. ಒಂದೊಂದು ಹೆಸರನ್ನು ಹೇಳುತ್ತಾ ಆ ರವಿಯನ್ನು ಪೂಜಿಸಿದರೆ ಅವನು ಏಳು ಜನ್ಮಗಳವರೆಗೂ ಧನಿಕನೂ ವೇದಪಾರಗನೂ ಆಗುತ್ತಾನೆ. ಕ್ಷತ್ರಿಯನು ಪೂಜಿಸಿದರೆ ರಾಜ್ಯವನ್ನೂ ವೈಶ್ಯನು ಪೂಜಿಸಿದರೆ ಧನವನ್ನೂ, ಶೂದ್ರನು ಪೂಜಿಸಿದರೆ ಭಕ್ತಿಯನ್ನೂ ಹೊಂದುತ್ತಾರೆ. ಆದುದರಿಂದ ಅವನನ್ನು ಪೂಜೆ ಮಾಡಬೇಕು. ಮತ್ತು ರವಿಯ ಸ್ತೋತ್ರವನ್ನು ಜಪಿಸಬೇಕು.

ನಿಂಬಾರ್ಕಾತ್ತು ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಅತ್ರ ಸ್ನಾತ್ವಾ ಚ ಪೀತ್ವಾ ಚ ಮುಕ್ತಿಭಾಗೀ ಭವೇದ್ಧ್ರುವಂ ॥ ೧೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ
ಉಮಾ ಮಹೇಶ್ವರ ಸಂವಾದೇ ಸಾಂಭ್ರಮತೀ ಮಾಹಾತ್ಮ್ಯೇ
ನಿಂಬಾರ್ಕ ದೇವತೀರ್ಥ ವರ್ಣನ ಕಥನಂ ನಾಮ
ಏಕಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೪. ಈ ನಿಂಬಾರ್ಕ ತೀರ್ಥಕ್ಕಿಂತಲೂ ಉತ್ತಮ ತೀರ್ಥವು ಹಿಂದೆಯೂ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಇಲ್ಲಿ ಸ್ನಾನಮಾಡಿದರೂ ನೀರು ಕುಡಿದರೂ ಅವರು ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾ
ಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ
ನಿಂಬಾರ್ಕ ದೇವತೀರ್ಥ ವರ್ಣನ ಕಥನ ಎಂಬ
ನೂರ ಐವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಪಂಚಾಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ತಸ್ಮಾದ್ದೂರತರೇ ದೇವಿ ಸಿದ್ಧಿಕ್ಷೇತ್ರಮನುತ್ತಮಂ ।
ಅನಿರುದ್ಧೋ ವೃತಃ ಪೂರ್ವಂ ಉಷಾರ್ಥೇ ಚಿತ್ರಲೇಖಯಾ ॥ ೧ ॥

ನೀತೋ ಬಾಣಾಸುರಪುರಂ ತಿಷ್ಠತಿ ಸ್ಮ ಗೃಹೇ ಪುರಾ ।
ಪಾಶೈರ್ಬಾಣೈಶ್ಚ ಸಂರುದ್ಧಃ ಕೋಟರಾಕ್ಷೀಮಥಾಽಸ್ಮರತ್ ॥ ೨ ॥

ಸಾಕ್ಷಾದ್ವೈ ವೈಷ್ಣವೀ ಶಕ್ತಿಃ ಸದಾ ರಕ್ಷಣತತ್ಪರಾ ।
ಸೇಯಂ ದೇವೀ ನದೀತೀರೇ ಕೃಷ್ಣೇನಾತ್ರ ಪ್ರತಿಷ್ಠಿತಾ ॥ ೩ ॥

---

### ನೂರ ಐವತ್ತೆರಡನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು–ಈ ನಿಂಬಾರ್ಕ ತೀರ್ಥಕ್ಕಿಂತಲೂ ಸ್ವಲ್ಪದೂರದಲ್ಲಿ ಒಂದು ಸಿದ್ಧಿಕ್ಷೇತ್ರವಿರುವುದು. ಅಲ್ಲಿ ಅನಿರುದ್ಧನನ್ನು ಚಿತ್ರಲೇಖೆಯು ಉಷೆಗೋಸ್ಕರ ವರಿಸಿದಳು.

೨. ಆಗ ಬಾಣಾಸುರನು ಬಾಣಗಳಿಂದಲೂ ಹಗ್ಗದಿಂದಲೂ ಅನಿರುದ್ಧನನ್ನು ಕಟ್ಟಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋದನು. ಆಗ ಆ ಅನಿರುದ್ಧನು ಕೋಟರಾಕ್ಷಿಯನ್ನು ಸ್ಮರಿಸಿದನು.

೩. ಆಕೆಯು ವೈಷ್ಣವೀಶಕ್ತಿಯು. ಯಾವಾಗಲೂ ಕಾಪಾಡುವ ಸ್ವಭಾವವುಳ್ಳವಳು ಈ ನದಿಯ ತೀರದಲ್ಲಿ ಕೃಷ್ಣನು ತಾನಾಗಿಯೇ ಅವಳನ್ನು ಪ್ರತಿಷ್ಠಿಸಿರುವನು.

ಜಿತ್ವಾ ಬಾಣಾಸುರಂ ಸಂಖ್ಯೇ ದ್ವಾರಕಾಂ ಪ್ರತಿ ಗಚ್ಛತಾ ।
ಅನಿರುದ್ಧಸ್ಯ ಸ್ತೋತ್ರೇಣ ಸಾಕ್ಷಾತ್ಸಾನ್ನಿಧ್ಯಮಾಗತಾ ॥ ೪ ॥

ತತ್ರ ತೀರ್ಥೇ ನರಸ್ಸ್ನಾತ್ವಾ ವರ್ಷಮೇಕಂ ಪ್ರಯತ್ನತಃ ।
ಕೋಟರಾಕ್ಷೀಮುಖಂ ದೃಷ್ಟ್ವಾ ಲಕ್ಷ್ಮೀಮಾಪ್ನೋತಿ ಪುಷ್ಕಲಾಂ ॥ ೫ ॥

ಸಿದ್ಧಿತೀರ್ಥೇ ನರಸ್ಸ್ನಾತ್ವಾ ದೃಷ್ಟ್ವಾ ಕೋಟರನಾಮನೀಂ ।
ಸಿಂಹಯುಕ್ತೇನ ಯಾನೇನ ರುದ್ರಲೋಕೇ ಮಹೀಯತೇ ॥ ೬ ॥

ಯಸ್ಯಾ ವೈ ಸ್ಮರಣಾದೇವ ಮುಕ್ತಸ್ಸೋಽಪಿ ವರಾನನೇ ।
ಅತೋ ಯೇಽತ್ರ ಪ್ರಗಚ್ಛಂತಿ ತೇ ನರಾ ಮುಕ್ತಿಭಾಗಿನಃ ॥ ೭ ॥

ಅತ್ರ ಗತ್ವಾ ವಿಶೇಷೇಣ ಸ್ನಾನಂ ಕೃತ್ವಾ ತು ಪಾರ್ವತಿ ।
ಕೋಟರಾಕ್ಷ್ಯಾಸ್ತುತಸ್ತೋತ್ರಂ ಪಠೇದ್ವೈ ಬುದ್ಧಿಪೂರ್ವಕಂ ॥ ೮ ॥

---

೪. ಆ ಕೃಷ್ಣನು ಬಾಣಾಸುರನನ್ನು ಯುದ್ಧದಲ್ಲಿ ಗೆದ್ದು ದ್ವಾರಕೆಗೆ ಹೋಗುತ್ತಿರುವಾಗ ಅನಿರುದ್ಧನು ಆ ಶಕ್ತಿಯನ್ನು ಸ್ತೋತ್ರಮಾಡಲು ಆಕೆಯು ಇಲ್ಲಿಗೆ ಬಂದು ನಿಂತಳು.

೫. ಈ ಸಿದ್ಧಿತೀರ್ಥದಲ್ಲಿ ನಿಯಮವಾಗಿ ಐದುವರ್ಷ ಸ್ನಾನಮಾಡಿಕೊಂಡು ನಿತ್ಯವೂ ಕೋಟರಾಕ್ಷಿಯ ದರ್ಶನವನ್ನು ಮಾಡುತ್ತಿದ್ದರೆ ಬಹುವಾದ ಸಂಪತ್ತನ್ನು ಹೊಂದುತ್ತಾನೆ.

೬. ಸಿದ್ಧಿತೀರ್ಥದಲ್ಲಿ ಸ್ನಾನಮಾಡಿ ಕೋಟರಾಕ್ಷಿಯ ದರ್ಶನವನ್ನು ಮಾಡಿದರೆ ಸಿಂಹಗಳನ್ನು ಕಟ್ಟಿರುವ ಯಾನದಲ್ಲಿ ಓಡಾಡುತ್ತಾ ರುದ್ರಲೋಕದಲ್ಲಿ ಸುಖಿಸುತ್ತಾನೆ.

೭. ಆ ಶಕ್ತಿಯ ಸ್ಮರಣೆಯಿಂದಲೇ ಆತನು ಬಂಧನದಿಂದ ಮುಕ್ತನಾದನು. ಇಲ್ಲಿಗೆ ಹೋಗತಕ್ಕ ಮನುಷ್ಯರಿಗೆಲ್ಲಾ ಹಾಗೆಯೇ ಮುಕ್ತಿಯು ಲಭಿಸುತ್ತದೆ.

೮. ಅಲ್ಲಿಗೆ ಹೋಗಿ ವಿಧಿವತ್ತಾಗಿ ಸ್ನಾನಮಾಡಿ ಕೋಟರಾಕ್ಷಿಯ ಸ್ತೋತ್ರವನ್ನು ಹೇಳಬೇಕು.

ಕೋಟರಾಕ್ಷೀ ವಿಶ್ವರೂಪಾ ಮಹಾಮಾಯಾ ಬಲಾಧಿಕಾ |
ತ್ರಿಪುರಾ ತ್ರಿಪುರಘ್ನೀ ಚ ಶಿವಾ ವೈ ಶಿವರೂಪಿಣೀ || ೯ ||

ಕನ್ಯಾ ಸಾರಸ್ವತೀ ಪ್ರೋಕ್ತಾ ದುರ್ಗಾ ದುರ್ಗತಿಹಾರಿಣೀ |
ಭೈರವೀ ಭೈರವಾಕ್ಷೀ ಚ ಲಕ್ಷ್ಮೀದೇವೀ ಜನಪ್ರಿಯಾ || ೧೦ ||

ಏತಾನಿ ಬಹುಧೋಕ್ತಾನಿ ನಾಮಾನಿ ಚ ಸುರೇಶ್ವರಿ |
ಯೇ ಪಠಂತಿ ನರಾಶ್ಶ್ರೇಷ್ಠಾಸ್ತೇ ಯಾಂತಿ ಶಿವಸನ್ನಿಧೌ || ೧೧ ||

ಅನಿರುದ್ಧಕೃತಂ ಸ್ತೋತ್ರಂ ಯೇ ಜಪಂತಿ ಮನೀಷಿಣಃ |
ಮುಚ್ಯಂತೇ ಕಷ್ಟಬಂಧಾತ್ತೇ ಸತ್ಯಂ ಸತ್ಯಂ ವರಾನನೇ || ೧೨ ||

---

೯. ಆ ಕೋಟರಾಕ್ಷಿಯು ವಿಶ್ವರೂಪಿಣಿಯು. ಮಹಾಮಾಯೆಯು. ಬಲಿಷ್ಠಳು. ತ್ರಿಪುರ ಸುಂದರಿಯು. ತ್ರಿಪುರವನ್ನು ನಾಶಮಾಡಿದವಳು. ಮಂಗಳಕರಳು. ಪರಮೇಶ್ವರನ ರೂಪಿಣಿಯು.

೧೦. ಈಕೆಯು ಕನ್ಯೆಯು. ಸರಸ್ವತಿಯು. ಸಂಬಂಧಿನಿಯು. ದುರ್ಗೆಯು. ದುರ್ಗತಿಯನ್ನು ನಾಶಮಾಡತಕ್ಕವಳು. ಭೈರವಿಯು. ಭಯಂಕರವಾದ ಕಣ್ಣುಗಳುಳ್ಳವಳು. ಲಕ್ಷ್ಮೀದೇವಿಯ ರೂಪಳು. ಜನರಿಗೆ ಪ್ರೀತಿಪಾತ್ರಳು.

೧೧. ಈ ರೀತಿಯಾಗಿ ಈಕೆಯ ನಾಮಗಳು ಬಹುವಾಗಿವೆ. ಯಾರು ಈ ನಾಮಗಳನ್ನು ಪಠಿಸುತ್ತಾರೆಯೋ ಅವರು ಶ್ರೇಷ್ಠರಾಗಿ ಶಿವನ ಸನ್ನಿಧಿಗೆ ಹೋಗುತ್ತಾರೆ.

೧೨. ಅನಿರುದ್ಧನು ಸ್ತುತಿಸಿದ ಈ ಸ್ತೋತ್ರವನ್ನು ಯಾರು ಜಪಿಸುತ್ತಾರೆಯೋ ಅವರು ಕಷ್ಟಗಳಿಂದ ಬಿಡಲ್ಪಡುತ್ತಾರೆ. ಸಂಶಯವಿಲ್ಲ. ಇದು ಸತ್ಯವು.

**ತೀರ್ಥಾನಾಂ ಪರಮಂ ತೀರ್ಥಂ ಕೋಟರಾನಿರ್ಮಿತಂ ಭುವಿ ।**
**ದರ್ಶನಾದೇವ ನಶ್ಯಂತಿ ಪಾಪಾನಾಂ ರಾಶಯಸ್ತಥಾ ॥ ೧೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಕೋಟರಾತೀರ್ಥ ವರ್ಣನಂ ನಾಮ ದ್ವಿಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೧೩. ಈ ಕೋಟರಾಕ್ಷಿಯ ತೀರ್ಥವು ತೀರ್ಥಗಳೆಲ್ಲೆಲ್ಲಾ ಉತ್ತಮವಾದುದು. ಈ ತೀರ್ಥವನ್ನು ನೋಡುವುದರಿಂದಲೇ ಪಾಪಗಳೆಲ್ಲವೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಕೋಟರಾತೀರ್ಥ ವರ್ಣನ ಎಂಬ ನೂರ ಐವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಪಂಚಾಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಅಸ್ಮಾತ್ತೀರ್ಥಾತ್ಪರಂ ತೀರ್ಥಂ ತೀರ್ಥರಾಜೇತಿ ವಿಶ್ರುತಂ ।**
**ಸಪ್ತ ನದ್ಯೋ ವಹಂತ್ಯತ್ರ ಚಂದನೋದಕಮಿಶ್ರಿತಾಃ ॥ ೧ ॥**

**ಅನ್ಯತೀರ್ಥಾಚ್ಛತಗುಣಂ ಸ್ನಾನಂ ಚಾತ್ರ ವಿಶಿಷ್ಯತೇ ।**
**ದೇವಾನಾಂ ಪ್ರವರೋ ದೇವೋ ಯತ್ರಾಸ್ತೇ ವಾಮನಸ್ಸ್ವಯಂ ॥ ೨ ॥**

**ದ್ವಾದಶ್ಯಾಂ ಮಾಘಮಾಸಸ್ಯ ದದ್ಯಾದ್ಯಸ್ತಿಲಧೇನುಕಾಂ ।**
**ವಿಮುಕ್ತಸ್ಸರ್ವಪಾಪೇಭ್ಯೋ ಕುಲಾನಾಂ ತಾರಯೇಚ್ಛತಂ ॥ ೩ ॥**

---

## ನೂರ ಐವತ್ತಮೂರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು—ಈ ಕೋಟಿರಾತೀರ್ಥಕ್ಕಿಂತ ಮುಂದೆ ಹೋದರೆ ತೀರ್ಥರಾಜನೆಂಬ ತೀರ್ಥವಿರುವುದು. ಇಲ್ಲಿ ಚಂದನದ ನೀರಿನಿಂದ ಕೂಡಿದ ಏಳು ನದಿಗಳು ಹರಿಯುತ್ತವೆ.

೨. ಇಲ್ಲಿ ಸ್ನಾನಮಾಡಿದರೆ ಮಿಕ್ಕ ತೀರ್ಥಗಳಿಗಿಂತಲೂ ನೂರರಷ್ಟು ಫಲವು ಹೆಚ್ಚುಂಟು. ಇಲ್ಲಿ ದೇವತೆಗಳಲ್ಲಿ ಉತ್ತಮನಾದ ದೇವರಾದ ವಾಮನನು ಇಲ್ಲಿದ್ದಾನೆ.

೩. ಇಲ್ಲಿ ಮಾಘಮಾಸದ ದ್ವಾದಶಿಯ ದಿನ ಯಾವನು ತಿಲಧೇನುವನ್ನು ಕೊಡುತ್ತಾನೆಯೋ ಅವನು ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ ನೂರು ಕುಲಗಳನ್ನು ಉದ್ಧಾರ ಮಾಡುತ್ತಾನೆ.

ಪಾನೀಯಮಪ್ಯತ್ರ ತಿಲೈರ್ವಿಮಿಶ್ರಂ
ದದ್ಯಾತ್ಪಿತೃಭ್ಯಃ ಪ್ರಯತೋ ಮನುಷ್ಯಃ ।
ಶ್ರಾದ್ಧಂ ಕೃತಂ ತೇನ ಸಮಾಃ ಸಹಸ್ರಂ
ರಹಸ್ಯಮೇತತ್ಪಿತರೋ ವದಂತಿ ॥ ೪ ॥

ತೀರ್ಥೇಽಸ್ಮಿನ್ ಭೋಜಯೇದ್ವಿಪ್ರಾನ್ ಬ್ರಾಹ್ಮಣಾನ್ ಗುಡಪಾಯಸೈಃ ।
ಏಕಸ್ಮಿನ್ ಭೋಜಿತೇ ವಿಪ್ರೇ ಸಹಸ್ರಂ ಭೋಜಿತಂ ಭವೇತ್ ॥ ೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ವಾಮನ ತೀರ್ಥ ವರ್ಣನಂ ನಾಮ ತ್ರಿಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪. ಎಳ್ಳಿನಿಂದ ಕೂಡಿದ ನೀರನ್ನು ಪಿತೃಗಳನ್ನುದ್ದೇಶಿಸಿ ಬ್ರಾಹ್ಮಣನಿಗೆ ದಾನಮಾಡಿದರೆ ಅವನು ಒಂದು ಸಾವಿರ ವರ್ಷಗಳು ಶ್ರಾದ್ಧ ಮಾಡಿದಂತಾಗುತ್ತದೆ. ಎಂದು ಪಿತೃಗಳು ಹೇಳುತ್ತಾರೆ. ಇದು ಇಲ್ಲಿಯ ರಹಸ್ಯವು.

೫. ಈ ತೀರ್ಥದಲ್ಲಿ ಬೆಲ್ಲವನ್ನು ಹಾಕಿ ಪಾಯಸಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಒಬ್ಬ ಬ್ರಾಹ್ಮಣನು ಊಟಮಾಡಿದರೆ ಸಹಸ್ರ ಜನರು ಊಟಮಾಡಿದ ಫಲವು ಬರುತ್ತದೆ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ವಾಮನ ತೀರ್ಥ ವರ್ಣನ ಎಂಬ ನೂರ ಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುಷ್ಪಂಚಾಶದಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಸೋಮತೀರ್ಥಂ ತತೋ ಗಚ್ಛೇತ್ ಗುಪ್ತಂ ಸಾಭ್ರಮತೀತಟೇ ।**
**ಪಾತಾಳಾದ್ಯತ್ರ ನಿರ್ಗತ್ಯ ಕಾಲಾಗ್ನಿರಭವದ್ಭವಃ ॥ ೧ ॥**

**ಸೋಮತೀರ್ಥೇ ನರಸ್ಸ್ನಾತ್ವಾ ದೃಷ್ಟ್ವಾ ಸೋಮೇಶ್ವರಂ ಶಿವಂ ।**
**ಸೋಮಪಾನಫಲಂ ಸಾಕ್ಷಾದ್ಭವತೀತಿ ನ ಸಂಶಯಃ ॥ ೨ ॥**

**ರೂಪವಾನ್ ಸುಭಗೋ ಭೋಗೀ ಸರ್ವಶಾಸ್ತ್ರವಿಶಾರದಃ ।**
**ನರೋ ಭವತಿ ಲೋಕೇಽಸ್ಮಿನ್ ಪರತ್ರ ಚ ಶಿವಂ ವ್ರಜೇತ್ ॥ ೩ ॥**

---

## ನೂರ ಐವತ್ತನಾಲ್ಕನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು--ಅಲ್ಲಿಂದ ಮುಂದಕ್ಕೆ ಅದೇ ಸಾಭ್ರಮತಿಯ ತೀರದಲ್ಲಿ ಗುಟ್ಟಾಗಿರುವ ಸೋಮತೀರ್ಥಕ್ಕೆ ಹೋಗಬೇಕು. ಅದೇ ಜಾಗದಲ್ಲಿ ಶಿವನು ಪಾತಾಳದಿಂದ ಮೇಲಕ್ಕೆ ಕಾಲಾಗ್ನಿಯ ರೂಪದಲ್ಲಿ ಬಂದನು.

೨ ಆ ಸೋಮತೀರ್ಥದಲ್ಲಿ ಸ್ನಾನಮಾಡಿ ಸೋಮೇಶ್ವರನ ದರ್ಶನಮಾಡಿದರೆ ಯಾಗಮಾಡಿ ಪ್ರತ್ಯಕ್ಷ ಸೋಮಪಾನಮಾಡಿದ ಫಲವು ಮನುಷ್ಯನಿಗೆ ಬರುತ್ತದೆ. ಸಂಶಯವಿಲ್ಲ.

೩. ರೂಪವಂತನೂ, ಒಳ್ಳೆಯ ದೇಹವುಳ್ಳವನೂ, ಭೋಗಿಯೂ ಎಲ್ಲಾ ಶಾಸ್ತ್ರಗಳಲ್ಲಿಯೂ ಬುದ್ಧಿವಂತನೂ ಆಗುತ್ತಾನೆ ಮತ್ತು ಪರಲೋಕದಲ್ಲಿ ಉತ್ತಮ ಸ್ಥಾನವನ್ನು ಹೊಂದುತ್ತಾನೆ.

ಅತ್ರೇತಿಹಾಸಂ ವಕ್ಷ್ಯಾಮಿ ಶೃಣು ಸುಂದರಿ ತತ್ತ್ವತಃ ।
ಯಂ ಶ್ರುತ್ವಾ ಮುಚ್ಯತೇ ಚಾತ್ರ ಬ್ರಹ್ಮಹತ್ಯಾದಿಪಾತಕಾತ್ ॥ ೪ ॥

ಕೌಷೀತಕೇನ ಋಷಿಣಾ ತಪಸ್ತಪ್ತಂ ವಿಶೇಷತಃ ।
ನಿರಾಹಾರೀ ಸ ವೈ ಜಾತಃ ಪರ್ಣಾಶನಸ್ತತಃ ಪರಂ ॥ ೫ ॥

ವಾಯುಭಕ್ಷಂ ತತಃ ಕುರ್ವನ್ ಆತ್ಮಧ್ಯಾನಪರಾಯಣಃ ।
ಏವಂ ಬಹುಯುಗಂ ತತ್ರ ತಪ್ತಂ ತೇನ ಮಹತ್ತಪಃ ।
ಕದಾಚಿದ್ದೈವಯೋಗೇನ ಸುಪ್ರಸನ್ನೋ ಮಹೇಶ್ವರಃ ॥ ೬ ॥

॥ ಶ್ರೀ ಮಹಾದೇವ ಉವಾಚ ॥

ಯದ್ಯತ್ಪ್ರಾರ್ಥಯಸೇ ವಿಪ್ರ ತತ್ಸರ್ವಂ ಪ್ರದದಾಮ್ಯಹಂ ॥ ೭ ॥

॥ ಕೌಷೀತಕ ಉವಾಚ ॥

ತವ ಪ್ರಸಾದಾದ್ದೇವೇಶ ಅತ್ರ ಲಿಂಗಂ ಪ್ರಜಾಯತಾಂ ।
ಅತ್ರ ಸೋಮೇಶ್ವರ ಇತಿ ಖ್ಯಾತೋ ದೇವೋ ಭವೇದ್ಧ್ರುವಂ ॥ ೮ ॥

---

೪. ಇದರ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳುವುದರಿಂದಲೇ ಬ್ರಹ್ಮಹತ್ಯಾದಿ ಪಾಪಗಳು ಹೋಗುತ್ತವೆ.

೫. ಇಲ್ಲಿ ಕೌಷೀತಕ ಋಷಿಯು ತಪಸ್ಸು ಮಾಡುತ್ತಿದ್ದನು. ಕೆಲವು ಕಾಲ ಆಹಾರವಿಲ್ಲದೆಯೂ, ಮತ್ತೆ ಕೆಲವು ದಿನ ಎಲೆಗಳನ್ನು ತಿಂದುಕೊಂಡೂ, ಅನಂತರ ವಾಯುವನ್ನು ಮಾತ್ರ ಸೇವಿಸುತ್ತಲೂ, ಆತ್ಮನನ್ನು ಧ್ಯಾನಿಸುತ್ತಿದ್ದನು.

೬. ಈ ರೀತಿಯಾಗಿ ಕೌಷೀತಕನು ಬಹುಯುಗಗಳವರೆಗೂ ತಪಸ್ಸು ಮಾಡಿದನು. ಒಂದು ಸಾರಿ ಅದೃಷ್ಟಪರಿಪಾಕದಿಂದ ಈಶ್ವರನು ಪ್ರತ್ಯಕ್ಷನಾದನು.

೭. ಶ್ರೀ ಮಹಾದೇವನು ಹೇಳಿದನು—ಎಲೈ ಬ್ರಾಹ್ಮಣನೆ! ನೀನು ಏನೇನನ್ನು ಕೇಳಿಕೊಳ್ಳುತ್ತೀಯೋ ಅವೆಲ್ಲವನ್ನೂ ನಿನಗೆ ಕೊಡುತ್ತೇನೆ.

೮ ಕೌಷೀತಕನು ಹೇಳಿದನು—ಎಲೈ ಸ್ವಾಮಿಯೆ! ನಿನ್ನ ಅನುಗ್ರಹದಿಂದ ಇಲ್ಲಿ ಒಂದು ಲಿಂಗವು ಉದ್ಭವವಾಗಲಿ. ಆ ಸ್ವಾಮಿಯು ಸೋಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗಲಿ.

ಯತ್ರ ಸ್ನಾತ್ವಾ ಚ ಭುಕ್ತ್ವಾ ಚ ವಾಂಛಿತಂ ಫಲಮಾಪ್ನುಯಾತ್ ।
ಅತ್ರ ಸ್ನಾನೇ ವಿಶೇಷೇಣ ರುದ್ರಜಾಪ್ಯಾದಿಕಂ ಯದಿ ॥ ೯ ॥

ಕುರ್ವತೇ ಯೇ ನರಶ್ರೇಷ್ಠಾ ಧರ್ಮಾನರ್ಥಾನ್ ಲಭಂತಿ ತೇ ।
ಅಪುತ್ರೋ ಲಭತೇ ಪುತ್ರಂ ನಿರ್ಧನೋ ಲಭತೇ ಧನಂ ॥ ೧೦ ॥

ರಾಜ್ಯಕಾಮೋ ತು ತದ್ರಾಜ್ಯಂ ಲಭತೇ ನಾತ್ರ ಸಂಶಯಃ ।
ಯದಿ ಚೇತ್ತ್ವಂ ಪ್ರಸನ್ನೋಽಪಿ ತತ್ಸರ್ವಂ ದೇಹಿ ಮೇ ಪ್ರಭೋ ॥ ೧೧ ॥

॥ ಮಹಾದೇವ ಉವಾಚ ॥

ತದಾ ಚೈವ ಸುರೇಶೇನ ಸರ್ವಂ ದತ್ತಂ ದ್ವಿಜನ್ಮನೇ ।
ತದಾಪ್ರಭೃತಿ ತತ್ತೀರ್ಥಂ ಸೋಮಲಿಂಗೇತಿ ವಿಶ್ರುತಂ ॥ ೧೨ ॥

ಚಂದನೈರ್ವಾ ಬಿಲ್ವಪತ್ರೈರ್ಯೇಽರ್ಚಯಂತಿ ಸದಾಶಿವಂ ।
ಲಭಂತೇ ಮಾನುಷೇ ದೇಹೇ ಸೌಖ್ಯಂ ಪುತ್ರಾದಿಸಂಭವಂ ॥ ೧೩ ॥

---

೯-೧೧. ಇಲ್ಲಿ ಸ್ನಾನಮಾಡಿದವನು ಇಷ್ಟವಾದ ಫಲಗಳನ್ನು ಹೊಂದು ತ್ತಾನೆ. ಈ ಜಾಗದಲ್ಲಿ ರುದ್ರಾಧ್ಯಾಯ ಮುಂತಾದುವನ್ನು ಜಪಿಸಬೇಕು. ಹಾಗೆ ಜಪಿಸಿದರೆ ಅವರು ಧರ್ಮಾರ್ಥಕಾಮಗಳನ್ನು ಹೊಂದುತ್ತಾರೆ. ಮಕ್ಕಳಿಲ್ಲದವನಿಗೆ ಮಕ್ಕಳಾಗಬೇಕು. ಬಡವನಾದವನು ಐಶ್ವರ್ಯವನ್ನು ಹೊಂದಬೇಕು. ರಾಜ್ಯ ವನ್ನು ಅಪೇಕ್ಷಿಸುವವನು ರಾಜ್ಯವನ್ನು ಹೊಂದಬೇಕು. ಇದರಲ್ಲಿ ಸಂಶಯವಿಲ್ಲ. ನೀನು ಪ್ರಸನ್ನನಾಗಿದ್ದರೆ ಇವೆಲ್ಲವನ್ನೂ ಕೊಡು.

೧೨. ಮಹಾದೇವನು ಹೇಳಿದನು-ಆಗ ಆ ಈಶ್ವರನು ಅವನಿಗೆ ಅವನು ಕೇಳಿದುದೆಲ್ಲವನ್ನೂ ಕೊಟ್ಟನು. ಅದು ಮೊದಲುಗೊಂಡು ಆ ತೀರ್ಥವು ಸೋಮ ಲಿಂಗತೀರ್ಥವೆಂದು ಹೆಸರು ಹೊಂದಿತು.

೧೩. ಚಂದನದಿಂದಾಗಲಿ, ಬಿಲ್ವಪತ್ರೆಯಿಂದಾಗಲಿ ಯಾರು ಆ ಲಿಂಗ ವನ್ನು ಪೂಜಿಸುತ್ತಾರೆಯೋ ಅವರು ಈ ಲೋಕದಲ್ಲಿ ಪುತ್ರಸೌಖ್ಯವೇ ಮುಂತಾದ ಎಲ್ಲಾ ಸುಖಗಳನ್ನೂ ಹೊಂದುತ್ತಾರೆ.

ಸೋಮವಾರೇ ತಥಾ ಪ್ರಾಪ್ತೇ ಯೋ ಗಚ್ಛತಿ ಹರಾಲಯಂ ।
ವಾಂಛಿತಂ ಲಭತೇ ನಿತ್ಯಂ ಸೋಮಲಿಂಗಪ್ರಸಾದತಃ ॥ ೧೪ ॥

ತತ್ರ ಗತ್ವಾ ತು ಯೋ ದೇವಿ ಯದ್ದದಾತಿ ಫಲಾದಿಕಂ ।
ಯಯಯಾ ಕಾಮನಯಾ ಚೈವ ತತ್ತತ್ಪ್ರಾಪ್ನೋತಿ ನಿಶ್ಚಿತಂ ॥ ೧೫ ॥

ಶ್ವೇತೈರ್ವಾ ಕರವೀರೈಶ್ಚ ಪಾರಿಜಾತೈಸ್ತಥಾ ಪುನಃ ।
ಯೇಽರ್ಚಯಂತಿ ಚ ತಂ ದೇವಂ ಶ್ರೀಮಹೇಶಂ ಪಿನಾಕಿನಂ ॥
ತೇ ಲಭಂತೇ ಸುರಶ್ರೇಷ್ಠೇ ಶೈವಂ ಪದಮನುತ್ತಮಂ ॥ ೧೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಸೋಮತೀರ್ಥ ವರ್ಣನಂ ನಾಮ ಚತುಃಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೪. ಸೋಮವಾರದ ದಿವಸ ಆ ಸೋಮಲಿಂಗವನ್ನು ಪೂಜಿಸಿದರೆ ಆ ದೇವರ ಅನುಗ್ರಹದಿಂದ ಇಷ್ಟವಾದುವುಗಳನ್ನೆಲ್ಲಾ ಹೊಂದುತ್ತಾನೆ.

೧೫. ಆ ಸ್ಥಳದಲ್ಲಿ ಫಲವೇ ಮುಂತಾದುವುಗಳನ್ನು ಯಾವು ಯಾವುದನ್ನು ದಾನಮಾಡುತ್ತಾರೆಯೋ ಅದಕ್ಕೆ ಯಾವ ಉದ್ದೇಶ ಇಟ್ಟುಕೊಂಡಿರುವರೋ ಅವೆಲ್ಲವನ್ನೂ ನಿಶ್ಚಯವಾಗಿಯೂ ಹೊಂದುತ್ತಾರೆ.

೧೬. ಬಿಳಿಯ ಕಣಿಗಲೆ ಹೂವುಗಳಿಂದಲೂ, ಪಾರಿಜಾತದ ಹೂವುಗಳಿಂದಲೂ, ಈ ಸ್ವಾಮಿಯನ್ನು ಪೂಜಿಸಿದವರು ಉತ್ತಮವಾದ ಸ್ಥಾನವನ್ನು ಹೊಂದುತ್ತಾರೆ. ಇದರಲ್ಲಿ ಸಂದೇಹವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ಸೋಮತೀರ್ಥ ವರ್ಣನ ಎಂಬ ನೂರ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಪಂಚಾಶದಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ತತೋ ಗಚ್ಛೇತ್ತಥಾ ದೇವಿ ತೀರ್ಥಂ ಕಾಪೋತಿಕಂ ಪುನಃ ।
ಯತ್ರ ಸಾಭ್ರಮತೀ ತೋಯಂ ಪ್ರಾಚೀನಂ ಸಂಪ್ರವರ್ತತೇ || ೧ ||

ಪಿಂಡಂ ದದಾತಿ ಯಸ್ತತ್ರ ಪಿತೃತರ್ಪಣಪೂರ್ವಕಂ ।
ವನ್ಯೈಃ ಫಲೈಸ್ತಥಾ ಪುಷ್ಪೈಃ ಸದಾ ಪರ್ವಣಿ ಪರ್ವಣಿ || ೨ ||

ಕಾಕಾದಿಭ್ಯಶ್ಚ ಶ್ವಾದಿಭ್ಯೋ ಬಲಿಂ ಸಂದದತೇ ತು ಯಃ ।
ಯಮಸ್ಯ ಸೋಽಪಿ ಪಂಥಾನಂ ಸಸುಖಂ ನಿಸ್ತರೇನ್ನರಃ || ೩ ||

---

## ನೂರ ಐವತ್ತೈದನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು—ಮುಂದಕ್ಕೆ ಹೋಗುತ್ತಾ ಸಾಭ್ರಮತಿಯು ಪೂರ್ವದಿಕ್ಕಿಗೆ ಹರಿಯುತ್ತಿರುತ್ತದೆ. ಅದರ ವಡವಲ್ಲಿ ಮುಂದಕ್ಕೆ ಹೋದರೆ ಕಾಪೋತಿಕವೆಂಬ ತೀರ್ಥವೊಂದಿರುವುದು.

೨. ಯಾವನು ಅಲ್ಲಿ ಪಿತೃಗಳಿಗೆ ಪಿಂಡವನ್ನು ಕೊಟ್ಟು ತರ್ಪಣವನ್ನು ಕೊಡುತ್ತಾನೆಯೋ ಆ ಸ್ವಾಮಿಯನ್ನು ಪರ್ವಕಾಲಗಳಲ್ಲಿ ಎಲ್ಲಾ ಹಣ್ಣು ಹೂವುಗಳಿಂದ ಅರ್ಚಿಸುತ್ತಾನೆಯೋ ಅವನಿಗ ನರಕಗತಿಯಿರುವುದಿಲ್ಲ.

೩. ಕಾಗೆ ನಾಯಿಗಳಿಗೆ ಬಲಿಯನ್ನು ಹಾಕುವವನೂ ಕೂಡ ಯಮನ ಪಟ್ಟಣದ ದಾರಿಯನ್ನು ಸುಖವಾಗಿ ದಾಟುತ್ತಾನೆ.

ಯತ್ರ ತೀರ್ಥೇ ನರಸ್ಸ್ನಾತ್ವಾ ವೈಶಾಖ್ಯಾಂ ಗೌರಸರ್ಷಪೈಃ ।
ಪೂಜಯೇದ್ದೇವಮೀಶಾನಂ ಪ್ರಾಚೀನೇಶ್ವರಮುತ್ತಮಂ ॥ ೪ ॥

ಆತ್ಮಾನಂ ತಾರಯೇತ್ಸೋಽಪಿ ಪಿತ್ರ್ಂನಥ ಪಿತಾಮಹಾನ್ ।
ಕಪೋತೋ ಯತ್ರ ಚಾತ್ಮಾನಂ ದತ್ವಾ ಚಾಽತಿಥಯೇ ಮುದಾ ॥ ೫ ॥

ಸ್ತುತೋ ದೇವಗಣೈಸ್ಸರ್ವೈರ್ವಿಮಾನೇನ ದಿವಂ ಗತಃ ।
ತದಾಪ್ರಭೃತಿ ತತ್ತೀರ್ಥಂ ಕಾಪೋತಮಿತಿ ವಿಶ್ರುತಂ ।
ತತ್ರ ಸ್ನಾತ್ವಾ ನರಃ ಪೀತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ॥ ೬ ॥

॥ ಶ್ರೀ ಪಾರ್ವತ್ಯುವಾಚ ॥

ಕಪೋತೇನ ಕಥಂ ದತ್ತಂ ಶರೀರಂ ಚ ವದ ಪ್ರಭೋ ।
ನಿಮಿತ್ತಂ ಕಿಂ ತಥಾ ದೇವ ನಾಹಂ ವೇದ್ಮಿ ಸುರೇಶ್ವರ ॥ ೭ ॥

---

೪ ವೈಶಾಖಮಾಸದಲ್ಲಿ ಬಿಳಿಯ ಸಾಸಿವೆಯನ್ನು ಅರೆದು ಮೈಗೆ ಬಳಿದು ಕೊಂಡು ಈ ಕಾಪೋತಿಕ ತೀರ್ಥದಲ್ಲಿ ಸ್ನಾನಮಾಡಿ ಇಲ್ಲಿರುವ ಪ್ರಾಚೀನೇಶ್ವರ ನನ್ನು ಪೂಜಿಸಿದರೆ ಅವನು ತನ್ನನ್ನೂ ತನ್ನ ಪಿತೃಪಿತಾಮಹಾದಿಗಳನ್ನೂ ನರಕ ದಿಂದ ಪಾರುಮಾಡಿಕೊಳ್ಳುತ್ತಾನೆ.

೫. ಆ ಜಾಗದಲ್ಲಿ ಒಂದು ಪಾರಿವಾಳವು ತನ್ನ ಮಾಂಸವನ್ನು ಅತಿಥಿಗೆ ಕೊಟ್ಟು ದೇವತೆಗಳಿಂದ ಹೊಗಳಿಸಿಕೊಳ್ಳುತ್ತಾ ವಿಮಾನದಲ್ಲಿ ಸ್ವರ್ಗವನ್ನು ಹೊಂದಿತು.

೬. ಅದು ಮೊದಲುಗೊಂಡು ಆ ತೀರ್ಥವು ಕಪೋತ ತೀರ್ಥವೆಂದು ಹೆಸರುಗೊಂಡಿರುವುದು. ಅಲ್ಲಿ ಸ್ನಾನಮಾಡಿದರೂ ಅಲ್ಲಿನ ನೀರನ್ನು ಕುಡಿದರೂ ಬ್ರಹ್ಮಹತ್ಯೆಯು ಹೋಗುತ್ತದೆ.

೭ ಶ್ರೀ ಪಾರ್ವತಿಯು ಹೇಳಿದಳು—ಎಲೈ ದೇವನೆ! ಕಪೋತವು ತನ್ನ ಶರೀರವನ್ನು ಹೇಗೆ ಕೊಟ್ಟಿತು? ಅದಕ್ಕೆ ಕಾರಣವೇನು? ನನಗೆ ಅವೊಂದೂ ಗೊತ್ತಿಲ್ಲ. ಅದನ್ನು ಹೇಳು.

॥ ಶ್ರೀಮಹಾದೇವ ಉವಾಚ ॥

ಅತ್ರ ತೀರ್ಥೇ ತು ದೇವೇಶಿ ವಟೋ ವೈ ಪರಮೋ ಮಹಾನ್ ।
ತಸ್ಯ ಶಾಖಾಹ್ಯನಂತಾಶ್ಚ ದೃಶ್ಯಂತೇ ವಿಪುಲಾ ಭುವಿ ॥ ೮ ॥

ತತ್ರ ಜೀವಾ ವಸಂತೀಹ ಪಕ್ಷಿಣೋ ಬಹವಸ್ತಥಾ ।
ಕಪೋತೇನ ಗೃಹಂ ತತ್ರ ಕಾರಿತಂ ತು ಸುರೇಶ್ವರಿ ॥ ೯ ॥

ತತ್ರ ತಿಷ್ಠತಿ ಪಕ್ಷೀಶೋ ನಿತ್ಯಂ ವಿಷ್ಣುಪರಾಯಣಃ ।
ಕುಟುಂಬೇನ ಸಮಾಯುಕ್ತಃ ಶಾಖಾಯಾಂ ವಸತಿ ಧ್ರುವಂ ॥ ೧೦ ॥

ಏಕಸ್ಮಿನ್ವಾಸರೇ ದೇವಿ ದ್ವಾದಶ್ಯಾಂ ವಿಷ್ಣುವಾಸರೇ ।
ಶ್ಯೇನಸ್ತತ್ರ ಸಮಾಯಾತೋ ಹ್ಯತಿಥಿಶ್ಶ್ಯೇನ ಭಾಮಿನಿ ॥ ೧೧ ॥

ಕಪೋತ ದೇಹಿ ಮಾಂಸಂ ವೈ ತವ ಶಾರೀರಕಂ ಮಮ ।
ನೋ ಚೇಚ್ಛಾಪಂ ಪ್ರದಾಸ್ಯಾಮಿ ಇತ್ಯುಕ್ತಂ ನಗನಂದಿನಿ ॥ ೧೨ ॥

---

೮. ಶ್ರೀ ಮಹಾದೇವನು ಹೇಳಿದನು—ಈ ತೀರ್ಥದಲ್ಲಿ ಒಂದು ಆಲದ ಮರವಿದೆ. ಅದರ ಶಾಖೆಗಳೂ ಉಪಶಾಖೆಗಳೂ ಬಹಳವಾಗಿ ಹರಡಿಕೊಂಡಿವೆ.

೯. ಅದರಲ್ಲಿ ಅನೇಕವಾದ ಕ್ರಿಮಿಕೀಟಗಳೂ ಪಕ್ಷಿಗಳೂ ವಾಸಮಾಡುತ್ತವೆ. ಅಲ್ಲಿ ಒಂದು ಕಪೋತವು ಗೂಡು ಮಾಡಿಕೊಂಡಿದ್ದಿತು.

೧೦. ಅಲ್ಲಿ ಆ ಪಕ್ಷಿಯು ತನ್ನ ಕುಟುಂಬದೊಡನೆ ವಾಸಮಾಡಿಕೊಂಡಿದ್ದಿತು. ಅದು ಯಾವಾಗಲೂ ವಿಷ್ಣುವನ್ನು ಧ್ಯಾನಮಾಡಿಕೊಂಡಿದ್ದಿತು.

೧೧. ಒಂದಾನೊಂದು ದಿವಸ ದ್ವಾದಶಿಯು ಬಂದಿತು. ಆದಿನ ವಿಷ್ಣುವಿನ ದಿವಸವಾಗಿದ್ದಿತು. ಆದಿನ ಒಂದು ಗಿಡಗನೂ ಅಲ್ಲಿಗೆ ಅತಿಥಿಯಾಗಿ ಬಂದಿತು.

೧೨. ಆ ಗಿಡಗನು ಎಲೈ ಕಪೋತನೆ! ನಿನ್ನ ದೇಹದ ಮಾಂಸವನ್ನು ನನಗೆ ಕೊಡು. ನೀನು ಕೊಡದಿದ್ದರೆ ಶಾಪವನ್ನು ಕೊಡುತ್ತೇನೆಂದು ಹೇಳಿತು.

ಅದ್ಯ ವೈ ವಾಸರೇ ವಿಷ್ಣೋಃ ಕ್ಷುಧಾಽಽತೋರ್ಽಹಂ ಸಮಾಗತಃ ।
ತಸ್ಮಾದ್ದೇಯಂ ಹಿ ಮಾಂಸಂ ತತ್ ಕ್ಷುಧಾತಾರ್ಯ ಮಮ ಪ್ರಭೋ॥೧೩॥

ಶ್ಯೇನೋಕ್ತಂ ತತ್ತು ವೈ ಶ್ರುತ್ವಾ ಕಪೋತೋ ವೈಷ್ಣವೋ ಮಹಾನ್ ।
ತೇನ ದತ್ತಂ ತಥಾ ದೇವಿ ಶರೀರಂ ನಾಽತ್ರ ಸಂಶಯಃ ॥ ೧೪ ॥

ತೇನ ದಾನಪ್ರಭಾವೇನ ತೀರ್ಥಂ ಜಾತಂ ಸುರೋತ್ತಮೇ ।
ಕಾಪೋತಿಕಂ ಮಹತ್ತೀರ್ಥಂ ಪಾವನಾನಾಂ ಚ ಪಾವನಂ ॥ ೧೫ ॥

ಅತ್ರ ತೀರ್ಥೇ ನರಸ್ಸ್ನಾತ್ವಾ ಕೃತ್ವಾ ವೈ ಶಿವಪೂಜನಂ ।
ದದಾತಿ ಚಾಽತಿಥಿಭ್ಯಶ್ಚ ಮಿಷ್ಟಮನ್ನಂ ಸುರೋತ್ತಮೇ ॥ ೧೬ ॥

ಇಹಲೋಕೇ ಸುಖಂ ಭುಕ್ತ್ವಾ ಯಾತಿ ವಿಷ್ಣೋಸ್ಸನಾತನಂ ।
ದತ್ವಾ ವೈ ಸ್ವಶರೀರಂ ತು ಕಪೋತೋ ವೈ ಮಹಾತ್ಮನೇ ॥ ೧೭ ॥

---

೧೩. ಈ ದಿನ ವಿಷ್ಣುವಿನ ವಾಸರವು. ನನಗೆ ಬಹಳ ಹಸಿವಾಗಿದೆ. ಆದುದರಿಂದ ಈ ಹಸಿವು ನಾಶವಾಗಲು ನೀನು ನಿನ್ನ ಮಾಂಸವನ್ನು ಕೊಟ್ಟೇ ಕೊಡಬೇಕು.

೧೪. ಆ ಕಪೋತವು ಗಿಡಗದ ಮಾತನ್ನು ಕೇಳಿ ತಾನು ವಿಷ್ಣುಭಕ್ತನಾದುದರಿಂದ ತನ್ನ ಶರೀರದ ಮಾಂಸವನ್ನು ಆ ಗಿಡಗಕ್ಕೆ ಕೊಟ್ಟಿತು.

೧೫. ಈ ಕಪೋತವು ತನ್ನ ದೇಹದ ಮಾಂಸವನ್ನು ದಾನಮಾಡಿದುದರಿಂದ ಆ ಸ್ಥಳಕ್ಕೆ ಕಾಪೋತಿಕ ತೀರ್ಥವೆಂಬ ಹೆಸರು ಬಂದಿತು. ಇದು ಉತ್ತಮೋತ್ತಮವಾದ ಪವಿತ್ರ ತೀರ್ಥವು.

೧೬. ಈ ತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಶಿವಪೂಜೆಯನ್ನು ಮಾಡಬೇಕು. ಅತಿಥಿಗಳಿಗೆ ಉತ್ತಮವಾದ ಅನ್ನವನ್ನು ಬಡಿಸಿ ಭೋಜನ ಮಾಡಿಸಬೇಕು.

೧೭–೧೮. ಅವನು ಈ ಲೋಕದಲ್ಲಿ ಸುಖವನ್ನನುಭವಿಸಿ ಅನಂತರ ವಿಷ್ಣು ಲೋಕವನ್ನು ಹೊಂದುತ್ತಾನೆ. ಕಪೋತವು ತನ್ನ ಶರೀರವನ್ನು ಅತಿಥಿಗೆ ಕೊಟ್ಟು

**ಸ ಗತೋ ವೈಷ್ಣವಂ ತತ್ರ ಯಾವಚ್ಚಂದ್ರದಿವಾಕರೌ !**
**ಅತೋ ಗತ್ವಾ ತು ಭೋ ದೇವಿ ಅತಿಥಿಂ ಪೂಜಯೇತ್ಸದಾ !**
**ಪೂಜಿತೇ ಚಾಽತಿಥೌ ತತ್ರ ಸರ್ವಂ ಚ ಲಭತೇ ಧ್ರುವಂ　　　　|| ೧೮ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಕಪೋತತೀರ್ಥ ವರ್ಣನಂ ನಾಮ ಪಂಚಪಂಚಾಶದಧಿಕಶತತಮೋಽಧ್ಯಾಯಃಸಮಾಪ್ತಃ**

---

ಚಂದ್ರ ಸೂರ್ಯರಿರುವವರೆಗೂ ಜನ್ಮ ಬಾರದಂತಹ ವೈಷ್ಣವಲೋಕವನ್ನು ಹೊಂದಿತು. ಆದುದರಿಂದ ಅಲ್ಲಿಗೆ ಹೋಗಿ ಯಾವಾಗಲೂ ಅತಿಥಿಯನ್ನು ಪೂಜಿಸ ಬೇಕು. ಹಾಗೆ ಅತಿಥಿಯನ್ನು ಪೂಜಿಸಿದರೆ ಎಲ್ಲವನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಕಪೋತತೀರ್ಥ ವರ್ಣನ ಎಂಬ ನೂರ ಐವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಟ್ಪಂಚಾಶದಧಿಕಶತತಮೋಽಧ್ಯಾಯಃ ||



|| ಶ್ರೀಮಹಾದೇವ ಉವಾಚ ||

ತೀರ್ಥಾನಾಂ ಪ್ರವರಂ ತೀರ್ಥಂ ಮಹಾಪಾತಕನಾಶನಂ ।
ಗೋತೀರ್ಥಮಿತಿ ವಿಖ್ಯಾತಂ ಕಾಶ್ಯಪಹ್ರದಸಮೀಪತಃ || ೧ ||

ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ಗೋತೀರ್ಥೇ ತು ತತಸ್ಸ್ನಾನಾತ್ ನಶ್ಯಂತ್ಯತ್ರ ನ ಸಂಶಯಃ || ೨ ||

ಗಾವಃ ಕೃಷ್ಣಾಂ ತಮಂ ಪ್ರಾಪ್ಯ ಪೂರ್ವಪಾತಕಯೋಗತಃ ।
ಯತ್ರ ತೀರ್ಥೇ ತತಸ್ಸ್ನಾತ್ವಾ ಶುಕ್ಲತ್ವಂ ಪುನರಾಪಿತಾಃ || ೩ ||

---

## ನೂರ ಐವತ್ತಾರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು– ಇಲ್ಲಿಂದ ಸ್ವಲ್ಪ ಮುಂದೆ ಹೋದರೆ ಗೋತೀರ್ಥವೆಂಬ ತೀರ್ಥವೊಂದಿರುವುದು. ಅದು ಕಾಶ್ಯಪಹ್ರದದ ಹತ್ತಿರವಿದೆ. ಮಹಾಪಾಪಗಳನ್ನು ನಾಶಮಾಡುತ್ತದೆ.

೨. ಬ್ರಹ್ಮಹತ್ಯೆಗೆ ಸಮವಾದ ಯಾವ ಪಾಪಗಳಿದ್ದರೂ ಸರಿ. ಅವೆಲ್ಲವೂ ಈ ಗೋತೀರ್ಥದಲ್ಲಿ ಸ್ನಾನ ಮಾಡುವುದರಿಂದ ನಾಶವಾಗುತ್ತವೆ. ಎಂಬುದರಲ್ಲಿ ಸಂದೇಹವಿಲ್ಲ.

೩. ಗೋವುಗಳು ತಾವು ಹಿಂದೆ ಮಾಡಿದ ಪಾಪದ ಸಂಬಂಧದಿಂದ ಕಪ್ಪು ಬಣ್ಣವನ್ನು ಹೊಂದಿ ಬಿಟ್ಟವು. ಆಗ ಈ ತೀರ್ಥದಲ್ಲಿ ಅವು ಸ್ನಾನಮಾಡಿ ಮತ್ತೆ ಬಿಳಿಯ ಬಣ್ಣವನ್ನು ಹೊಂದಿದುವು.

ತತ್ರ ತೀರ್ಥೇ ನರಸ್ಸ್ನಾತ್ವಾ ಗೋಭ್ಯೋ ದತ್ವಾ ಗವಾಹ್ನಿಕಂ ।
ಗೋಮಾತೃಣಾಂ ಪ್ರಸಾದೇನ ಮಾತೃಣಾಮನೃಣೀ ಭವೇತ್ ॥ ೪ ॥

ಗೋತೀರ್ಥೇ ತು ನರೋ ಗತ್ವಾ ಸ್ನಾತ್ವಾ ಯಸ್ತು ಪಯಸ್ವಿನೀಂ ।
ದದಾತಿ ವಿಪ್ರಮುಖ್ಯೇಭ್ಯಃ ಸ ಯಾತಿ ಬ್ರಹ್ಮಣಃ ಪದಂ ॥ ೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಗೋತೀರ್ಥ ವರ್ಣನಂ
ನಾಮ ಷಟ್ಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪. ಮನುಷ್ಯನು ಆ ತೀರ್ಥದಲ್ಲಿ ಸ್ನಾನಮಾಡಿ ಗೋವುಗಳಿಗೆ ಗೋಗ್ರಾಸವನ್ನು ಕೊಟ್ಟು ಪೂಜಿಸಿದರೆ ಆ ಗೋವುಗಳ ಅನುಗ್ರಹದಿಂದ ಮಾತೃಗಳ ಋಣದಿಂದ ಪಾರಾಗುತ್ತಾನೆ.

೫. ಮನುಷ್ಯನು ಗೋತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಕರೆಯುವ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಿದರೆ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಗೋತೀರ್ಥ ವರ್ಣನ
ಎಂಬ ನೂರ ಐವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಪಂಚಾಶದಧಿಕಶತತಮೋಽಧ್ಯಾಯಃ ॥



॥ ಶ್ರೀಮಹಾದೇವ ಉವಾಚ ॥

ಅತ್ರ ತೀರ್ಥಂ ಮಹಚ್ಚಾನ್ಯತ್ ಕಾಶ್ಯಪಾಖ್ಯಂ ಸುರೇಶ್ವರಿ ।
ಯತ್ರ ಹ್ರದೋ ಮಹಾನಾಸೀತ್ ನಗದೇವವಿನಿರ್ಮಿತಃ ॥ ೧ ॥

ಕುಶೇಶ್ವರೋ ನಾಮ ತತ್ರ ದೇವೋ ಯತ್ರ ವಿರಾಜತೇ ।
ಯತ್ರ ಕುಂಡಂ ತಥಾ ರಮ್ಯಂ ಕಶ್ಯಪೇನ ವಿನಿರ್ಮಿತಂ ॥ ೨ ॥

ತತ್ರ ಸ್ನಾತ್ವಾ ತು ಭೋಃ ದೇವಿ ನ ನರೋ ನಿರಯಂ ವ್ರಜೇತ್ ।
ಅಗ್ನಿಹೋತ್ರಕರಾ ವಿಪ್ರಾ ನಿತ್ಯಂ ವೇದಪರಾಯಣಾಃ ॥ ೩ ॥

---

## ನೂರ ಐವತ್ತೇಳನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು—ಎಲೈ ಪಾರ್ವತಿಯೆ ! ಇಲ್ಲಿ ಕಾಶ್ಯಪ ತೀರ್ಥವೆಂಬ ಒಂದು ತೀರ್ಥವಿದೆ. ಆ ತೀರ್ಥವು ಪರ್ವತರಾಜನಿಂದ ನಿರ್ಮಿತ ವಾದುದಾಗಿದೆ.

೨. ಅಲ್ಲಿ ಕುಶೇಶ್ವರನೆಂಬ ದೇವರು ಪ್ರಕಾಶಿಸುತ್ತಲಿರುವನು. ಅಲ್ಲಿ ಕಶ್ಯಪ ನಿಂದ ನಿರ್ಮಿತವಾದ ಒಂದು ರಮ್ಯವಾದ ಕುಂಡವಿರುವುದು.

೩-೪. ಅಲ್ಲಿ ಸ್ನಾನಮಾಡಿದರೆ ಮನುಷ್ಯನು ನರಕಭಾಗಿಯಾಗುವುದಿಲ್ಲ. ಅಲ್ಲಿರುವ ಬ್ರಾಹ್ಮಣರು ಯಾವಾಗಲೂ ಅಗ್ನಿಹೋತ್ರವನ್ನು ಮಾಡುತ್ತಲೂ ವೇದ ಗಳನ್ನು ಅಧ್ಯಯನಮಾಡುತ್ತಲೂ ಇರುತ್ತಾರೆ. ಈ ಕಾಶ್ಯಪತೀರ್ಥವು ಅಂತಹ

ನಿವಸಂತಿ ಮಹಾದೇವಿ ಕಾಶ್ಯಪಾಯಾಂ ಬಹುಶ್ರುತಾಃ |
ಯಥಾ ಕಾಶೀ ತಥಾ ಚೇಯಂ ನಗರೀ ಋಷಿನಿರ್ಮಿತಾ || ೪ ||

ಕಶ್ಯಪೇನ ಯತಶ್ಚಾತ್ರ ತಪ್ತಂ ಬಹುತರಂ ತಪಃ |
ಗಂಗಾ ವೈ ತಪಸಾ ಯೇನ ಆನೀತೇಶಜಟೋದ್ಭವಾ || ೫ ||

ಸಾ ಗಂಗಾ ಕಾಶ್ಯಪೀ ದೇವಿ ಮಹಾಪಾತಕನಾಶಿನೀ |
ಯಸ್ಯಾ ದರ್ಶನಮಾತ್ರೇಣ ಮುಚ್ಯಂತೇ ದುಷ್ಟಕಿಲ್ಬಿಷಾತ್ || ೬ ||

ಗೋದಾನಂ ಚ ಪ್ರಶಂಸಂತಿ ರಥದಾನಂ ತಥೈವ ಚ |
ಶ್ರಾದ್ಧಂ ಕೃತ್ವಾ ತು ತತ್ರೈವ ದಾನಂ ದೇಯಂ ಪ್ರಯತ್ನತಃ || ೭ ||

ಕಲೌ ಯುಗೇ ತಥಾ ಘೋರೇ ಮಹಾಪಾತಕನಾಶನಂ |
ಸಮಂ ಕಶ್ಯಪತೀರ್ಥಸ್ಯ ನ ಭೂತಂ ನ ಭವಿಷ್ಯತಿ || ೮ ||

---

ಉತ್ತಮವಾದುದು. ಕಾಶೀಪಟ್ಟಣವು ಹೇಗೆ ಉತ್ಕೃಷ್ಟವೋ ಅಂತೆಯೇ ಈ ಕಾಶ್ಯಪತೀರ್ಥವು ಉತ್ತಮವಾದುದು. ಆ ರೀತಿಯಾಗಿಯೇ ಕಶ್ಯಪನು ನಿರ್ಮಿಸಿದ್ದಾನೆ.

೫–೬. ಇಲ್ಲಿ ಕಶ್ಯಪನು ಬಹುಕಾಲ ತಪಸ್ಸು ಮಾಡಿದನು. ಈಶ್ವರನ ಜಟೆಯಲ್ಲಿದ್ದ ಗಂಗೆಯನ್ನು ತಪಸ್ಸಿನಿಂದ ಕಶ್ಯಪನು ಇಲ್ಲಿಗೆ ತಂದನು. ಇದನ್ನು ನೋಡಿದ ಮಾತ್ರದಿಂದಲೇ ಪಾಪಗಳೆಲ್ಲವೂ ಹೋಗುತ್ತವೆ.

೭. ಅಲ್ಲಿ ಸ್ನಾನಮಾಡಿ ಗೋದಾನ, ರಥದಾನಗಳನ್ನು ಮಾಡಿದರೆ ಬಹು ಶ್ರೇಷ್ಠವೆಂದು ಹೇಳುತ್ತಾರೆ. ಅಲ್ಲಿ ಪಿತೃಗಳಿಗೆ ಶ್ರಾದ್ಧವನ್ನು ಮಾಡಿ ಪ್ರಯತ್ನಪಟ್ಟು ದಾನಗಳನ್ನು ಮಾಡಬೇಕು.

೮. ಈ ಘೋರವಾದ ಕಲಿಯುಗದಲ್ಲಿ ಇದು ಮಹಾಪಾಪಗಳನ್ನು ನಾಶಮಾಡುತ್ತದೆ. ಈ ಕಶ್ಯಪ ತೀರ್ಥಕ್ಕೆ ಸಮವಾದ ತೀರ್ಥವು ಮತ್ತೊಂದಿಲ್ಲ ಹಿಂದೆ ಹುಟ್ಟಿಯೂ ಇಲ್ಲ. ಮುಂದೆ ಹುಟ್ಟುವುದೂ ಇಲ್ಲ.

ಯತ್ರ ವೈ ದೇವತಾಸ್ಸರ್ವಾ ಋಷಯೋ ವೀತಕಲ್ಮಷಾಃ ।
ನಿತ್ಯಂ ತಿಷ್ಠಂತಿ ದೇವೇಶಿ ತೀರ್ಥರಾಜ ಪ್ರಸಾದತಃ ॥ ೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಸಾಂಭ್ರಮತೀ ಮಾಹಾತ್ಮ್ಯೇ ಕಾಶ್ಯಪತೀರ್ಥ ವರ್ಣನಂ
ನಾಮ ಸಪ್ತಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯. ಆ ಕಶ್ಯಪತೀರ್ಥದಲ್ಲಿ ದೇವತೆಗಳೂ ಋಷಿಗಳೂ ಪುಣ್ಯವಂತರೂ ಈ ತೀರ್ಥರಾಜನ ಅನುಗ್ರಹವನ್ನಪೇಕ್ಷಿಸುತ್ತ ಯಾವಾಗಲೂ ಇರುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಕಾಶ್ಯಪತೀರ್ಥ ವರ್ಣನ
ಎಂಬ ನೂರ ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಪಂಚಾಶದಧಿಕಶತತಮೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಭೂತಾಲಯಂ ತತೋ ಗಚ್ಛೇತ್ ತೀರ್ಥಂ ಪಾಪಹರಂ ಶುಭಂ ।**
**ಭೂತಾಲಯೋ ಯತ್ರ ವಟೋ ಯತ್ರ ಪ್ರಾಚೀ ತು ಚಂದನಾ ॥ ೧ ॥**

**ಭೂತಾಲಯೇ ನರಸ್ಸ್ನಾತ್ವಾ ದೃಷ್ಟ್ವಾ ಭೂತಾಲಯಂ ವಟಂ ।**
**ಭೂತೇಶ್ವರಪ್ರಸಾದೇನ ಭೂತೇಭ್ಯೋ ನ ಲಭೇದ್ಭಯಂ ॥ ೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಭೂತಾಲಯತೀರ್ಥ ವರ್ಣನಂ ನಾಮ ಅಷ್ಟಪಂಚಾಶದಧಿಕಶತತಮೋಽಧ್ಯಾಯಸ್ಸಮಾಪ್ತಃ**

---

## ನೂರ ಐವತ್ತೆಂಟನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು–ಅನಂತರ ಭೂತಾಲಯವೆಂಬ ತೀರ್ಥವನ್ನು ಹೊಂದಬೇಕು. ಅದು ಪಾಪಹಾರಕವು. ಶುಭಕರವು. ಈ ಸ್ಥಳದಲ್ಲಿ ಭೂತಗಳಿಗೆ ಸ್ಥಾನವಾದ ಒಂದು ಆಲದ ಮರವಿದೆ. ಈ ಜಾಗದಲ್ಲಿ ಈ ನದಿಯು ಪೂರ್ವದಿಕ್ಕಿಗೆ ಹರಿಯುತ್ತದೆ.

೨. ಈ ಭೂತಾಲಯ ತೀರ್ಥದಲ್ಲಿ ಮನುಷ್ಯನು ಸ್ನಾನಮಾಡಿ ಭೂತಾಲಯವೆಂಬ ಆ ಆಲದಮರದ ದರ್ಶನವನ್ನು ಮಾಡಿದರೆ ಅಲ್ಲಿರುವ ಭೂತೇಶ್ವರನ ಅನುಗ್ರಹದಿಂದ ಅವನಿಗೆ ಯಾವಾಗಲೂ ಭೂತಗಳಿಂದ ಹೆದರಿಕೆ ಇರುವುದಿಲ್ಲ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ಭೂತಾಲಯತೀರ್ಥ ವರ್ಣನ ಎಂಬ ನೂರ ಐವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕೋನಷಷ್ಟ್ಯಧಿಕಶತತಮೋಽಧ್ಯಾಯಃ ||



**|| ಶ್ರೀ ಮಹಾದೇವ ಉವಾಚ ||**

**ಅತಸ್ತೀರ್ಥಾತ್ಪರಂ ತೀರ್ಥಂ ಘಟೇಶ್ವರಮಿತಿ ಸ್ಮೃತಂ ।**
**ಯತ್ರ ಸ್ನಾತ್ವಾ ತು ತಂ ದೃಷ್ಟ್ವಾ ಮುಕ್ತಿಭಾಗೀ ಭವೇದ್ಧ್ರುವಂ || ೧ ||**

**ಯತ್ರ ಸಾಭ್ರಮತೀತೀರ್ಥೇ ಘಟೋ ವೈ ಪರಮೋ ಮಹಾ‌ ।**
**ದೃಷ್ಟ್ವಾ ಚೈವ ಮಹಾದೇವಂ ಮುಚ್ಯತೇ ನಾಽತ್ರ ಸಂಶಯಃ || ೨ ||**

---

### ನೂರ ಐವತ್ತೊಂಭತ್ತನೆಯ ಅಧ್ಯಾಯವು



೧. ಶ್ರೀಮಹಾದೇವನು ಹೇಳಿದನು- ಆ ತೀರ್ಥಕ್ಕಿಂತಲೂ ಸ್ವಲ್ಪ ಮುಂದೆ ಘಟೇಶ್ವರವೆಂಬ ತೀರ್ಥವಿರುತ್ತದೆ. ಅಲ್ಲಿ ಸ್ನಾನಮಾಡಿ ಆ ಘಟೇಶ್ವರ ಸ್ವಾಮಿಯ ದರ್ಶನವನ್ನು ಮಾಡಿದರೆ ಮನುಷ್ಯನಿಗೆ ಮುಕ್ತಿಯು ಬರುತ್ತದೆ.

೨. ಅಲ್ಲಿ ಸಾಭ್ರಮತೀ ನದಿಯ ದಡದಲ್ಲಿ ಒಂದು ಘಟವಿರುವುದು. ಅದು ಬಹಳ ದೊಡ್ಡದಾಗಿರುವುದು. ಅಲ್ಲಿ ಸ್ನಾನಮಾಡಿ ಅಲ್ಲಿರುವ ಮಹಾದೇವನನ್ನು (ಘಟೇಶ್ವರನನ್ನು) ದರ್ಶನಮಾಡಿದರೆ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಸಂಶಯವಿಲ್ಲ.

**ತತ್ರ ಗತ್ವಾ ವಿಶೇಷೇಣ ಲಕ್ಷಪೂಜಾಂ ಕರೋತಿ ಯಃ ।**
**ಮನಸಾಭೀಪ್ಸಿತಾನ್ ಕಾಮಾನ್ ನರೋ ವೈ ಲಭತೇ ಭುವಿ ॥ ೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಘಟೇಶ್ವರತೀರ್ಥ ವರ್ಣನಂ ನಾಮ ಏಕೋನಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೩. ಅಲ್ಲಿಗೆ ಹೋಗಿ ಆ ದೇವರಿಗೆ ಯಾರು ಲಕ್ಷಪೂಜೆಯನ್ನು ಮಾಡುವರೋ ಅವರು ಮನಸ್ಸಿಗೆ ಇಷ್ಟವಾದುವುಗಳನ್ನು ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ಘಟೇಶ್ವರತೀರ್ಥ ವರ್ಣನ ಎಂಬ ನೂರ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಷ್ಟ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ತತೋ ಗಚ್ಛೇನ್ನರೋ ಭಕ್ತ್ಯಾ ವೈದ್ಯನಾಥೇತಿ ವಿಶ್ರುತಂ ।
ತತ್ರ ಸ್ನಾತ್ವಾ ನರಸ್ತೀರ್ಥೇ ಶಿವಪೂಜನತತ್ಪರಃ ॥ ೧ ॥

ಪಿತೃನ್ ಸಂತರ್ಪ್ಯ ವಿಧಿನಾ ಸರ್ವಯಜ್ಞಫಲಂ ಲಭೇತ್ ।
ವಿಜಯೋ ದೇವಸಂಭೂತಃ ಸರ್ವಪಾಪಕ್ಷಯಂಕರಃ ॥
ಯಂ ದೃಷ್ಟ್ವಾ ವಿವಿಧಾನ್ ಕಾಮಾನ್ ಪ್ರಾಪ್ನುಯುಸ್ತೇ ನರಾಸ್ಸದಾ॥ ೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ವೈದ್ಯನಾಥತೀರ್ಥ ವರ್ಣನಂ ನಾಮ ಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

## ನೂರ ಅರವತ್ತನೆಯ ಅಧ್ಯಾಯವು



೧-೨. ಶ್ರೀ ಮಹಾದೇವನು ಹೇಳಿದನು- ಅಲ್ಲಿಂದ ಮುಂದಕ್ಕೆ ವೈದ್ಯನಾಥ ತೀರ್ಥಕ್ಕೆ ಹೋಗಬೇಕು. ಅದು ಬಹು ಪ್ರಸಿದ್ಧವಾದುದು ಅಲ್ಲಿ ಮನುಷ್ಯನು ಸ್ನಾನಮಾಡಿ ಶಿವಪೂಜೆಯನ್ನು ಮಾಡಿ ಪಿತೃಗಳಿಗೆ ತರ್ಪಣ ಪಿಂಡಗಳನ್ನು ಕೊಟ್ಟರೆ ಎಲ್ಲಾ ಯಜ್ಞದ ಫಲವನ್ನೂ ಹೊಂದುತ್ತಾನೆ. ಅಲ್ಲಿ ದೇವತೆಗಳಿಂದ ನಿರ್ಮಿತವಾದ ವಿಜಯನಿರುವನು. ಅವನ ದರ್ಶನವನ್ನು ಮಾಡಿದರೆ ಪಾಪಗಳು ಹೋಗುತ್ತವೆ. ಮತ್ತು ನಾನಾಬಗೆಯಾದ ಇಷ್ಟಗಳನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ವೈದ್ಯನಾಥತೀರ್ಥ ವರ್ಣನ ಎಂಬ ನೂರ ಅರವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಷಷ್ಟ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ವೈದ್ಯನಾಥಾತ್ಪರಂ ತೀರ್ಥಂ ಸರ್ವಸಿದ್ಧಿಪ್ರದಾಯಕಂ ।
ತೀರ್ಥಾನಾಮುತ್ತಮಂ ತೀರ್ಥಂ ದೇವತೀರ್ಥಮನುಶ್ರುತಂ || ೧ ||

ವಿಭೀಷಣಾದ್ರಾಕ್ಷಸೇಂದ್ರಾತ್ ಗೃಹೀತ್ವಾ ಕರಮೋಜಸಾ ।
ಪ್ರಾರಬ್ಧೋ ಧರ್ಮಪುತ್ರೇಣ ರಾಜಸೂಯೋ ಮಹಾಕ್ರತುಃ || ೨ ||

ದಿಗ್ಜಯೇ ದಕ್ಷಿಣೇ ಜಾತೇ ಸಕುಲೇನ ಹಿ ಪಾಂಡುನಾ ।
ಸಾಭ್ರಮತ್ಯಾಸ್ತಟೇ ದೇವಿ ಪಾಂಡುರಾರ್ಯೇತಿ ವಿಶ್ರುತಾ || ೩ ||

ಸ್ಥಾಪಿತಾ ಪರಯಾ ಭಕ್ತ್ಯಾ ಭುಕ್ತಿಮುಕ್ತಿಪ್ರದಾಯಿನೀ ।
ಸ್ನಾತಸ್ಸಾಭ್ರಮತೀತೋಯೇ ಪಾಂಡುರಾರ್ಯಾಂ ನಮಸ್ಯ ಚ || ೪ ||

---

## ನೂರ ಅರವತ್ತೊಂದನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ವೈದ್ಯನಾಥತೀರ್ಥಕ್ಕಿಂತಲೂ ಮುಂದಕ್ಕೆ ದೇವತೀರ್ಥವೆಂಬ ತೀರ್ಥವಿರುವುದು. ಅದು ಉತ್ತಮ ತೀರ್ಥವು. ಮತ್ತು ಸರ್ವಸಿದ್ಧಿಗಳನ್ನೂ ಕೊಡುತ್ತದೆ.

೨-೫. ರಾಕ್ಷಸ ರಾಜನಾದ ವಿಭೀಷಣನಿಂದ ಧರ್ಮರಾಯನು ತನ್ನ ಬಲವನ್ನು ಪ್ರದರ್ಶಿಸಿ ಕಪ್ಪವನ್ನು ತೆಗೆದುಕೊಂಡು ರಾಜಸೂಯ ಯಾಗವನ್ನು ಮಾಡಿದನು. ಆ ದಕ್ಷಿಣ ದಿಕ್ಕನ್ನು ಜಯಿಸಿದಾಗ ಪಾಂಡುಪುತ್ರನಾದ ನಕುಲನು ಈ ಸಾಭ್ರಮತೀ ನದಿಯ ದಡದಲ್ಲಿ ಪಾಂಡುರಾರ್ಯಾ ಎಂಬ ದೇವತೆಯನ್ನು ಭಕ್ತಿಯಿಂದ ಸ್ಥಾಪಿಸಿರುವನು. ಆಕೆಯು ಇಲ್ಲಿ ಭುಕ್ತಿಮುಕ್ತಿಗಳನ್ನು ಕೊಡುತ್ತಾಳೆ.

ಅಣಿಮಾದ್ಯಾಸ್ಸಿದ್ಧಯೋಽಷ್ಟೌ ತಥಾ ಮೇಧಾಂ ಮಹೀಯಸೀಂ ।
ನರಃ ಪ್ರಾಪ್ನೋತಿ ವೈ ನೂನಂ ನಾಽತ್ರ ಕಾರ್ಯಾ ವಿಚಾರಣಾ ॥ ೫ ॥

ಪಾಂಡುರಾರ್ಯಾಂ ನಮಸ್ಕೃತ್ಯ ಶುದ್ಧಭಾವೇನ ಮಾನವೈಃ ।
ಸಂವತ್ಸರಕೃತಾ ಪೂಜಾ ಜ್ಞಾತವ್ಯಾ ತತ್ವಬುದ್ಧಿಭಿಃ ॥ ೬ ॥

ತತ್ರ ತೀರ್ಥೇ ತನುಂ ತ್ಯಕ್ತ್ವಾ ಪಾಂಡುರಾರ್ಯಾಸಮೀಪತಃ ।
ಕೈಲಾಸಶಿಖರಂ ಪ್ರಾಪ್ಯ ಚಂಡೇಶ್ವರಗಣೋ ಭವೇತ್ ॥ ೭ ॥

ಪುರಾ ಹನುಮತಾ ತತ್ರ ತಪಸ್ತಪ್ತಂ ಸುದುಷ್ಕರಂ ।
ಸಮುದ್ರಪ್ಲವನೇ ಶಕ್ತಿರ್ಜಾತಾ ತೀರ್ಥಪ್ರಭಾವತಃ ॥ ೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ದೇವತೀರ್ಥ ವರ್ಣನಂ ನಾಮ ಏಕಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

ಸಾಭ್ರಮತಿಯಲ್ಲಿ ಸ್ನಾನಮಾಡಿ ಪಾಂಡುರಾರ್ಯೆಯನ್ನು ನಮಸ್ಕರಿಸಿದರೆ ಆತನು ಅಣಿಮಾದಿ ಸಿದ್ಧಿಗಳನ್ನೂ ಮೇಧೆಯನ್ನೂ ಹೊಂದುತ್ತಾನೆ. ಸಂದೇಹವೇ ಇಲ್ಲ.

೬. ಮನುಷ್ಯನು ಶುದ್ಧವಾದ ಮನಸ್ಸಿನಿಂದ ಆ ಪಾಂಡುರಾರ್ಯೆಯನ್ನು ನಮಸ್ಕರಿಸಿದರೆ ಒಂದು ವರ್ಷ ಪೂಜೆಮಾಡಿದಷ್ಟು ಫಲವು ಬರುತ್ತದೆ.

೭. ಆ ಪಾಂಡುರಾರ್ಯೆಯ ಸಮೀಪದಲ್ಲಿರುವ ಆ ದೇವ ತೀರ್ಥದಲ್ಲಿ ಪ್ರಾಣವನ್ನು ಬಿಟ್ಟರೆ ಕೈಲಾಸ ಶಿಖರವನ್ನು ಹೊಂದಿ ಚಂಡೇಶ್ವರ ಗಣದಲ್ಲಿ ಸೇರಿಕೊಳ್ಳುತ್ತಾನೆ.

೮. ಪೂರ್ವದಲ್ಲಿ ಹನುಮಂತನು ಇಲ್ಲಿ ತಪಸ್ಸನ್ನು ಮಾಡಿ ಸಮುದ್ರವನ್ನು ದಾಟುವ ಶಕ್ತಿಯನ್ನು ಆ ತೀರ್ಥದ ಪ್ರಭಾವದಿಂದ ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ದೇವತೀರ್ಥ ವರ್ಣನ ಎಂಬ ನೂರ ಅರವತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವಿಷಷ್ಟ್ಯಧಿಕಶತತಮೋऽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ಅಸ್ಮಾತ್ತೀರ್ಥಾತ್ಪರಂ ತೀರ್ಥಂ ಚಂಡೇಶಮಿತಿ ವಿಶ್ರುತಂ ।
ಯತ್ರ ಚಂಡೇಶ್ವರೋ ದೇವೋ ನಿತ್ಯಂ ತಿಷ್ಠತಿ ಭೂತಿದಃ || ೧ ||

ಯಂ ದೃಷ್ಟ್ವಾ ಮುಚ್ಯತೇ ಪಾಪಾದಜ್ಞಾನಾದಥವಾ ಕೃತಾತ್ ।
ಸರ್ವಾಭಿರ್ದೇವತಾಭಿಶ್ಚ ಮಿಳಿತ್ವಾ ನಗರಂ ಕೃತಂ ||
ಚಂಡೇಶಮಿತಿ ವಿಖ್ಯಾತಂ ನಾಮ್ನಾ ಚೈವ ಮಹೇಶ್ವರಿ || ೨ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಚಂಡೇಶತೀರ್ಥ ವರ್ಣನಂ ನಾಮ ದ್ವಿಷಷ್ಟ್ಯಧಿಕಶತತಮೋऽಧ್ಯಾಯಸ್ಸಮಾಪ್ತಃ

---

## ನೂರ ಅರವತ್ತೆರಡನೆಯ ಅಧ್ಯಾಯವು



೧-೨ ಶ್ರೀ ಮಹಾದೇವನು ಹೇಳಿದನು- ಈ ದೇವ ತೀರ್ಥಕ್ಕಿಂತಲೂ ಮುಂದೆ ಹೋದರೆ ಚಂಡೇಶ ತೀರ್ಥವೆಂಬ ಉತ್ತಮ ತೀರ್ಥವಿರುತ್ತದೆ. ಅಲ್ಲಿ ಚಂಡೇಶ್ವರನೆಂಬ ದೇವನು ಯಾವಾಗಲೂ ಐಶ್ವರ್ಯವನ್ನು ನೀಡುತ್ತಾ ವಾಸಿಸುತ್ತಾನೆ. ಆ ಸ್ವಾಮಿಯ ದರ್ಶನವನ್ನು ಮಾಡಿದರೆ ಜ್ಞಾನದಿಂದಲೂ ಅಜ್ಞಾನದಿಂದಲೂ ಮಾಡಿದ ಪಾಪಗಳೆಲ್ಲ ಹೋಗುತ್ತವೆ. ಎಲ್ಲಾ ದೇವತೆಗಳೂ ಸೇರಿಕೊಂಡು ಈ ಚಂಡೇಶವೆಂಬ ಪಟ್ಟಣವನ್ನು ನಿರ್ಮಿಸಿದರು. ಇದು ಬಹು ಪ್ರಸಿದ್ಧವಾದುದು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಚಂಡೇಶತೀರ್ಥ ವರ್ಣನ ಎಂಬ ನೂರ ಅರವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಿಷಷ್ಟ್ಯಧಿಕಶತತಮೋऽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ಅಸ್ಮಾತ್ತೀರ್ಥಾತ್ಪರಂ ತೀರ್ಥಂ ಗಾಣಪತ್ಯಂ ತತೋ ಭುವಿ |
ಸಾಭ್ರಮತ್ಯಾಸ್ಸಮೀಪೇ ತು ವಿಖ್ಯಾತಂ ದೇವನಿರ್ಮಿತಂ || ೧ ||

ತತ್ರ ಸ್ನಾತ್ವಾ ನರೋ ದೇವಿ ಮುಚ್ಯತೇ ನಾऽತ್ರ ಸಂಶಯಃ |
ಪುಣ್ಯೇ ಸಾಭ್ರಮತೀತೀರೆ ಜನಾನಾಂ ಹಿತಕಾಮ್ಯಯಾ || ೨ ||

ಪೃಥಿವ್ಯಾಂ ಯಾನಿ ತೀರ್ಥಾನಿ ಸಾಗರಾಂತಾನಿ ತಾನಿ ಚ |
ತಾನಿ ಸರ್ವಾಣಿ ಸಂತ್ಯಜ್ಯ ತೀರ್ಥೇ ವೈ ಪರಮಾದ್ಭುತೇ || ೩ ||

---

## ನೂರ ಅರವತ್ತಮೂರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಈ ಚಂಡೇಶ ತೀರ್ಥಕ್ಕಿಂತಲೂ ಮುಂದೆ ಹೋದರೆ ಗಾಣಪತ್ಯವೆಂಬ ಪ್ರಸಿದ್ಧವಾದ ತೀರ್ಥವು ಸಿಕ್ಕುತ್ತದೆ. ಸಾಭ್ರ ಮತೀ ನದಿಯ ತೀರದಲ್ಲಿ ಈ ತೀರ್ಥವು ದೇವ ನಿರ್ಮಿತವಾಗಿ ಪ್ರಕಾಶವಾಗಿದೆ

೨, ಎಲೈ ದೇವಿಯೇ ! ಅಲ್ಲಿ ಸ್ನಾನ ಮಾಡಿದರೆ ಮನುಜನು ಮುಕ್ತಿಯನ್ನು ಹೊಂದುತ್ತಾನೆ. ಪುಣ್ಯಪ್ರದವಾದ ಈ ಸಾಭ್ರಮತಿಯ ತೀರದಲ್ಲಿ ಜನಗಳಿಗೆ ಹಿತವನ್ನುಂಟುಮಾಡುವುದಕ್ಕೋಸ್ಕರ ಈ ತೀರ್ಥವಿರುತ್ತದೆ.

೩-೪. ಈ ಸಮುದ್ರದ ವರೆಗಿರುವ ಭೂಮಿಯಲ್ಲಿ ಅನೇಕವಾಗಿ ತೀರ್ಥಗಳಿ ರುವುವು. ಆ ತೀರ್ಥಗಳೆಲ್ಲವೂ ಹಾಗಿರಲಿ. ಈ ಉತ್ತಮವಾದ ತೀರ್ಥದಲ್ಲಿ

**ಶ್ರಾದ್ಧಂ ಕರೋತಿ ಯಸ್ತತ್ರ ರುದ್ರಭಕ್ತ್ಯಾ ಜಿತೇಂದ್ರಿಯಃ ।**
**ಫಲಂ ಪ್ರಾಪ್ನೋತಿ ಶುದ್ಧಾತ್ಮಾ ಸರ್ವಯಜ್ಞ ಸಮುದ್ಭವಂ　　|| ೪ ||**

**ಪಿತೄನುದ್ದಿಶ್ಯ ಯತ್ಕಿಂಚಿದ್ಗಣತೀರ್ಥೇ ಪ್ರದೀಯತೇ ।**
**ತತ್ಸರ್ವಂ ಜಾಯತೇ ಕ್ಷಿಪ್ರಂ ಗಣನಾಥಪ್ರಸಾದತಃ　　|| ೫ ||**

**ತಸ್ಮಿನ್ ತೀರ್ಥೇ ನರಸ್ಸ್ನಾತ್ವಾ ವೃಷಂ ವಿಪ್ರಾಯ ದಾಪಯೇತ್ ।**
**ಸರ್ವಲೋಕಾನತಿಕ್ರಮ್ಯ ಸ ಗಚ್ಛೇತ್ಪರಮಾಂ ಗತಿಂ　　|| ೬ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಗಾಣಪತ್ಯತೀರ್ಥ ವರ್ಣನಂ ನಾಮ ತ್ರಿಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

ಬಂದು ಯಾವನು ಶುದ್ಧಮನಸ್ಸಿನಿಂದ ಶ್ರಾದ್ಧವನ್ನು ಮಾಡುತ್ತಾನೆಯೋ ಅವನು ಎಲ್ಲಾ ಯಜ್ಞಗಳ ಫಲವನ್ನೂ ಹೊಂದುತ್ತಾನೆ.

೫. ಈ ಗಣ ತೀರ್ಥದಲ್ಲಿ ಪಿತೃಗಳನ್ನು ಉದ್ದೇಶಮಾಡಿಕೊಂಡು ಯಾವ ದಾನವನ್ನು ಮಾಡಿದರೂ ಅವೆಲ್ಲವೂ ಕೂಡ ಆ ಗಣನಾಥನ ಪ್ರಸಾದದಿಂದ ಜಾಗ್ರತೆಯಾಗಿಯೇ ಫಲಿಸುತ್ತವೆ.

೬. ಮನುಷ್ಯನು ಆ ತೀರ್ಥದಲ್ಲಿ ಸ್ನಾನಮಾಡಿ ಹೋರಿ ಕರುವನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಹಾಗೆ ಮಾಡಿದರೆ ಅವನು ಎಲ್ಲಾ ಲೋಕಗಳಿಗಿಂತಲೂ ಉತ್ತಮವಾದ ಲೋಕವನ್ನು ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ಗಾಣಪತ್ಯತೀರ್ಥ ವರ್ಣನ ಎಂಬ ನೂರ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಷ್ಷಷ್ಟ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ತತೋ ಗಚ್ಛೇನ್ಮಹಾದೇವಿ ವಾತ್ರಘ್ನ್ಯಾಗಿರಿಕನ್ಯಯಾ |
ಶಕ್ರಶ್ಚೈವ ತಯಾ ಸಾಧ್ವ್ಯಾ ಸಂಗಮಂ ಯತ್ರ ಲಬ್ಧವಾನ್ || ೧ ||

ತತ್ರ ಸ್ನಾನಂ ಪ್ರಕುರ್ವಂತಿ ನರಾ ನಿಯತಮಾನಸಾಃ |
ದಶಾನಾಮಶ್ವಮೇಧಾನಾಂ ಯತ್ಫಲಂ ಸ್ನಾನಕೃಲ್ಲಭೇತ್ || ೨ ||

ತತ್ರ ಯಃ ಕುರುತೇ ಶ್ರಾದ್ಧಂ ಪಿಂಡಾನ್ವೈ ತಿಲಚೂರ್ಣಜಾನ್ |
ಪುನಾತಿ ಪುರುಷೋ ವಂಶಾನ್ ಸಪ್ತ ಸಪ್ತ ಪರಾಽವರಾನ್ || ೩ ||

---

## ನೂರ ಅರವತ್ತನಾಲ್ಕನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಎಲೈ ಪಾರ್ವತಿಯೇ ! ಅನಂತರ ಸಾಭ್ರಮತಿಗೆ ವಾತ್ರಘ್ನೀನದಿಯು ಸೇರುವ ವಾತ್ರಘ್ನೀ ತೀರ್ಥಕ್ಕೆ ಹೋಗಬೇಕು. ಪೂರ್ವದಲ್ಲಿ ಆ ಸಂಗಮದಲ್ಲಿ ಇಂದ್ರನು ಸ್ನಾನಮಾಡಿ ತನ್ನ ಪಾಪಗಳನ್ನು ಕಳೆದುಕೊಂಡನು.

೨. ಈ ಜಾಗದಲ್ಲಿ ಸ್ನಾನಮಾಡಿದರೆ ನರನು ಹತ್ತು ಅಶ್ವಮೇಧಗಳನ್ನು ಮಾಡಿದ ಪುಣ್ಯವನ್ನು ಹೊಂದುತ್ತಾನೆ.

೩. ಈ ಜಾಗದಲ್ಲಿ ಪಿತೃಗಳಿಗೆ ಶ್ರಾದ್ಧಮಾಡಿ ಎಳ್ಳಿನ ಹುಡಿಯಲ್ಲಿ ಪಿಂಡಗಳನ್ನು ಹಾಕಬೇಕು. ಹಾಗೆ ಮಾಡಿದರೆ ಅವನು ತನ್ನ ಹಿಂದಿನ ಏಳು ತಲೆಗಳನ್ನೂ ಮುಂದಿನ ಏಳು ತಲೆಗಳನ್ನೂ ಪವಿತ್ರವನ್ನಾಗಿ ಮಾಡಿಕೊಳ್ಳುತ್ತಾನೆ.

ಸಂಪೂಜ್ಯ ವಿಧಿವತ್ ಸ್ನಾತ್ವಾ ಸಂಗಮೇ ಗಣನಾಯಕಂ ।
ನ ವಿಘ್ನೈರಭಿಭೂಯೇತ ಲಕ್ಷ್ಮ್ಯಾ ನೈವ ವಿಹೀಯತೇ ॥ ४ ॥

॥ ಶ್ರೀ ಪಾರ್ವತ್ಯುವಾಚ ॥

ಕಸ್ಮಿನ್ ಕಾರ್ಯಸಮಾರಂಭೇ ಸಮಾಯಾತಃ ಪುರಂದರಃ ।
ಸ್ವರ್ಗಲೋಕಾದಿಮಂ ಲೋಕಮೇತದಾಖ್ಯಾತುಮರ್ಹಸಿ ॥ ೫ ॥

ವಾತ್ರ್ರಘ್ನೀ ಚ ನದೀ ಕೇನ ನಿರುಕ್ತೇನ ನಿಗದ್ಯತೇ ।
ಪುರಂದರಪುರಂ ದೇವ ಬ್ರಹ್ಮಘೋಷನಿನಾದಿತಂ ॥
ಸಂಭಾವಯತಿ ಯೋಽಜಸ್ರಂ ಮಮ ತತ್ಸಂಗಮಂ ವದ ॥ ೬ ॥

॥ ಶ್ರೀ ಮಹಾದೇವ ಉವಾಚ ॥

ಅಸ್ಮಿಂಶ್ಚೈವ ತು ಭೂಲೋಕೇ ಪ್ರಶ್ನೋಽಯಂ ಸಮಭೂತ್ಪುರಾ ।
ಯುಧಿಷ್ಠಿರೇತಿ ವಿಖ್ಯಾತೋ ರಾಜಾ ವೈ ಧಾರ್ಮಿಕೋ ಮಹಾನ್ ॥ ೭ ॥

---

೪. ಈ ಸಂಗಮದಲ್ಲಿ ಸ್ನಾನಮಾಡಿ ಅಲ್ಲಿರುವ ಗಣನಾಯಕನನ್ನು ಕ್ರಮವಾಗಿ ಪೂಜಿಸಿದರೆ ವಿಘ್ನಗಳೊಂದೂ ಬರುವುದಿಲ್ಲ. ಸಂಪತ್ತು ಕೈಗೂಡುತ್ತದೆ.

೫. ಶ್ರೀ ಪಾರ್ವತಿಯು ಹೇಳಿದಳು-ಎಲೈ ಶಿವನೆ! ಯಾವ ಕೆಲಸದ ಸಮಯದಲ್ಲಿ ಸ್ವರ್ಗಲೋಕದಿಂದ ಇಂದ್ರನು ಈ ಲೋಕಕ್ಕೆ ಬಂದನು? ಇದನ್ನು ನನಗೆ ಹೇಳು.

೬. ಈ ನದಿಗೆ ವಾತ್ರ್ರಘ್ನೀನದಿಯೆಂದು ಹೆಸರು ಬರಲು ಕಾರಣವೇನು? ಇಲ್ಲಿರುವ ಪುರಂದರಪುರವು ವೇದಘೋಷದಿಂದ ಕೂಡಿಕೊಂಡಿರುವುದಕ್ಕೂ ಅದನ್ನು ಗೌರವಿಸುವುದಕ್ಕೂ ಕಾರಣವೇನು? ಆ ಸಂಗಮದ ಮಹಿಮೆಯನ್ನು ನನಗೆ ಹೇಳು.

೭-೮. ಶ್ರೀ ಮಹಾದೇವನು ಹೇಳಿದನು-ಈ ಭೂಲೋಕದಲ್ಲಿ ಪೂರ್ವದಲ್ಲಿ ಇದೇ ಪ್ರಶ್ನೆಯು ಬಂದಿದ್ದಿತು. ಹಿಂದೆ ಧರ್ಮಿಷ್ಠನಾದ ಮಹಿಮಾವಂತನಾದ ಯುಧಿಷ್ಠಿರನೆಂಬ ರಾಜನೊಬ್ಬನಿದ್ದನು. ಆತನು ಧರ್ಮಿಷ್ಠನೂ ಜ್ಞಾನಿಯೂ ಆದ

ಪೃಷ್ಟವಾನ್ ಸ ತು ಭೀಷ್ಮಾಯ ಧರ್ಮಿಣೇ ಜ್ಞಾನರೂಪಿಣೇ ।
ತೇನೋಕ್ತಂ ಯತ್ತು ತದ್ದೇವಿ ಪ್ರವಕ್ಷ್ಯಾಮಿ ತವಾಗ್ರತಃ ॥ ೮ ॥

ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ ।
ವೃತ್ರವಾಸವಯೋರ್ಯುದ್ಧಮಭವಲ್ಲೋಮಹರ್ಷಣಂ ॥ ೯ ॥

ತತಃಪರಾಜಿತಶ್ಶಕ್ರಃ ಕೃತ್ವಾ ವೃತ್ರೇಣ ಸಂವಿದಂ ।
ಅದ್ರೋಹಸರಣಂ ತ್ಯಕ್ತ್ವಾ ಜಗಾಮ ಶರಣಂ ಮಮ ॥ ೧೦ ॥

ವಾತ್ರ್ಘ್ನ್ಯಾಸ್ಸಂಗಮೇ ಪುಣ್ಯೇ ತೋಷಯಾಮಾಸ ಶಂಕರಂ ।
ಅಥಾಽಂತರಿಕ್ಷೇಽಹಂ ದೇವಿ ದರ್ಶನಂ ದತ್ತವಾಂಸ್ತದಾ ॥ ೧೧ ॥

ಮಮ ಗಾತ್ರಾತ್ತು ಯದ್ಭಸ್ಮ ಪತಿತಂ ಕಾಶ್ಯಪೀತಟೇ ।
ಭಸ್ಮಗಾತ್ರೇತಿ ತತ್ಪುಣ್ಯಂ ಲಿಂಗಂ ದೇವಿ ವಿನಿರ್ಮಿತಂ ॥ ೧೨ ॥

---

ಭೀಷ್ಮನನ್ನು ಈ ವಿಷಯದಲ್ಲಿ ಪ್ರಶ್ನಿಸಿದನು. ಅವನು ಆ ಯುಧಿಷ್ಠಿರನಿಗೆ ಎಲ್ಲವನ್ನೂ ಹೇಳಿದನು. ಅದನ್ನೇ ಈಗ ನಾನು ನಿನಗೆ ಹೇಳುತ್ತೇನೆ.

೯. ಪೂರ್ವದಲ್ಲಿ ಇಂದ್ರನಿಗೂ ವೃತ್ರಾಸುರನಿಗೂ ಹನ್ನೊಂದುಸಾವಿರ ವರ್ಷಗಳವರೆಗೂ ಘೋರವಾದ ಯುದ್ಧವು ನಡೆಯಿತು.

೧೦. ಈ ರೀತಿ ಯುದ್ಧಮಾಡುತ್ತಿದ್ದು ಕೊನೆಗೆ ಆ ಇಂದ್ರನು ಸೋತು ಹೋದನು. ತನ್ನದೆಲ್ಲವನ್ನೂ ಆ ವೃತ್ರಾಸುರನಿಗೆ ಬಿಟ್ಟುಕೊಟ್ಟು ನನ್ನನ್ನು ಧ್ಯಾನಿಸಲು ಬಂದನು.

೧೧. ಈ ವಾತ್ರ್ಘ್ನಿಯ ಸಂಗಮದಲ್ಲಿ ಬಂದು ತಪಸ್ಸನ್ನು ಮಾಡುತ್ತಾ ನನ್ನನ್ನು ತೃಪ್ತಿಪಡಿಸಿದನು. ನಾನು ಸಂತೋಷಗೊಂಡು ಅಂತರಿಕ್ಷದಲ್ಲಿ ಇದ್ದುಕೊಂಡೇ ಅವನಿಗೆ ದರ್ಶನವನ್ನು ಕೊಟ್ಟೆನು.

೧೨. ಆಗ ಈ ಕಾಶ್ಯಪೀನದಿಯ ದಡದಲ್ಲಿ ಅಂತರಿಕ್ಷದಲ್ಲಿದ್ದ ನನ ದೇಹದಿಂದ ಭಸ್ಮವು ಬಿದ್ದಿತು. ಒಡನೆಯೇ ಅಲ್ಲಿಯೇ ಭಸ್ಮಗಾತ್ರವೆಂಬ ಲಿಂಗವು ಉದ್ಭವವಾಯಿತು.

ಭೂತೇಶ್ವರಂ ಭಸ್ಮಗಾತ್ರಂ ಬ್ರಹ್ಮಣಾ ಸಂಪ್ರತಿಷ್ಠಿತಂ ।
ತಸ್ಯ ವೈ ದರ್ಶನಾದೇವ ಬ್ರಹ್ಮಹತ್ಯಾ ಲಯಂ ವ್ರಜೇತ್ ॥ ೧೩ ॥

ಮುಚ್ಯತೇ ಸರ್ವಪಾಪೇಭ್ಯಃ ಶ್ರಾದ್ಧಂ ಕೃತ್ವಾ ಯುಗಾದಿಷು ।
ತದಾಽಹಂ ಸುಪ್ರಸನ್ನೋಽಭೂವಮಿಂದ್ರಾಯ ಮಹಾತ್ಮನೇ ॥ ೧೪ ॥

ಯದ್ಯತ್ತ್ವಂ ವಾಂಛಸೇ ದೇವ ತತ್ಸರ್ವಂ ಹಿ ದದಾಮಿ ತೇ ।
ಅನೇನ ವಜ್ರಯೋಗೇಣ ಶೀಘ್ರಂ ವೃತ್ರಂ ಹನಿಷ್ಯಸಿ ॥ ೧೫ ॥

॥ ಶಕ್ರ ಉವಾಚ ॥

ಭಗವಂಸ್ತ್ವತ್ಪ್ರಸಾದೇನ ದಿತಿಜಂ ತು ದುರಾಸದಂ ।
ವಜ್ರೇಣ ನಿಹನಿಷ್ಯಾಮಿ ಪಶ್ಯತಸ್ತೇ ಸುರೋತ್ತಮ ॥ ೧೬ ॥

---

೧೩. ಆ ಭಸ್ಮಗಾತ್ರವೆಂಬ ಹೆಸರುಳ್ಳ ಈಶ್ವರನನ್ನು ಬ್ರಹ್ಮನು ಅಲ್ಲಿ ಪ್ರತಿಷ್ಠೆ ಮಾಡಿದನು. ಅದರ ದರ್ಶನವನ್ನು ಮಾಡಿದರೆ ಬ್ರಹ್ಮಹತ್ಯೆಯು ನಾಶವಾಗುತ್ತದೆ. ಸಂಶಯವಿಲ್ಲ.

೧೪ ಯುಗಾದಿಗಳಲ್ಲಿ (ಮನ್ವಂತರಗಳಲ್ಲಿ) ಅಲ್ಲಿ ಶ್ರಾದ್ಧವನ್ನು ಮಾಡಿದರೆ ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಆಗ ನಾನು ಆ ಇಂದ್ರನಿಗೆ ಪ್ರಸನ್ನನಾದೆನು.

೧೫. ಎಲೈ ದೇವೇಂದ್ರನೇ ! ನಿನಗೆ ಏನೇನು ಬೇಕೋ ಅವೆಲ್ಲವನ್ನೂ ನೀನು ಹೊಂದುತ್ತೀಯೆ. ಈ ವಜ್ರಾಯುಧದಿಂದಲೇ ಜಾಗ್ರತೆಯಾಗಿ ವೃತ್ರನನ್ನು ಕೊಲ್ಲುತ್ತೀಯೆ.

೧೬. ಶಕ್ರನು ಹೇಳಿದನು-ಎಲೈ ಸ್ವಾಮಿಯೆ ! ನಿನ್ನ ಅನುಗ್ರಹದಿಂದ ಈ ಶಕ್ತನಾದ ವೃತ್ರಾಸುರನನ್ನು ಈ ವಜ್ರಾಯುಧದಿಂದ ನಿನ್ನ ಎದುರಿಗೇ ಕೊಲ್ಲುತ್ತೇನೆ.

॥ ಶ್ರೀ ಮಹಾದೇವ ಉವಾಚ ॥

ಏವಮುಕ್ತ್ವಾ ತದಾ ಇಂದ್ರೋ ಗತವಾಂಶ್ಚಾಽಸುರಂ ಪ್ರತಿ ।
ತದಾದುಂದುಭಯೋ ನೇದುಃ ದೇವಸೈನ್ಯೇ ವಿಶೇಷತಃ ॥ ೧೭ ॥

ಮೃದಂಗೋ ಡಿಂಡಿಮಶ್ಚೈವ ಭೇರೀತೂರ್ಯಾಣ್ಯನೇಕಶಃ ।
ಅಸುರಾಣಾಂ ಚ ಸರ್ವೇಷಾಂ ವೃತ್ತಿಲೋಭೋ ಮಹಾನಭೂತ್ ॥ ೧೮ ॥

ಬಲವಾನ್ಮಘವಾಚ್ಚೈವ ಕ್ಷಣೇನ ಸಮಜಾಯತ ।
ತಮಾವಿಷ್ಟಂ ತತೋ ಜ್ಞಾತ್ವಾ ಋಷಯಃ ಪನ್ನಗಾಸ್ತಥಾ ॥ ೧೯ ॥

ಸ್ತುವಂತಿ ಶಕ್ರಮೀಶಾನಂ ಸ್ತುತ್ವಾ ಜಯ ಜಯೇತಿ ಚ ।
ಗಚ್ಛತಸ್ತಸ್ಯ ಶಕ್ರಸ್ಯ ಯುದ್ಧಕಾಮಸ್ಯ ಸನ್ನಿಧೌ ॥
ಋಷಿಭಿಸ್ತೂಯಮಾನಸ್ಯ ರೂಪಮಾಸೀತ್ಸುದುರ್ಲಭಂ ॥ ೨೦ ॥

॥ ಶ್ರೀ ಮಹಾದೇವ ಉವಾಚ ॥

ವೃತ್ರಸ್ಯ ಸಹಸಾ ದೇವಿ ತದಾ ಸಂಗ್ರಾಮಮೂರ್ಧನಿ ।
ಅಭವನ್ಯಾನಿ ಲಿಂಗಾನಿ ಶರೀರೇ ತಾನಿ ಮೇ ಶೃಣು ॥ ೨೧ ॥

---

೧೭-೧೮. ಶ್ರೀ ಮಹಾದೇವನು ಹೇಳಿದನು– ಇಂದ್ರನು ಹೀಗೆಂದು ಹೇಳಿ ಆ ವೃತ್ರಾಸುರನ ಮೇಲೆ ಯುದ್ಧಕ್ಕೆ ಹೊರಟನು. ಆಗ ದೇವ ಸೈನ್ಯದಲ್ಲಿ ದುಂದುಭಿಗಳು ಅತಿಶಯವಾಗಿ ಮೊಳಗಿದುವು. ಮೃದಂಗಗಳೂ ಡಿಂಡಿಮಗಳೂ ಭೇರಿಗಳೂ ಬಾರಿ ಬಾರಿಗೂ ಧ್ವನಿಮಾಡುತ್ತಿದ್ದುವು. ದೈತ್ಯರೆಲ್ಲರಿಗೂ ತಮ್ಮ ತಮ್ಮ ಸ್ಥಿತಿಯು ಹದಗೆಟ್ಟಿತು. ಆದರೂ ಆಸೆಯು ಬಹುವಾಗಿದ್ದಿತು.

೧೯-೨೦. ಇಂದ್ರನು ಕ್ಷಣಕಾಲದಲ್ಲಿಯೇ ಬಲಿಷ್ಠನಾದನು. ಅವನು ಬಲಿಷ್ಠನಾದುದನ್ನು ನೋಡಿ ಋಷಿಗಳೂ ಪನ್ನಗರೂ ಆ ಇಂದ್ರನನ್ನು ಜಯಜಯ ಎಂಬ ಸ್ತೋತ್ರಗಳಿಂದ ಸ್ತುತಿಸಿದರು. ಯುದ್ಧವನ್ನು ಅಪೇಕ್ಷಿಸಿ ಹೋಗುತ್ತಿರುವ ಇಂದ್ರನನ್ನು ಹತ್ತಿರದಲ್ಲಿಯೇ ಋಷಿಗಳು ಸ್ತುತಿಸುತ್ತಿದ್ದರು. ಆ ಇಂದ್ರನಿಗೆ ರೂಪವೂ ಬಲವೂ ಬಹುವಾಗಿ ವೃದ್ಧಿಗೊಂಡುವು.

೨೧. ಶ್ರೀ ಮಹಾದೇವನು ಹೇಳಿದನು– ಆಗ ಯುದ್ಧಕ್ಕೆ ಹೋಗುತ್ತಿದ್ದ ಆ ವೃತ್ರಾಸುರನ ದೇಹದಲ್ಲಿಯೂ, ಹೊರಗಡೆಯೂ ಆದ ಶಕುನಗಳನ್ನು ಹೇಳುತ್ತೇನೆ. ಕೇಳು.

ಜ್ವಲಿತಾಸ್ಯೋಽಭವದ್ಘೋರೋ ವೈವರ್ಣ್ಯಮಭವತ್ಪರಂ ।
ಗಾತ್ರಕಂಪಶ್ಚ ಸುಮಹಾನ್ ಶ್ವಾಸಸ್ತಸ್ಯೋಷ್ಣೋ ವ್ಯಜಾಯತ ॥ ೨೨ ॥

ರೋಮಹರ್ಷಶ್ಚ ತೀವ್ರೋಽಭೂತ್ ಶ್ವಾಸಶ್ಚೈವ ಮಹಾನಭೂತ್ ।
ನಿಪಪಾತ ಮಹಾಘೋರಾ ಉಲ್ಕಾ ಪಾರ್ಶ್ವಂ ಪ್ರಪೇದಿರೇ ॥ ೨೩ ॥

ಗೃಧ್ರಾ ವಟಾಃ ಶ್ಯೇನಕಂಕಾ ವಾಚೋಽಮುಂಚನ್ ಸುದಾರುಣಾಃ ।
ವೃತ್ರಸ್ಯೋಪರಿ ತೇ ಸರ್ವೇ ಚಕ್ರವತ್ಪರಿಬಭ್ರಮುಃ ॥ ೨೪ ॥

ತತಸ್ತು ಗಜಮಾಸ್ಥಾಯ ಇಂದ್ರಸ್ತತ್ರ ಸಮಾಗತಃ ।
ವಜ್ರೋದ್ಯತಕರಸ್ತತ್ರ ಶಕ್ರಸ್ತಂ ದೈತ್ಯಮಾಸದತ್ ॥ ೨೫ ॥

ಅಮಾನುಷಮಘೋ ನಾದಂ ಸ ಮುಮೋಚ ಸುರೇಶ್ವರಃ ।
ವೃತ್ರಾಸುರಸ್ಯಾಪತತಃ ಶಕ್ರೋ ವಜ್ರಮಪಾತಯತ್ ॥ ೨೬ ॥

---

೨೨ ಘೋರವಾಗಿಯೂ ಪ್ರಕಾಶಮಾನವಾಗಿಯೂ ಇದ್ದ ಆತನ ಮುಖವು ಕಾಂತಿಹೀನವಾಯಿತು. ದೇಹದಲ್ಲಿ ನಡುಕವು ಬಹಳವಾಗಿ ಉಂಟಾಯಿತು. ನಿಟ್ಟುಸಿರು ಹೆಚ್ಚುತ್ತಾ ಬಂದಿತು.

೨೩. ಬಾರಿಬಾರಿಗೂ ಮೈ ಬೆವರಿ ಕೂದಲು ನಿಮಿರುತ್ತಿದ್ದಿತು. ಶ್ವಾಸವು ಹೆಚ್ಚಿತು. ಬಹು ಕ್ರೂರವಾದ ಉಲ್ಕಾ ಎಂಬ ಆಕಾಶದಿಂದ ಬೀಳುವ ಕೊಳ್ಳಿಯ ರೂಪವಾದ ನಕ್ಷತ್ರಗಳು ಪಕ್ಕದಲ್ಲಿಯೇ ಬೀಳುತ್ತಾ ಬಂದುವು.

೨೪. ಹದ್ದುಗಳು, ಕಾಗೆಗಳು, ಗಿಡಗಗಳು, ರಣಹದ್ದುಗಳು, ಅಪಸ್ವರವಾಗಿ ಕೂಗುತ್ತಾ ಬಂದುವು. ಅಲ್ಲದೆ ಆ ವೃತ್ರನ ತಲೆಯಮೇಲೆ ಚಕ್ರಾಕಾರವಾಗಿ ಸುತ್ತುತ್ತಾ ಬಂದುವು.

೨೫. ಅನಂತರ ಇಂದ್ರನು ಐರಾವತದ ಮೇಲೇ ಕುಳಿತು ಕೈಯ್ಯಲ್ಲಿ ವಜ್ರ ಆಯುಧವನ್ನು ಹಿಡಿದುಕೊಂಡು ಅಲ್ಲಿಗೆ ಬಂದು ದೈತ್ಯನನ್ನು ಎದುರಿಸಿದನು.

೨೬. ಆಗ ಇಂದ್ರನು ಬಹು ಘೋರವಾಗಿ ಸಿಂಹನಾದವನ್ನು ಮಾಡಿದನು. ಅದಕ್ಕೆ ಅನುಸಾರವಾಗಿ ಧ್ವನಿಮಾಡುತ್ತ ವೃತ್ರಾಸುರನೂ ಕೂಡ ಆ ಇಂದ್ರನನ್ನು ಎದುರಿಸಲು ಇಬ್ಬರಿಗೂ ಯುದ್ಧವು ನಡೆಯಿತು. ಕೊನೆಗೆ ಇಂದ್ರನು ವಜ್ರಾಯುಧವನ್ನು ಆ ವೃತ್ರನ ಮೇಲೆ ಪ್ರಯೋಗಿಸಿದನು.

ಸ ವಜ್ರಸ್ಸುಮಹಾತೇಜಾಃ ಕಾಲಾಗ್ನಿಸದೃಶೋ ಮಹಾನ್ ।
ಸಮುದ್ರಸ್ಯ ತಟೇ ವೃತ್ರಂ ಶಕ್ರೋ ದೈತ್ಯಮಪಾತಯತ್ ॥ ೨೭ ॥

ತತೋ ನಾದಸ್ಸಮಭವತ್ ಪುನರೇವ ಸಮಂತತಃ ।
ವೃತ್ರಂ ವಿನಿಹತಂ ದೃಷ್ಟ್ವಾ ಸರ್ವದೇವಭಯಂಕರಂ ॥ ೨೮ ॥

ಪುಷ್ಪವೃಷ್ಟಿಶ್ಚ ಮಹತೀ ಇಂದ್ರಮೂರ್ಧ್ನಿ ಪಪಾತ ಹ ।
ವೃತ್ರಂ ಹತ್ವಾ ಸ ಭಗವಾನ್ ದಾನವೇಶಂ ಭಯಂಕರಂ ॥ ೨೯ ॥

ಸ್ತೂಯಮಾನೋಽಮರೈಸ್ಸಾರ್ಧಂ ದೇವಧಾನೀಂ ಸಮಾವಿಶತ್ ।
ಅಥ ವೃತ್ರಶರೀರಾತ್ತು ನಿರ್ಗತಂ ತೇಜ ಉತ್ತಮಂ ॥ ೩೦ ॥

ಬ್ರಹ್ಮಹತ್ಯಾ ಮಹಾಘೋರಾ ರೌದ್ರಾ ಲೋಕಭಯಂಕರೀ ।
ಕರಾಳವದನಾ ಸಾ ಚ ವಿಕೃತಾ ಕೃಷ್ಣಪಿಂಗಳಾ ॥ ೩೧ ॥

---

೨೭. ಕಾಲಾಗ್ನಿಗೆ ಸಮವಾದ ಆ ವಜ್ರಾಯುಧವನ್ನು ಆ ವೃತ್ರಾಸುರನ ಮೇಲೆ ಬಿಟ್ಟು ಇಂದ್ರನು ಅವನನ್ನು ಸಮುದ್ರದ ದಡದಲ್ಲಿ ಕೆಡವಿದನು.

೨೮-೩೦. ಅನಂತರ ಎಲ್ಲಾ ಕಡೆಯಲ್ಲಿಯೂ ವೃತ್ರನು ಕೊಲ್ಲಲ್ಪಟ್ಟನೆಂಬ ಕೂಗು ಪ್ರಸರಿಸಿತು. ಎಲ್ಲಾ ದೇವತೆಗಳಿಗೂ ಭಯಂಕರನಾಗಿದ್ದ ವೃತ್ರನನ್ನು ಕೊಂದುದನ್ನು ನೋಡಿ ಎಲ್ಲರೂ ಇಂದ್ರನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಈರೀತಿ ಭಯಂಕರನಾದ ದಾನವ ರಾಜನಾದ ಆ ವೃತ್ರನನ್ನು ಕೊಂದು ಇಂದ್ರನು ಸ್ತುತಿಸಲ್ಪಡುತ್ತಾ ದೇವತೆಗಳ ಸ್ಥಾನವಾದ ಸ್ವರ್ಗವನ್ನು ಹೊಂದಿದನು. ಅನಂತರ ವೃತ್ರನ ಶರೀರದಲ್ಲಿ ಒಂದು ಉತ್ತಮವಾದ ತೇಜಸ್ಸು ಹೊರಕ್ಕೆ ಬಂದಿತು.

೩೧-೩೨. ಅದು ಬ್ರಹ್ಮಹತ್ಯೆಯಾಗಿದ್ದಿತು. ಅದು ಮಹಾ ಘೋರವಾಗಿಯೂ, ಲೋಕಕ್ಕೆಲ್ಲಾ ಭಯವನ್ನುಂಟುಮಾಡುವುದಾಗಿಯೂ, ಭಯಂಕರವಾದ ಮುಖವುಳ್ಳದ್ದಾಗಿಯೂ, ಕೆಂಪಗಿರುವ ಬಣ್ಣವುಳ್ಳದ್ದಾಗಿಯೂ,

ಕಪಾಲಮಾಲಿನೀ ಚೈವ ಸುದೃಶಾ ನಗನಂದಿನಿ ।
ರುಧಿರಾಕ್ತಾ ಚ ಪಾಪಿಷ್ಠಾ ಮೀನಗಂಧಾಽತಿಭೀಷಣಾ || ೩೨ ||

ಸಾ ನಿಷ್ಕ್ರಮ್ಯ ಮಹಾದೇವಿ ತಾದೃಗ್ರೂಪಾ ಭಯಾವಹಾ ।
ಇಂದ್ರಮನ್ವೇಷಯಾಮಾಸ ತಥಾ ವೈ ಸುರಸತ್ತಮೋ || ೩೩ ||

ನಿರ್ಧಾವಂತೀ ತತಸ್ಸಾ ತು ದೃಷ್ಟ್ವಾ ಶಕ್ರಂ ಮಹೌಜಸಂ ।
ಕಂಠೇ ಜಗ್ರಾಹ ದೇವೇಂದ್ರಂ ಸುಲಗ್ನಾ ಸಾಽಭವತ್ತದಾ || ೩೪ ||

ಸ ಚ ತಸ್ಮಿನ್ ಸಮುದ್ಭ್ರಾಂತೋ ಬ್ರಹ್ಮಹತ್ಯಾಕೃತೇ ಭಯೇ ।
ನಿಲಿಲ್ಯೇ ಬಿಸಮಧ್ಯೇಽಸೌ ಸ್ಥಿತೋ ವರ್ಷಗಣಾನ್ ಬಹೂನ್ || ೩೫ ||

ತಯಾ ಗೃಹೀತೋ ಭೋ ದೇವಿ ನಿಶ್ಚೇಷ್ಟಸ್ಸಮಪದ್ಯತ ।
ತಸ್ಯಾ ವ್ಯಪೋಹನೇ ಶಕ್ರಃ ಪ್ರಯತ್ನಂ ಚ ಚಕಾರ ಹ || ೩೬ ||

---

ಕಪಾಲದ ಮಾಲೆಯನ್ನು ಹಾಕಿಕೊಂಡೂ, ಕೃಶವಾಗಿಯೂ, ರಕ್ತದಿಂದ ನೆನೆದುಕೊಂಡೂ, ಪಾಪಿಯ ರೂಪವಾಗಿಯೂ, ಮೀನಿನ ವಾಸನೆಯುಳ್ಳದ್ದಾಗಿಯೂ ಭಯಂಕರವಾಗಿಯೂ ಇದ್ದಿತು.

೩೩-೩೪. ಎಲೈ ದೇವಿಯೆ ! ಭಯಂಕರವಾದ ಆ ಬ್ರಹ್ಮಹತ್ಯೆಯು ಅಲ್ಲಿಂದ ಹೊರಟು ಇಂದ್ರನನ್ನು ಹುಡುಕುತ್ತಾ ಹೋಯಿತು. ಕೊನೆಗೆ ಓಡುತ್ತಾ ಹೋಗಿ ಆ ಪರಾಕ್ರಮಶಾಲಿಯಾದ ಇಂದ್ರನನ್ನು ನೋಡಿ ಕತ್ತನ್ನು ಹಿಡಿದುಕೊಂಡು ಬಲವಾಗಿ ಬಿಡದೆ ಅಂಟಿಕೊಂಡಿತು.

೩೫. ಆ ಬ್ರಹ್ಮಹತ್ಯೆಯು ಬಂದು ಹಿಡಿದುಕೊಳ್ಳಲು ಭಯದಿಂದ ಹೆದರಿ ಇಂದ್ರನು ಕಮಲದ ದಂಟಿನ ನಾಳದಲ್ಲಿ ಅವಿತುಕೊಂಡನು. ಮತ್ತು ಹೊರಕ್ಕೆ ಬಾರದೆ ಅಲ್ಲಿಯೇ ಬಹಳ ವರ್ಷಗಳವರೆಗೂ ಇದ್ದನು.

೩೬. ಆ ಬ್ರಹ್ಮಹತ್ಯೆಯು ಹಿಡಿದುಕೊಳ್ಳಲು ಇಂದ್ರನು ಅಲುಗಾಡದಂತಾದನು. ಅಲ್ಲದೆ ಅದನ್ನು ಓಡಿಸುವುದಕ್ಕೆ ಬಹುವಾಗಿ ಪ್ರಯತ್ನಪಟ್ಟನು.

ನ ಶಕ್ತೋಽಭೂನ್ಮಹಾದೇವಿ ಬ್ರಹ್ಮಹತ್ಯಾ ವ್ಯಪೋಹಿತುಂ ।
ತಯಾ ಗೃಹೀತಮಾತ್ರಸ್ತು ದೇವೇಂದ್ರೋ ಮೇಷರೂಪಧೃತ್ ॥ ೩೭ ॥

ಪಿತಾಮಹಮುಪಾಗಮ್ಯ ಶಿರಸಾ ಪ್ರತ್ಯಪೂಜಯತ್ ।
ಜ್ಞಾತ್ವಾ ಗೃಹೀತಂ ಸಂತುಷ್ಟೋ ದ್ವಿಜಪ್ರವರಹತ್ಯಯಾ ॥ ೩೮ ॥

ಬ್ರಹ್ಮಾ ಸಂಚಿಂತಯಾಮಾಸ ತದಾ ವೈ ಸುರಸತ್ತಮೇ ।
ಸಾ ಚಿಂತ್ಯಮಾನಾ ಬ್ರಹ್ಮಾಣಮುಪಗಮ್ಯಾಬ್ರವೀದ್ವಚಃ ॥ ೩೯ ॥

॥ ಬ್ರಹ್ಮಹತ್ಯೋವಾಚ ॥

ಪ್ರಾಪ್ತಾಸ್ಮಿ ಭಗವನ್ದೇವ ತ್ವತ್ಸಕಾಶಂ ಹಿ ಮಾನದ ।
ಯತ್ಕರ್ತವ್ಯಂ ಮಯಾ ದೇವ ತದ್ಭವಾನ್ ವಕ್ತುಮರ್ಹತಿ ॥ ೪೦ ॥

॥ ಶ್ರೀ ಮಹಾದೇವ ಉವಾಚ ॥

ತಾಮುವಾಚ ಮಹಾಭಾಗೋ ಬ್ರಹ್ಮಹತ್ಯಾಂ ಪಿತಾಮಹಃ ।
ಸ್ವರೇಣ ಮಧುರೇಣಾಽಥ ಸಂಕ್ಷೇಪೇಣ ಯಥಾತಥಂ ॥ ೪೧ ॥

---

೩೭ ಆದರೂ ಕೂಡ ಆ ಇಂದ್ರನು ಆ ಬ್ರಹ್ಮಹತ್ಯೆಯನ್ನು ಓಡಿಸಲು ಸಮರ್ಥನಾಗಲಿಲ್ಲ. ಅದು ಹಿಡಿದುಕೊಂಡ ಒಡನೆಯೇ ಅವನು ಹೋತನ ರೂಪವನ್ನು ಹೊಂದಿದನು. ಆ ರೂಪಿನಿಂದಲೇ ಬ್ರಹ್ಮನ ಹತ್ತಿರಕ್ಕೆ ಬಂದು ನಮಸ್ಕರಿಸಿ ಪೂಜಿಸಿದನು.

೩೮-೩೯. ಬ್ರಹ್ಮನು ಪೂಜೆಯಿಂದ ಸಂತೋಷಗೊಂಡು ಆ ಇಂದ್ರನು ಬ್ರಹ್ಮಹತ್ಯೆಯಿಂದ ತೊಂದರೆಪಡುತ್ತಿರುವುದನ್ನು ತಿಳಿದುಕೊಂಡನು. ಅನಂತರ ಆ ಬ್ರಹ್ಮನು ಆ ಹತ್ಯೆಯನ್ನು ಧ್ಯಾನಿಸಲು ಅದು ಬ್ರಹ್ಮನಬಳಿಗೆ ಒಡನೆಯೇ ಬಂದು ಇಂತೆಂದಿತು.

೪೦. ಬ್ರಹ್ಮಹತ್ಯೆಯು ಹೇಳಿತು-ಎಲೈ ಸ್ವಾಮಿಯೆ ! ಇಗೋ ನಿನ್ನ ಅಪ್ಪಣೆಯಂತೆ ನಿನ್ನ ಬಳಿಗೆ ಬಂದಿದ್ದೇನೆ. ನಾನು ಏನು ಮಾಡಬೇಕೆಂಬುದನ್ನು ಅಪ್ಪಣೆ ಕೊಡಿಸು.

೪೧ ಶ್ರೀ ಮಹಾದೇವನು ಹೇಳಿದನು-ಆಗ ಬ್ರಹ್ಮನು ಬ್ರಹ್ಮಹತ್ಯೆಯನ್ನು ಕುರಿತು ಒಳ್ಳೆಯ ಮಾತಿನಿಂದ ಮೃದುವಾಗಿಯೂ, ಸಂಕ್ಷೇಪವಾಗಿಯೂ ಸರಿಯಾದ ವಿಷಯವನ್ನು ಇಂತೆಂದು ಹೇಳಿದನು.

॥ ಬ್ರಹ್ಮದೇವ ಉವಾಚ ॥

ಮುಚ್ಯತಾಂ ದೇವರಾಜೋಽಯಂ ಮತ್ಪ್ರಿಯಂ ಕುರು ಭಾಮಿನಿ ।
ಬ್ರೂಹಿ ಕಿಂ ತೇ ಕರೋಮ್ಯದ್ಯ ಕಾಮಂ ತ್ವಂ ಕಿಮಿಹೇಚ್ಛಸಿ ॥ ೪೨ ॥

॥ ಬ್ರಹ್ಮಹತ್ಯೋವಾಚ ॥

ಶಕ್ರಾದಪಗಮಿಷ್ಯಾಮಿ ವಚನಾತ್ತೇಽಮರೋತ್ತಮ ।
ದೇವದೇವ ನಮಸ್ತೇಽಸ್ತು ನಿವಾಸಂ ಚ ದದಸ್ವ ಮೇ ॥
ತ್ವಯಾ ಕೃತೇಽಯಂ ಮರ್ಯಾದಾ ಲೋಕಸಂರಕ್ಷಣಾರ್ಥಿನಾ ॥ ೪೩ ॥

॥ ಶ್ರೀ ಮಹಾದೇವ ಉವಾಚ ॥

ತಥೇತಿ ತಾಂ ಪ್ರತಿಜ್ಞಾಯ ಹತ್ಯಾಂ ಚಾಪಿ ಪಿತಾಮಹಃ ।
ಉಪಾಯಮಥ ಶಕ್ರಸ್ಯ ಬ್ರಹ್ಮಹತ್ಯಾಪನೋದನೇ ।
ತತೋ ವಹ್ನಿಂ ಸಮಾಹೂಯ ಬ್ರಹ್ಮಾ ವಚನಮಬ್ರವೀತ್ ॥ ೪೪ ॥

---

೪೨. ಬ್ರಹ್ಮದೇವನು ಹೇಳಿದನು-ಎಲೈ ಬ್ರಹ್ಮಹತ್ಯೆಯೇ ? ನೀನು ಈ ದೇವರಾಜನನ್ನು ಬಿಟ್ಟುಬಿಡು. ನನಗೆ ಸಂತೋಷವನ್ನುಂಟುಮಾಡು. ನಿನಗೆ ನನ್ನಿಂದ ಏನಾಗಬೇಕು ? ಅದನ್ನಾದರೂ ಹೇಳು.

೪೩. ಬ್ರಹ್ಮಹತ್ಯೆಯು ಹೇಳಿತು-ಎಲೈ ಶ್ರೇಷ್ಠನಾದ ಬ್ರಹ್ಮನೇ ? ನಾನು ನಿನ್ನ ಮಾತಿನಂತೆ ಇಂದ್ರನನ್ನು ಬಿಟ್ಟು ಹೋಗುತ್ತೇನೆ. ಎಲೈ ದೇವದೇವನೆ ! ನಿನಗೆ ನಮಸ್ಕಾರವು. ನನಗೆ ಇರುವುದಕ್ಕೆ ಜಾಗವನ್ನು ಕೊಡು. ಲೋಕವನ್ನು ಕಾಪಾಡಲು ನೀನೇ ಎಲ್ಲರಿಗೂ ಒಂದೊಂದು ರೀತಿಯನ್ನು ಗೊತ್ತುಮಾಡಿದ್ದೀಯೆ. ನನಗೂ ಗೊತ್ತುಮಾಡು.

೪೪. ಶ್ರೀ ಮಹಾದೇವನು ಹೇಳಿದನು-ಬ್ರಹ್ಮನು ಹಾಗೇ ಆಗಲೆಂದು ಬ್ರಹ್ಮಹತ್ಯೆಗೂ ಹೇಳಿದನು. ಮತ್ತು ಇಂದ್ರನು ಅದನ್ನು ಕಳೆದುಕೊಳ್ಳುವುದಕ್ಕೆ ಉಪಾಯವನ್ನೂ ಯೋಚಿಸಿದನು. ಅನಂತರ ಅಗ್ನಿಯನ್ನು ಕರೆದು ಬ್ರಹ್ಮನು ಇಂತೆಂದು ಹೇಳಿದನು.

॥ ಬ್ರಹ್ಮೋವಾಚ ॥

ತತ್ರ ಹತ್ಯಾಚತುರ್ಥಾಂಶಂ ಜಾತವೇದ ಗೃಹಾಣ ಭೋಃ ॥ ೪೫ ॥

॥ ಅಗ್ನಿರುವಾಚ ॥

ಮಮ ಮೋಕ್ಷಸ್ಯ ಕೋ ಹೇತುಃ ಬ್ರಹ್ಮಹತ್ಯಾಕೃತಃ ಪ್ರಭೋ ।
ಏತದಿಚ್ಛಾಮಿ ವಿಜ್ಞಾತುಂ ತತ್ವತೋ ಲೋಕಪೂಜಿತ ॥ ೪೬ ॥

॥ ಬ್ರಹ್ಮೋವಾಚ ॥

ಯಸ್ತ್ವಾಂ ಜ್ವಲಂತಮಾಸಾದ್ಯ ನ ಹೋಷ್ಯತಿ ನರಃ ಕ್ವಚಿತ್ ।
ಬೀಜೌಷಧಿತಿಲಾನಗ್ನೇ ಫಲಮೂಲಸಮಿತ್ಕುಶಾನ್ ॥ ೪೭ ॥

ತದ್ವೈವ ತ್ಯಕ್ಷ್ಯತಿ ತ್ವಾಂ ಚ ತತ್ರೈವ ಚ ನಿವತ್ಸ್ಯತಿ ।
ಬ್ರಹ್ಮಹತ್ಯಾ ಹವ್ಯವಾಹ ವ್ಯೇತು ತೇ ಮನಸೋ ಜ್ವರಃ ॥ ೪೮ ॥

---

೪೫. ಬ್ರಹ್ಮನು ಹೇಳಿದನು-ಎಲೈ ಅಗ್ನಿಯೇ ! ಈ ಇಂದ್ರನ ಬ್ರಹ್ಮಹತ್ಯೆಯಲ್ಲಿ ನಾಲ್ಕನೆಯ ಒಂದಂಶವನ್ನು ನೀನು ತೆಗೆದುಕೋ !

೪೬. ಅಗ್ನಿಯು ಹೇಳಿದನು-ಎಲೈ ಪ್ರಭುವೆ ! ನಾನು ಈ ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳುವುದು ಹೇಗೆ ? ಇದನ್ನು ಸರಿಯಾಗಿ ತಿಳಿದುಕೊಳ್ಳಲು ಅಪೇಕ್ಷಿಸುತ್ತೇನೆ.

೪೭-೪೮. ಬ್ರಹ್ಮನು ಹೇಳಿದನು-ಎಲೈ ಅಗ್ನಿಯೆ ! ನೀನು ಉರಿಯುತ್ತಿರುವಾಗ ನಿನ್ನ ಉರಿಯಲ್ಲಿ ಯಾವನು, ಬೀಜ, ಎಳ್ಳು, ಫಲ, ಮೂಲ, ಸಮಿತ್ತು, ದರ್ಭೆ ಇವುಗಳನ್ನು ಹೋಮ ಮಾಡುವುದಿಲ್ಲವೋ ಆಗಲೇ ಆ ಹತ್ಯೆಯು ನಿನ್ನನ್ನು ಬಿಟ್ಟು ಬಿಡುತ್ತದೆ. ಮತ್ತು ಯಾವ ಪದಾರ್ಥವನ್ನು ಹೋಮಮಾಡುವುದಿಲ್ಲವೋ ಆ ಪದಾರ್ಥದಲ್ಲಿ ಆ ಹತ್ಯೆಯು ಹೋಗಿ ವಾಸಮಾಡುತ್ತದೆ. ನೀನು ನಿನ್ನ ಮನಸ್ಸಿನ ದುಃಖವನ್ನು ಬಿಟ್ಟು ಬಿಡು.

॥ ಶ್ರೀ ಮಹಾದೇವ ಉವಾಚ ॥

ತತಸ್ಸ ಪರಿಜಗ್ರಾಹ ತದ್ವಚೋ ಹವ್ಯಕವ್ಯಭುಕ್ ।
ಪಿತಾಮಹಶ್ಚ ಭಗವಾನ್ ತಥಾ ತದಲಭತ್ಪ್ರಿಯಂ ॥ ೪೯ ॥

ತತೋ ವೃಕ್ಷೌಷಧಿತೃಣಾನ್ಯಾಹೂಯ ಸ ಪಿತಾಮಹಃ ।
ಇಮಮರ್ಥಂ ಮಹಾಭಾಗೇ ವಕ್ತುಂ ಸಮುಪಚಕ್ರಮೇ ॥ ೫೦ ॥

ತತೋ ವೃಕ್ಷೌಷಧಿತೃಣೈಸ್ತಥೈವೋಕ್ತಂ ಯಥಾತಥಂ ।
ವ್ಯಥಿತಾನ್ಯಗ್ನಿವದ್ದೇವಿ ಬ್ರಹ್ಮಾಣಂ ವಾಕ್ಯಮಬ್ರುವನ್ ॥ ೫೧ ॥

॥ ವೃಕ್ಷೌಷಧಿತೃಣಾನ್ಯೂಚುಃ ॥

ಅಸ್ಮಾಕಂ ಬ್ರಹ್ಮಹತ್ಯಾಯಾಃ ಕಥಮನ್ತಃ ಪಿತಾಮಹ ।
ಸ್ವಭಾವನಿಹತಾನಸ್ಮಾನ್ ನ ಪುನರ್ಹಂತುಮರ್ಹಸಿ ॥ ೫೨ ॥

---

೪೯. ಶ್ರೀ ಮಹಾದೇವನು ಹೇಳಿದನು– ಹವ್ಯಕವ್ಯಗಳನ್ನು ತಿನ್ನುವ ಆ ಅಗ್ನಿಯು ಅನಂತರ ಹಾಗೇ ಆಗಲೆಂದು ಅವನ ಮಾತನ್ನು ಒಪ್ಪಿಕೊಂಡನು. ಪೂಜ್ಯನಾದ ಬ್ರಹ್ಮನೂ ಕೂಡ ತನ್ನ ಮಾತು ನಡೆದುದಕ್ಕೆ ಸಂತೋಷಪಟ್ಟನು.

೫೦. ಆಮೇಲೆ ಬ್ರಹ್ಮನು ಮರಗಳು ಓಷಧಿಗಳು ತೃಣಗಳು ಇವನ್ನು ಕರೆದು ಈ ವಿಷಯಗಳನ್ನು ಅವುಗಳಿಗೆ ತಿಳಿಸಿದನು.

೫೧. ಆಗ ಆ ಮರ, ಓಷಧಿ ತೃಣಗಳು ಹಾಗೇ ಆಗಲೆಂದು ಒಪ್ಪಿ ಕೊಂಡುವು. ಆದರೆ ಅಗ್ನಿಯಂತೆ ಅವೂ ದುಃಖಗೊಂಡು ಬ್ರಹ್ಮನನ್ನು ಕುರಿತು ಇಂತೆಂದುವು.

೫೨. ಮರ, ಓಷಧಿ ತೃಣಗಳು ಹೇಳಿದುವು- ಎಲೈ ಪಿತಾಮಹನೇ! ನಮ್ಮಲ್ಲಿ ಬಂದು ಸೇರುವ ಬ್ರಹ್ಮಹತ್ಯೆಯನ್ನು ನಾವು ಕಳೆದು ಕೊಳ್ಳುವ ಬಗೆಯು ಹೇಗೆ ? ಮೊದಲೇ ನಾವು ಹಾಳಾಗಿ ಹೋಗಿದ್ದೇವೆ. ಮತ್ತೂ ನಮ್ಮನ್ನು ಅವಕ್ಕಿಂತಲೂ ನೀಚರನ್ನಾಗಿ ಮಾಡಬೇಡ.

ವಯಮಗ್ನಿಂ ತಥಾ ಶೀತಂ ವರ್ಷಂ ಚ ಪವನೇರಿತಂ ।
ಸಹಾಮಸ್ಸತತಂ ದೇವ ತಥಾ ಛೇದನಭೇದನಂ ॥ ೫೩ ॥

॥ ಬ್ರಹ್ಮೋವಾಚ ॥

ಅಕಾರಣಂ ನರೋ ಯಸ್ತು ಯುಷ್ಮಚ್ಛೇದನಭೇದನಂ ।
ಕರಿಷ್ಯತಿಮಹಾಮೋಹಾತ್ ತಮೇಷಾಽನುಪ್ರಯಾಸ್ಯತಿ ॥ ೫೪ ॥

॥ ಶ್ರೀ ಮಹಾದೇವ ಉವಾಚ ॥

ತತೋ ಮಹೌಷಧಿತೃಣೈರೋಮಿತ್ಯುಕ್ತಂ ಮಹಾತ್ಮಭಿಃ ।
ಬ್ರಹ್ಮಾಣಮಪಿ ಸಂಪೂಜ್ಯ ಜಗ್ಮುಶ್ಚಾಽಥ ಯಥಾಗತಂ ॥ ೫೫ ॥

ಆಹೂಯಾಪ್ಸರಸೋ ದೇವಃ ತತೋ ಲೋಕಪಿತಾಮಹಃ ।
ವಾಚಾ ಮಧುರಯಾ ಪ್ರಾಹ ಸಾಂತ್ವಯನ್ನಿವ ಸತ್ತಮೋ ॥ ೫೬ ॥

---

೫೩. ಎಲೈ ಬ್ರಹ್ಮನೇ ! ನಾವು ಶೀತ, ಉಷ್ಣ, ಮಳೆ, ಗಾಳಿ ಅಂತೆಯೇ ಕಡಿಯುವುದು ಚುಚ್ಚುವುದು ಇವುಗಳಿಂದ ಉಂಟಾಗುವ ಕಷ್ಟಗಳನ್ನು ತಾಳು ತ್ತಿದ್ದೇವೆ. ಇದರ ಮೇಲೆ ನಮಗೆ ಆ ಕಷ್ಟವೂ ಒದಗುತ್ತದೆ.

೫೪. ಬ್ರಹ್ಮನು ಹೇಳಿದನು– ಎಲೈ ವೃಕ್ಷೌಷಧಿ ತೃಣಗಳಿರ! ನೀವು ಹೆದರ ಬೇಡಿರಿ. ಕಾರಣವಿಲ್ಲದೆ ಯಾವನು ಅಜ್ಞಾನದಿಂದಲೋ ರಾಗದ್ವೇಷದಿಂದಲೋ ನಿಮ್ಮನ್ನು ಕತ್ತರಿಸುವುದಾಗಲಿ ಕಡಿಯುವುದಾಗಲಿ ಮಾಡಿದರೆ ಆಗ ಆ ಹತ್ಯೆಯು ಅವನನ್ನು ಸೇರಿಕೊಳ್ಳುತ್ತದೆ.

೫೫. ಶ್ರೀ ಮಹಾದೇವನು ಹೇಳಿದನು- ಆಗ ಆ ಮಹೌಷಧಿ ತೃಣಗಳು ಹಾಗೆಯೇ ಆಗಲೆಂದು ಒಪ್ಪಿಕೊಂಡುವು. ಅನಂತರ ಬ್ರಹ್ಮನನ್ನು ಗೌರವಿಸಿ ಬಂದ ಹಾಗೇ ಹೊರಟು ಹೋದುವು.

೫೬. ಆಮೇಲೆ ಬ್ರಹ್ಮನು ಅಪ್ಸರ ಸ್ತ್ರೀಯರನ್ನು ಕರೆದು ಮಧುರವಾದ ಮಾತಿನಿಂದ ಸಮಾಧಾನ ಪಡಿಸುತ್ತಾ ಇಂತೆಂದನು.

॥ ಬ್ರಹ್ಮೋವಾಚ ॥

ಇಯಂ ವೃತ್ರಾದನುಪ್ರಾಪ್ತಾ ಬ್ರಹ್ಮಹತ್ಯಾ ವರಾಂಗನಾಃ ।
ಚತುರ್ಥಮಸ್ಯಾ ಭಾಗಂ ಚ ಯಥೋಕ್ತಂ ಸಂಪ್ರತೀಚ್ಛತ ॥ ೫೭ ॥

॥ ಅಪ್ಸರಸ ಊಚುಃ ॥

ಗ್ರಹಣೇ ಕೃತಬುದ್ಧೀನಾಂ ದೇವೇಶ ತವ ಶಾಸನಾತ್ ।
ಸಂಮೋಕ್ಷಸಮಯೋಽಸ್ಮಾಕಂ ಚಿಂತನೀಯಃ ಪಿತಾಮಹ ॥ ೫೮ ॥

॥ ಪಿತಾಮಹ ಉವಾಚ ॥

ರಜಸ್ವಲಾಸು ನಾರೀಷು ಯೋ ವೈ ಮೈಥುನಮಾಚರೇತ್ ।
ತಮೇಷಾ ಯಾಸ್ಯತಿ ಕ್ಷಿಪ್ರಂ ವ್ಯೇತು ವೋ ಮನಸೋ ಜ್ವರಃ ॥ ೫೯ ॥

॥ ಶ್ರೀ ಮಹಾದೇವ ಉವಾಚ ॥

ತಥೇತಿ ಹೃಷ್ಟಮನಸಃ ಪ್ರತ್ಯುಕ್ತ್ವಾ ಹ್ಯಪ್ಸರೋ ಗಣಾಃ ।
ಸ್ವಾನಿ ಸ್ಥಾನಾನಿ ಸಂಪ್ರಾಪ್ಯ ರೇಮಿರೇ ಶೈಲಜೇ ತದಾ ॥ ೬೦ ॥

---

೫೭. ಬ್ರಹ್ಮನು ಹೇಳಿದನು– ಎಲೌ ಅಪ್ಸರ ಸ್ತ್ರೀಯರಿರ ? ಈ ಬ್ರಹ್ಮ ಹತ್ಯೆಯು ವೃತ್ರಾಸುರನಿಂದ ಬಂದಿದೆ. ಇದರಲ್ಲಿ ನಾಲ್ಕನೆಯ ಒಂದಂಶವನ್ನು ಈಗ ನೀವು ತೆಗೆದುಕೊಳ್ಳಬೇಕು.

೫೮. ಅಪ್ಸರಸ್ತ್ರೀಯರು ಹೇಳಿದರು-ಎಲೈ ದೇವೇಶನಾದ ಬ್ರಹ್ಮನೆ ! ನಿನ್ನ ಅಪ್ಪಣೆಯಂತೆ ನಾವು ತೆಗೆದುಕೊಳ್ಳುತ್ತೇವೆ. ಆದರೆ ಅದು ನಮ್ಮಿಂದ ಹೋಗಲು ಒಂದು ಉಪಾಯವನ್ನು ಹೇಳು.

೫೯. ಪಿತಾಮಹನು ಹೇಳಿದನು. ಮುಟ್ಟಾದ ಹೆಂಗಸರಲ್ಲಿ ಸ್ನಾನಮಾಡುವುದಕ್ಕೆ ಮೊದಲು ಯಾವನು ಸಂಗಮವನ್ನು ಮಾಡುತ್ತಾನೆಯೋ ಅವನಲ್ಲಿ ಇದು ಸೇರಿಕೊಳ್ಳುತ್ತದೆ. ನೀವು ನಿಮ್ಮಗಳ ಮನಸ್ಸಿನ ದುಃಖವನ್ನೆಲ್ಲಾ ಬಿಟ್ಟುಬಿಡಿರಿ.

೬೦. ಶ್ರೀ ಮಹಾದೇವನು ಹೇಳಿದನು-ಆಗ ಅಪ್ಸರ ಸ್ತ್ರೀಯರು ಸಂತೋಷಗೊಂಡು ಹಾಗೆಯೇ ಆಗಲೆಂದು ಹೇಳಿ ತಮ್ಮ ತಮ್ಮ ಸ್ಥಾನಗಳಿಗೆ ಹೋಗಿ ಸುಖವಾಗಿದ್ದರು.

ತತಶ್ಚ ಲೋಕಕೃದ್ದೇವಃ ಪುನರೇವ ಪಿತಾಮಹಃ ।
ಅಪಸ್ಸಚಿಂತಯಾಮಾಸ ತತಸ್ತಾಶ್ಚ ಸಮಾಗಮನ್ ॥ ೬೧ ॥

ತಾಶ್ಚ ಸರ್ವಾಸ್ಸಮಾಗಮ್ಯ ಬ್ರಹ್ಮಾಣಮಮಿತೌಜಸಂ ।
ಇದಮೂಚುರ್ವಚೋ ದೇವಿ ಪ್ರಣಿಪತ್ಯ ಪಿತಾಮಹಂ ॥ ೬೨ ॥

॥ ಆಪ ಊಚುಃ ॥

ಇಮಾಃ ಸ್ಮ ದೇವ ಸಂಪ್ರಾಪ್ತಾಸ್ತ್ವತ್ಸಕಾಶಮರಿಂದಮ ।
ಶಾಸನಾತ್ತವ ದೇವೇಶ ಸಮಾಜ್ಞಾಪಯ ತತ್ಪ್ರಭೋ ॥ ೬೩ ॥

॥ ಬ್ರಹ್ಮೋವಾಚ ॥

ಇಯಂ ವೃತ್ರಾದನುಪ್ರಾಪ್ತಾ ಪುರುಹೂತಂ ಭಯಾನಕಾ ।
ಬ್ರಹ್ಮಹತ್ಯಾಚತುರ್ಥಾಂಶಂ ಯೂಯಮಸ್ಯಾಃ ಪ್ರತೀಚ್ಛಥ ॥ ೬೪ ॥

॥ ಆಪ ಊಚುಃ ॥

ಏವಂ ಭವತು ಲೋಕೇಶ ಯತ್ತ್ವಂ ವದಸಿ ತತ್ಪ್ರಭೋ ।
ಮೋಕ್ಷಸ್ಯ ಸಮಯಂ ಸಸ್ತ್ವಂ ಸಂಚಿಂತಯಿತುಮರ್ಹಸಿ ॥ ೬೫ ॥

---

೬೧-೬೨. ಅನಂತರ ಲೋಕಕರ್ತನಾದ ಬ್ರಹ್ಮನು ನೀರನ್ನು ಸ್ಮರಿಸಲು ಅದು ಬಂದು ನಿಂತಿತು. ಆ ನೀರು ಬಂದು ಬ್ರಹ್ಮನನ್ನು ನಮಸ್ಕರಿಸಿ ಇಂತೆಂದು ಹೇಳಿತು

೬೩. ನೀರು ಹೇಳಿತು- ಎಲೈ ಬ್ರಹ್ಮನೆ! ನಿನ್ನ ಅಪ್ಪಣೆಯಂತೆ ನಾವು ಬಂದಿದ್ದೇವೆ. ನಿನಗೇನಾಗಬೇಕೆಂಬುದನ್ನು ಅಪ್ಪಣೆ ಮಾಡು.

೬೪. ಬ್ರಹ್ಮನು ಹೇಳಿದನು-ಈ ಭಯಂಕರವಾದ ಬ್ರಹ್ಮಹತ್ಯೆಯು ವೃತ್ರಾಸುರನ ದೆಸೆಯಿಂದ ಇಂದ್ರನಿಗೆ ಬಂದಿತು. ಆ ಬ್ರಹ್ಮಹತ್ಯೆಯ ನಾಲ್ಕನೇ ಒಂದು ಭಾಗವನ್ನು ನೀವು ತೆಗೆದುಕೊಳ್ಳಿರಿ.

೬೫. ನೀರು ಹೇಳಿತು- ಎಲೈ ಲೋಕೇಶನೆ! ನೀನು ಹೇಳಿವಂತೆಯೇ ಆಗಲಿ. ಆದರೆ ಅದು ನಮ್ಮಿಂದ ಹೋಗುವುದಕ್ಕೆ ಒಂದು ಉಪಾಯವನ್ನು ಯೋಚಿಸಿ ಹೇಳು.

ತ್ವಂ ಹಿ ದೇವೇಂದ್ರ ಸರ್ವಸ್ಯ ಜಗತಃ ಪರಮಾಗತಿಃ ।
ಕೋಽನ್ಯೇಭ್ಯೋ ಹಿ ಪ್ರಸಾದೋಽಪಿ ಯಃ ಕೃಚ್ಛ್ರಾನ್ನಃ
ಸಮುದ್ಧರೇತ್ ॥ ೬೬ ॥

॥ ಬ್ರಹ್ಮೋವಾಚ ॥

ಅಲ್ಪಾಮೇವ ಮತಿಂ ಕೃತ್ವಾ ಯೋ ನರೋ ಬುದ್ಧಿಮೋಹಿತಃ ।
ಶ್ಲೇಷ್ಮಮೂತ್ರಪುರೀಷಾಣಿ ಯುಷ್ಮಾಸು ಪ್ರತಿಮೋಕ್ಷ್ಯತಿ ॥ ೬೭ ॥

ತ್ವಮೇವ ಯಾಸ್ಯತಿ ಕ್ಷಿಪ್ರಂ ತತ್ರೈವ ಚ ನಿವತ್ಸ್ಯತಿ ।
ತತೋ ವೈ ಭವಿತಾ ಮೋಕ್ಷಃ ಇತಿ ಸತ್ಯಂ ಬ್ರವೀಮಿ ವಃ ॥ ೬೮ ॥

॥ ಶ್ರೀ ಮಹಾದೇವ ಉವಾಚ ॥

ತತೋ ವಿಮುಚ್ಯ ದೇವೇಂದ್ರಂ ಬ್ರಹ್ಮಹತ್ಯಾ ಸುರೇಶ್ವರಿ ।
ಗತಾಽತಿಹೃಷ್ಟೋ ದೇವೇಶೋ ಹ್ಯಭವದ್ದೇವಶಾಸನಾತ್ ॥ ೬೯ ॥

ಏವಂ ಶಕ್ರೇಣ ಸಂಪ್ರಾಪ್ತಾ ಬ್ರಹ್ಮಹತ್ಯಾ ಪುರಾಯುಗೇ ।
ಅಸ್ಮಿನ್ ತೀರ್ಥೇ ತಪಸ್ತಪ್ತ್ವಾ ಶುದ್ಧಾತ್ಮಾ ತ್ರಿದಿವಂ ಯಯೌ ॥ ೭೦ ॥

---

೬೬. ಎಲೈ ಸ್ವಾಮಿಯೆ ! ನೀನೇ ಪ್ರಪಂಚಕ್ಕೆಲ್ಲಾ ರಕ್ಷಕನು. ಕಷ್ಟಗಳನ್ನು ಹೋಗಾಲಾಡಿಸತಕ್ಕವನು. ಈ ಕಷ್ಟದಿಂದ ನಮ್ಮನ್ನು ನೀನಲ್ಲದೆ ಮತ್ತಾವನು ತಾನೆ ಪಾರುಮಾಡಬಲ್ಲವನಿದ್ದಾನೆ.

೬೭-೬೮. ಬ್ರಹ್ಮನು ಹೇಳಿದನು-ಅಲ್ಪ ಬುದ್ಧಿಯುಳ್ಳ ಯಾವನು ಯೋಚಿಸದೆ ನಿಮ್ಮಲ್ಲಿ ಶ್ಲೇಷ್ಮ ಮೂತ್ರ. ಮಲಗಳನ್ನು ಹಾಕುತ್ತಾನೆಯೋ ಅವನನ್ನು ಆ ಬ್ರಹ್ಮಹತ್ಯೆಯು ಸೇರಿಕೊಳ್ಳುತ್ತದೆ. ಮತ್ತು ಅಲ್ಲಿಯೇ ವಾಸ ಮಾಡುತ್ತದೆ. ಆಗ ಅದರಿಂದ ಬಿಡುಗಡೆಯಾಗುತ್ತದೆ. ಇದು ಸತ್ಯವಾದ ಮಾತು.

೬೯. ಶ್ರೀ ಮಹಾದೇವನು ಹೇಳಿದನು-ಅನಂತರ ಆ ಬ್ರಹ್ಮಹತ್ಯೆಯು ದೇವೇಂದ್ರನನ್ನು ಬಿಟ್ಟು ಹೊರಟು ಹೋಯಿತು ಆಗ ಬ್ರಹ್ಮನ ಅಪ್ಪಣೆಯಂತೆ ಆ ದೇವೇಂದ್ರನು ಸಂತುಷ್ಟನಾದನು.

೭೦. ಈ ರೀತಿಯಾಗಿ ಹಿಂದಿನ ಯುಗದಲ್ಲಿ ಬ್ರಹ್ಮಹತ್ಯೆಯು ಇಂದ್ರನಿಗೆ ಬಂದಿದ್ದಿತು. ಈ ತೀರ್ಥದಲ್ಲಿ ತಪಸ್ಸನ್ನು ಮಾಡಿ ಶುದ್ಧನಾಗಿ ಸ್ವರ್ಗಕ್ಕೆ ಹೋದನು.

**ಅಶ್ವಮೇಧಂ ತತಃ ಕೃತ್ವಾ ವಿಪಾಪ್ಮಾ ಸಮಪದ್ಯತ ।**
**ಇತಿ ಸಾಭ್ರಮತೀ ತೀರ್ಥೇ ವಾರ್ತ್ರಘ್ನೀಯಂ ನಗಾತ್ಮಜೇ ॥ ೭೧ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ವಾರ್ತ್ರಘ್ನಿತೀರ್ಥ ವರ್ಣನಂ ನಾಮ ಚತುಷ್ಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೭೧. ಅನಂತರ ಆ ಇಂದ್ರನು ಅಶ್ವಮೇಧಯಾಗವನ್ನು ಮಾಡಿ ಎಲ್ಲಾ ಪಾಪಗಳನ್ನೂ ಕಳೆದುಕೊಂಡನು. ಈ ರೀತಿಯಾಗಿ ಸಾಭ್ರಮತೀ ನದಿಯಲ್ಲಿ ವಾರ್ತ್ರಘ್ನಿ ತೀರ್ಥವು ಪ್ರಸಿದ್ಧವಾಗಿದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ವಾರ್ತ್ರಘ್ನಿತೀರ್ಥ ವರ್ಣನ ಎಂಬ ನೂರ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಷಷ್ಟ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

**ತತಃ ಪರಂ ದೇವನದೀ ವಾತ್ರ್ರಘ್ನೀಸಂಗಮಾತ್ಕಿಲ ।**
**ಪ್ರವಿಷ್ಟಾ ಭದ್ರಯಾ ಸಾರ್ಧಂ ಸಾಗರಂ ವರುಣಾಲಯಂ ॥ ೧ ॥**

**ಸಮುದ್ರೋಽಪಿ ತಯಾ ತಾವದಾಗಮ್ಯ ಪ್ರಿಯಕಾಮ್ಯಯಾ ।**
**ಸಾಭ್ರಮತ್ಯಾನುರಾಗೇಣ ಕೃತವಾನ್ಪ್ರಿಯಮೇಳಕಂ ॥ ೨ ॥**

**ಭದ್ರಾ ವಾಪಿ ಸುಭದ್ರಾಯಾ ವಯಸ್ಯಾ ಸಾ ನದೀ ಪುರಾ ।**
**ಸಾಹಾಯ್ಯಮಕರೋನ್ಮಾರ್ಗೇ ಸಾಕ್ಷಾಚ್ಛ್ರೀರೂಪಧಾರಿಣೀ ॥ ೩ ॥**

---

## ನೂರ ಅರವತ್ತೈದನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು-ಅನಂತರ ಈ ದೇವನದಿಯಾದ ಸಾಭ್ರಮತಿಯು ವಾತ್ರ್ರಘ್ನೀತೀರ್ಥದಿಂದ ಮುಂದೆ ಹೋಗಿ ಭದ್ರಾನದಿಯೊಡನೆ ಸೇರಿ ಮುಂದಕ್ಕೆ ಸಮುದ್ರವನ್ನು ಸೇರುತ್ತದೆ.

೨. ಸಮುದ್ರವೂ ಕೂಡ ಆ ಸಾಭ್ರಮತಿಗೆ ಪ್ರಿಯವನ್ನು ಮಾಡುವ ಇಚ್ಛೆಯಿಂದ ಮುಂದೆ ಬಂದು ಅವಳಲ್ಲಿರುವ ಅನುರಾಗದಿಂದ ಸೇರಿಕೊಂಡಿರುವುದು.

೩. ಆ ಭದ್ರಾನದಿಯು ಕೂಡ ಆ ಸಾಭ್ರಮತೀ ನದಿಗೆ ಪೂರ್ವದಲ್ಲಿ ಸುಖಿಯಾಗಿದ್ದಳು. ಪ್ರತ್ಯಕ್ಷ ಲಕ್ಷ್ಮೀ ರೂಪಳಾದ ಆ ಭದ್ರೆಯು ದಾರಿಯಲ್ಲಿ ಆ ನದಿಯೊಡನೆ ಸೇರಿ ಸಹಾಯಕಳಾದಳು.

ತಯೋಸ್ತು ಸಂಗಮಃ ಪುಣ್ಯಃ ಸಾಗರಸ್ಯೋತ್ತರೇ ತಟೇ ।
ತತ್ರ ತೀರ್ಥೇ ನರಸ್ಸ್ನಾತ್ವಾ ಮೃಷ್ಟಂ ವಾರಿ ದದಾತಿ ಯಃ ॥ ೪ ॥

ನಮಸ್ಕೃತ್ಯ ವರಾಹಾಯ ವಾರುಣಂ ಸ್ಥಾನಮಾಪ್ನುಯಾತ್ ।
ಪ್ರವಿಶ್ಯ ಭಗವಾನ್ವಿಷ್ಣುಸ್ತೇನ ಮಾರ್ಗೇಣ ಸಾಗರಂ ॥ ೫ ॥

ಜಿತ್ವಾ ವೈ ದಾನವಾನ್ ಸರ್ವಾನ್ ದೇವಾನಾಂ ಪರಿಪಂಥಿನಃ ।
ದೇವೋ ಯಜ್ಞವರಾಹಶ್ಚ ಸಂಕ್ಷೋಭ್ಯ ಮಕರಾಲಯಂ ।
ಕ್ರೀಡಿತ್ವಾ ಸುಚಿರಂ ಕಾಲಂ ಕರ್ದಮಾಲೇನ ನಿರ್ಯಯೌ ॥ ೬ ॥

॥ ಶ್ರೀ ಪಾರ್ವತ್ಯುವಾಚ ॥

ದೇವ ಯಜ್ಞವರಾಹಸ್ಯ ಸಾಭ್ರಮತ್ಯಾಂ ಪ್ರವೇಶನಂ ।
ನಿರ್ಗಮಂ ಕರ್ದಮಾಲೇನ ಬ್ರೂಹಿ ತ್ವಂ ಮಮ ವಿಸ್ತರಾತ್ ॥ ೭ ॥

---

೪. ಸಮುದ್ರದ ಉತ್ತರದಡದಲ್ಲಿ ಅವುಗಳ ಸಂಗಮವಿದೆ. ಅದು ಪುಣ್ಯಕರವಾದುದು. ಅಲ್ಲಿ ಸ್ನಾನಮಾಡಿ ಮಾನವನು ಪಾನಕ ಮುಂತಾದುವುಗಳನ್ನು ದಾನಮಾಡಬೇಕು.

೫-೬. ಅಲ್ಲಿರುವ ವರಾಹಸ್ವಾಮಿಗೆ ನಮಸ್ಕರಿಸಬೇಕು. ಹಾಗೆ ಮಾಡಿದರೆ ಅವನು ವರುಣಲೋಕವನ್ನು ಹೊಂದುತ್ತಾನೆ. ಭಗವಂತನಾದ ವಿಷ್ಣುವು ಆ ಸಾಭ್ರಮತಿಯ ಮಾರ್ಗದಿಂದ ಸಮುದ್ರವನ್ನು ಪ್ರವೇಶಿಸಿ ಅಲ್ಲಿದ್ದ ದೇವತೆಗಳ ವೈರಿಗಳಾದ ದಾನವರುಗಳನ್ನು ಯಜ್ಞ ವರಾಹ ರೂಪದಿಂದ ಜಯಿಸಿ ಆ ಸಾಗರವನ್ನೆಲ್ಲಾ ಅಲ್ಲೋಲ ಕಲ್ಲೋಲ ಮಾಡುತ್ತಾ ಬಹುಕಾಲ ಆಟವಾಡಿಕೊಂಡಿದ್ದು ಕರ್ದಮಾಲವೆಂಬ ಪ್ರದೇಶದಿಂದ ಹೊರಗೆ ಬಂದನು.

೭. ಶ್ರೀ ಪಾರ್ವತಿಯು ಹೇಳಿದಳು-ಎಲೈ ದೇವನೆ ! ಯಜ್ಞ ವರಾಹ ರೂಪವನ್ನು ಧರಿಸಿ ಸ್ವಾಮಿಯು ಸಾಭ್ರಮತೀ ನದಿಯನ್ನು ಹೇಗೆ ಪ್ರವೇಶಿಸಿದನು? ಕರ್ದಮಾಲ ಪ್ರದೇಶದಿಂದ ಹೊರಕ್ಕೆ ಹೇಗೆ ಬಂದನು ? ಎಂಬುದನ್ನೆಲ್ಲಾ ವಿಸ್ತಾರವಾಗಿ ಹೇಳು.

|| ಶ್ರೀ ಮಹಾದೇವ ಉವಾಚ ||

ಅಂತರ್ಭೂಕ್ರೀಡಿತಮಿದಂ ವರಾಹಸ್ಯ ಹರೇಃ ಪುರಾ ।
ತತ್ಸರ್ವಂ ಕಥಯಿಷ್ಯಾಮಿ ಶೃಣು ತ್ವಂ ನಗನಂದಿನಿ || ೮ ||

ಯೋಽಯಂ ವೈ ಭಗವಾನ್ ಸಾಕ್ಷಾತ್ ಧೃತವಾನ್ ಸೂಕರಂ ವಪುಃ
ದೇವಾನಾಂ ಕಾರ್ಯಸಿದ್ಧ್ಯರ್ಥಂ ರೂಪಂ ಧೃತ್ವಾ ಸುರೇಶ್ವರಃ || ೯ ||

ಧೃತ್ವಾ ವೈ ಪೃಥಿವೀಂ ದೇವೀಂ ನಿರ್ಗತಃ ಕರ್ದಮಾಲಯಾತ್ ।
ತತ್ರ ತೀರ್ಥಂ ಮಹಜ್ಜಾತಂ ವಾರಾಹಾಖ್ಯಂ ಚ ಸುಂದರಿ || ೧೦ ||

ತತ್ರ ಸ್ನಾತಿ ನರೋ ಯಸ್ತು ಮುಕ್ತಿಭಾಕ್ ಸ ನ ಸಂಶಯಃ ।
ಅತ್ರ ಶ್ರಾದ್ಧಂ ಪ್ರಕುರ್ವೀತ ಪಿತೄಣಾಂ ಮುಕ್ತಿಹೇತವೇ ।
ವಿಮುಕ್ತಸ್ತೈಸ್ಸಮಂ ಲೋಕಂ ಪ್ರಯಾತಿ ಸುಖದಂ ಮಹತ್ || ೧೧ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ವಾರಾಹತೀರ್ಥ ವರ್ಣನಂ ನಾಮ ಪಂಚಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೮. ಶ್ರೀ ಮಹಾದೇವನು ಹೇಳಿದನು–ವರಾಹಾವತಾರಿಯಾದ ಆ ಹರಿಯು ಭೂಮಿಯೊಳಗೆ ಕ್ರೀಡಿಸಿದ ವಿಷಯವಾಗಿ ಯಾವುಯಾವುದಿರುವುದೋ ಅದೆಲ್ಲವನ್ನೂ ಹೇಳುತ್ತೇನೆ. ಎಲೈ ಪಾರ್ವತಿಯೆ ! ನೀನು ಕೇಳು.

೯-೧೧. ಆ ಭಗವಂತನಾದ ಹರಿಯು ದೇವತೆಗಳ ಕಾರ್ಯಸಿದ್ಧಿಗೋಸ್ಕರ ಹಂದಿಯ ರೂಪವನ್ನು ಹೊಂದಿದನು. ಹಾಗೆ ಹಂದಿಯ ರೂಪವನ್ನು ಹೊಂದಿ ದೈತ್ಯರನ್ನು ಸಂಹರಿಸಿ ಭೂಮಿಯನ್ನು ಹೊತ್ತುಕೊಂಡು ಕರ್ದಮಾಲಯ ಪ್ರದೇಶದಿಂದ ಹೊರಕ್ಕೆ ಬಂದನು. ಆ ಜಾಗದಲ್ಲಿ ಉತ್ತಮೋತ್ತಮವಾದ ತೀರ್ಥವಾಯಿತು. ಅದು ವಾರಾಹತೀರ್ಥವೆನ್ನಿಸಿಕೊಂಡಿತು. ಅಲ್ಲಿ ಸ್ನಾನ ಮಾಡುವ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆಂಬುದರಲ್ಲಿ ಸಂದೇಹವಿಲ್ಲ ಇಲ್ಲಿ ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಮುಕ್ತಿಯು ಲಭಿಸುತ್ತದೆ. ತಾನೂ ಆ ಪಿತೃಗಳೊಡನೇ ಮುಕ್ತಿಯನ್ನು ಹೊಂದಿ ಸುಖಪಡುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ವಾರಾಹತೀರ್ಥ ವರ್ಣನ ಎಂಬ ನೂರ ಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಷಷ್ಟ್ಯಧಿಕಶತತಮೋऽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಅಸ್ಮಾತ್ತೀರ್ಥಾತ್ಪರಂ ತೀರ್ಥಂ ಸಂಗಮಾಖ್ಯಮಿತಿ ಶ್ರುತಂ ।**
**ಯತ್ರ ಸಾಭ್ರಮತೀ ಗಂಗಾ ಮಿಲಿತಾ ಸಾಗರೇಣ ತು ॥ ೧ ॥**

**ತತ್ರ ಸ್ನಾನಂ ಚ ದಾನಂ ಚ ಕರ್ತವ್ಯಂ ವಿಧಿಪೂರ್ವಕಂ ।**
**ಯತ್ರ ಸ್ನಾತ್ವಾ ವಿಮುಚ್ಯಂತೇ ಮಹಾಪಾತಕಿನೋऽಪಿ ಯೇ ॥ ೨ ॥**

**ತತ್ರ ಶ್ರಾದ್ಧಂ ಪ್ರಕರ್ತವ್ಯಂ ಸ್ವಾನಾಂ ಚ ಹಿತಮಿಚ್ಛತಾ ।**
**ಯತ್ರ ವೈ ತು ಕೃತೇ ಶ್ರಾದ್ಧೇ ಪಿತೃಲೋಕೇ ವಸೇದ್ಧ್ರುವಂ ॥ ೩ ॥**

---

## ನೂರ ಅರವತ್ತಾರನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಈ ತೀರ್ಥಕ್ಕಿಂತಲೂ ಮುಂದೆ ಹೋದರೆ ಸಂಗಮವೆಂಬ ಒಂದು ತೀರ್ಥವಿರುವುದು. ಅಲ್ಲಿ ಸಾಭ್ರಮತಿಯು ಸಮುದ್ರದೊಡನೆ ಸೇರಿರುವುದು.

೨. ಅಲ್ಲಿ ಸ್ನಾನಮಾಡಿ ವಿಧಿಯಲ್ಲಿ ಹೇಳಿರುವಂತೆ ದಾನಗಳನ್ನು ಮಾಡಬೇಕು. ಅಲ್ಲಿ ಸ್ನಾನಮಾಡಿದರೆ ಮಹಾಪಾಪಗಳೂ ಹೋಗುತ್ತವೆ.

೩. ತಮ್ಮವರಿಗೂ ತಮಗೂ ಒಳ್ಳೆಯದಾಗಬೇಕೆನ್ನುವವರು ಅಲ್ಲಿ ಶ್ರಾದ್ಧವನ್ನು ಮಾಡಬೇಕು. ಹಾಗೆ ಮಾಡಿದರೆ ಅವರು ಪಿತೃಲೋಕದಲ್ಲಿ ವಾಸಮಾಡುವುದು ಖಂಡಿತವು.

ಯತ್ರ ವೈ ಸಾಗರೋ ದೇವೋ ನಿತ್ಯಂ ಮಿಲತಿ ಗಂಗಯಾ ।
ಬ್ರಹ್ಮಹಾ ತತ್ರ ಮುಚ್ಯೇತ ಕಿಮನ್ಯೈರಿತರೈರಘೈಃ ॥ ೪ ॥

ಯತ್ರ ತೀರ್ಥಂ ನ ಜಾನಂತಿ ಲೋಕಾ ವೈ ಮಂದಬುದ್ಧಯಃ ।
ತದಾ ವೈ ಮಮ ನಾಮ್ನಾ ಚ ಕರ್ತವ್ಯಂ ತೀರ್ಥಮುತ್ತಮಂ ॥ ೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಸಂಗಮಾಖ್ಯತೀರ್ಥ ವರ್ಣನಂ ನಾಮ ಷಟ್‌ಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪. ಅಲ್ಲಿ ಸಮುದ್ರರಾಜನು ಯಾವಾಗಲೂ ಗಂಗೆಯಿಂದ ಕೂಡಿ ಕೊಳ್ಳುತ್ತಿರುತ್ತಾನೆ. ಆದುದರಿಂದ ಅಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯೆಯು ಹೋಗುತ್ತದೆ.

೫. ಜನಗಳು ಗೊತ್ತಿಲ್ಲದೆ ಯಾವ ಜಾಗದಲ್ಲಿ ತೀರ್ಥವನ್ನು ಕಂಡುಹಿಡಿಯು ಲಾರರೋ ಅಲ್ಲಿ ನನ್ನ ಹೆಸರಿನಿಂದ ತೀರ್ಥವನ್ನು ಕಟ್ಟಿಸಿಕೊಳ್ಳಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ಸಂಗಮಾಖ್ಯತೀರ್ಥ ವರ್ಣನ ಎಂಬ ನೂರ ಅರವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

**ಸಂಗಮಸ್ಯ ಸಮೀಪೇ ತು ಸತ್ತೀರ್ಥಂ ಲೋಕವಿಶ್ರುತಂ |**
**ಆದಿತ್ಯಾಖ್ಯಂ ಪರಂ ತಸ್ಮಾನ್ನ ಭೂತಂ ನ ಭವಿಷ್ಯತಿ || ೧ ||**

**ಯಸ್ಯ ವೈ ದರ್ಶನಂ ಕಾರ್ಯಂ ಸ್ನಾನಂ ವೈ ಪುಷ್ಕರೇಣ ತು |**
**ಪೂಜನಂ ಚಾರ್ಕಪುಷ್ಪೇಣ ಕರವೀರೈಸ್ತಥಾ ಪುನಃ || ೨ ||**

---

### ನೂರ ಅರವತ್ತೇಳನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು-ಆ ಸಂಗಮದ ಹತ್ತಿರದಲ್ಲಿ ಸತ್ತೀರ್ಥವೆಂಬ ತೀರ್ಥವಿರುತ್ತದೆ. ಅದಕ್ಕಿಂತ ಮುಂದಕ್ಕೆ ಆದಿತ್ಯ ತೀರ್ಥವೆಂಬ ತೀರ್ಥವಿರುವುದು ಅಂತಹ ತೀರ್ಥವು ಹಿಂದೆಯೂ ಇರಲಿಲ್ಲ. ಮುಂದೆಯೂ ಉಂಟಾಗುವುದಿಲ್ಲ.

೨. ಅಲ್ಲಿರುವ ಆ ಪುಷ್ಕರ ಕೊಳದಲ್ಲಿ ಸ್ನಾನಮಾಡಿ ಆ ಆದಿತ್ಯಸ್ವಾಮಿಯ ದರ್ಶನವನ್ನು ಮಾಡಿ ಆ ಸ್ವಾಮಿಯನ್ನು ಎಕ್ಕದ ಹೂಗಳಿಂದಲೂ ಕಣಿಗಲಿಯ ಹೂಗಳಿಂದಲೂ ಪೂಜಿಸಬೇಕು.

ತತ್ರ ಶ್ರಾದ್ಧಂ ಚ ದಾನಂ ಚ ಕುರ್ಯುರ್ನಿತ್ಯಂ ಮಾನವಾಸ್ಸದಾ ।
ಇದಮಾದಿತ್ಯಕಂ ತೀರ್ಥಂ ಪವಿತ್ರಂ ಪಾಪನಾಶನಂ
ದರ್ಶನಾತ್ಪುಣ್ಯದಂ ತೀರ್ಥಂ ಮಹಾಪಾತಕಿನಾಮಪಿ ॥ ೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ಆದಿತ್ಯತೀರ್ಥ ವರ್ಣನಂ ನಾಮ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩. ಅಲ್ಲಿ ಮನುಷ್ಯರು ದಾನಗಳನ್ನೂ ಶ್ರಾದ್ಧವನ್ನೂ ಮಾಡಬೇಕು. ಈ ಆದಿತ್ಯತೀರ್ಥವು ಪವಿತ್ರವಾದುದು. ಪಾಪನಾಶಕವಾದುದು. ಇದನ್ನು ನೋಡುವುದರಿಂದಲೇ ಮಹಾಪಾಪಿಗಳಿಗೂ ಪುಣ್ಯವು ಬರುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತಿಯ ಮಹಿಮೆಯಲ್ಲಿ ಆದಿತ್ಯತೀರ್ಥ ವರ್ಣನ ಎಂಬ ನೂರ ಅರವತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಃ ||



**|| ಶ್ರೀ ಮಹಾದೇವ ಉವಾಚ ||**

**ತಸ್ಮಾತ್ತೀರ್ಥಾತ್ಪರಂ ತೀರ್ಥಂ ನೀಲಕಂಠೇತಿ ವಿಶ್ರುತಂ ।**
**ತಸ್ಯ ವೈ ದರ್ಶನಂ ಕಾರ್ಯಂ ಮುಕ್ತಿಂ ಚೈವೇಚ್ಛತಾ ಸದಾ || ೧ ||**

**ಬಿಲ್ವಪತ್ರೈಸ್ತಥಾ ಧೂಪೈಃ ದೀಪೈರ್ವಾಥ ಸುರೇಶ್ವರಿ ।**
**ವಾಂಛಿತಂ ಲಭತೇ ಮರ್ತ್ಯೋ ನೀಲಕಂಠಸ್ಯ ದರ್ಶನಾತ್ || ೨ ||**

---

## ನೂರ ಅರವತ್ತೆಂಟನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಆ ಆದಿತ್ಯ ತೀರ್ಥದಿಂದ ಮುಂದಕ್ಕೆ ನೀಲಕಂಠತೀರ್ಥವೆಂಬ ಪ್ರಸಿದ್ಧವಾದ ತೀರ್ಥವೊಂದಿರುವುದು. ಅದರ ದರ್ಶನವನ್ನು ಮಾಡಬೇಕು. ಅದರಿಂದ ಮುಕ್ತಿಯು ಬರುತ್ತದೆ.

೨. ಎಲೈ ಸುರೇಶ್ವರಿಯೇ! ಬಿಲ್ವಪತ್ರೆಯಿಂದಲೂ ಧೂಪದೀಪಗಳಿಂದಲೂ ಅಲ್ಲಿ ನೀಲಕಂಠಸ್ವಾಮಿಯನ್ನು ಪೂಜಿಸಿದರೆ ಇಷ್ಟವಾದುದನ್ನು ಹೊಂದುತ್ತಾನೆ.

ಉಪವಾಸಪರೋ ದೇವಿ ನಿರ್ಜನೇಸೌ ಸ್ಥಿತಸ್ಸದಾ ।
ಯದ್ಯದ್ವಾಂಛಂತಿ ಯೇ ಲೋಕಾಃ ತೇಷಾಂ ತತ್ತದ್ದದಾತಿ ಚ ।
ಕಲೌ ಸಾ ತು ತದಾ ದೇವಿ ವಿಖ್ಯಾತಾ ಕಾಶ್ಯಪೀತಿ ವೈ ॥ ೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ನೀಲಕಂಠತೀರ್ಥ ವರ್ಣನಂ
ನಾಮ ಅಷ್ಟಷಷ್ಟ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩. ಎಲೈ ದೇವಿಯೆ ! ಅಲ್ಲಿ ನಿರ್ಜನವಾದ ಪ್ರದೇಶದಲ್ಲಿ ಉಪವಾಸದಿಂದ ಇರಬೇಕು. ಹಾಗೆ ಮಾಡಿ ಪೂಜಿಸಿದರೆ ಯಾವಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಹೊಂದುತ್ತಾನೆ. ಕಲಿಯುಗದಲ್ಲಿ ಈ ನದಿಯು ಕಾಶ್ಯಪೀ ಎಂದು ಹೆಸರನ್ನು ಹೊಂದಿಕೊಂಡಿರುವುದು

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ನೀಲಕಂಠತೀರ್ಥ ವರ್ಣನ
ಎಂಬ ನೂರ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕೋನಸಪ್ತತ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಮಹಾದೇವ ಉವಾಚ ||

ದುರ್ಗಯಾ ಸಂಗತಾ ಯತ್ರ ದೇವಿ ಸಾಭ್ರಮತೀ ನದೀ ।
ಸಂಗಮಸ್ಸಾಗರೇಣಾಥ ಸ್ನಾನಂ ತತ್ರ ಸಮಾಚರೇತ್ || ೧ ||

ವೀತದೋಷಾ ಭವಿಷ್ಯಂತಿ ಕಲೌ ವೈ ನಾತ್ರ ಸಂಶಯಃ ।
ತತ್ರ ಶ್ರಾದ್ಧಂ ಪ್ರಕರ್ತವ್ಯಂ ದುರ್ಗಯಾ ಸಂಗಮೇ ತಥಾ || ೨ ||

ತತ್ರ ಗತ್ವಾ ವಿಶೇಷೇಣ ಬ್ರಾಹ್ಮಣಾನಾಂ ಚ ಭೋಜನಂ ।
ದಾನಂ ಗೋಮಹಿಷೀಣಾಂ ಚ ಕರ್ತವ್ಯಂ ವಿಧಿಪೂರ್ವಕಂ || ೩ ||

---

## ನೂರ ಅರವತ್ತೊಂಭತ್ತನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಈ ಸಾಭ್ರಮತಿಯು ದುರ್ಗೆಯೊಡನೆ ಸೇರಿಕೊಂಡು ಸಾಗರದೊಡನೆ ಸೇರಿಕೊಂಡಿದೆ. ಅಲ್ಲಿ ಹೋಗಿ ಸ್ನಾನವನ್ನು ಮಾಡಬೇಕು.

೨. ಈ ದುರ್ಗಾ ಸಂಗಮದಲ್ಲಿ ಸ್ನಾನಮಾಡಿದರೆ ಪಾಪವೆಲ್ಲವೂ ಹೋಗುತ್ತದೆ. ಕಲಿಯುಗದಲ್ಲಿ ಇದು ಬಹು ಪುಣ್ಯಕರವಾದುದು. ಸಂಶಯವಿಲ್ಲ. ಆ ದುರ್ಗಾ ಸಂಗಮದಲ್ಲಿ ಶ್ರಾದ್ಧವನ್ನು ಮಾಡಬೇಕು.

೩. ಅಲ್ಲಿ ಹೋಗಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಮತ್ತು ಹಸು ಎಮ್ಮೆಗಳನ್ನು ವಿಧಿವತ್ತಾಗಿ ದಾನಮಾಡಬೇಕು.

ಇಯಂ ಧನ್ಯಾ ಧನ್ಯತಮಾ ಪವಿತ್ರಾ ಪಾಪನಾಶಿನೀ ।
ಯಾಂ ದೃಷ್ಟ್ವಾ ಚಾಪಿ ಭೋ ದೇವಿ ಮುಚ್ಯಂತೇ ಪಾತಕೈರ್ನರಾಃ ॥ ೪ ॥

ಯಥಾ ಗಂಗಾ ತಥಾ ಚೇಯಂ ಜ್ಞೇಯಾ ಸಾಭ್ರಮತೀ ನದೀ ।
ಕಲೌ ದೇವಿ ವಿಶೇಷೇಣ ಬಹುಕಾಮಫಲಪ್ರದಾ ॥ ೫ ॥

ಯದಿ ಚೇಚ್ಛತಶೋ ಜಿಹ್ವಾ ಮುಖೇ ವೈ ಮಾಮಕೇ ಸತಿ ।
ತಸ್ಯಾ ಅಪಿ ನ ಶಕ್ನೋಮಿ ಗುಣಾನ್ ವಕ್ತುಂ ಕದಾಚನ ॥ ೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ದುರ್ಗಾಸಂಗಮತೀರ್ಥ ವರ್ಣನಂ ನಾಮ ಏಕೋನಸಪ್ತತಿಶತತಮೋಽಧ್ಯಾಯಸ್ಸಮಾಪ್ತಃ

---

೪. ಇದು ಬಹು ಧನ್ಯವಾದುದು. ಅತ್ಯಂತ ಧನ್ಯವಾದುದೆಂದೂ ಹೇಳಬೇಕು. ಪವಿತ್ರವಾದುದು. ಪಾಪನಾಶಕವೂ ಆದುದು. ಇದನ್ನು ನೋಡಿದರೆ ಮನುಷ್ಯರ ಪಾಪಗಳೆಲ್ಲವೂ ಹೋಗುತ್ತವೆ.

೫. ಗಂಗೆಯು ಯಾವ ರೀತಿಯಾಗಿ ಪುಣ್ಯಪ್ರದಳೋ ಹಾಗೆಯೇ ಈ ಸಾಭ್ರಮತಿಯೂ ಕೂಡ ಪುಣ್ಯಪ್ರದಳು. ಕಲಿಯುಗದಲ್ಲಿಯಂತೂ ಈ ನದಿಯು ಬಹುವಾದ ಪುಣ್ಯವನ್ನು ಕೊಡುತ್ತದೆ.

೬. ಎಲೈ ಪಾರ್ವತಿಯೇ ! ನನ್ನ ಮುಖದಲ್ಲಿ ಸಾವಿರ ಗಟ್ಟಲೆಯಾಗಿ ನಾಲಿಗೆಗಳಿದ್ದರೂ ಆಗಲೂ ಕೂಡ ಅದರ ಗುಣಗಳನ್ನು ಹೇಳಲು ನನಗೆ ಆಗುವುದಿಲ್ಲ

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ದುರ್ಗಾಸಂಗಮತೀರ್ಥ ವರ್ಣನ ಎಂಬ ನೂರ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ವ್ರತಂ ತ್ರೈಲೋಕ್ಯದುರ್ಲಭಂ ।
ಯಚ್ಛ್ರುತ್ವಾ ಮುಚ್ಯತೇ ಲೋಕೋ ಬ್ರಹ್ಮಹತ್ಯಾದಿ ಪಾತಕಾತ್ ॥ ೧ ॥

ಉತ್ಪತ್ತಿಃ ಸ್ವಪ್ರಕಾಶಸ್ಯ ಭಕ್ತಾನಾಂ ಸುಖಹೇತವೇ ।
ತಿಥಿರ್ವಾರೋಽಪಿ ಸ ಮಾಸೋ ವೈ ಸಂಜಾತಃ ಪುಣ್ಯಕಾರಣಾತ್ ॥ ೨ ॥

ಯಸ್ಯ ನಾಮ ಗೃಣನ್ದೇವಿ ಮುಕ್ತಿಂ ಲಭತಿ ಶಾಶ್ವತೀಂ ।
ಸ ಏವ ಪರಮಾತ್ಮಾ ಚ ಕಾರಣಾನಾಂ ಚ ಕಾರಣಂ ॥ ೩ ॥

---

## ನೂರ ಎಪ್ಪತ್ತನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಎಲೈ ದೇವಿಯೇ! ಮೂರು ಲೋಕದಲ್ಲಿಯೂ ದುರ್ಲಭವಾದ ವ್ರತವೊಂದನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳಿದರೇನೇ ಜನಗಳಿಗೆ ಬ್ರಹ್ಮಹತ್ಯಾದಿ ಪಾಪಗಳೂ ನಾಶವಾಗುತ್ತವೆ.

೨ ಸ್ವಪ್ರಕಾಶನಾದ ಆ ಸ್ವಾಮಿಯ ಉತ್ಪತ್ತಿಯೂ, ಆ ತಿಥಿಯೂ, ಆ ಮಾಸವೂ ಭಕ್ತರ ಪುಣ್ಯದಿಂದ ಭಕ್ತರಿಗೆ ಸುಖವನ್ನು ಕೊಡಲು ಉಂಟಾಗಿವೆ.

೩, ಆ ಸ್ವಾಮಿಯ ಹೆಸರನ್ನು ಹೇಳಿದರೇನೇ ನರನು ಶಾಶ್ವತವಾದ ಮುಕ್ತಿಯನ್ನು ಹೊಂದುತ್ತಾನೆ. ಅಂತಹ ಪರಮಾತ್ಮನು ಕಾರಣಗಳಿಗೆಲ್ಲಾ ಕಾರಣನಪ್ಪೆ!

ವಿಶ್ವಾತ್ಮಾ ವಿಶ್ವರೂಪೀ ಚ ಸರ್ವೇಷಾಂ ಭಗವಾನ್ ಪ್ರಭುಃ ।
ದ್ವಾದಶಾರ್ಕಾ ಧೃತಾ ಯೇನ ನೃಸಿಂಹೇನ ಮಹಾತ್ಮನಾ ।
ಸ ಏವ ಪ್ರಕಟೋ ಜಾತೋ ಭಕ್ತಾನಾಂ ಸಮಭೀಪ್ಸಯಾ ॥ ೪ ॥

॥ ಶ್ರೀ ಪಾರ್ವತ್ಯುವಾಚ ॥

ಅವತಾರಾಹ್ಯಸಂಖ್ಯಾತಾಃ ಕಥಿತಾಃ ಸುರಸತ್ತಮ ।
ನೃಸಿಂಹಾಖ್ಯಂ ಪರಂ ಧಾಮ ವದ ವಿಶ್ವೇಶ್ವರ ಪ್ರಭೋ ।
ಯೇನ ವಿಜ್ಞಾತಮಾತ್ರೇಣ ಲೋಕಸ್ಸುಖಮವಾಪ್ನುಯಾತ್ ॥ ೫ ॥

॥ ಶ್ರೀ ಮಹಾದೇವ ಉವಾಚ ॥

ಹಿರಣ್ಯಕಶಿಪುಂ ಹತ್ವಾ ದೇವದೇವಂ ಜಗದ್ಗುರುಂ ।
ಸುಖಾಸೀನಂ ತದುತ್ಸಂಗೇ ಸ್ಥಿತೋ ವಚನಮಬ್ರವೀತ್ ।
ಪ್ರಹ್ಲಾದೋ ಜ್ಞಾನಿನಾಂ ಶ್ರೇಷ್ಠಃ ಪಿತೃಹಂತಾರಮುತ್ತಮಂ ॥ ೬ ॥

---

೪. ಪ್ರಪಂಚವೇ ಆತ್ಮವೂ ಪ್ರಪಂಚರೂಪನೂ ಆಗಿ ಆ ಸ್ವಾಮಿಯು ಇರುವನು. ಅವನೇ ಎಲ್ಲರಿಗೂ ಒಡೆಯನು. ಅವನು ಒಂದು ಸಾರಿ ನೃಸಿಂಹಾವತಾರವನ್ನು ಮಾಡಿದನು. ಆ ನರಸಿಂಹನು ಹನ್ನೆರಡು ಜನ ಸೂರ್ಯರನ್ನೂ ತನ್ನ ಆಜ್ಞೆಯಲ್ಲಿಟ್ಟುಕೊಂಡು ಇರುವನು. ಅಂತಹ ಸ್ವಾಮಿಯು ನರಸಿಂಹ ರೂಪದಿಂದ ಭಕ್ತರಿಗೆ ಇಷ್ಟಾರ್ಥವನ್ನು ಕೊಡಲು ಅವತರಿಸಿದನು.

೫. ಶ್ರೀ ಪಾರ್ವತಿಯು ಹೇಳಿದಳು-ಎಲೈ ದೇವಶ್ರೇಷ್ಠನೇ ! ಅವತಾರಗಳು ಅನೇಕವಾಗಿವೆ. ಎಂದು ನೀನೇ ಹೇಳಿರುತ್ತೀಯೆ. ಅವುಗಳೊಳಗೆ ನೃಸಿಂಹಾವತಾರವೆಂಬುದು ಬಹು ಶ್ರೇಷ್ಠವಾದುದು. ಅದರ ವಿಷಯವನ್ನು ಹೇಳು. ಆ ವಿಷಯವನ್ನು ತಿಳಿದುಕೊಳ್ಳುವುದರಿಂದಲೇ ಲೋಕವು ಸುಖವನ್ನು ಹೊಂದುತ್ತದೆ.

೬. ಶ್ರೀ ಮಹಾದೇವನು ಹೇಳಿದನು– ದೇವದೇವನೂ ಜಗದ್ಗುರುವೂ ಆದ ನೃಸಿಂಹನು ಹಿರಣ್ಯಕಶಿಪುವನ್ನು ಕೊಂದು ಸುಖವಾಗಿ ಕುಳಿತಿರಲು ಅವನ ತೊಡೆಯಮೇಲೆ ಕುಳಿತಿದ್ದ ಜ್ಞಾನಿಗಳಲ್ಲಿ ಶ್ರೇಷ್ಠನಾದ ಪ್ರಹ್ಲಾದನು ಆ ಸ್ವಾಮಿಯನ್ನು ಕುರಿತು ಇಂತೆಂದು ಪ್ರಶ್ನಿಸಿದನು.

॥ ಪ್ರಹ್ಲಾದ ಉವಾಚ ॥

ನಮಸ್ತೇ ಭಗವನ್ವಿಷ್ಣೋ ನೃಸಿಂಹಾದ್ಭುತರೂಪಿಣೇ ।
ತ್ವದ್ಭಕ್ತೋಽಹಂ ಸುರಶ್ರೇಷ್ಠ ತ್ವಾಂ ಪೃಚ್ಛಾಮಿ ಚ ತತ್ತ್ವತಃ ॥ ೭ ॥

ಸ್ವಾಮಿನ್ ತ್ವಯಿ ಮಮಾಭಿನ್ನಾ ಭಕ್ತಿರ್ಜಾತಾ ಹ್ಯನೇಕಧಾ ।
ಕಥಂ ತೇಽಹಂ ಪ್ರಿಯೋ ಜಾತಃ ಕಾರಣಂ ವದ ಮೇ ಪ್ರಭೋ ॥ ೮ ॥

॥ ಶ್ರೀ ನೃಸಿಂಹ ಉವಾಚ ॥

ಕಥಯಾಮಿ ಮಹಾಪ್ರಾಜ್ಞ ಶೃಣುಷ್ವೈಕಾಗ್ರಮಾನಸಃ ।
ಭಕ್ತೇರ್ಯತ್ಕಾರಣಂ ವತ್ಸ ಪ್ರಿಯತ್ವಸ್ಯ ಚ ಯತ್ತ್ವನಃ ॥ ೯ ॥

ಪುರಾ ಕಸ್ಯ ದ್ವಿಜಸ್ಯಾಪಿ ಜಾತಸ್ತ್ವಂ ನಾಪ್ಯಧೀತವಾನ್ ।
ನಾಮ್ನಾ ತು ವಸುದೇವೋ ಹಿ ವೇಶ್ಯಾಯಾಮತಿಲಂಪಟಃ ॥ ೧೦ ॥

---

೭. ಪ್ರಹ್ಲಾದನು ಹೇಳಿದನು- ಎಲೈ ಭಗವಂತನೂ ಅದ್ಭುತರೂಪವುಳ್ಳವನೂ ಆದ ನರಸಿಂಹನೆ! ನಿನಗೆ ನಮಸ್ಕಾರವು. ನಾನು ನಿನಗೆ ಬಹಳ ಭಕ್ತನಾಗಿದ್ದೇನೆ. ಆದುದರಿಂದ ನಿನ್ನನ್ನು ಕಪಟವಿಲ್ಲದೆ ಕೇಳುತ್ತೇನೆ.

೮. ಸ್ವಾಮಿ! ನಿನ್ನಲ್ಲಿ ನನಗೆ ಅನೇಕ ರೀತಿಗಳಲ್ಲಿ ಏಕರೀತಿಯಾದ ಭಕ್ತಿಯುಂಟಾಗಿದೆ. ನಾನು ನಿನಗೆ ಪ್ರೀತಿಪಾತ್ರನಾಗುವುದಕ್ಕೆ ಕಾರಣವೇನು? ಅವನ್ನು ದಯವಿಟ್ಟು ಹೇಳು.

೯. ಶ್ರೀ ನೃಸಿಂಹನು ಹೇಳಿದನು-ಎಲೈ ವತ್ಸನೇ! ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು ನಿನಗೆ ನನ್ನಲ್ಲಿ ಭಕ್ತಿಯುಂಟಾಗುವುದಕ್ಕೂ ಪ್ರೀತಿಯುಂಟಾಗುವುದಕ್ಕೂ ಕಾರಣವನ್ನು ಹೇಳುತ್ತೇನೆ.

೧೦. ನೀನು ಹಿಂದಿನ ಜನ್ಮದಲ್ಲಿ ಒಬ್ಬ ಬ್ರಾಹ್ಮಣನ ಮಗನಾಗಿ ಹುಟ್ಟಿದ್ದೆ. ಆಗ ನಿನ್ನ ಹೆಸರು ವಸುದೇವನೆಂದಿದ್ದಿತು. ನೀನು ವೇದಾಧ್ಯಯನ ಮಾಡದೆ ಸೂಳೆಯರಲ್ಲಿ ಆಸಕ್ತನಾಗಿ ಅಯೋಗ್ಯನಾಗಿದ್ದೆ.

ತಸ್ಮಿನ್ ಜನ್ಮನಿ ನೈವಂ ಚ ಚಕಾರ ಸುಕೃತಂ ಕಿಯತ್ ।
ಭುಕ್ತ್ವಾ ಮಧು ಘೃತಂ ಚೈವ ವೇಶ್ಯಾಸಂಗಮಲಾಲಸಃ ।
ಮದ್ವ್ರತಸ್ಯ ಪ್ರಭಾವೇಣ ಭಕ್ತಿರ್ಜಾತಾ ತವಾಽನಘ ॥ ೧೧ ॥

॥ ಪ್ರಹ್ಲಾದ ಉವಾಚ ॥

ವಿಸ್ತರಾದ್ವದ ದೇವೇಶ ಕಸ್ಯ ಪುತ್ರೇಣ ಕಿಂ ವ್ರತಂ ।
ವೇಶ್ಯಾಯಾಂ ವರ್ತಮಾನೇನ ಕಥಂ ಚಿದ್ಧಿ ಕೃತಂ ಮಯಾ ।
ಮಮೋಪರಿ ಕೃಪಾಂ ಕೃತ್ವಾ ಸರ್ವಂ ಕಥಯ ಸಾಂಪ್ರತಂ ॥ ೧೨ ॥

॥ ಶ್ರೀ ನೃಸಿಂಹ ಉವಾಚ ॥

ಸೃಷ್ಟ್ಯರ್ಥಂ ತು ಪುರಾ ಬ್ರಹ್ಮಾ ಚಕ್ರೇ ಹ್ಯೇತದನುತ್ತಮಂ ।
ಮದ್ವ್ರತಸ್ಯ ಪ್ರಭಾವೇಣ ನಿರ್ಮಿತಂ ಸಚರಾಚರಂ ॥ ೧೩ ॥

ಈಶ್ವರೇಣ ವ್ರತಂ ಚೀರ್ಣಂ ವಧಾರ್ಥಂ ತ್ರಿಪುರಸ್ಯ ಚ ।
ವ್ರತಸ್ಯಾಽಸ್ಯ ಪ್ರಭಾವೇಣ ತ್ರಿಪುರಸ್ತು ನಿಪಾತಿತಃ ॥ ೧೪ ॥

---

೧೧. ಆ ಜನ್ಮದಲ್ಲಿ ನೀನು ಯಾವ ಪುಣ್ಯವನ್ನೂ ಮಾಡಲೇ ಇಲ್ಲ. ಒಳ್ಳೆ ಸ್ವಾದುವಾದ (ರುಚಿಕರವಾದ) ಪದಾರ್ಥಗಳನ್ನು ತಿನ್ನುತ್ತಾ ಜೇನು ತುಪ್ಪಗಳನ್ನು ವಿಶೇಷವಾಗಿ ಉತ್ತಮವಾದ ಕುಡಿಯುವ ಪದಾರ್ಥಗಳನ್ನೂ ಉಪಯೋಗಿಸುತ್ತಾ ವೇಶ್ಯೆಯರಲ್ಲಿ ಅತ್ಯಂತ ಅನುರಕ್ತನಾಗಿದ್ದೆ. ಆಗ ನನ್ನದೊಂದು ವ್ರತವನ್ನು ಮಾಡಿದ ಮಹಿಮೆಯಿಂದ ನನ್ನಲ್ಲಿ ನಿನಗೆ ಬಹುವಾದ ಭಕ್ತಿಯುಂಟಾಯಿತು.

೧೨. ಪ್ರಹ್ಲಾದನು ಹೇಳಿದನು- ಎಲೈ ದೇವೇಶನೆ ! ಯಾವನ ಮಗನಾಗಿದ್ದಾಗ ಯಾವ ವ್ರತವನ್ನು ಮಾಡಿದೆನು? ವೇಶ್ಯೆಯರಲ್ಲಿ ಆಸಕ್ತನಾಗಿದ್ದರೂ ಬಹು ಕಷ್ಟದಿಂದ ಮಾಡಿದೆನೆಂದು ಕಾಣುತ್ತದೆ. ಅವೆಲ್ಲವನ್ನೂ ದಯವಿಟ್ಟು ಈಗ ಹೇಳು.

೧೩. ಶ್ರೀ ನೃಸಿಂಹನು ಹೇಳಿದನು- ಪೂರ್ವದಲ್ಲಿ ಬ್ರಹ್ಮನು ಸೃಷ್ಟಿಮಾಡುವುದಕ್ಕೋಸ್ಕರ ನನ್ನ ವ್ರತವನ್ನು ಮಾಡಿದನು. ಈ ನನ್ನ ವ್ರತದ ಪ್ರಭಾವದಿಂದ ಚರಾಚರಗಳೆಲ್ಲವನ್ನೂ ನಿರ್ಮಿಸಿದನು.

೧೪. ಪೂರ್ವದಲ್ಲಿ ತ್ರಿಪುರನನ್ನು ವಧೆಮಾಡಲು ಈಶ್ವರನು ಈ ನನ್ನ ವ್ರತವನ್ನು ಮಾಡಿದನು. ಈ ವ್ರತದ ಪ್ರಭಾವದಿಂದ ತ್ರಿಪುರನನ್ನು ಕೊಂದನು.

ಅನ್ಯೈಶ್ಚ ಬಹುಭಿರ್ದೇವೈ ಋಷಿಭಿಶ್ಚ ಪುರಾತನೈಃ ।
ರಾಜಭಿಶ್ಚ ಮಹಾಪ್ರಾಜ್ಞೈರ್ವಿಹಿತಂ ವ್ರತಮುತ್ತಮಂ ॥ ೧೫ ॥

ವ್ರತಸ್ಯಾಸ್ಯ ಪ್ರಭಾವೇಣ ಸರ್ವಸಿದ್ಧಿಮವಾಪ್ನುಯುಃ ।
ಮಮ ತೇ ವೈ ಪ್ರಿಯಾ ಜಾತಾ ತ್ರೈಲೋಕ್ಯ ಸುಖಚಾರಿಣಃ ॥ ೧೬ ॥

ಪ್ರಹ್ಲಾದ ತೇನ ತೇ ಭಕ್ತಿರ್ಮಯಿ ಜಾತಾ ಹ್ಯನುತ್ತಮಾ ।
ಸಾ ವೇಶ್ಯಾ ಹ್ಯಪ್ಸರಾ ಜಾತಾ ದಿವಿ ಭೋಗಾನನೇಕಶಃ ॥ ೧೭ ॥

ಭುಕ್ತ್ವಾ ಮಯಿ ವಿಲೀನಾ ತು ಪ್ರಹ್ಲಾದ ತ್ವಂ ವಿಶಸ್ವ ಮಾಂ ।
ಕಾರ್ಯಾರ್ಥಮವತಾರಸ್ತೇ ಮಚ್ಛರೀರಾತ್ ಪೃಥಗ್ಗತಃ ॥ ೧೮ ॥

ವಿಹಾಯ ಸರ್ವಕಾರ್ಯಾಣಿ ಶೀಘ್ರಂ ಮಾಂ ಚ ಗಮಿಷ್ಯಸಿ ।
ಯ ಇದಂ ವ್ರತಮುಗ್ರ್ಯಂ ಚ ಪ್ರವಿಧಾಸ್ಯಂತಿ ಮಾನವಾಃ ॥ ೧೯ ॥

---

೧೫. ಇದೂ ಅಲ್ಲದೆ ಅನೇಕ ಜನ ದೇವತೆಗಳೂ, ಋಷಿಗಳೂ, ರಾಜರೂ, ಇನ್ನೂ ಅನೇಕ ಜನ ವಿವೇಕಿಗಳೂ ನನ್ನ ಈ ಉತ್ತಮವಾದ ವ್ರತವನ್ನು ಮಾಡಿದರು.

೧೬. ಈ ವ್ರತದ ಪ್ರಭಾವದಿಂದ ಎಲ್ಲಾ ಸಿದ್ಧಿಯನ್ನೂ ಹೊಂದುತ್ತಾರೆ. ಅಲ್ಲದೆ ಅವರು ನನಗೆ ಪ್ರೀತಿಪಾತ್ರರಾಗಿ ಮೂರು ಲೋಕದಲ್ಲಿಯೂ ಸಂಚರಿಸುವ ಮಹಿಮರಾಗುತ್ತಾರೆ.

೧೭-೨೦. ಎಲೈ ಪ್ರಹ್ಲಾದನೆ! ಆ ವ್ರತದ ಮಹಿಮೆಯಿಂದ ನಿನಗೆ ನನ್ನಲ್ಲಿ ಉತ್ತಮವಾದ ಭಕ್ತಿಯುಂಟಾಗಿದೆ. ಆ ಸೂಳೆಯೂ ಕೂಡ ಅಪ್ಸರಸ್ತ್ರೀಯಾಗಿ ಹುಟ್ಟಿ ಸ್ವರ್ಗದಲ್ಲಿ ಅನೇಕ ಭೋಗಗಳನ್ನು ಅನುಭವಿಸಿ ನನ್ನಲ್ಲಿ ಸೇರಿಕೊಂಡಳು. ನೀನೂ ಕೂಡ ನನ್ನಲ್ಲಿ ಸೇರಿಕೋ. ನನ್ನ ಶರೀರದಿಂದ ನಿನ್ನ ಅವತಾರವು ಬೇರೆಯಾಗಿ ಪ್ರಪಂಚದ ಕಾರ್ಯಕ್ಕೋಸ್ಕರವಾಗಿ ಬೇಕಾಗಿದೆ. ನೀನು ಎಲ್ಲವನ್ನೂ ಬಿಟ್ಟು ಜಾಗ್ರತೆಯಾಗಿ ನನ್ನಲ್ಲಿ ಸೇರಿಕೊಳ್ಳುತ್ತೀಯೆ! ಯಾವ ಮನುಷ್ಯರು ಈ ಉತ್ತಮವಾದ ವ್ರತವನ್ನು ಮಾಡುತ್ತಾರೆಯೋ ಅವರು ನೂರು ಮಹಾಕಲ್ಪಗಳು

ನ ತೇಷಾಂ ಪುನರಾವೃತ್ತಿರ್ಮಹಾಕಲ್ಪಶತೈರಪಿ ।
ದರಿದ್ರೋ ಲಭತೇ ಲಕ್ಷ್ಮೀಂ ಧನದಸ್ಯ ಚ ಯಾದೃಶೀ || ೨೦ ||

ತತಃ ಕಾಮೀ ಲಭೇತ್ಕಾಮಂ ರಾಜ್ಯಾರ್ಥೀ ರಾಜ್ಯಮುತ್ತಮಂ ।
ಆಯುಷ್ಕಾಮೋ ಲಭೇದಾಯು ರ್ಯಾದೃಶಂ ಚ ಶಿವಸ್ಯ ಹಿ || ೨೧ ||

ಅವೈಧವ್ಯಕರಂ ಸ್ತ್ರೀಣಾಂ ಪುತ್ರದಂ ಭಾಗ್ಯದಂ ತಥಾ ।
ಧನಧಾನ್ಯಕರಂ ಚೈವ ತಥಾ ಶೋಕವಿನಾಶನಂ || ೨೨ ||

ಸ್ತ್ರಿಯೋ ವಾ ಪುರುಷೋ ವಾಪಿ ಕುರ್ವಂತಿ ವ್ರತಮುತ್ತಮಂ ।
ತೇಭ್ಯೋ ದದಾಮ್ಯಹಂ ಸೌಖ್ಯಂ ಭುಕ್ತಿಂ ಮುಕ್ತಿಂ ಫಲಂ ತಥಾ || ೨೩ ||

ಬಹುನೋಕ್ತೇನ ಕಿಂ ವತ್ಸ ವ್ರತಸ್ಯಾಸ್ಯ ಫಲಸ್ಯ ಹಿ
ಮದ್ವ್ರತಸ್ಯ ಫಲಂ ವಕ್ತುಂ ನಾಹಂ ಶಕ್ತೋ ನ ಶಂಕರಃ || ೨೪ ||

---

ಕಳೆಯುವವರೆಗೂ ಮತ್ತೆ ಹುಟ್ಟುವುದಿಲ್ಲ ದರಿದ್ರನು ಕುಬೇರನ ಸಂಪತ್ತಿನಂತಿರುವ ಸಂಪತ್ತನ್ನು ಹೊಂದುತ್ತಾನೆ.

೨೧. ಕಾಮಿಯಾದವನು ಕಾಮವನ್ನೂ ರಾಜ್ಯಾಪೇಕ್ಷಿಯು ರಾಜ್ಯವನ್ನೂ ಆಯುಸ್ಸನ್ನು ಅಪೇಕ್ಷಿಸುವವನು ಶಿವನಿಗಿರುವಂತಹ ಆಯುಸ್ಸನ್ನೂ ಹೊಂದುವನು.

೨೨. ಈ ವ್ರತವನ್ನು ಹೆಂಗಸರು ಮಾಡಿದರೆ ಅವರಿಗೆ ಮುತ್ತೈದೆತನವೂ ಮಕ್ಕಳ ಪ್ರಾಪ್ತಿಯೂ ಭಾಗ್ಯದ ಅಭಿವೃದ್ಧಿಯೂ ಆಗುತ್ತವೆ. ಧನವನ್ನೂ ಧಾನ್ಯವನ್ನೂ ಕೊಡುತ್ತದಲ್ಲದೆ ಶೋಕವನ್ನೂ ನಾಶಮಾಡುತ್ತದೆ.

೨೩. ಹೆಂಗಸರಾಗಲಿ, ಗಂಡಸರಾಗಲಿ, ಈ ಉತ್ತಮವಾದ ವ್ರತವನ್ನು ಮಾಡಿದರೆ ಅವರಿಗೆ ಸುಖವನ್ನೂ ಭುಕ್ತಿಮುಕ್ತಿಗಳನ್ನೂ ಕೊಡುತ್ತೇನೆ

೨೪. ಎಲೈ ವತ್ಸನೇ! ಬಹಳ ಮಾತಿನಿಂದೇನು! ಈ ವ್ರತದಿಂದ ಬರುವ ಫಲವನ್ನು ನಾನಾಗಲಿ ಶಂಕರನಾಗಲಿ ಹೇಳುವುದಕ್ಕಾಗುವುದಿಲ್ಲ.

॥ ಪ್ರಹ್ಲಾದ ಉವಾಚ ॥

ಭಗವಂಸ್ತ್ವತ್ಪ್ರಸಾದೇನ ಶ್ರುತಂ ವ್ರತಮನುತ್ತಮಂ ।
ವ್ರತಸ್ಯಾಸ್ಯ ಫಲಂ ಶ್ರೋತುಂ ಭಕ್ತಿರ್ಮೇ ತ್ವಯಿ ಕಾರಣಂ ॥ ೨೫ ॥

ಅಧುನಾ ಶ್ರೋತುಮಿಚ್ಛಾಮಿ ವ್ರತಸ್ಯಾಸ್ಯ ವಿಧಿಂ ಪರಂ ।
ಕಸ್ಮಿನ್ಮಾಸೇ ಭವೇದ್ದೇವ ಕಸ್ಮಿಂಶ್ಚಿದ್ವಾಸರೇ ಪ್ರಭೋ ॥ ೨೬ ॥

ಏತದ್ವಿಸ್ತರತೋ ದೇವ ವಕ್ತುಮರ್ಹಸಿ ಸಾಂಪ್ರತಂ ।
ವಿಧಿನಾ ಯೇನ ವೈ ಸ್ವಾಮಿನ್ ಸಮಗ್ರಫಲಭಾಗ್ಭವೇತ್ ॥ ೨೭ ॥

॥ ಶ್ರೀ ನೃಸಿಂಹ ಉವಾಚ ॥

ಪ್ರಹ್ಲಾದ ವತ್ಸ ಭದ್ರಂ ತೇ ಶೃಣುಷ್ವೈಕಮನಾ ವ್ರತಂ ।
ವೈಶಾಖಸಿತಪಕ್ಷೇ ತು ಚತುರ್ದಶ್ಯಾಂ ಸಮಾಚರೇತ್ ॥ ೨೮ ॥

ಮಮಾವಿರ್ಭಾವಸಂಯುಕ್ತಾಂ ಮಮ ಸಂತುಷ್ಟಿಕಾರಣಂ ।
ಶೃಣು ಪುತ್ರ ಮಮೋತ್ಪತ್ತಿಂ ಭಕ್ತಾನಾಂ ಸುಖಹೇತವೇ ॥ ೨೯ ॥

---

೨೫. ಪ್ರಹ್ಲಾದನು ಹೇಳಿದನು–ಎಲೈ ಸ್ವಾಮಿಯೆ! ನಿನ್ನ ಅನುಗ್ರಹದಿಂದ ಈ ಉತ್ತಮವಾದ ವ್ರತವನ್ನು ತಿಳಿದೆನು. ಈ ವ್ರತಕ್ಕೆ ಫಲವನ್ನೂ ತಿಳಿದುಕೊಳ್ಳಬೇಕೆಂದು ನಿನ್ನಲ್ಲಿರುವ ಭಕ್ತಿಯು ನನ್ನನ್ನು ಪ್ರೇರೇಪಿಸುತ್ತದೆ.

೨೬. ಈ ವ್ರತದ ವಿಧಿಯನ್ನು ಕೇಳಲು ಅಪೇಕ್ಷಿಸುತ್ತೇನೆ. ಯಾವ ತಿಂಗಳಲ್ಲಿ ಯಾವ ದಿನದಲ್ಲಿ ಈ ವ್ರತವನ್ನು ಮಾಡಬೇಕು? ಅದನ್ನು ಹೇಳು.

೨೭. ಎಲೈ ಸ್ವಾಮಿಯೆ! ಇದನ್ನು ವಿಸ್ತಾರವಾಗಿ ಈಗ ನನಗೆ ಹೇಳು. ಅದರ ಪೂರ್ಣವಾದ ಫಲವನ್ನು ಹೊಂದಬೇಕಾದರೆ ಯಾವ ರೀತಿಯಾದ ವಿಧಿಯಿಂದ ಮಾಡಬೇಕು?

೨೮-೨೯. ಶ್ರೀ ನೃಸಿಂಹನು ಹೇಳಿದನು-ಎಲೈ ಪ್ರಹ್ಲಾದನೆ! ನಿನಗೆ ಮಂಗಳವಾಗಲಿ. ಈ ವ್ರತವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. ಇದನ್ನು ವೈಶಾಖ ಮಾಸದ ಶುದ್ಧ ಚತುರ್ದಶಿಯ ದಿವಸ ಮಾಡಬೇಕು. ಆದಿನ ನಾನು ಅವತರಿಸಿದ ದಿನವು. ಅದೇ ನನಗೆ ತೃಪ್ತಿಯನ್ನುಂಟುಮಾಡುತ್ತದೆ. ಭಕ್ತರಿಗೆ ಸುಖಕಾರಣವಾದ ನನ್ನ ಅವತಾರದ ಉತ್ಪತ್ತಿಯನ್ನು ಕೇಳು.

ಪಶ್ಚಿಮಾಯಾಂ ದಿಶಾಯಾಂ ಚ ಸಂಜಾತಂ ಕಾರಣಾಂತರಾತ್ |
ಮೌಳಿಸ್ನಾನಮಿದಂ ಕ್ಷೇತ್ರಂ ಪವಿತ್ರಂ ಪಾಪನಾಶನಂ ॥ ೩೦ ॥

ತಸ್ಮಿನ್ ಕ್ಷೇತ್ರೇ ತು ವಿಖ್ಯಾತೋ ಬ್ರಾಹ್ಮಣೋ ವೇದಪಾರಗಃ |
ಹಾರೀತ ಇತಿ ನಾಮ್ನಾ ಚ ಜ್ಞಾನಧ್ಯಾನಪರಾಯಣಃ ॥ ೩೧ ॥

ತಸ್ಯ ಸ್ತ್ರೀ ತು ಮಹಾಪುಣ್ಯಾ ಸತೀರೂಪಾ ಸದಾ ಪ್ರಭೋ |
ಲೀಲಾವತೀ ತು ನಾಮ್ನಾ ಚ ಭರ್ತುರ್ವಶಪರಾ ಸದಾ ॥ ೩೨ ॥

ತಾಭ್ಯಾಂ ತಪೋ ಮಹತ್ತಪ್ತಂ ಕಾಲಂ ಬಹುತರಂ ಸುತ |
ಏಕವಿಂಶದ್ಯುಗಾಶ್ಚೈವ ಯಾತಾಸ್ತತ್ರ ನ ಸಂಶಯಃ |
ತಸ್ಮಿನ್ ಕ್ಷೇತ್ರೇ ತು ವೈ ತಾಭ್ಯಾಂ ಪ್ರತ್ಯಕ್ಷೋ ಭಗವಾಂಸ್ತದಾ ॥ ೩೩ ॥

॥ ಶ್ರೀ ನೃಸಿಂಹ ಉವಾಚ ॥

ಯಂ ಯಂ ವಾಂಛಯಸೇ ಬ್ರಹ್ಮಂಸ್ತಂ ತಂ ದದ್ಮಿ ನ ಸಂಶಯಃ ॥ ೩೪ ॥

---

೩೦. ಪಶ್ಚಿಮದಿಕ್ಕಿನಲ್ಲಿ ಈ ನನ್ನ ಮೌಳಿಸ್ನಾನವೆಂಬ ಕ್ಷೇತ್ರವು ಉಂಟಾಗಿದೆ. ಇದು ಪವಿತ್ರವಾದುದು. ಪಾಪನಾಶಕವಾದುದು.

೩೧. ಈ ಕ್ಷೇತ್ರದಲ್ಲಿ ಹಾರೀತನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನು ವೇದಪಾರಗನು. ಜ್ಞಾನಿಯು. ಧ್ಯಾನದಲ್ಲಿ ಬಹು ಆಸಕ್ತನು.

೩೨. ಅವನಿಗೆ ಒಬ್ಬಳು ಹೆಂಡತಿಯಿದ್ದಳು. ಅವಳ ಹೆಸರು ಲೀಲಾವತಿ. ಪುಣ್ಯಶಾಲಿನಿ. ಪತಿವ್ರತೆ. ಸುಂದರಿ. ಯಾವಾಗಲೂ ಗಂಡನನ್ನು ಅನುಸರಿಸುತ್ತಿದ್ದಳು.

೩೩. ಆ ದಂಪತಿಗಳಿಬ್ಬರೂ ಬಹುಕಾಲದವರೆಗೆ ತಪಸ್ಸನ್ನು ಮಾಡುತ್ತಲಿದ್ದರು. ಹೀಗೆ ಇಪ್ಪತ್ತೊಂದು ಯುಗಗಳು ಕಳೆದುವು. ಆಗ ಆ ಕ್ಷೇತ್ರದಲ್ಲಿ ಸ್ವಾಮಿಯು ಅವರಿಗೆ ಪ್ರತ್ಯಕ್ಷನಾದನು.

೩೪. ಶ್ರೀ ನೃಸಿಂಹನು ಹೇಳಿದನು-ಎಲೈ ಬ್ರಾಹ್ಮಣನೆ! ನೀನು ಏನೇನನ್ನು ಕೇಳಿಕೊಳ್ಳುತ್ತೀಯೋ ಅವೆಲ್ಲವನ್ನೂ ಕೊಡುತ್ತೇನೆ. ಸಂಶಯ ಪಡಬೇಡ.

॥ ಶ್ರೀ ನೃಸಿಂಹ ಉವಾಚ ॥

ತಾಭ್ಯಾಮುಕ್ತಂ ತದಾ ತಸ್ಮೈ ದೀಯತೇ ಚೇದ್ವರೋ ಮಮ ।
ತ್ವಾದೃಶೋ ಮಮ ಪುತ್ರಸ್ತು ಹ್ಯಧುನೈವ ಭವತ್ವಿತಿ ॥ ೩೫ ॥

ಮಯೋಕ್ತಂ ತು ತದಾ ವತ್ಸ ಪುತ್ರೋಽಹಂ ತೇ ನ ಸಂಶಯಃ ।
ವಿಶ್ವಕರ್ಮಾ ಹ್ಯಹಂ ಸಾಕ್ಷಾತ್ಪರಮಾತ್ಮಾ ಪರಾತ್ಪರಃ ॥ ೩೬ ॥

ಉದರೇಽಹಂ ನ ವತ್ಸ್ಯಾಮಿ ಯತೋಽಹಂ ವೈ ಸನಾತನಃ ।
ಹಾರೀತೇನ ತದಾ ಚೋಕ್ತಂ ಭವತ್ವೇವಂ ನ ಸಂಶಯಃ ॥ ೩೭ ॥

ತದಾಪ್ರಭೃತಿ ವೈ ಕ್ಷೇತ್ರೇ ಸ್ಥಿತೋಽಹಂ ಭಕ್ತಕಾರಣಾತ್ ।
ಅತ್ರಾಗತ್ಯ ಪ್ರಕುರ್ವೀತ ದರ್ಶನಂ ಭಕ್ತಸತ್ತಮಃ ॥ ೩೮ ॥

ತಸ್ಯಾಹಂ ಸಕಲಾಂ ಬಾಧಾಂ ನಾಶಯಾಮಿ ನಿರಂತರಂ ।
ಏತಸ್ಮಾತ್ಕಾರಣಾಚ್ಚೈವ ವ್ರತಂ ವೈ ವಿಧಿಪೂರ್ವಕಂ ॥ ೩೯ ॥

---

೩೫. ನರಸಿಂಹನು ಹೇಳಿದನು-ಆಗ ಆ ಹಾರೀತನು ಎಲೈ ಸ್ವಾಮಿಯೆ! ನನಗೆ ವರವನ್ನು ಕೊಡುವ ಪಕ್ಷದಲ್ಲಿ ನಿನ್ನಂತಹ ಮಗನು ನನಗೆ ಈಗಲೇ ಆಗಬೇಕು.

೩೬-೩೯. ಆಗ ನರಸಿಂಹನು ಎಲೈ ವತ್ಸನೆ! ನಾನು ನಿನಗೆ ಮಗನಾಗುತ್ತೇನೆ. ಸಂಶಯವಿಲ್ಲ. ನಾನಾದರೋ ಪ್ರಪಂಚವನ್ನು ಸೃಷ್ಟಿ ಮಾಡುವವನು, ಪರಮಾತ್ಮನು, ಪರಾತ್ಪರನು, ಸನಾತನನು, ಆದುದರಿಂದ ನಿನ್ನ ಹೊಟ್ಟೆಯಲ್ಲಿ ನಾನು ವಾಸಿಸಲಾರೆನು. ಎನ್ನಲು ಹಾರೀತನು ಆಗ ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಅಂದಿನಿಂದ ಮೊದಲುಗೊಂಡು ಆ ಭಕ್ತನಿಗೋಸ್ಕರ ಈ ಕ್ಷೇತ್ರದಲ್ಲಿದ್ದೇನೆ. ಮನುಷ್ಯನಾದವನು ಈ ಸ್ಥಳಕ್ಕೆ ಬಂದು ನನ್ನ ದರ್ಶನವನ್ನು ಮಾಡಬೇಕು. ಅವನ ತೊಂದರೆಗಳನ್ನೆಲ್ಲಾ ನಾನು ಯಾವಾಗಲೂ ನಾಶಮಾಡುತ್ತೇನೆ. ಈ ಕಾರಣದಿಂದಲೇ ಇಲ್ಲಿ ವಿಧಿವತ್ತಾಗಿ ವ್ರತವನ್ನು ಮಾಡಬೇಕು.

ಯೇ ಕುರ್ವಂತಿ ನರಶ್ರೇಷ್ಠಾ ನ ತೇಷಾಂ ವಿದ್ಯತೇ ಭಯಂ ।
ಬಾಲರೂಪಮಯಂ ಧ್ಯಾತ್ವಾ ತಾಭ್ಯಾಂ ಸಹ ವಿಶೇಷತಃ ॥ ೪೦ ॥

ಪೂಜನಂ ಕುರುತೇ ರಾತ್ರೌ ಸ ವೈ ನಾರಾಯಣೋ ಭವೇತ್ ।
ಚತುರ್ಭುಜಂ ಮಹಾದಂಷ್ಟ್ರಂ ಕಾಲರೂಪಂ ದುರಾಸದಂ ॥ ೪೧ ॥

ಸೂರ್ಯಕೋಟಿಪ್ರತೀಕಾಶಂ ಯಮಕೋಟಿದುರಾಸದಂ ।
ಸಿಂಹವಚ್ಚ ಮುಖಂ ಯಸ್ಯ ನರವಚ್ಚಾಂಗಸಂಯುತಂ ॥ ೪೨ ॥

ಶ್ರೀನೃಸಿಂಹಂ ದಿವ್ಯಸಿಂಹಂ ಕಾಲರೂಪಂ ಭಜೇತ್ಸದಾ ।
ಏವಂ ಜ್ಞಾತ್ವಾ ವಿಶೇಷೇಣ ಯಃ ಸ್ಥಾನಂ ಮಾಮಕಂ ವ್ರಜೇತ್ ॥ ೪೩ ॥

ವ್ರತಂ ಪವಿತ್ರಂ ಪರಮಂ ಶ್ರೀಕದಂಬಪ್ರದಂ ಮಹತ್ ।
ಅಂತೇ ಮುಕ್ತಿಪ್ರದಂ ಚೈವ ಭಕ್ತಾನಾಂ ಚ ನ ಸಂಶಯಃ ॥ ೪೪ ॥

---

೪೦. ಈ ರೀತಿಯಾಗಿ ವ್ರತವನ್ನು ಮಾಡಿದವರಿಗೆ ಭಯವಿರುವುದಿಲ್ಲ. ಇಲ್ಲಿ ಮಗುವಾಗಿರುವ ಈ ನರಸಿಂಹನನ್ನು ಪೂಜಿಸಬೇಕು. ಈ ಪೂಜೆಯನ್ನು ರಾತ್ರಿಯಲ್ಲಿ ಮಾಡಬೇಕು. ಆಗ ಅವನು ಪ್ರತ್ಯಕ್ಷನಾರಾಯಣನೇ ಆಗುತ್ತಾನೆ.

೪೧-೪೪. ಹಾಗೆ ನಾವು ಧ್ಯಾನಿಸುವ ಆ ಮೂರ್ತಿಗೆ ನಾಲ್ಕು ತೋಳುಗಳಿರಬೇಕು. ದೊಡ್ಡ ಕೋರೆ ದಾಡೆ ಇರಬೇಕು. ಉಗ್ರವಾದ ರೂಪವಿರಬೇಕು ಕೋಟಿ ಸೂರ್ಯರಂತೆ ಪ್ರಕಾಶವಾಗಿರಬೇಕು. ಕೋಟಿ ಜನ ಯಮರಿಗೂ ಹೆಚ್ಚಿನವನಾಗಿರಬೇಕು. ಮುಖವು ಸಿಂಹದಂತಿರಬೇಕು. ಮಿಕ್ಕ ಅವಯವಗಳು ಮನುಷ್ಯರಂತಿರಬೇಕು. ದಿವ್ಯವಾದ ಇಂತಹ ಶ್ರೀ ನರಸಿಂಹನನ್ನು ಭಜಿಸಬೇಕು. ಈ ರೀತಿಯಾಗಿ ಭಜಿಸುತ್ತಾ ನನ್ನ ಈ ಕ್ಷೇತ್ರಕ್ಕೆ ಬಂದು ಯಾರು ಈ ಪವಿತ್ರವಾದ ಈ ವ್ರತವನ್ನು ಮಾಡುತ್ತಾರೆಯೋ ಅವರಿಗೆ ಸಂಪತ್ತುಗಳು ಗುಂಪು ಗುಂಪಾಗಿ ಬರುತ್ತವೆ. ಕೊನೆಗೆ ಆ ಭಕ್ತರು ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ.

ಯೇನ ಪ್ರೈ ಕ್ರಿಯಮಾಣೇನ ಸಹಸ್ರದ್ವಾದಶೀಫಲಂ ।
ಸ್ವಾತೀನಕ್ಷತ್ರಸಂಯೋಗೇ ಶನಿವಾರೇ ತು ತದ್ವ್ರತಂ ॥ ೪೫ ॥

ಸಿದ್ಧಯೋಗಸ್ಯ ಸಂಯೋಗೇ ವಣಿಜೇ ಕರಣೇ ತಥಾ ।
ಯೋಗೈಸ್ಸರ್ವೈಶ್ಚ ಸಂಯೋಗಂ ಹತ್ಯಾಕೋಟಿವಿನಾಶನಂ ॥ ೪೬ ॥

ಏತದನ್ಯತರೇ ಯೋಗೇ ಮದ್ದಿನಂ ಪಾಪನಾಶನಂ ।
ವಿಜ್ಞಾಯ ಮದ್ದಿನಂ ಯಸ್ತು ಲಂಘಯೇತ್ಸ ತು ಪಾಪಕೃತ್ ॥ ೪೭ ॥

ಅಕರ್ತಾ ನರಕಂ ಯಾತಿ ಯಾವಚ್ಚಂದ್ರದಿವಾಕರೌ ।
ಪ್ರಾಪ್ತೇ ಮಮ ದಿನೇ ವತ್ಸ ದಂತಧಾವನಪೂರ್ವಕಂ ॥ ೪೮ ॥

ಮಮಾಗ್ರೇ ವ್ರತಸಂಕಲ್ಪಂ ಮದ್ಭಕ್ತೋ ವಿಜಿತೇಂದ್ರಿಯಃ ।
ಅದ್ಯಾಹಂ ತೇ ವಿಧಾಸ್ಯಾಮಿ ವ್ರತಂ ನಿರ್ವಿಘ್ನತಾಂ ನಯ ॥ ೪೯ ॥

---

೪೫-೪೬. ಶನಿವಾರ ಸ್ವಾತೀನಕ್ಷತ್ರ ಬಂದಾಗ ಈ ನನ್ನ ವ್ರತವನ್ನು ಮಾಡಿದರೆ ಸಾವಿರ ದ್ವಾದಶೀ ವ್ರತಗಳನ್ನು ಮಾಡಿದ ಫಲವು ಬರುತ್ತದೆ. ಶನಿವಾರ ಸ್ವಾತೀನಕ್ಷತ್ರ ಸಿದ್ಧಯೋಗ ವಣಿಕ್ ಕರಣ ಇವೆಲ್ಲವೂ ಸೇರಿದ ದಿವಸ ಈ ವ್ರತವನ್ನು ಮಾಡಿದರೆ ಕೋಟಿಹತ್ಯೆಗಳನ್ನು ಮಾಡಿದ್ದರೂ ಆ ಪಾಪಗಳು ಹೋಗುತ್ತವೆ. ಹತ್ಯಾಕೋಟಿಗಳನ್ನು ನಾಶಮಾಡುವಷ್ಟು ಫಲವೂ ಬರುತ್ತದೆ.

೪೭. ಇವುಗಳಲ್ಲಿ ಎಲ್ಲವೂ ಸೇರದಿದ್ದರೂ ಕೆಲ ಕೆಲವಾದರೂ ಸೇರಿದ್ದಾಗ ಈ ವ್ರತವನ್ನು ಮಾಡಿದರೆ ಪಾಪಗಳು ಹೋಗುತ್ತವೆ. ನನ್ನ ಈ ಯೋಗಗಳು ಬಂದ ದಿನವನ್ನು ತಿಳಿದೂ ಯಾವನು ಈ ವ್ರತವನ್ನು ಆಚರಿಸುವುದಿಲ್ಲವೋ ಅವನು ಪಾಪಿಯು.

೪೮-೪೯. ಈ ವ್ರತವನ್ನು ಮಾಡದಿರತಕ್ಕವನು ಚಂದ್ರ ಸೂರ್ಯರಿರುವವರೆಗೂ ನರಕವನ್ನು ಹೊಂದುತ್ತಾನೆ ನನ್ನ ವ್ರತದ ದಿನವು ಬಂದಾಗ ಹಲ್ಲುಜ್ಜಿ ಮುಖವನ್ನು ತೊಳೆದುಕೊಂಡು ಜಿತೇಂದ್ರಿಯನಾಗಿ ನನ್ನ ಎದುರಿಗೇನೇ " ನಾನು ಈಗ ನಿನ್ನ ವ್ರತವನ್ನು ಮಾಡುತ್ತೇನೆ ಅದನ್ನು ನಿರ್ವಿಘ್ನವಾಗಿ ಪೂರ್ತಿಮಾಡು " ಎಂದು ಸಂಕಲ್ಪವನ್ನು ಮಾಡಬೇಕು.

ವ್ರತಸ್ಥೇನ ನ ಕರ್ತವ್ಯಂ ದುಷ್ಟಸಂಭಾಷಣಾದಿಕಂ ।
ತತೋ ಮಧ್ಯಾಹ್ನಸಮಯೇ ನದ್ಯಾದೌ ವಿಮಲೇ ಜಲೇ ॥ ೫೦ ॥

ಗೃಹೇ ವಾ ದೇವಖಾತೇ ವಾ ತಡಾಗೇ ವಾಥ ಶೋಭನೇ ।
ವೈದಿಕೇನ ತು ಮಂತ್ರೇಣ ಸ್ನಾನಂ ಕುರ್ಯಾದ್ವಿಚಕ್ಷಣಃ ॥ ೫೧ ॥

ಮೃತ್ತಿಕಾಗೋಮಯೇನೈವ ತಥಾ ಧಾತ್ರೀಫಲೇನ ಚ ।
ತಿಲೈಶ್ಚ ವಿಧಿವತ್ ಸ್ನಾಯಾತ್ ಸರ್ವಪಾಪೌಘಶಾಂತಯೇ ॥ ೫೨ ॥

ಪರಿಧಾಯ ಶುಭೇ ವಸ್ತ್ರೇ ನಿತ್ಯಕರ್ಮ ಸಮಾಚರೇತ್ ।
ತತೋ ಗೃಹಂ ವಿಲಿಪ್ಯಾಥ ಕುರ್ಯಾದಷ್ಟದಳಂ ಶುಭಂ ॥ ೫೩ ॥

ಕಲಶಂ ತತ್ರ ಸಂಸ್ಥಾಪ್ಯ ತಾಮ್ರಂ ರತ್ನಸಮನ್ವಿತಂ ।
ತಸ್ಯೋಪರಿ ನ್ಯಸೇತ್ಪಾತ್ರಂ ತಂಡುಲೈಃ ಪರಿಪೂರಿತಂ ॥ ೫೪ ॥

---

೫೦-೫೧. ವ್ರತವನ್ನು ಹಿಡಿದಿರತಕ್ಕವನು ದುಷ್ಟರೊಡನಾಗಲಿ ಪತಿತರೊಡನಾಗಲಿ ಮಾತಾಡಬಾರದು. ಆಮೇಲೆ ಮಧ್ಯಾಹ್ನದ ಸಮಯದಲ್ಲಿ ಒಳ್ಳೆಯ ನೀರುಳ್ಳ ನದಿಯಲ್ಲಾಗಲೀ ಮಡುಗಳಲ್ಲಿಯಾಗಲಿ ಕೆರೆಯಲ್ಲಾಗಲೀ ಕೊನೆಗೆ ಮನೆಯಲ್ಲಾಗಲೀ ವೇದದಲ್ಲಿ ಹೇಳಿರುವ ಮಂತ್ರಗಳನ್ನು ಹೇಳಿಕೊಂಡು ಸ್ನಾನ ಮಾಡಬೇಕು.

೫೨. ಸ್ನಾನಮಾಡುವಾಗ ಮಣ್ಣನ್ನಾಗಲೀ ಹಸುವಿನ ಸಗಣಿಯನ್ನಾಗಲೀ ನೆಲ್ಲಿಯ ಕಾಯನ್ನಾಗಲೀ ಎಳ್ಳನ್ನಾಗಲೀ ಮೈಗೆ ತಿಕ್ಕಿಕೊಂಡು ಸ್ನಾನಮಾಡಬೇಕು. ಹಾಗೆ ಮಾಡಿದರೆ ಪಾಪಗಳೆಲ್ಲವೂ ಹೋಗುತ್ತವೆ.

೫೩. ಅನಂತರ ಮಡಿ ಬಟ್ಟೆಗಳನ್ನು ಹಾಕಿಕೊಂಡು ದಿನಚರಿಯಾದ ಸಂಧ್ಯಾವಂದನೆ ಮುಂತಾದುವುಗಳನ್ನು ಮಾಡಬೇಕು. ಆಮೇಲೆ ಮನೆಯನ್ನು ಸಾರಿಸಿ ವ್ರತಮಾಡಬೇಕಾದ ಸ್ಥಳದಲ್ಲಿ ಎಂಟುದಳ ಕಮಲವನ್ನು ಬರೆಯಬೇಕು

೫೪. ಆ ಅಷ್ಟದಳದ ಪದ್ಮದಮೇಲೆ ತಾಮ್ರದ ಕಲಶವನ್ನು ಇಡಬೇಕು. ಅದರೊಳಕ್ಕೆ ಪಂಚರತ್ನಗಳನ್ನು ಹಾಕಬೇಕು. ಸಾರಿಸಿದ ಜಾಗದಲ್ಲಿ ಅಕ್ಕಿಯನು ಹಾಕಿ ಅದರ ಮೇಲೆ ಕಲಶವನ್ನಿಡಬೇಕು.

ಹೈಮೀಂ ಚ ತತ್ರ ನೃಮೂರ್ತಿಂ ಸ್ಥಾಪ್ಯ ಲಕ್ಷ್ಮ್ಯಾ ಸಮನ್ವಿತಂ ।
ನಿರ್ಮಾಯ ಶಕ್ತ್ಯಾ ಸ್ವರ್ಣೇನ ಸ್ನಾಪ್ಯ ಪಂಚಾಮೃತೈಸ್ತತಃ ॥ ೫೫ ॥

ತತೋ ಬ್ರಾಹ್ಮಣಮಾಹೂಯ ಆಚಾರ್ಯಂ ನಾಽತಿಲೋಲುಪಂ ।
ಶಾಸ್ತ್ರಜ್ಞಮಗ್ರತಃ ಕೃತ್ವಾ ತತೋ ದೇವಂ ಸಮರ್ಚಯೇತ್ ॥ ೫೬ ॥

ಮಂಟಪಂ ಕಾರಯೇತ್ತತ್ರ ಪುಷ್ಪಸ್ತಬಕಶೋಭಿತಂ ।
ಋತುಕಾಲೋದ್ಭವೈಃ ಪುಷ್ಪೈಃ ಪೂಜ್ಯೋಽಹಂ ಚ ಯಥಾವಿಧಿ ॥ ೫೭ ॥

ಉಪಚಾರೈಷ್ಷೋಡಶಭಿಃ ಮನ್ಮಂತ್ರೈರ್ನಿಯಮೈಶ್ಚ ಯಃ ।
ತತಃ ಪೌರಾಣಿಕೈರ್ಮಂತ್ರೈಃ ಪೂಜನೀಯೋ ವಿಶೇಷತಃ ॥ ೫೮ ॥

ಚಂದನಂ ಚ ಸಕರ್ಪೂರಂ ಘನಕುಂಕುಮಮಿಶ್ರಿತಂ ।
ಕಾಲೋದ್ಭವಾನಿ ಪುಷ್ಪಾಣಿ ತಥಾ ತುಳಸೀದಳಾನಿ ಚ ॥ ೫೯ ॥

---

೫೫. ತನ್ನ ಶಕ್ತಿಗನುಗುಣವಾಗಿ ಚಿನ್ನದ ನರಸಿಂಹ ಪ್ರತಿಮೆಯನ್ನೂ ಲಕ್ಷ್ಮಿಯ ಪ್ರತಿಮೆಯನ್ನೂ ಮಾಡಿಸಬೇಕು. ಅದನ್ನು ಆ ಕಲಶದ ಮೇಲಿಟ್ಟು ಪಂಚಾಮೃತಗಳಿಂದ ಸ್ನಾನಮಾಡಿಸಬೇಕು.

೫೬. ಆಮೇಲೆ ಬಹುವಾದ ಆಸೆಯಿಲ್ಲದಿರುವ ಬ್ರಾಹ್ಮಣನನ್ನು ಕರೆದು ಅವನನ್ನು ಆಚಾರ್ಯನನ್ನಾಗಿ ವರಿಸಬೇಕು. ಅವನು ಶಾಸ್ತ್ರವನ್ನು ಬಲ್ಲವನಾಗಿರಬೇಕು. ಅನಂತರ ಅವನನ್ನು ಮುಂದು ಮಾಡಿಕೊಂಡು ವ್ರತವನ್ನು ಪ್ರಾರಂಭಿಸಬೇಕು.

೫೭. ಹೂವಿನ ಗೊಂಚಲು ಮುಂತಾದುವನ್ನು ಕಟ್ಟಿ ಅಲ್ಲಿ ಮಂಟಪವನ್ನು ಕಟ್ಟಬೇಕು. ಅನಂತರ ಆ ಋತುವಿನಲ್ಲಿ ಹುಟ್ಟುವ ಹೂವೆಲ್ಲವನ್ನೂ ತಂದು ಸ್ವಾಮಿಯನ್ನು ಪೂಜಿಸಬೇಕು.

೫೮. ಸ್ವಾಮಿಯ ಸಂಬಂಧವಾದ ಮಂತ್ರಗಳನ್ನು ಹೇಳಿಕೊಂಡು ಷೋಡಶೋಪಚಾರಗಳಿಂದಲೂ ಅನಂತರ ಪುರಾಣೋಕ್ತವಾದ ಮಂತ್ರಗಳಿಂದಲೂ ಪೂಜಿಸಬೇಕು.

೫೯-೬೨. ಚಂದನ, ಪಚ್ಚಕರ್ಪೂರ, ಕುಂಕುಮಕೇಸರಿಗಳಿಂದಲೂ ಆ ಕಾಲದ ಹೂಗಳಿಂದಲೂ ತುಳಸಿಯ ದಳಗಳಿಂದಲೂ ಆ ನೃಸಿಂಹನನ್ನು ಪೂಜಿ

ಶ್ರೀನೃಸಿಂಹಾಯ ಯೋ ದದ್ಯಾತ್ ಸ ಮುಕ್ತೋ ನಾಽತ್ರ ಸಂಶಯಃ ।
ಕೃಷ್ಣಾಽಗರುಮಯಂ ಧೂಪಂ ಸರ್ವದಾ ಹರಿವಲ್ಲಭಂ ॥ ೬೦ ॥

ಹರಯೇ ಗುರವೇ ದದ್ಯಾತ್ ಸರ್ವಕಾಮಾರ್ಥಸಿದ್ಧಯೇ ।
ಮಹಾದೀಪಃ ಪ್ರಕರ್ತವ್ಯೋ ಹ್ಯಜ್ಞಾನಧ್ವಾಂತನಾಶನಃ ॥ ೬೧ ॥

ಮಹಾನೀರಾಜನಂ ಕುರ್ಯಾತ್ ಘಂಟಾನಾದಪುರಸ್ಸರಂ ।
ನೈವೇದ್ಯಂ ಶರ್ಕರಾಂ ಚಾಪಿ ಭಕ್ಷ್ಯಭೋಜ್ಯಸಮನ್ವಿತಂ ।
ದದಾಮಿ ತೇ ರಮಾಕಾಂತ ಸರ್ವಪಾಪಕ್ಷಯಂ ಕುರು ॥ ೬೨ ॥

॥ ಇತಿ ನೈವೇದ್ಯ ಮಂತ್ರಃ ॥

ನೃಸಿಂಹಾಚ್ಯುತ ದೇವೇಶ ಲಕ್ಷ್ಮೀಕಾಂತ ನಮೋಸ್ತು ತೇ ।
ಅನೇನಾರ್ಘ್ಯ ಪ್ರದಾನೇನ ಸರ್ವಕಾಮಾರ್ಥಸಿದ್ಧಯೇ ॥ ೬೩ ॥

ಅನೇನೈವ ವಿಧಾನೇನ ಸಫಲಾಸ್ಯುರ್ಮನೋರಥಾಃ ।
ನೃಸಿಂಹ ತವ ದೇವೇಶ ತವ ಜನ್ಮದಿನೇ ಶುಭೇ ॥ ೬೪ ॥

---

ಮಾಡಿದವನು ಮುಕ್ತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಕೃಷ್ಣಾಗರು ಧೂಪವು ಹರಿಗೆ ಪ್ರೀತಿಕರವಾದುದು. ಅದನ್ನು ಹರಿಗೆ ಸಮರ್ಪಿಸಿದರೆ ಇಷ್ಟಾರ್ಥಗಳೆಲ್ಲವೂ ನೆರವೇರುತ್ತವೆ. ಆ ಸ್ವಾಮಿಗೆ ಒಂದು ದೊಡ್ಡ ದೀಪವನ್ನು ಹತ್ತಿಸಬೇಕು. ಅದು ಅಜ್ಞಾನವನ್ನು ನಾಶಮಾಡುತ್ತದೆ ಅನಂತರ ಘಂಟಾನಾದವನು! ಮಾಡುತ್ತ ಮಂಗಳಾರತಿಯನ್ನು ಮಾಡಬೇಕು. ಅನಂತರ ಭಕ್ಷ್ಯಭೋಜ್ಯಗಳಿಂದ ಕೂಡಿದ ಮಹಾಮಂಗಳಾರತಿಯನ್ನು ಮಾಡಬೇಕು. ಎಲೈ ಸ್ವಾಮಿಯೆ! ಇವನ್ನು ನಿನಗೆ ನಿವೇದನ ಮಾಡುತ್ತೇನೆ. ಪಾಪಗಳನ್ನೆಲ್ಲಾ ನಾಶಮಾಡು. ಎಂದು ಕೇಳಿಕೊಳ್ಳಬೇಕು. ಇದು ನೈವೇದ್ಯ ಮಂತ್ರವು.

೬೩-೬೫. ಎಲೈ ನೃಸಿಂಹನೆ! ದೇವೇಶನೇ! ಲಕ್ಷ್ಮೀಕಾಂತನೇ! ನಿನಗೆ ನಮಸ್ಕಾರವು. ಇವನ್ನು ಈಗ ನಾನು ನಿನಗೆ ಕೊಟ್ಟಿರುವುದರಿಂದ ಎಲ್ಲಾ ಇಷ್ಟಾರ್ಥಗಳೂ ಸಿದ್ಧಿಸಲಿ. ಹೀಗೆಂದು ಹೇಳಬೇಕು. ಈ ರೀತಿ ಮಾಡಿದರೆ ನಮ್ಮ ಮನೋರಥಗಳು ಸಿದ್ಧಿಸುತ್ತವೆ ಎಲೈ ನೃಸಿಂಹನೆ! ನೀನು ಅವತರಿಸಿದ ಈ

ಉಪವಾಸಂ ಕರಿಷ್ಯಾಮಿ ಸರ್ವಭೋಗವಿವರ್ಜಿತಂ ।
ತೇನ ಪ್ರೀತೋ ಭವ ಸ್ವಾಮಿನ್ ಪಾಪಂ ಜನ್ಮ ನಿರಾಕುರು ॥ ೬೫ ॥

ರಾತ್ರೌ ಜಾಗರಣಂ ಕಾರ್ಯಂ ಗೀತವಾದಿತ್ರನಿಸ್ವನೈಃ ।
ಪುರಾಣಪಠನಂ ನಿತ್ಯಂ ಶ್ರೀನೃಸಿಂಹಕಥಾಶ್ರಯಂ ॥ ೬೬ ॥

ತತಃ ಪ್ರಭಾತಸಮಯೇ ಸ್ನಾನಂ ಕೃತ್ವಾ ಹ್ಯನಂತರಂ ।
ಪೂರ್ವೋಕ್ತೇನ ವಿಧಾನೇನ ಪೂಜಯೇನ್ಮಾಂ ಪ್ರತರ್ಪಯನ್ ॥ ೬೭ ॥

ವೈಷ್ಣವಂ ಕಾರಯೇಚ್ಛ್ರಾದ್ಧಂ ಮದಗ್ರೇ ಸ್ವಸ್ಥಮಾನಸಃ ।
ತತೋ ದಾನಾನಿ ದೇಯಾನಿ ವಕ್ಷ್ಯಮಾಣಾನಿ ಯಾನ್ಯುತ ॥ ೬೮ ॥

ಪಾತ್ರೇಭ್ಯಃ ಸದ್ವಿಜೇಭ್ಯೋ ಹಿ ಲೋಕದ್ವಯಜಿಗೀಷಯಾ ।
ಸ ಹಿ ಸ್ವರ್ಣಮಯೋ ದೇವಃ ಮಮ ಸಂತೋಷಕಾರಕಃ ॥ ೬೯ ॥

---

ಈ ದಿನವಲ್ಲಿ ಭೋಗಗಳೊಂದನ್ನೂ ಅನುಭವಿಸದೆ ಉಪವಾಸವನ್ನು ಮಾಡುತ್ತೇನೆ. ಇದರಿಂದ ನೀನು ಪ್ರೀತನಾಗು. ನನ್ನ ಪಾಪವನ್ನೂ ನಾಶಮಾಡು. ಮತ್ತು ನನಗೆ ಜನ್ಮಬಾರದಂತೆಯೂ ಮಾಡು. ಎಂದೆನ್ನಬೇಕು.

೬೬. ರಾತ್ರಿಯಲ್ಲಿ ಗೀತವಾದ್ಯಗಳನ್ನು ಮಾಡುತ್ತ ಜಾಗರಣೆಯನ್ನು ಮಾಡಬೇಕು. ಮತ್ತು ಆ ನರಸಿಂಹನ ಸಂಬಂಧವಾದ ಪುರಾಣಗಳನ್ನು ಕೇಳುತ್ತ ಓದುತ್ತಲಿರಬೇಕು.

೬೭. ಆಮೇಲೆ ಬೆಳಗ್ಗೆ ಎದ್ದು ಸ್ನಾನಮಾಡಿ ಹಿಂದಿನ ದಿವಸದಂತೆ ಪೂಜಿಸಿ ತರ್ಪಣಮಾಡಬೇಕು.

೬೮-೬೯. ಅನಂತರ ವೈಷ್ಣವರನ್ನು ಕರೆದು ವಿಷ್ಣು ಪ್ರೀತ್ಯರ್ಥವಾಗಿ ಸಂತರ್ಪಣೆ ಮಾಡಬೇಕು. ಅನಂತರ ಮುಂದೆ ಹೇಳುವ ದಾನಗಳನ್ನು ಯೋಗ್ಯರಾದ ಬ್ರಾಹ್ಮಣರಿಗೆ ಕೊಡಬೇಕು. ಹಾಗೆ ಕೊಟ್ಟರೆ ಇಹಪರಗಳಲ್ಲಿ ಅವನಿಗೆ ಸುಖವಾಗುತ್ತದೆ. ಆ ಚಿನ್ನದ ಪ್ರತಿಮೆಯ ರೂಪವಾದ ದೇವನು ಸಂತೋಷವನ್ನುಂಟುಮಾಡುತ್ತಾನೆ.

ಗೋಭೂತಿಲಹಿರಣ್ಯಾದಿ ಪ್ರದದಾತಿ ದ್ವಿಜಾತಯೇ ।
ಶಯ್ಯಾ ಸತೂಲಿಕಾ ದೇಯಾ ಸಪ್ತಧಾನ್ಯಸಮನ್ವಿತಾ ॥ ೭೦ ॥

ಅನ್ಯಾನಿ ಚ ಯಥಾಶಕ್ತಿ ದೇಯಾನಿ ನಿಜಶಕ್ತಿತಃ ।
ವಿತ್ತಶಾಠ್ಯಂ ನ ಕುರ್ವೀತ ಯಥೋಕ್ತಫಲಕಾಂಕ್ಷಯಾ ॥ ೭೧ ॥

ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ತೇಭ್ಯೋ ದದ್ಯಾತ್ಸುದಕ್ಷಿಣಾಂ ।
ನಿರ್ಧನೈರಪಿ ಕರ್ತವ್ಯಂ ದೇಯಂ ಶಕ್ತ್ಯನುಸಾರತಃ ॥ ೭೨ ॥

ಸರ್ವೇಷಾಮೇವ ವರ್ಣಾನಾಮಧಿಕಾರೋಽಸ್ತಿ ಮದ್ವ್ರತೇ
ಮದ್ಭಕ್ತೈಸ್ತು ವಿಶೇಷೇಣ ಕರ್ತವ್ಯಂ ಮತ್ಪರಾಯಣೈಃ ॥ ೭೩ ॥

॥ ತತಃ ಪ್ರಾರ್ಥನಾಮಂತ್ರಃ ॥

ಮದ್ವಂಶೇ ಯೇ ನರಾ ಜಾತಾ ಯೇ ಭವಿಷ್ಯಾಶ್ಚ ಮಾನವಾಃ ।
ತಾನುದ್ಧರಸ್ವ ದೇವೇಶ ದುಃಖದ್ಭವಸಾಗರಾತ್ ॥ ೭೪ ॥

---

೭೦-೭೧. ಗೋವು, ಭೂಮಿ, ಎಳ್ಳು, ಚಿನ್ನ, ಇವೇ ಮುಂತಾದುವನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಹತ್ತಿಯ ಸುಪ್ಪತ್ತಿಗೆಯ ಹಾಸಿಗೆಯನ್ನೂ ಅದರ ಜೊತೆಯಲ್ಲಿ ಏಳುಬಗೆಯ ಧಾನ್ಯಗಳನ್ನೂ ದಾನಮಾಡಬೇಕು. ಇನ್ನೂ ಬೇಕಾದುವುಗಳನ್ನೂ ಶಕ್ತಿಗನುಗುಣವಾಗಿ ಕೊಡಬೇಕು. ಜಿಪುಣತನ ಮಾಡ ಬಾರದು. ಹಾಗಾದರೆ ಸರಿಯಾದ ಫಲವು ಬರುತ್ತದೆ.

೭೨. ಅನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಅವರಿಗೆ ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು. ಬಡವರಾದರೂ ಶಕ್ತ್ಯನು ಸಾರವಾಗಿ ಮಾಡಬೇಕು.

೭೩ ಈ ವ್ರತವನ್ನು ಮಾಡಲು ಎಲ್ಲಾ ಮತದವರಿಗೂ ಅಧಿಕಾರವಿರು ತ್ತದೆ. ಅದರಲ್ಲಿಯೂ ವಿಷ್ಣುಭಕ್ತರು ನಿಯಮದಿಂದ ಮಾಡಿಯೇ ಮಾಡಬೇಕು.

೭೪. ಪ್ರಾರ್ಥನೆಯ ಮಂತ್ರವು- ಎಲೈ ಸ್ವಾಮಿಯೆ! ನನ್ನ ವಂಶದಲ್ಲಿ ಹುಟ್ಟಿದವರನ್ನೂ ಮತ್ತು ಹುಟ್ಟುವವರನ್ನೂ ಈ ದುಃಖದಾಯಕವಾದ ಸಂಸಾರ ವೆಂಬ ಸಮುದ್ರದಿಂದ ಪಾರುಗಾಣಿಸು.

ಪಾಪಕಾರ್ಣವಮಗ್ನಸ್ಯ ವ್ಯಾಧಿಭಿಶ್ಚಾಂಬುಧಾರಿಭಿಃ ।
ಜೀವೈಸ್ತು ಪರಿಭೂತಸ್ಯ ಮಹಾದುಃಖಗತಸ್ಯ ಚ ॥ ೭೫ ॥

ಕರಾವಲಂಬನಂ ದೇಹಿ ಶೇಷಶಾಯಿನ್ ಜಗತ್ಪತೇ ।
ವ್ರತೇನಾನೇನ ದೇವೇಶ ಭುಕ್ತಿಮುಕ್ತಿಪ್ರದೋ ಭವ ॥ ೭೬ ॥

ಏವಂ ಪ್ರಾರ್ಥ್ಯ ತತೋ ದೇವಂ ವಿಸೃಜ್ಯ ಚ ಯಥಾವಿಧಿ ।
ಉಪಹಾರಾದಿಕಂ ಸರ್ವಂ ಆಚಾರ್ಯಾಯ ನಿವೇದಯೇತ್ ॥ ೭೭ ॥

ದಕ್ಷಿಣಾಭಿಶ್ಚ ಸಂತೋಷ್ಯ ಬ್ರಾಹ್ಮಣಾಂಶ್ಚ ವಿಸರ್ಜಯೇತ್ ।
ಮಮ ಧ್ಯಾನಸಮಾಯುಕ್ತೋ ಭುಂಜೀತ ಸಹ ಬಂಧುಭಿಃ ॥ ೭೮ ॥

ಅಕಿಂಚನೋಽಪಿ ನಿಯತಮುಪೋಷತಿ ಚತುರ್ದಶೀಂ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾऽತ್ರ ಸಂಶಯಃ ॥ ೭೯ ॥

---

೭೫–೭೬. ಎಲೈ ಸ್ವಾಮಿಯೆ! ನಾನು ಪಾಪವೆಂಬ ಸಮುದ್ರದಲ್ಲಿ ಬಿದ್ದಿದ್ದೇನೆ. ರೋಗಗಳಿಂದ ಕೂಡಿದ್ದೇನೆ. ಪ್ರಾಣಿಗಳು ನನ್ನನ್ನು ತಿರಸ್ಕರಿಸುತ್ತವೆ· ಬಹು ದುಃಖಪಡುತ್ತಲಿದ್ದೇನೆ. ಇಂತಹ ನನ್ನನ್ನು ಕೈಹಿಡಿದು ಎತ್ತು. ಎಲೈ ಶೇಷಶಾಯಿಯೆ! ಈ ವ್ರತದಿಂದ ತೃಪ್ತನಾಗಿ ನನಗೆ ಭುಕ್ತಿಮುಕ್ತಿಗಳನ್ನು ಕೊಡತಕ್ಕವನಾಗು.

೭೭. ಈ ರೀತಿಯಾಗಿ ಆ ದೇವರನ್ನು ಪ್ರಾರ್ಥಿಸಿಕೊಂಡು ಆಮೇಲೆ ವಿಸರ್ಜನೆ ಮಾಡಬೇಕು. ಅದರ ಹತ್ತಿರವಲ್ಲಿರುವ ಪದಾರ್ಥಗಳನ್ನೆಲ್ಲಾ ಆಚಾರ್ಯನಿಗೆ ಕೊಟ್ಟುಬಿಡಬೇಕು.

೭೮. ದಕ್ಷಿಣೆಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಕಳುಹಿಸಬೇಕು ಸ್ವಾಮಿಯ ಧ್ಯಾನವನ್ನೇ ಮಾಡುತ್ತ ಬಂಧುಗಳೊಡನೆ ಊಟಮಾಡಬೇಕು.

೭೯. ಬಡವನೂ ಕೂಡ ಆ ಚತುರ್ದಶಿಯ ದಿವಸ ಉಪವಾಸಮಾಡಬೇಕು. ಹಾಗೆ ಮಾಡಿದರೆ ಏಳುಜನ್ಮಗಳಲ್ಲಿ ಮಾಡಿದ ಪಾಪಗಳನ್ನೆಲ್ಲಾ ಕಳೆದು ಕೊಳ್ಳುತ್ತಾನೆ. ಸಂಶಯವಿಲ್ಲ.

ಯ ಇದಂ ಶೃಣುಯಾದ್ಭಕ್ತ್ಯಾ ವ್ರತಂ ಪಾಪಪ್ರಣಾಶನಂ ।
ತಸ್ಯ ಶ್ರವಣ ಮಾತ್ರೇಣ ಬ್ರಹ್ಮಹತ್ಯಾ ವ್ಯಪೋಹತಿ || ೮೦ ||

ಪವಿತ್ರಂ ಪರಮಂ ಗುಹ್ಯಂ ಕೀರ್ತಯೇದ್ಯಸ್ತು ಮಾನವಃ ।
ಸರ್ವಕಾಮಾನವಾಪ್ನೋತಿ ವ್ರತಸ್ಯಾಸ್ಯ ಫಲಂ ಸದಾ || ೮೧ ||

ಯ ಇದಂ ಕುರ್ವತೇ ಶಕ್ತ್ಯಾ ಕಾಲೇ ಮಧ್ಯಾಹ್ನಸಂಜ್ಞಕೇ ।
ಲೀಲಾವತ್ಯಾ ಸಹ ಋಷಿಂ ಶ್ರೀನೃಸಿಂಹಂ ತಥೈವ ಚ || ೮೨ ||

ಪೂಜಯೇತ್ಪರಯಾ ಭಕ್ತ್ಯಾ ಮುಕ್ತಿಂ ಪ್ರಾಪ್ನೋತಿ ಶಾಶ್ವತೀಂ ।
ತಸ್ಮಿನ್ ಕ್ಷೇತ್ರೇ ತು ಯೋ ಗತ್ವಾ ಶ್ರೀನೃಸಿಂಹಂ ಪ್ರಪೂಜಯೇತ್|| ೮೩ ||

ವಾಂಛಿತಂ ಲಭತೇ ನಿತ್ಯಂ ಶ್ರೀನೃಸಿಂಹಪ್ರಸಾದತಃ ।
ಶ್ರೀನೃಸಿಂಹ ಮಹದ್ರೂಪ ಕಾಲಕೋಟಿದುರಾಸದ || ೮೪ ||

ಭೈರವೇಶ ಹರಾರ್ತಿಘ್ನ ಬಾಲರೂಪ ನಮೋಸ್ತು ತೇ ।
ಶ್ರೀನೃಸಿಂಹಾಯಾದಿರೂಪಾಯ ಬಾಲಾಯ ಬಾಲರೂಪಿಣೇ || ೮೫ ||

---

೮೦. ಪಾಪನಾಶಕವಾದ ಈ ವ್ರತವನ್ನು (ಈ ವ್ರತದ ವಿಷಯವನ್ನು) ಕೇಳಿದರೇನೇ ಅವನಿಗೆ ಬಂದಿರುವ ಬ್ರಹ್ಮಹತ್ಯಾದಿ ದೋಷಗಳು ನಾಶವಾಗುತ್ತವೆ.

೮೧. ಪರಮವೂ, ಪವಿತ್ರವೂ, ಗುಹ್ಯವೂ ಆದ ಈ ವ್ರತವನ್ನು ಯಾವನು ಹೇಳುತ್ತಾನೆಯೋ ಅವನು ಎಲ್ಲಾ ಫಲಗಳನ್ನೂ ಹೊಂದುತ್ತಾನೆ. ವ್ರತಮಾಡಿದ ಫಲವೂ ಬರುತ್ತದೆ.

೮೨–೮೬. ಈ ವ್ರತವನ್ನು ಮಧ್ಯಾಹ್ನಕಾಲದಲ್ಲಿ ಮಾಡಬೇಕು. ಅಂತೆಯೇ ಲೀಲಾವತಿ, ಹಾರೀತ, ನೃಸಿಂಹರನ್ನು ಧ್ಯಾನಿಸಿ ಪೂಜಿಸಬೇಕು. ಹಾಗಾದರೆ ಮುಕ್ತಿಯನ್ನು ಹೊಂದುತ್ತಾರೆ. ಆ ಕ್ಷೇತ್ರದಲ್ಲಿ ಶ್ರೀ ನೃಸಿಂಹನನ್ನು ಪೂಜಿಸಬೇಕು. ಹಾಗೆ ಮಾಡಿದರೆ ಶ್ರೀ ನೃಸಿಂಹನ ಅನುಗ್ರಹದಿಂದ ಇಷ್ಟಾರ್ಥಗಳು ಲಭಿಸುತ್ತವೆ. ಶ್ರೀ ನೃಸಿಂಹನೆ! ಮಹಾರೂಪನೆ! ಕೋಟಿಜನ ಯಮರಿಗೂ ಹೆಚ್ಚಿನವನೆ! ಭೈರವೇಶನೇ! ಹರನ ಕಷ್ಟವನ್ನು ನಾಶಮಾಡಿದವನೇ! ಬಾಲರೂಪನೆ! ನಿನಗೆ ನಮಸ್ಕಾರವು. ಆದಿರೂಪನಾದ, ಬಾಲನೂ, ಬಾಲರೂಪನೂ, ಆದ

ವ್ಯಾಪಕಾಯ ಸುನಂದಾಯ ಸ್ವಾತ್ಮಪ್ರಕಟರೂಪಿಣೇ ।
ಸರ್ವಜೀವಾತ್ಮಕಾಯೈವ ವಿಶ್ವೇಶಾಯ ಸುರಾತ್ಮನೇ ॥ ೮೭ ॥

ಮಾರ್ತಂಡಮಂಡಲಸ್ಥಾಯ ದಯಾಸಿಂಧೋ ನಮೋಽಸ್ತು ತೇ ।
ಚತುರ್ವಿಂಶಸ್ವರೂಪಾಯ ಕಾಲರುದ್ರಾಗ್ನಿ ರೂಪಿಣೇ ॥ ೮೭ ॥

ಜಗದೇಕಸ್ವರೂಪಾಯ ನೃಸಿಂಹಾಯ ನಮೋಽಸ್ತು ತೇ ।
ಫಾಲೇ ದಧಾರ ಯೋ ದೇವೀಂ ನೃಸಿಂಹೋ ವೀರಭದ್ರಜಿತ್ ॥ ೮೮ ॥

ದ್ವಾದಶಾದಿತ್ಯಬಿಂಬಾನಿ ಸುತಪ್ತಾನಿ ಪ್ರಮಾಣತಃ ।
ತತ್ರ ಸಿಂಧುರ್ಮಹಾಪುಣ್ಯಾ ನದೀ ರಮ್ಯಾ ವಿಶೇಷತಃ ॥ ೮೯ ॥

ತಸ್ಯಾಸ್ಸಮೀಪೇ ನಗರಂ ವರ್ತತೇಽದ್ಯಾಪಿ ಸುಂದರಿ ।
ಮೌಳಿಸ್ಥಾನೇತಿ ವಿಖ್ಯಾತಂ ಸರ್ವದಾ ದೇವನಿರ್ಮಿತಂ ॥ ೯೦ ॥

ವಸತಿರ್ವರ್ತತೇ ತತ್ರ ಹಾರೀತಸ್ಯ ಮಹಾತ್ಮನಃ ।
ಲೀಲಾವತೀ ತು ತತ್ರೈವ ತಿಷ್ಠತೇ ನಾಽತ್ರ ಸಂಶಯಃ ॥ ೯೧ ॥

---

ವ್ಯಾಪಕನಾದ ಆ ನಂದರೂಪನಾದ, ತನ್ನ ಆತ್ಮರೂಪವನ್ನು ಪ್ರಕಟಿಸಿರುವ ಸರ್ವಜೀವ ಸ್ವರೂಪಿಯಾದ ವಿಶ್ವೇಶನಾದ ಸುರಸ್ವರೂಪನಾದ ನರಸಿಂಹನಿಗೆ ನಮಸ್ಕಾರವು.

೮೭–೯೦. ಸೂರ್ಯ ಮಂಡಲದಲ್ಲಿರುವ ದಯಾಮಯನಾದ ನಿನಗೆ ನಮಸ್ಕಾರವು. ಇಪ್ಪತ್ತುನಾಲ್ಕುವಸ್ತುಗಳ ರೂಪನಾಗಿರುವ, ಯಮ, ರುದ್ರ, ಅಗ್ನಿಗಳ ರೂಪವಾಗಿರುವ ಪ್ರಪಂಚದಲ್ಲಿ ಒಂದೇ ರೂಪನಾದ ನೃಸಿಂಹನಾದ ನಿನಗೆ ನಮಸ್ಕಾರವು. ಈ ನರಸಿಂಹನು ಹಣೆಯಲ್ಲಿಯೇ ಲಕ್ಷ್ಮಿಯನ್ನು ಧರಿಸಿದನು. ಮತ್ತು ವೀರಭದ್ರನನ್ನು ಜಯಿಸಿದನು. ಹನ್ನೆರಡು ಜನ ಆದಿತ್ಯ ಬಿಂಬಗಳೂ ಇವನಿಂದಲೇ ಪ್ರಕಾಶಿಸುತ್ತಿರುತ್ತವೆ. ಇಂತಹವನಿಗೆ ನಮಸ್ಕಾರವು. ಸಮುದ್ರ ಸಾಭ್ರಮತೀ ನದಿಗಳ ಹತ್ತಿರ ಒಂದು ಸುಂದರವಾದ ನಗರವಿದೆ. ಅದರ ಹೆಸರು ಮೌಳಿಸ್ಥಾನವೆಂಬುದಾಗಿ. ಅದು ದೇವತೆಗಳಿಂದ ನಿರ್ಮಿತವಾದುದು.

೯೧-೯೫. ಆ ವೂರಿನಲ್ಲಿ ಹಾರೀತನ ಮನೆಯಿರುವುದು. ಲೀಲಾವತಿಯೂ ಕೂಡ ಅಲ್ಲಿಯೇ ಇರುವಳು. ಆ ಸಿಂಧುನದಿಯ ತೀರದಲ್ಲಿ ಈಗಲೂ ಅವರ

ಪ್ರತಿಶಬ್ದೋ ಭವೇತ್ತತ್ರ ಸಿಂಧುನದ್ಯಾಸ್ಸಮೀಪತಃ ।
ಕಲೌ ಯುಗೇ ತು ಸಿಂಪ್ರಾಪ್ತೇ ಮ್ಲೇಚ್ಛಾ ವೈ ಪಾಪಚಾರಿಣಃ ॥ ೯೨ ॥

ನಿವಸಂತಿ ತು ತತ್ರೈವ ಬಹವೋ ನಾಽತ್ರ ಸಂಶಯಃ ।
ನೃಸಿಂಹಜನ್ಮನಿ ಯಥಾ ಶಬ್ದೋಽಭೂದದ್ಭುತಃ ಪರಃ ॥ ೯೩ ॥

ತಾದೃಶಃ ಪ್ರತಿಶಬ್ದೋ ವೈ ಜಾಯತೇ ನಗನಂದಿನಿ ।
ಬ್ರಹ್ಮಹಾ ಹೇಮಹಾರೀ ವಾ ಸುರಾಪೋ ಗುರುತಲ್ಪಗಃ ॥ ೯೪ ॥

ಸಿಂಧೌ ಗತ್ವಾ ವಿಶೇಷೇಣ ಸ್ನಾನಂ ಕುರ್ವಂತಿ ಯೇ ಜನಾಃ ।
ಮುಚ್ಯಂತೇ ನಾತ್ರ ಸಂದೇಹಃ ಶ್ರೀನೃಸಿಂಹಪ್ರಸಾದತಃ ॥ ೯೫ ॥

ದಶರಾತ್ರಿಪ್ರಮಾಣೇನ ಮಾನವಾ ಯೇ ವಸಂತಿ ಹಿ ।
ತೇ ಜ್ಞೇಯಾಃ ಪುಣ್ಯಕರ್ಮಾಣಃ ನಾಽಸತ್ಯಂ ಮಾಮಕಂ ವಚಃ ॥ ೯೬ ॥

ನಿವಸಂತಿ ಕಲೌ ತತ್ರ ವರ್ಣಾ ಯೇ ದ್ವಿಜಪೂರ್ವಕಾಃ ।
ಮ್ಲೇಚ್ಛವತ್ತೇಽಪಿ ವಿಜ್ಞೇಯಾ ವೇದಬಾಹ್ಯಾಃ ಸುರೋತ್ತಮೇ ॥ ೯೭ ॥

---

ಪ್ರತಿಧ್ವನಿಯು ಕೇಳಿ ಬರುತ್ತದೆ. ಕಲಿಯುಗವು ಬಂದಾಗ ಪಾಪಾಚಾರ ಪರರಾದ ಮ್ಲೇಚ್ಛರು ಅಲ್ಲಿ ಬಹುಜನರು ವಾಸಿಸುತ್ತಾರೆ. ಸಂಶಯವಿಲ್ಲ. ನರಸಿಂಹನು ಹುಟ್ಟಿದಾಗ ಯಾವರೀತಿ ಯಾವ ಅದ್ಭುತವಾದ ಶಬ್ದವು ಉಂಟಾಯಿತೋ ಈಗಲೂ ಕೂಡ ಆಗಾಗ್ಗೆ ಅಂತಹ ಶಬ್ದವೇ ಅಲ್ಲಿ ಕೇಳಿ ಬರುತ್ತದೆ. ಬ್ರಹ್ಮಹತ್ಯೆ ಮಾಡಿದವನು, ಚಿನ್ನಕದ್ದವನು, ಹೆಂಡಗುಡುಕನು, ಗುರುಭಾರ್ಯಾಗಮನ ಮಾಡಿದವನು, ಇವರಾರಾದರೂ ಈ ನದಿಗೆ ಹೋಗಿ ಸ್ನಾನಮಾಡಿದರೆ ಆ ನರಸಿಂಹನ ಅನುಗ್ರಹದಿಂದ ಆ ಪಾಪಗಳನ್ನು ಕಳೆದುಕೊಳ್ಳುತ್ತಾರೆ.

೯೬. ಈ ಜಾಗದಲ್ಲಿ ಯಾವ ಮನುಷ್ಯನು ಹತ್ತುರಾತ್ರಿಗಳವರೆಗೂ ಇರುತ್ತಾನೆಯೋ ಅವನು ಪುಣ್ಯವಂತನೆಂಬುದರಲ್ಲಿ ಸಂಶಯವಿಲ್ಲ. ಈ ವಿಷಯದಲ್ಲಿ ನನ್ನ ಮಾತು ಸ್ವಲ್ಪವೂ ಸುಳ್ಳಲ್ಲ.

೯೭. ಕಲಿಯುಗದಲ್ಲಿ ಈ ಕ್ಷೇತ್ರದಲ್ಲಿ ಹೋಗಿ ಯಾವ ದ್ವಿಜರು ವಾಸ ಮಾಡುತ್ತಾರೆಯೋ ಅವರೂ ಕೂಡ ಮ್ಲೇಚ್ಛರೆಂದು ತಿಳಿಯಬೇಕು. ಅವರು ವೇದಬಾಹ್ಯರು.

ಮಾಂಸಂ ಖಾದಂತಿ ತೇ ತತ್ರ ಮದ್ಯಪಾನಂ ಯಯುಸ್ಸದಾ ।
ಅತೋಽಹ್ಯಧರ್ಮರೂಪಾಸ್ತೇ ಪಾಪಿಷ್ಠಾ ನಾಽತ್ರ ಸಂಶಯಃ ॥ ೯೮ ॥

ಸಂಧ್ಯಾಹೀನಾ ಯಥಾ ವಿಪ್ರಾ ವೇದಬಾಹ್ಯಾಸ್ತಥೈವ ಚ ।
ನಿವಸಂತಿ ಪುರೇ ತಸ್ಮಿನ್ ಪಶ್ಚಿಮಾಯಾಂ ಸುರೇಶ್ವರಿ ॥ ೯೯ ॥

ಏಕಮೇವ ಪರಂ ತೀರ್ಥಂ ನೃಸಿಂಹಾಖ್ಯಂ ಸುವಿಸ್ತರಂ ।
ಯಚ್ಛ್ರುತ್ವಾ ಮುಚ್ಯತೇ ಪಾಪಾತ್ ನರಸ್ಸದ್ಯೋ ನ ಸಂಶಯಃ ॥ ೧೦೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಸಾಭ್ರಮತೀ ಮಾಹಾತ್ಮ್ಯೇ ನೃಸಿಂಹತೀರ್ಥ ವರ್ಣನಂ ನಾಮ ಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯೮. ಅಲ್ಲಿರುವವರು ಮಾಂಸವನ್ನು ತಿನ್ನುತ್ತಾರೆ. ಹೆಂಡವನ್ನು ಕುಡಿಯುತ್ತಾರೆ. ಆದುದರಿಂದಲೇ ಅವರು ಅಧರ್ಮಿಗಳು, ಪಾಪಿಗಳು, ಎಂಬುದರಲ್ಲಿ ಸಂಶಯವಿಲ್ಲ.

೯೯. ಸಂಧ್ಯಾವಂದನೆಯನ್ನು ಮಾಡದ ಬ್ರಾಹ್ಮಣನು ಹೇಗೆ ವೇದದಿಂದ ಬಾಹ್ಯನಾಗುತ್ತಾನೆಯೋ ಅಂತೆಯೇ ಪಶ್ಚಿಮದೇಶದ ಈ ಊರಿನಲ್ಲಿ ವಾಸಿಸುವವನೂ ವೇದಬಾಹ್ಯನಾಗುತ್ತಾನೆ.

೧೦೦. ನರಸಿಂಹ ತೀರ್ಥವೆಂಬುವುದು ಇದು ಒಂದೇ ದೊಡ್ಡದಾದ ತೀರ್ಥವು. ಇದರ ವಿಷಯವನ್ನು ಕೇಳಿದರೆ ಮನುಷ್ಯನು ಪಾಪದಿಂದ ಮುಕ್ತನಾಗುತ್ತಾನೆ. ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಸಾಭ್ರಮತೀ ಮಹಿಮೆಯಲ್ಲಿ ನೃಸಿಂಹತೀರ್ಥ ವರ್ಣನ ಎಂಬ ನೂರ ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಪಾರ್ವತ್ಯುವಾಚ ॥

**ಭಗವನ್ ಸರ್ವತತ್ವಜ್ಞ ಶ್ರೀವಿಷ್ಣೋಸ್ತ್ವತ್ಪ್ರಸಾದತಃ ।**
**ಶ್ರುತಾ ನಾನಾವಿಧಾ ಧರ್ಮಾ ಲೋಕನಿಸ್ತಾರಹೇತವಃ ॥ ೧ ॥**

**ಅಧುನಾ ಶ್ರೋತುಮಿಚ್ಛಾಮಿ ಗೀತಾಮಾಹಾತ್ಮ್ಯಮುತ್ತಮಂ ।**
**ಶ್ರುತೇನ ಯೇನ ದೇವೇಶ ಹರೌ ಭಕ್ತಿರ್ವಿವರ್ಧತೇ ।**
**ತದ್ವದಸ್ವಾಽಧುನಾ ದೇವ ಯದ್ಯಹಂ ತವ ವಲ್ಲಭಾ ॥ ೨ ॥**

---

### ನೂರ ಎಪ್ಪತ್ತೊಂದನೆಯ ಅಧ್ಯಾಯವು



೧. ಶ್ರೀ ಪಾರ್ವತಿಯು ಹೇಳಿದಳು-ಎಲ್ಲವನ್ನೂ ಬಲ್ಲ ಎಲೈ ಸ್ವಾಮಿಯೆ! ನಿನ್ನ ದಯೆಯಿಂದ ಶ್ರೀ ವಿಷ್ಣುವಿನ ಮೋಕ್ಷದಾಯಕವಾದ ನಾನಾಬಗೆಯಾದ ಕಥೆಗಳನ್ನೂ ಮಹಿಮೆಗಳನ್ನೂ ಕೇಳಿದೆನು.

೨. ಈಗ ನಾನು ಗೀತೆಯ ಮಹಿಮೆಯನ್ನು ಕೇಳಲು ಇಚ್ಛಿಸುತ್ತೇನೆ. ಅದನ್ನು ಕೇಳಿದರೆ ಹರಿಯಲ್ಲಿ ಭಕ್ತಿಯು ಹೆಚ್ಚುತ್ತದೆ. ನನ್ನಲ್ಲಿ ನಿನಗೆ ಪ್ರೀತಿಯಿದ್ದರೆ ಆ ವಿಷಯವನ್ನು ಹೇಳು.

|| ಶ್ರೀ ಮಹಾದೇವ ಉವಾಚ ||

ಅತಸೀಪುಷ್ಪಸಂಕಾಶಂ ಖಗೇಂದ್ರಾಸನಮುಚ್ಯುತಂ ।
ಶಯಾನಂ ಶೇಷಶಯ್ಯಾಯಾಂ ಮಹಾವಿಷ್ಣುಮುಪಾಸ್ಮಹೇ || ೩ ||

ಕದಾಚಿದಾಸನೇ ರಮ್ಯೇ ಸುಖಾಸೀನಂ ಮುರದ್ವಿಷಂ ।
ಆನಂದಯಿ ತ್ರಿಲೋಕಾನಾಂ ಲಕ್ಷ್ಮೀಃ ಪಪ್ರಚ್ಛ ಸಾದರಾತ್ || ೪ ||

|| ಶ್ರೀರುವಾಚ ||

ಶಯಾಳುರಸಿ ದುಗ್ಧಾಬ್ಧೌ ಭಗವನ್ ಕೇನ ಹೇತುನಾ ।
ಉದಾಸೀನ ಇವೈಶ್ವರ್ಯೇ ಜಗಂತಿ ಸ್ಥಾಪಯನ್ನಪಿ || ೫ ||

|| ಈಶ್ವರ ಉವಾಚ ||

ಇತಿ ದೇವ್ಯಾ ವಚಶ್ಶ್ರುತ್ವಾ ಮುರಭಿದ್ರಾಗಗರ್ಭಿತಂ ।
ಉವಾಚ ಶ್ಲಕ್ಷ್ಣಯಾ ವಾಚಾ ವಿಸ್ಮಯಸ್ಮೇರಲೋಚನಃ || ೬ ||

---

೩. ಶ್ರೀ ಮಹಾದೇವನು ಹೇಳಿದನು-ಕಪ್ಪು ಅಗಸೆಯ ಹೂವಿನಂತೆ ಬಣ್ಣವುಳ್ಳ, ಗರುಡನೇ ವಾಹನವಾಗಿ ಉಳ್ಳ, ಶೇಷನ ಹಾಸಿಗೆಯಲ್ಲಿ ಮಲಗಿರುವ ಆ ಮಹಾವಿಷ್ಣುವನ್ನು ಭಜಿಸುತ್ತೇನೆ.

೪. ಒಂದುಸಾರಿ ಸುಖವಾಗಿ ಮಂಚದಮೇಲೆ ಕುಳಿತಿದ್ದ ವಿಷ್ಣುವನ್ನು ಕುರಿತು ಲೋಕಕ್ಕೆಲ್ಲಾ ಆನಂದವನ್ನುಂಟುಮಾಡುವ ಲಕ್ಷ್ಮಿಯು ಪ್ರೀತಿಯಿಂದ ಇಂತೆಂದು ಕೇಳಿದಳು.

೫. ಲಕ್ಷ್ಮಿಯು ಹೇಳಿದಳು-ಎಲೈ ಸ್ವಾಮಿಯೆ! ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿದ್ದರೂ ಐಶ್ವರ್ಯದ ವಿಷಯದಲ್ಲಿ ಉದಾಸೀನದಿಂದ ತಿರಸ್ಕಾರವನ್ನು ತೋರಿಸುತ್ತ ಕ್ಷೀರಸಮುದ್ರದಲ್ಲಿ ಮಲಗಿರುವೆಯಲ್ಲ! ಅದಕ್ಕೆ ಕಾರಣವೇನು.

೬. ಈಶ್ವರನು ಹೇಳಿದನು-ಪ್ರೀತಿಯಿಂದ ಕೂಡಿದ ದೇವಿಯ ಈ ಮಾತನ್ನು ವಿಷ್ಣುವು ಕೇಳಿ ಆಶ್ಚರ್ಯದಿಂದ ಕಣ್ಣನ್ನು ಅರಳಿಸುತ್ತ ಮೃದುವಾದ ಮಾತಿನಿಂದ ಇಂತೆಂದನು.

|| ಶ್ರೀ ಭಗವಾನುವಾಚ ||

ನಾಽಹಂ ಸುಮುಖಿ ನಿದ್ರಾಳುರ್ನಿಜಂ ಮಾಹೇಶ್ವರಂ ಮಹಃ |
ದೃಶಾ ತತ್ವಾಽನುವರ್ತಿನ್ಯಾ ಪಶ್ಯಾಮ್ಯಂತರ್ನಿಮಗ್ನಯಾ || ೭ ||

ಕುಶಾಗ್ರಯಾ ಧಿಯಾ ದೇವಿ ಯದಂತರ್ಯೋಗಿನೋ ಹೃದಿ |
ಪಶ್ಯಂತಿ ಯಚ್ಚ ದೇವಾನಾಂ ಸಾರಂ ಮೀಮಾಂಸತೇ ಭೃಶಂ || ೮ ||

ತದೇಕಮಜರಂ ಜ್ಯೋತಿರಾತ್ಮರೂಪಮನಾಮಯಂ |
ಅಖಂಡಾನಂದ ಸಂದೋಹಂ ನಿಸ್ಪಂದಿದ್ವೈತವರ್ಜಿತಂ || ೯ ||

ಯದಾಶ್ರಯಾ ಜಗದ್ವೃತ್ತಿರ್ಯನ್ಮಯಾ ಚಾನುಭೂಯತೇ |
ನ ಯೇನ ರಹಿತಂ ಕಿಂಚಿತ್ ಚರಾಚರಂ ಜಗತ್ರಯಂ || ೧೦ ||

---

೭. ಶ್ರೀ ಭಗವಂತನು ಹೇಳಿದನು-ಎಲೈ ಸುಮುಖಿಯೇ ! ನಾನು ನಿದ್ದೆಮಾಡುತ್ತಿಲ್ಲ. ಮಹೇಶ್ವರ ರೂಪವಾದ ತೇಜಸ್ಸನ್ನು ತತ್ವವನ್ನು ತಿಳಿಯುವ ಒಳಗಿನ ಜ್ಞಾನದೃಷ್ಟಿಯಿಂದ ನೋಡುತ್ತೇನೆ.

೮. ಯೋಗಿಗಳು ಕುಶಾಗ್ರ ಬುದ್ಧಿಯಿಂದ ಯಾವುದನ್ನು ಹೃದಯದಲ್ಲಿ ನೋಡುತ್ತಾರೆಯೋ ಯಾವುದು ದೇವತೆಗಳಿಗೆ ಸಾರಭೂತವಾದುದೆಂದು ಎಲ್ಲರೂ ತರ್ಕಿಸುತ್ತಾರೆಯೋ ಅದನ್ನು ನೋಡುತ್ತಿದ್ದೇನೆ.

೯. ಅದು ನಾಶವಿಲ್ಲದ ತೇಜಸ್ಸು. ಅದೇ ಆತ್ಮರೂಪವಾದುದು. ರೋಗರಹಿತವಾದುದು. ಪೂರ್ಣಾನಂದದಿಂದ ಕೂಡಿಕೊಂಡಿರುವುದು. ಯಾವಾಗಲೂ ಮಿಂಚುತ್ತಿರುವುದು. ಅದು ಮತ್ತೊಂದರ ಜೊತೆಯಲ್ಲಿರದೆ ಒಂಟಿಯಾಗಿ ಇರುವುದು.

೧೦. ಜಗತ್ತಿನ ಸ್ಥಿತಿಗಳೆಲ್ಲವೂ ಯಾವುದರಿಂದ ನಡೆಯುತ್ತಿರುವುದೋ ಪ್ರಪಂಚದಲ್ಲಿರುವ ಚರಾಚರಗಳೆಲ್ಲವೂ ಯಾವುದನ್ನು ಬಿಟ್ಟಿರುವುದಿಲ್ಲವೋ ಅದನ್ನು ಅನುಭವಿಸುತ್ತಿರುತ್ತೇನೆ.

**ನಿರ್ಮಂಥ್ಯ ಬಹುಧಾಲೋಕ್ಯ ವೇದಶಾಸ್ತ್ರಾಂಬುಧಿಂ ಸುಧೀಃ ।**
**ದ್ವೈಪಾಯನೋ ಯದಾಸಾದ್ಯ ಗೀತಾಶಾಸ್ತ್ರಂ ನಿಸ್ಸೃಷ್ಟವಾನ್ ॥ ೧೧ ॥**

**ಯದಾಸ್ಥಾಯ ಮಹಾನಂದಾನಂದೀಕೃತಮನಾಃ ಸದಾ ।**
**ನಿದ್ರಾಳುರಿವ ದೇವೇಶಿ ದುಗ್ಧಾಬ್ಧೌ ಪ್ರತಿಭಾಮಿ ತೇ ॥ ೧೨ ॥**

**॥ ಈಶ್ವರ ಉವಾಚ ॥**

**ಇತಿ ತಸ್ಯ ಮುರಾರಾತೇರ್ಮಿತಮಾನಂದದಂ ವಚಃ ।**
**ಪ್ರಹರ್ಷೋತ್ಫುಲ್ಲಲೋಲಾಕ್ಷೀ ಲಕ್ಷ್ಮೀಃ ಶ್ರುತ್ವಾ ವಿಸಿಷ್ಮಿಯೇ ॥ ೧೩ ॥**

**॥ ಶ್ರೀರುವಾಚ ॥**

**ಭವಾನೇವ ಹೃಷೀಕೇಶ ಧ್ಯೇಯೋಽಸಿ ಯಮಿನಾಂಸದಾ ।**
**ತಸ್ಮಾತ್ತ್ವತಃ ಪರಂ ಚಾನ್ಯದಿತಿ ಕೌತೂಹಲಂ ಹಿ ಮೇ ॥ ೧೪ ॥**

---

೧೧. ಪಂಡಿತನಾದ ವ್ಯಾಸನು ವೇದಶಾಸ್ತ್ರಗಳೆಂಬ ಸಮುದ್ರವನ್ನು ಬಹು ಆಲೋಚನೆಮಾಡಿ ಕಡೆದು ಅದರಿಂದ ಬಂದುದನ್ನು ಗೀತಾಶಾಸ್ತ್ರವೆಂಬುದಾಗಿ ನಿರ್ಮಿಸಿದನು.

೧೨. ಅಂತಹ ತೇಜಸ್ಸನ್ನು ಹೊಂದಿರುವ ಯಾವಾಗಲೂ ಮಹಾನಂದದ ಆನಂದದಿಂದ ಕೂಡಿರುವ ಆ ಗೀತಾಶಾಸ್ತ್ರವನ್ನು ನೋಡಿದರೆ ಈ ಕ್ಷೀರ ಸಮುದ್ರದಲ್ಲಿ ನಿನಗೆ ನಿದ್ದೆಮಾಡುವವನಂತೆ ನಾನು ಕಾಣುತ್ತೇನೆ.

೧೩. ಈಶ್ವರನು ಹೇಳಿದನು-ಈ ರೀತಿಯಾಗಿ ಶ್ರೀ ವಿಷ್ಣುವು ಹೇಳಿದ ಮಿತವೂ ಆನಂದ ಪ್ರದವೂ ಆದ ಮಾತನ್ನು ಕೇಳಿ ಲಕ್ಷ್ಮಿಯು ಸಂತೋಷದಿಂದ ಆಶ್ಚರ್ಯಪಟ್ಟಳು.

೧೪. ಲಕ್ಷ್ಮಿಯು ಹೇಳಿದಳು– ಎಲೈ ಹೃಷೀಕೇಶನೇ ? ನೀನೇನೇ ಯೋಗಿಗಳಿಗೆ ಧ್ಯಾನಮಾಡುವುದಕ್ಕೆ ಗುರಿಯಾದ ಪದಾರ್ಥವು. ಆದುದರಿಂದ ನಿನಗಿಂತಲೂ ಬೇರೆ ಪದಾರ್ಥವಿಲ್ಲವೆಂದು ನಾನು ತಿಳಿದಿದ್ದೇನೆ. ಆದುದರಿಂದ ನೀನು ಹೇಳುವುದನ್ನು ಕೇಳಿದರೆ ಆಶ್ಚರ್ಯವಾಗುತ್ತದೆ.

ಚರಾಚರಾಣಾಂ ಲೋಕಾನಾಂ ಕರ್ತಾ ಹರ್ತಾ ಸ್ವಯಂ ಪ್ರಭುಃ ।
ಯಥಾಸ್ಥಿತಸ್ತತೋಽನ್ಯಸ್ತ್ವಂ ಯದಿ ಮಾಂ ಬೋಧಯಾಚ್ಯುತ ॥ ೧೫ ॥

॥ ಶ್ರೀ ಭಗವಾನುವಾಚ ॥

ಮಾಯಾಮಯಮಿದಂ ದೇವಿ ವಪುರ್ಮೇ ನ ತು ತಾತ್ವಿಕಂ ।
ಸೃಷ್ಟಿಸ್ಥಿತ್ಯುಪಸಂಹಾರ ಕ್ರಿಯಾಜಾಲೋಪಬೃಂಹಿತಂ ॥ ೧೬ ॥

ಅತೋಽನ್ಯದಾತ್ಮನೋ ರೂಪಂ ದ್ವೈತಾಽದ್ವೈತವಿವರ್ಜಿತಂ ।
ಭಾವಾಽಭಾವವಿನಿರ್ಮುಕ್ತಂ ಆದ್ಯಂತರಹಿತಂ ಪ್ರಿಯೇ ॥ ೧೭ ॥

ಶುದ್ಧಸಂವಿತ್ಪ್ರಭಾಲಾಭಪರಾನಂದೈಕ ಸುಂದರಂ ।
ರೂಪಮೈಶ್ವರಮಾತ್ಮೈಕ್ಯಂ ಗಮ್ಯಂ ಗೀತಾಸು ಕೀರ್ತಿತಂ ॥ ೧೮ ॥

---

೧೫. ಚರಾಚರ ರೂಪವಾದ ಈ ಲೋಕಕ್ಕೆ ಕರ್ತನೂ, ಕಾಪಾಡುವವನೂ ನಾಶಕನೂ ಆದವನು ನಿನಗಿಂತಲೂ ಬೇರೊಬ್ಬನಿದ್ದರೆ ಅದನ್ನು ನನಗೆ ತಿಳಿಸು.

೧೬. ಶ್ರೀ ಭಗವಂತನು ಹೇಳಿದನು- ಎಲೈ ದೇವಿಯೇ! ಈ ನನ್ನ ದೇಹವು ಮಾಯಾರೂಪವಾದದು. ಸರಿಯಾದುದಲ್ಲ. ಸೃಷ್ಟಿ ಸ್ಥಿತಿ ಸಂಹಾರ ಗಳೆಂಬ ಕ್ರಿಯೆಗಳಿಂದ ಕೂಡಿಕೊಂಡಿರುವುದು.

೧೭ ಆದುದರಿಂದ ಆತ್ಮಸ್ವರೂಪವು ದ್ವೈತಾಽದ್ವೈತಗಳಿಂದ ಬಿಡಲ್ಪಟ್ಟುದು. ಒಂದೆಂದಾಗಲಿ ಎರಡೆಂದಾಗಲಿ ಹೇಳಲು ಆಗದಿರುವುದು. ಇದೆಯೆಂದಾಗಲಿ ಇಲ್ಲವೆಂದಾಗಲಿ ಹೇಳಲಿಕ್ಕಾಗದು. ಆದ್ಯಂತಗಳಿಲ್ಲದೆಯೂ ಇರುವುದು.

೧೮. ಆ ತೇಜಸ್ಸು ಶುದ್ಧವಾದುದು. ಜ್ಞಾನರೂಪವಾದುದು. ಆನಂದ ರೂಪವಾದುದು. ಸುಂದರವಾದುದು. ಈಶ್ವರರೂಪವಾದುದು. ಆತ್ಮರೂಪವೂ ಏಕವೂ ಆದುದು. ಎಂಬುದಾಗಿ ಗೀತೆಯಲ್ಲಿ ಹೇಳಿದೆ.

॥ ಈಶ್ವರ ಉವಾಚ ॥

ಇತ್ಯಾಕರ್ಣ್ಯ ವಚೋ ದೇವೀ ದೇವಸ್ಯಾಮಿತತೇಜಸಃ ।
ಶಂಕಮಾನಾऽऽಹ ವಾಕ್ಯೇಷು ಪರಸ್ಪರ ವಿರೋಧಿತಾಂ ॥ ೧೯ ॥

॥ ಶ್ರೀರುವಾಚ ॥

ಸ್ವಯಂ ಚೇತ್ಪರಮಾನಂದಂ ಅವಾಙ್ಮನಸಗೋಚರಂ ।
ಗೀತಾ ಕಥಂ ಬೋಧಯತಿ ಇತಿ ಮೇ ಛಿಂದಿ ಸಂಶಯಂ ॥ ೨೦ ॥

॥ ಈಶ್ವರ ಉವಾಚ ॥

ಶ್ರಿಯಶ್ಶ್ರುತ್ವಾ ವಚೋ ಯುಕ್ತಮಿತಿಹಾಸಪುರಸ್ಸರಂ ।
ಆತ್ಮಾನುಗಾಮಿನೀಂ ದೃಷ್ಟಿಂ ಗೀತಾಂ ಬೋಧಿತವಾನ್ ಪ್ರಭುಃ ॥ ೨೧ ॥

ಅಹಮಾತ್ಮಾ ಪರೇಶಾನಿ ಪರಾಪರವಿಭೇದತಃ ।
ದ್ವಿಧಾ ತತಃ ಪರಃ ಸಾಕ್ಷೀ ನಿರ್ಗುಣೋ ನಿಷ್ಕಲಶ್ಶಿವಃ ॥ ೨೨ ॥

---

೧೯. ಈಶ್ವರನು ಹೇಳಿದನು– ಸರ್ವೋತ್ಕೃಷ್ಟವಾದ ಆ ಸ್ವಾಮಿಯ ಮಾತನ್ನು ಲಕ್ಷ್ಮಿಯು ಕೇಳಿ ಅವನ ಮಾತಿನಲ್ಲಿ ವಿರೋಧವಿರುವುದರಿಂದ ಸಂದೇಹ ಬಂದು ಇಂತೆಂದು ಕೇಳಿದಳು.

೨೦- ಲಕ್ಷ್ಮಿಯು ಹೇಳಿದಳು– ಸ್ವಯಂ ಆನಂದರೂಪವಾದ ಮಾತಿಗೂ ಮನಸ್ಸಿಗೂ ತಿಳಿಯದ ಆ ಪದಾರ್ಥವನ್ನು ಗೀತೆಯುತಾನೆ ಹೇಗೆ ಬೋಧಿಸುತ್ತದೆ? ಎಂಬ ಸಂದೇಹವನ್ನು ನಿವಾರಣೆಮಾಡು.

೨೧. ಈಶ್ವರನು ಹೇಳಿದನು- ಲಕ್ಷ್ಮಿಯು ಹೇಳಿದ ಮಾತನ್ನು ಕೇಳಿ ಇತಿಹಾಸಕ್ಕೆ ಅನುಗುಣವಾದ ದೃಷ್ಟಿಯಿಂದ ಎಂದರೆ ಉದಾಹರಣೆಗಳನ್ನು ಹೇಳುತ್ತ ಆತ್ಮವನ್ನುದ್ದೇಶಿಸಿ ಹೇಳಿರುವ ಗೀತೆಯನ್ನು ಆ ಸ್ವಾಮಿಯು ಆಕೆಗೆ ಹೇಳಿದನು.

೨೨. ಎಲೈ ಲಕ್ಷ್ಮಿಯೇ! ನಾನೇ ಆತ್ಮನು. ಪರ ಅಪರವೆಂಬ ಭೇದವನ್ನು ಉಳ್ಳಂತಹವನು. ಆದುದರಿಂದಲೇ ಎರಡು ರೂಪವಾಗಿದ್ದೇನೆ. ಸಾಕ್ಷಿರೂಪ ನಾದವನು. ಗುಣವನ್ನು ಹೊಂದಿದವನು. ಕಲಾರಹಿತನು. ಮಂಗಳ ರೂಪನು.

**ಅಪರಃ ಪಂಚವಕ್ತ್ರೋಽಹಂ ದ್ವಿಧಾ ತಸ್ಯಾಽಪಿ ಸಂಸ್ಥಿತಿಃ ।**
**ಶಬ್ದಾರ್ಥಭೇದತೋ ವಾಚೋ ಯಥಾಽಽತ್ಮಾಽಹಂ ಮಹೇಶ್ವರಃ ॥ ೨೩ ॥**

**ಗೀತಾಯಾ ವಾಕ್ಯರೂಪೇಣ ಯನ್ನಿರುಚ್ಛಿದ್ಯತೇ ದೃಢಃ ।**
**ಮದೀಯಃ ಪಾಶಬಂಧೋಽಯಂ ಸಂಸಾರವಿಷಯಾತ್ಮಕಃ ॥ ೨೪ ॥**

**ಯದಭ್ಯಾಸಪರಾಧೀನಃ ಪಂಚವಕ್ತ್ರೋ ಮಹೇಶ್ವರಃ ।**
**ಇತಿ ತಸ್ಯ ವಚಶ್ಶ್ರುತ್ವಾ ಗೀತಾಶಾಸ್ತ್ರಮಹೋದಧೇಃ ॥ ೨೫ ॥**

**ಇದಂ ಪರಮಭೇದೇನ ಬೋಧ್ಯತೇ ಭವಭೀರುಭಿಃ ।**
**ತಮಪೃಚ್ಛದಿದಂ ವಾಕ್ಯಂ ಅಂಗಪ್ರತ್ಯಂಗಸಂಸ್ಥಿತಂ ॥**
**ಮಾಹಾತ್ಮ್ಯಮಿತಿಹಾಸಂ ಚ ಸರ್ವಂ ತಸ್ಮೈ ನ್ಯವೇದಯತ್ ॥ ೨೬ ॥**

---

೨೩. ನಾನು ಐದು ಮುಖವುಳ್ಳವನು. ಪರ ಅಪರವೆಂಬುವಾಗಿ ಎರಡು ರೀತಿಯಾಗಿದ್ದೇನೆ. ಮಾತಿನಲ್ಲಿಯೂ ಕೂಡ ಶಬ್ದ ಅರ್ಥವೆಂಬ ಎರಡು ರೂಪಿನಿಂದಿದ್ದೇನೆ. ನಾನು ಆತ್ಮರೂಪವಾದವನು. ಮಹೇಶ್ವರನು.

೨೪. ಗೀತೆಯ ವಾಕ್ಯದಲ್ಲಿ ನಾನು ದೃಢವಾಗಿ ಸ್ವರೂಪವನ್ನು ತೋರಿಸಿಕೊಂಡಿದ್ದೇನೆ. ಈ ಸಂಸಾರ ವಿಷಯಗಳೆಂಬಿವು ನನ್ನ ಸಂಬಂಧವಾದ ಪಾಶಗಳೆಂದೇ ತಿಳಿ.

೨೫. ಆ ಗೀತೆಯ ಅಭ್ಯಾಸದಿಂದಲೇ ಆ ಐದುಮುಖವುಳ್ಳ ಸ್ವಾಮಿಯು ಸಾಕ್ಷಾತ್ಕಾರವಾದುದು. ಗೀತೆಯಲ್ಲಿ ಈರೀತಿಯಾಗಿ ಹೇಳಿದೆ. ಎನ್ನಲು ಆ ಮಾತನ್ನು ಆಕೆಯು ಕೇಳಿದಳು.

೨೬. ಸಂಸಾರದಿಂದ ಹೆದರಿರುವವರು ಇದನ್ನು ಅಭೇದದಿಂದ ತಿಳಿಯುತ್ತಾರೆ. ಇದನ್ನು ಓದುದರಿಂದ ಅಭೇದ ಜ್ಞಾನವುಂಟಾಗುತ್ತದೆ. ಇಂತಹ ಗೀತೆಯ ಅಂಗ ಉಪಾಂಗಗಳಿಂದ ಮಾಡಿರುವ ವಾಕ್ಯವನ್ನು ಹೇಳೆಂದು ಆಕೆಯು ಕೇಳಿದಳು. ಹಾಗೆ ಕೇಳುತ್ತಲೂ ಗೀತೆಯ ಮಹಿಮೆಯನ್ನೂ ಇತಿಹಾಸವನ್ನೂ ಆಕೆಗೆ ಸ್ವಾಮಿಯು ಹೇಳಿದನು

॥ ಶ್ರೀ ಭಗವಾನುವಾಚ ॥

ಶೃಣು ಸುಶ್ರೋಣಿ ವಕ್ಷ್ಯಾಮಿ ಗೀತಾಸು ಸ್ಥಿತಿಮಾತ್ಮನಃ ।
ವಕ್ತ್ರಾಣಿ ಪಂಚ ಜಾನೀಹಿ ಪಂಚಾಧ್ಯಾಯಾನನುಕ್ರಮಾತ್ ॥ ೨೭ ॥

ದಶಾಧ್ಯಾಯಾನ್ ಭುಜಾಂಶ್ಚೈಕಮುದರಂ ದ್ವೌ ಪದಾಂಬುಜೇ ।
ಏವಮಷ್ಟಾದಶಾಧ್ಯಾಯೀ ವಾಙ್ಮಯೀ ಮೂರ್ತಿರೈಶ್ವರೀ ॥ ೨೮ ॥

ಜಾನೀಹಿ ಜ್ಞಾನಮಾತ್ರೇಣ ಮಹಾಪಾತಕನಾಶಿನೀ ।
ಅತ್ರಾಧ್ಯಾಯಂ ತದರ್ಧಂ ವಾ ಶ್ಲೋಕಮರ್ಧಾರ್ಧಮೇವ ಚ ॥
ಅಭ್ಯಸ್ಯತಿ ಸುಮೇಧಾ ಯಃ ಸುಶರ್ಮೇವ ಸ ಮುಚ್ಯತೇ ॥ ೨೯ ॥

---

೨೭. ಶ್ರೀ ಭಗವಂತನು ಹೇಳಿದನು-ಎಲೈ ಲಕ್ಷ್ಮಿಯೆ! ಗೀತೆಯಲ್ಲಿ ನಾನು ಇರುವ ಸ್ಥಿತಿಯನ್ನು ಹೇಳುತ್ತೇನೆ. ಕೇಳು. ಅದರಲ್ಲಿರುವ ಐದು ಅಧ್ಯಾಯಗಳನ್ನೂ ಐದು ಮುಖಗಳೆಂದು ತಿಳಿ.

೨೮. ಹತ್ತು ಅಧ್ಯಾಯಗಳು ನನ್ನ ಹತ್ತುಭುಜಗಳೆಂದೂ ಒಂದು ಅಧ್ಯಾಯವು ನನ್ನ ಹೊಟ್ಟೆಯೆಂದೂ ಮಿಕ್ಕ ಎರಡು ಅಧ್ಯಾಯಗಳು ನನ್ನ ಕಾಲುಗಳೆಂದೂ ತಿಳಿ. ಈ ರೀತಿಯಾಗಿ ಗೀತೆಯ ಹದಿನೆಂಟು ಅಧ್ಯಾಯಗಳೂ ಸರಸ್ವತಿ ರೂಪವಾದ ನನ್ನ ದೇಹದ ಸ್ಥಿತಿಯು.

೨೯. ಬುದ್ಧಿಯನ್ನು ಉಪಯೋಗಿಸಿ ಯೋಚಿಸಿ ನೋಡು. ಇದು ಮಹಾ ಪಾಪವನ್ನು ನಾಶಮಾಡುತ್ತದೆ ಇದರಲ್ಲಿ ಎಲ್ಲವನ್ನೂ ಅಥವಾ ಒಂದು ಅಧ್ಯಾಯವನ್ನಾದರೂ ಅದೂ ಇಲ್ಲದಿದ್ದರೆ ಒಂದು ಶ್ಲೋಕವನ್ನಾದರೂ ಅದೂ ಇಲ್ಲದಿದ್ದರೆ ಅದರಲ್ಲಿ ಅರ್ಧವನ್ನಾದರೂ ಅದೂ ಆಗದಿದ್ದರೆ ಅದರಲ್ಲಿಯೂ ಅರ್ಧವನ್ನಾದರೂ ಅಂದರೆ ಶ್ಲೋಕದ ಕಾಲುಭಾಗವನ್ನಾಗಲಿ ಅಭ್ಯಾಸ ಮಾಡಿದವನು ಬುದ್ಧಿವಂತನಾಗಿ ಸುಶರ್ಮನಂತೆ ಸಂಸಾರದಿಂದ ಬಿಡುಗಡೆಯನ್ನು ಹೊಂದುತ್ತಾನೆ.

॥ ಶ್ರೀರುವಾಚ ॥

ಸುಶರ್ಮಾ ನಾಮ ಕೋ ದೇವ ಕಿಂ ಜಾತೀಯಃ ಕಿಮಾತ್ಮಕಃ ।
ಕುತ್ರತ್ಯಸ್ತಸ್ಯ ವೈ ಮುಕ್ತಿಃ ಕೇನಾಽಜಾಯತ ಹೇತುನಾ ॥ ೩೦ ॥

॥ ಶ್ರೀ ಭಗವಾನುವಾಚ ॥

ಸುಶರ್ಮಾ ನಾಮ ದುರ್ಮೇಧಾಃ ಸೀಮಾ ಪಾಪಾತ್ಮನಾಮಭೂತ್ ।
ಅನಾಮ್ನಾಯವಿದಾಂ ವಂಶೇ ವಿಪ್ರಾಣಾಂ ಕ್ರೂರಕರ್ಮಣಾಂ ॥ ೩೧ ॥

ನ ಧ್ಯಾನಂ ನ ಜಪೋ ಹೋಮೋ ನೈವ ಚಾಽತಿಥಿಪೂಜನಂ ।
ಕೇವಲಂ ವಿಷಯೇಷ್ವೇವ ಲಾಂಪಟ್ಯೇನಾಭ್ಯವರ್ತತ ॥ ೩೨ ॥

ಹಲೇನ ವಿಲಿಖನ್ ಭೂಮಿಂ ಪರ್ಣಜೀವೀ ಸುರಾಪ್ರಿಯಃ ।
ಮಾಂಸೋಪಹಾರೈಸ್ಸ್ವಚಿರಂ ಕಾಲಮೇವಂ ನಿನಾಯ ಸಃ ॥ ೩೩ ॥

---

೩೦. ಲಕ್ಷ್ಮಿಯು ಹೇಳಿದಳು-ಎಲೈ ಸ್ವಾಮಿಯೆ ! ಸುಶರ್ಮನಾರು ? ಯಾವ ಜಾತಿಯವನು ? ಯಾವ ಸ್ಥಿತಿಯವನು ? ಎಲ್ಲಿದ್ದವನು ? ಅವನಿಗೆ ಮುಕ್ತಿಯು ಹೇಗುಂಟಾಯಿತು ?

೩೧. ಶ್ರೀ ಭಗವಂತನು ಹೇಳಿದನು—ಸುಶರ್ಮನೆಂಬುವನೊಬ್ಬನಿದ್ದನು. ಅವನು ಅಯೋಗ್ಯನು. ಪಾಪಿಗಳೊಳಗೆಲ್ಲಾ ಬಹು ಪಾಪಿಯು ಇವನ ವಂಶದವರು ವೇದಾಧ್ಯಯನವನ್ನು ಮಾಡಿದವರಲ್ಲ. ಕ್ರೂರಿಗಳು. ಇಂತಹ ಬ್ರಾಹ್ಮಣರ ವಂಶದಲ್ಲಿ ಇವನು ಹುಟ್ಟಿದ್ದನು.

೩೨. ಈತನು ಧ್ಯಾನಾದಿಗಳನ್ನು ಮಾಡುತ್ತಿರಲಿಲ್ಲ. ಜಪಮಾಡುತ್ತಿರಲಿಲ್ಲ. ಹೋಮಮಾಡುತ್ತಿರಲಿಲ್ಲ. ಅತಿಥಿಪೂಜೆಯಂತೂ ಇಲ್ಲವೇ ಇಲ್ಲ. ವಿಷಯ ಸುಖದಲ್ಲಿಯೇ ಆಸಕ್ತನಾಗಿ ಕಾಲವನ್ನು ಕಳೆಯುತ್ತಲಿದ್ದನು.

೩೩. ನೇಗಿಲಿನಿಂದ ಹೊಲವನ್ನು ಉಳುತ್ತಲಿದ್ದನು. ಎಲೆಗಳ ವ್ಯಾಪಾರದಿಂದಲೂ ಜೀವಿಸುತ್ತಿದ್ದನು. ಹೆಂಡವನ್ನು ಕುಡಿಯುತ್ತಿದ್ದನು ಮಾಂಸವನ್ನು ತಿನ್ನುತ್ತಿದ್ದನು. ಈ ರೀತಿಯಾಗಿಯೇ ಕಾಲವನ್ನೆಲ್ಲಾ ಕಳೆಯುತ್ತಲಿದ್ದನು.

ಆನೇತುಂಕಾಮಃ ಪರ್ಣಾನಿ ಪರ್ಯಟನ್ನೃಷಿವಾಟಿಕಾಂ ।
ತತಃ ಕಾಲೇನ ದಷ್ಟೋಽಭೂತ್ ಕಾಲಸರ್ಪೇಣ ಮೂಢಧೀಃ ॥ ೩೪ ॥

ಕಾಲಧರ್ಮಂ ಸಮಾಸಾದ್ಯ ಗತ್ವಾಽಥ ನಿರಯಾನ್ ಬಹೂನ್ ।
ಪುನರಾಗಮ್ಯ ಮರ್ತ್ಯೇಷು ಬಲೀವರ್ದತ್ವಮೇಯಿವಾನ್ ॥ ೩೫ ॥

ಪಂಗುನಾ ಕೇನ ಚಿತ್ ಕ್ರೀತಃ ತತಃ ಸ್ವಜೀವನಾಯ ಸಃ ।
ವಹನ್ ಪೃಷ್ಠೇನ ಶರದಃ ಸಪ್ತಾಷ್ಟೌ ಕಷ್ಟತೋಽನಯತ್ ॥ ೩೬ ॥

ಕದಾಚಿತ್ಪಂಗುನಾ ಉಚ್ಚೈಃ ಶ್ಚಿರಮಾವರ್ತಿತೋ ಜವಾತ್ ।
ಪಪಾತ ತರಸಾ ಭೂಮೌ ಮೂರ್ಛಾಂ ಚ ಪ್ರತಿಪೇದಿವಾನ್ ॥ ೩೭ ॥

ವಿವರ್ಣಾಂಗೋ ವಿವೃತ್ತಾಕ್ಷಃ ಫೇನಸಂತತಿಮುದ್ಗಿರನ್ ।
ನ ಜೀವತಿ ನ ಮೃತ್ಯುಂ ವಾ ಪ್ರತಿಪೇದೇ ಕುಕರ್ಮಣಾ ॥ ೩೮ ॥

---

೩೪. ಎಲೆಗಳನ್ನು ತರಲು ಋಷಿಗಳ ಮನೆಯ ಹತ್ತಿರ ಓಡಿಯಾಡುತ್ತಾ ಇದ್ದನು. ಕಾಲವು ಸಮೀಪಿಸಿದುದರಿಂದ ಹಾವಿನಿಂದ ಕಚ್ಚಲ್ಪಟ್ಟನು.

೩೫. ಈ ರೀತಿಯಾಗಿ ಹಾವಿನ ವಿಷವೇರಿ ಸತ್ತುಹೋಗಿ ಅನೇಕವಾದ ನರಕಗಳನ್ನು ಅನುಭವಿಸಿ ಮತ್ತೆ ಮನುಷ್ಯನಾಗಿ ಹುಟ್ಟಿ ಮತ್ತೆ ಸತ್ತು ಕೊನೆಗೆ ಒಂದು ಎತ್ತಾಗಿ ಹುಟ್ಟಿದನು.

೩೬. ಒಬ್ಬ ಕುಂಟನು ಆ ಎತ್ತನ್ನು ಕುಳಿತುಕೊಂಡು ಸುತ್ತುವುದಕ್ಕೆ ಕೊಂಡು ಕೊಂಡನು. ಅವನು ಅದನ್ನು ಕೊಂಡು ಕೊಂಡಮೇಲೆ ಅವನನ್ನು ಆ ಎತ್ತು ಏಳೆಂಟುವರ್ಷಗಳವರೆಗೂ ಹೊತ್ತುಕೊಂಡು ಸುತ್ತುತ್ತಿದ್ದಿತು.

೩೭. ಒಂದು ಸಾರಿ ಆ ಕುಂಟನು ಅದು ಜಾಗ್ರತೆಯಾಗಿ ತಿರುಗುವುದಕೋಸ್ಕರ ಅದರ ತಲೆಯನ್ನು ತಿರುಗಿಸುಲು ಅದು ಬಿದ್ದು ಬಿಟ್ಟಿತು. ಏಟನ್ನು ತಡೆಯಲಾರದೆ ಮೂರ್ಛೆಹೊಂದಿತು.

೩೮. ಆಗ ಆ ಎತ್ತು ಕೈಕಾಲುಗಳನ್ನು ಸಿಕ್ಕಿದಂತೆ ಅಲ್ಲಾಡಿಸುತ್ತಾ ಕಣ್ಣುಗಳನ್ನು ಮರಳಿಸುತ್ತ ನೊರೆಯನ್ನು ಕಕ್ಕುತ್ತಿದ್ದಿತು. ಈ ರೀತಿಯಾಗಿ ತನ್ನ ಪೂರ್ವಜನ್ಮದ ಪಾಪದಿಂದ ಸಾಯಲಾರದೆಯೂ, ಬದುಕಲಾರದೆಯೂ ಒದ್ದಾಡುತ್ತಿದ್ದಿತು.

ಕೌತುಕಾಕೃಷ್ಟಲೋಕೇಸ್ಮಿನ್ ತಸ್ಮಿನ್ ಜನಸಮಾಗಮೇ ।
ಶ್ರೇಯಸೇ ತಸ್ಯ ಸುಕೃತೀ ಕಶ್ಚಿತ್ಸ್ವಪುಣ್ಯಂ ವಿತೀರ್ಣವಾನ್ || ೩೯ ||

ಕರ್ಮಾಣಿ ಸ್ವಾನ್ಯನುಸ್ಮೃತ್ಯ ದದುರನ್ಯೇ ಚ ಕೇಚನ ।
ಗಣಿಕಾ ಕಾಽಪಿ ತತ್ರಸ್ಥಾ ಲೋಕಯಾತ್ರಾಽನುವರ್ತಿನೀ || ೪೦ ||

ಅಜ್ಞಾತನಿಜಪುಣ್ಯಾ ಸಾ ಕಿಂಚಿದುತ್ಸೃಷ್ಟವತ್ಯಭೂತ್ ।
ಪರೇತನಗರೀಮಾದೌ ಸ ನೀತಃ ಕಾಲಕಿಂಕರೈಃ || ೪೧ ||

ಗಣಿಕಾದತ್ತಪುಣ್ಯೇನ ಪುಣ್ಯವಾನಿತಿ ಮೋಚಿತಃ ।
ಪುನರಾಗತ್ಯ ಭೂರ್ಲೋಕೇ ಕುಲಶೀಲವತಾಂ ಗೃಹೇ || ೪೨ ||

ದ್ವಿಜನ್ಮನಾಮಸೌ ಜಜ್ಞೇ ಜಾತಿಂ ಸ್ವಾಮನುಸಂಸ್ಮರನ್ ।
ಕಾಲೇ ಮಹತಿ ಜಿಜ್ಞಾಸುಃ ಶ್ರೇಯಃ ಸ್ವಾಜ್ಞಾನನೋದನಂ || ೪೩ ||

---

೩೯. ಇದರ ಕಷ್ಟವನ್ನು ನೋಡಲು ಜನಗಳೆಲ್ಲಾ ಗುಂಪುಕೂಡಿದರು. ಅವರಲ್ಲಿ ಒಬ್ಬ ಪುಣ್ಯಾತ್ಮನು ಅದು ಬದುಕಲೆಂಬುದಾಗಿ ತನ್ನ ಪುಣ್ಯದಲ್ಲಿ ಸ್ವಲ್ಪಭಾಗವನ್ನು ಕೊಟ್ಟನು.

೪೦. ಅಲ್ಲಿರತಕ್ಕವರೆಲ್ಲರೂ ತಮ್ಮ ತಮ್ಮ ಪುಣ್ಯಗಳನ್ನು ಜ್ಞಾಪಿಸಿಕೊಂಡು ಅವುಗಳಲ್ಲಿ ಕೊಂಚ ಕೊಂಚವನ್ನು ಕೊಟ್ಟರು. ಅವರಲ್ಲಿ ಒಬ್ಬಳು ಲೋಕನಡತೆಯನ್ನು ಮೀರದಿರುವ ಸೂಳೆಯಿದ್ದಳು.

೪೧. ಆ ಸೂಳೆಗೆ ತಾನೇನು ಪುಣ್ಯಮಾಡಿದ್ದೇನೆಂಬುದೇ ಗೊತ್ತಿರಲಿಲ್ಲ. ಅದರೂ ಆಕೆಯು ನಾನು ಮಾಡಿರುವ ಪುಣ್ಯವೇನಾದರೂ ಇದ್ದರೆ ಇದಕ್ಕೆ ಸೇರಲಿ. ಎಂಬುದಾಗಿ ಹೇಳಿಕೊಟ್ಟಳು. ಅನಂತರ ಆ ಎತ್ತು ಸತ್ತುಹೋಯಿತು. ಯಮನ ಆಳುಗಳು ಅದನ್ನು ಎಳೆದುಕೊಂಡು ಹೋದರು.

೪೨–೪೩. ಸೂಳೆಯು ಕೊಟ್ಟ ಪುಣ್ಯದಿಂದ ಅವನನ್ನು ಪುಣ್ಯವಂತನೆಂದು ತಿಳಿದು ಯಮನು ಬಿಟ್ಟು ಬಿಟ್ಟನು. ಅನಂತರ ಅವನು ಭೂಲೋಕದಲ್ಲಿ ಕುಲಶೀಲವಂತರಾದ ಬ್ರಾಹ್ಮಣರ ಮನೆಯಲ್ಲಿ ಹುಟ್ಟಿದನು ಅವನಿಗೆ ಹಿಂದಿನ ಜನ್ಮದ ಜ್ಞಾನವಿದ್ದಿತು. ಬಹುಕಾಲವಾದ ನಂತರ ತನ್ನ ಅಜ್ಞಾನವನ್ನು ನಾಶ ಮಾಡಿ ತನಗೆ ಶ್ರೇಯಸ್ಸನ್ನುಂಟುಮಾಡಿದ ಆ ಪುಣ್ಯವನ್ನು ತಿಳಿಯಲು ಮತ್ತು ಆಕೆಯನ್ನು ನೋಡಲೂ ಇಷ್ಟಪಟ್ಟನು.

ಉಪೇತ್ಯ ಗಣಿಕಾಂ ದತ್ತಂ ಖ್ಯಾಪಯಿತ್ವಾ ಸ ಪೃಷ್ಟವಾನ್ ।
ಆಚಷ್ಟ ಸಾ ಶುಕೋ ನಿತ್ಯಂ ಪಂಜರಸ್ಥಃ ಪಠತ್ಯಯಂ ॥ ೪೪ ॥

ತೇನ ಪೂತಾಂತರಾತ್ಮಾಽಹಂ ತತ್ಪುಣ್ಯಂ ಪರ್ಯಕಲ್ಪಯಂ ।
ತಾಭ್ಯಾಂ ಶುಕಸ್ತು ಪೃಷ್ಟೋಽಸೌ ವ್ಯಾಖ್ಯಾತುಮುಪಚಕ್ರಮೇ ॥
ಆಖ್ಯಾಯಿಕಾಂ ಪುರಾ ವೃತ್ತಾಂ ಸ್ಮೃತ್ವಾ ಜಾತಿಂ ನಿಜಾಮಪಿ ॥ ೪೫ ॥

॥ ಶುಕ ಉವಾಚ ॥

ಪುರಾ ವಿದ್ವಾನಹಂ ಭೂತ್ವಾ ವೈದುಷ್ಯಸ್ಮಯಮೋಹಿತಃ ।
ರಾಗದ್ವೇಷೇಣ ವಿದ್ವತ್ಸು ಗುಣವತ್ಸ್ವಪಿ ಮತ್ಸರೀ ॥ ೪೬ ॥

ಕಾಲೇನಾಽಹಂ ತತಃ ಪ್ರೇತ್ಯ ಪ್ರಾಪ್ಯ ಲೋಕಾನ್ ಜುಗುಪ್ಸಿತಾನ್ ।
ಸೋಽಹಂ ಕೀರಕುಲೇಽಭೂವಂ ಸದ್ಗುರಾವತಿನಿಂದಕಃ ॥ ೪೭ ॥

---

೪೪. ಆ ಸೂಳೆಯ ಮನೆಗೆ ಹೋಗಿ ಆಕೆಯು ಕೊಟ್ಟಿದ್ದ ಧರ್ಮವನ್ನು ಹೇಳಿ ಈ ಧರ್ಮವು ನಿನಗೆ ಬರಲು ಕಾರಣವೇನೆಂದು ಕೇಳಿದನು. ಆಗ ಆಕೆಯು ಪಂಜರದಲ್ಲಿರುವ ಈ ಗಿಣಿಯು ನಿತ್ಯವೂ ಇದನ್ನು ಹೇಳುತ್ತಿದೆ.

೪೫. ಅದನ್ನು ಕೇಳುವುದರಿಂದ ನಾನು ಪವಿತ್ರಳಾಗಿದ್ದೇನೆ. ಆ ಪುಣ್ಯವನ್ನು ನಿನಗೆ ಕೊಟ್ಟಿದ್ದೇನೆ. ಎನ್ನಲು ಆಗ ಅವರಿಬ್ಬರೂ ಸೇರಿ ಆ ಗಿಳಿಯನ್ನು ಕೇಳಿದರು. ಆಗ ಆ ಗಿಳಿಯು ಅದನ್ನು ವಿವರಿಸಲು ಮೊದಲುಮಾಡಿ ತನ್ನ ಜಾತಿಯನ್ನೂ ತನ್ನ ಸ್ಥಿತಿಯನ್ನೂ ಜ್ಞಾಪಿಸಿಕೊಂಡು ತನ್ನ ಕಥೆಯನ್ನು ಹೇಳಲು ಮೊದಲು ಮಾಡಿತು.

೪೬. ಗಿಳಿಯು ಹೇಳಿತು-ನಾನು ಹಿಂದೆ ದೊಡ್ಡವಿದ್ವಾಂಸನಾಗಿದ್ದೆನು. ಆ ವಿದ್ವತ್ತಿನ ಹೆಮ್ಮೆಯಿಂದ ನನಗೆ ವಿವೇಕ ಜ್ಞಾನವು ಹೋಗಿದ್ದಿತು. ಆದುದರಿಂದ ರಾಗದ್ವೇಷಗಳು ಹೆಚ್ಚಿ ಗುಣಗಳಾದ ವಿದ್ವಾಂಸರಲ್ಲಿಯೂ (ಸದ್ಗುಣಿಗಳಲ್ಲಿಯೂ) ಹೊಟ್ಟೆಕಿಚ್ಚು ಪಡುತ್ತಿದ್ದೆನು.

೪೭. ಹೀಗಿರುತ್ತಿರಲು ಕೆಲವು ಕಾಲದಮೇಲೆ ನಾನು ಮೃತನಾದೆನು. ಅನೇಕವಾದ ನರಕಗಳನ್ನು ಹೊಂದಿ ಅಲ್ಲಿ ಪಾಪಕರ್ಮವನ್ನನುಭವಿಸಿ ಸದ್ಗುರುವನ್ನು ನಿಂದಿಸಿದುದರ ಫಲವಾಗಿ ಗಿಳಿಯಾಗಿ ಹುಟ್ಟಿದೆನು.

ಕಾಲಧರ್ಮೇಣ ದುಷ್ಕರ್ಮಾ ಪಿತೃಭ್ಯಾಂ ಚ ವಿಯೋಜಿತಃ ।
ನಿದಾಘೇಽಧ್ವನಿ ಸಂತಪ್ತ ಆನೀತೋಸ್ಮ್ಯೃಷಿಪುಂಗವೈಃ ॥ ೪೮ ॥

ಪಾಲಿತಃ ಪಂಜರಸ್ಥೋಽಹಮಾಶ್ರಮೇ ಮಹದಾಶ್ರಯೇ ।
ಆವರ್ತಯದ್ಭ್ಯೋ ಗೀತಾನಾಮಾದ್ಯಮಧ್ಯಾಯಮಾದರಾತ್ ॥ ೪೯ ॥

ಶ್ರುತ್ವಾ ಋಷಿಕುಮಾರೇಭ್ಯಃ ಪಾಠಂ ಚಾಕರವಂ ಮುಹುಃ ।
ಏತಸ್ಮಿನ್ನಂತರೇ ಕಶ್ಚಿದ್ವ್ಯಾಗುರಿಶ್ಚೌರಕರ್ಮಕೃತ್ ॥
ಮಾಮಾಹೃತ್ಯ ತದಾಽಕ್ರೀಣಾದಿತಿ ವೃತ್ತಮುದಾಹೃತಂ ॥ ೫೦ ॥

॥ ಶ್ರೀ ಭಗವಾನುವಾಚ ॥

ಅಧ್ಯಾಯೋಽಯಂ ಪುರಾಮ್ನಾತೋ ಯೇನ ಪಾಪಮನೋದಯಂ ।
ಪೂತಾಂತರಾತ್ಮಾ ಯೇನಾಸೌ ಮೋಚಿತಶ್ಚ ದ್ವಿಜೋತ್ತಮಃ ॥ ೫೧ ॥

---

೪೮. ಕೆಲವು ಕಾಲವಾಗುತ್ತಲೂ ತಾಯಿತಂದೆಗಳು ನನ್ನನ್ನು ಬಿಟ್ಟು ಬಿಟ್ಟರು. ಆಗ ಒಂದು ದಿನ ಬಿಸಿಲುಕಾಲದ ಬಿಸಿಲಿನಿಂದ ತೊಂದರೆಪಡುತ್ತಿದ್ದ ನನ್ನನ್ನು ನೋಡಿ ಋಷಿಗಳು ನನ್ನನ್ನು ತೆಗೆದುಕೊಂಡು ಹೋದರು.

೪೯. ಆ ದೊಡ್ಡವಿದ್ವಾಂಸರಿರುವ ಆಶ್ರಮದಲ್ಲಿ ನನ್ನನ್ನು ಪಂಜರವಲ್ಲಿಟ್ಟು ಗೀತೆಯ ಮೊದಲನೆಯ ಅಧ್ಯಾಯವನ್ನು ಆ ಹುಡುಗರು ಆವೃತ್ತಿಮಾಡುತ್ತ ಅದನ್ನು ನನಗೂ ಕಲಿಸಿದರು.

೫೦. ಅದನ್ನು ಆ ಋಷಿಗಳ ಮುಖದಿಂದ ಕೇಳುತ್ತಾ ಬಾಯಿಪಾಠ ಮಾಡಿಕೊಂಡೆನು. ಇಷ್ಟರಲ್ಲಿ ಒಬ್ಬ ಬೇಡನು ಮೋಸದಿಂದ ಬಲೆಯನ್ನು ಒಡ್ಡಿ ನನ್ನನ್ನು ಹಿಡಿದುಕೊಂಡು ಬಂದು ಈಕೆಗೆ ಮಾರಲು ಈಕೆಯು ಕೊಂಡುಕೊಂಡಳು.

೫೧. ಶ್ರೀ ಭಗವಂತನು ಹೇಳಿದನು-ಓಹೊ! ಈ ಅಧ್ಯಾಯವು ಗೀತೆಯಲ್ಲಿ ಹೇಳಲ್ಪಟ್ಟಿದೆ. ಇದರಿಂದ ನನ್ನ ಪಾಪವು ಹೋಯಿತು. ಎಂದು ಆ ಬ್ರಾಹ್ಮಣನೆಂದುಕೊಂಡನು. ಓಹೋ! ಈ ಗೀತೆಯ ಮೊದಲನೆಯ ಅಧ್ಯಾಯದಿಂದ ಇವನು ಪಾಪದಿಂದ ಮುಕ್ತನಾದನು. ಎಂದು ಸೂಳೆಯೂ ಎಂದುಕೊಂಡಳು.

ಏವಮನ್ಯೋನ್ಯಮಾಭಾಷ್ಯ ತನ್ಮಾಹಾತ್ಮ್ಯಂ ಪ್ರಶಸ್ಯ ಚ ।
ತೇ ಜಪಂತೋಽನಿಶಂ ಧೀರಾ ಮುಕ್ತಿಮಾಹೋ ಪ್ರಪೇದಿರೇ || ೫೨ ||

ತಸ್ಮಾದಧ್ಯಾಯಮಾದ್ಯಂ ಯಃ ಪಠತೇ ಶೃಣುತೇ ತು ಯಃ ।
ಅಭ್ಯಸೇತ್ತಸ್ಯ ನ ಭವೇದ್ಭವಾಂಭೋಧಿರ್ದುರುತ್ತರಃ || ೫೩ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಗೀತಾ ಮಾಹಾತ್ಮ್ಯೇ ಪ್ರಥಮಾಧ್ಯಾಯ ಮಾಹಾತ್ಮ್ಯಂ
ನಾಮ ಏಕಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೨. ಈ ರೀತಿಯಾಗಿ ತಿಳಿದಮೇಲೆ ಆ ಗೀತಾಧ್ಯಾಯದ ಮಹಿಮೆಯನ್ನು ಒಬ್ಬರಿಗೊಬ್ಬರು ಹೇಳಿ ಹೊಗಳಿಕೊಳ್ಳುತ್ತಿದ್ದರು. ಅದೇ ರೀತಿಯಾಗಿ ಅವರು ನಿತ್ಯವೂ ಜಪಿಸುತ್ತ ಮುಕ್ತಿಯನ್ನು ಹೊಂದಿದರು.

೫೩. ಆದುದರಿಂದ ಈ ಗೀತೆಯ ಮೊದಲನೆಯ ಅಧ್ಯಾಯವನ್ನು ಕೇಳಿದವನೂ ಹೇಳಿದವನೂ ಅಭ್ಯಾಸಮಾಡಿದವನೂ ಈ ದಾಟಲಸಾಧ್ಯವಾದ ಸಂಸಾರ ಸಾಗರವನ್ನು ಸುಖವಾಗಿ ದಾಟುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಗೀತಾ ಮಹಿಮೆಯಲ್ಲಿ ಮೊದಲನೆಯ ಅಧ್ಯಾಯದ ಮಹಿಮೆ
ಎಂಬ ನೂರ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ ॥



**॥ ಶ್ರೀ ಭಗವಾನುವಾಚ ॥**

**ಆದಿಮಸ್ಯೈವಮಾಖ್ಯಾನಮುದೀರಿತಮನುತ್ತಮಂ ।**
**ಶೃಣು ಮಾಹಾತ್ಮ್ಯಮನ್ಯೇಷಾಮಧ್ಯಾಯಾನಾಮಪೀಂದಿರೇ ॥ ೧ ॥**

**ದಕ್ಷಿಣಸ್ಯಾಂ ದಿಶಿ ಶ್ರೀಮಾನ್ ಆಸೀದಾಮ್ನಾಯವೇದಿನಾಂ ।**
**ಪುರೇ ಪುರಂದರಾಹ್ವಾನೇ ದೇವಶರ್ಮೇತಿ ವಿಶ್ರುತಃ ॥ ೨ ॥**

**ಅರ್ಚಿತಾಽಥಿರಾಮ್ನಾತೋ ವೇದಶಾಸ್ತ್ರವಿಶಾರದಃ ।**
**ಆಹರ್ತಾ ಕ್ರತುಸಂಘಾನಾಂ ತಾಪಸಾನಾಂ ಪ್ರಿಯಸ್ಸದಾ ॥ ೩ ॥**

---

## ನೂರ ಎಪ್ಪತ್ತೆರಡನೆಯ ಅಧ್ಯಾಯವು



೧. ಶ್ರೀ ಭಗವಂತನು ಹೇಳಿದನು-ಎಲೈ ಲಕ್ಷ್ಮಿಯೆ! ಮೊದಲನೆಯ ಅಧ್ಯಾಯದ ಮಹಿಮೆಯ ಕಥೆಯನ್ನು ಈ ರೀತಿಯಾಗಿ ಹೇಳಿದೆನು. ಮತ್ತೆ ಉಳಿದ ಅಧ್ಯಾಯಗಳ ಮಹಿಮೆಯ ಕಥೆಯನ್ನೂ ಕೇಳು.

೨. ದಕ್ಷಿಣ ದೇಶದಲ್ಲಿ ವೇದಾಧ್ಯಯನ ಮಾಡಿರುವವರ ಅಗ್ರಹಾರವೊಂದುಂಟು. ಅದರ ಹೆಸರು ಪುರಂದರ ಅಗ್ರಹಾರವೆಂದು. ಅಲ್ಲಿ ದೇವಶರ್ಮನೆಂಬುವನಿದ್ದನು.

೩-೪. ಅವನು ವೇದಶಾಸ್ತ್ರಗಳನ್ನೆಲ್ಲಾ ಓದಿಕೊಂಡು ಅತಿಥಿಗಳನ್ನು ಪೂಜಿಸುತ್ತಿದ್ದನು. ಅನೇಕ ಯಾಗಗಳನ್ನು ಮಾಡಿದ್ದನು. ತಪಸ್ವಿಗಳಿಗೆ

ದೇವಾನ್ ಸಂತರ್ಪಯಾಮಾಸ ದ್ರವ್ಯೈರ್ಹುತವಹೇ ಚಿರಂ ।
ನ ಚೋಪಲೇಭೇ ಧರ್ಮಾತ್ಮಾ ಶಾನ್ತಿಮೈಕಾಂತಿಕೀಂ ತತಃ ॥ ೪ ॥

ನಿಶ್ಶ್ರೇಯಸಂ ಸ ಜಿಜ್ಞಾಸುಸ್ತಾಪಸಾನನುವಾಸರಂ ।
ಸಿಷೇವೇ ಸತ್ಯಸಂಕಲ್ಪಾನನಲ್ಪೈರೇವ ಕಲ್ಪಕೈಃ ॥ ೫ ॥

ಏವಮಾಚರತಸ್ತಸ್ಯ ಕಾಲೇ ಮಹತಿ ಗಚ್ಛತಿ ।
ಮುಕ್ತಕರ್ಮಾ ತತಃ ಕಶ್ಚಿತ್ಪ್ರಾದುರಾಸೀತ್ಪುರಾ ಭುವಿ ॥ ೬ ॥

ಅನುಭೂತೋ ನಿರಾಕಾಂಕ್ಷೀ ನಾಸಾಗ್ರನ್ಯಸ್ತಲೋಚನಃ ।
ಶಾಂತಚೇತಾಃ ಪರಂ ಬ್ರಹ್ಮ ಧ್ಯಾಯನ್ನಾನಂದನಿರ್ಭರಃ ॥ ೭ ॥

ಪಾದೌ ತಸ್ಯೋಪಸಂಗೃಹ್ಯ ಪ್ರಣತೇನಾಂತರಾತ್ಮನಾ ।
ಚಕಾರ ವಿಧಿವತ್ತಸ್ಮೈ ವಿದ್ವಾನತಿಥಿಸತ್ಕ್ರಿಯಾಂ ॥ ೮ ॥

---

ಪ್ರಿಯನಾಗಿದ್ದನು. ಅನೇಕ ಹೋಮಗಳನ್ನು ಮಾಡಿ ದೇವತೆಗಳನ್ನು ತೃಪ್ತಿಪಡಿಸಿದ್ದನು. ಆದರೂ ಕೂಡ ಅವನಿಗೆ ಮನಶ್ಶಾಂತಿಯು ಉಂಟಾಗಿರಲಿಲ್ಲ.

೫. ಅವನು ಮೋಕ್ಷದ ವಿಷಯವನ್ನು ಪ್ರತಿದಿನವೂ ಚರ್ಚಿಸುತ್ತ ನಿತ್ಯವೂ ಅನೇಕರಾದ ತಪಸ್ವಿಗಳನ್ನು ಸೇರಿಸುತ್ತ ಅನೇಕ ಬಗೆಯಾಗಿ ತಿಳಿಯುತ್ತ ಬಂದನು.

೬. ಹೀಗೆ ಮಾಡುತ್ತಿರಲು ಅನೇಕ ಕಾಲವು ಕಳೆಯಿತು. ಕೊನೆಗೆ ಒಂದು ಬಾರಿ ಕರ್ಮಗಳನ್ನೆಲ್ಲಾ ಬಿಟ್ಟಿದ್ದ ಒಬ್ಬನು ಅವನ ಎದುರಿಗೆ ಬಂದನು.

೭. ಆಸೆಯನ್ನು ಬಿಟ್ಟು ಮೂಗಿನ ಮೇಲೆ (ತುದಿಯಲ್ಲಿ) ಕಣ್ಣನ್ನಿಟ್ಟುಕೊಂಡು ಶಾಂತಚಿತ್ತನಾಗಿ ಪರಬ್ರಹ್ಮನನ್ನು ಧ್ಯಾನಿಸುತ್ತ ಆನಂದದಿಂದ ಕೂಡಿದ ಅವನನ್ನು ಸೇವಿಸಿದನು.

೮. ನಮ್ರನಾಗಿ ಶುದ್ಧವಾದ ಮನಸ್ಸಿನಿಂದ ಅವನ ಪಾದಗಳಿಗೆ ನಮಸ್ಕರಿಸಿ ಅವನಿಗೆ ವಿಧಿಯ ಪ್ರಕಾರ ಸತ್ಕ್ರಿಯೆಗಳನ್ನು ಮಾಡಿದನು.

ತಂ ಚ ಶುದ್ಧೇನ ಭಾವೇನ ಪರಿತುಷ್ಟಂ ತಪಸ್ವಿನಂ ।
ಪ್ರಣತಃ ಪರಿಪಪ್ರಚ್ಛ ನಿರ್ವಾಣಸ್ಥಿತಿಮಾತ್ಮನಃ ॥ ೯ ॥

ಸ ತಸ್ಮೈ ಕಥಯಾಮಾಸ ಪುರೇಽಸೌ ಪುರನಾಮನಿ ।
ಮಿತ್ರವಂತಮಜಾಪಾಲಮುಪದೇಷ್ಟಾರಮಾತ್ಮವಿತ್ ॥ ೧೦ ॥

ಸ ಚಾಽಭಿವಂದ್ಯ ತತ್ಪಾದಾವೇತ್ಯಾಸೌ ಪುರಮೂರ್ಜಿತಂ ।
ತಸ್ಯೋತ್ತರದಿಶೋ ಭಾಗೇ ದದರ್ಶ ವಿಪುಲಂ ವನಂ ॥ ೧೧ ॥

ಮರುದಾನ್ದೋಳಿತಾನೇಕಕುಸುಮಾಮೋದಸುಂದರಂ ।
ಉನ್ಮತ್ತಭ್ರಮರೋದ್ಗೀತನಾದಪೂರಿತದಿಙ್ಮುಖಂ ॥ ೧೨ ॥

ತಸ್ಮಿನ್ವನೇ ಸರಿತ್ತೀರೇ ನಿಷೀದಂತಂ ಶಿಲಾತಲೇ ।
ಮಿತ್ರವಂತಂ ದದರ್ಶಾಽಥ ಸಾನಂದಸ್ತಿಮಿತೇಕ್ಷಣಂ ॥ ೧೩ ॥

---

೯. ಆ ತಪಸ್ವಿಯು ಆತನ ಶುದ್ಧಭಾವದಿಂದ ಸಂತೋಷಗೊಂಡನು ಈ ದೇವಶರ್ಮನು ಆತನಿಗೆ ನಮಸ್ಕರಿಸಿ ತನ್ನ ಸಾವಿನ ವಿಷಯವನ್ನು ಕೇಳಿದನು.

೧೦. ಆಗ ಆ ಯೋಗಿಯು ಇವನನ್ನು ಕುರಿತು ಇಲ್ಲಿ ಪುರವೆಂಬ ಒಂದು ಊರಿರುವುದು. ಅಲ್ಲಿ ಆಡುಗಳನ್ನು ರಕ್ಷಿಸುತ್ತಿರುವ ಮಿತ್ರವಂತನೆಂಬುವನೊಬ್ಬ ನಿರುವನು. ಅವನು ನಿನಗೆ ಎಲ್ಲವನ್ನೂ ಉಪದೇಶಿಸುವನು. ಎಂದು ಹೇಳಿದನು.

೧೧-೧೨ ಈ ದೇವಶರ್ಮನು ಆ ಯೋಗಿಯನ್ನು ನಮಸ್ಕರಿಸಿ ಆ ಮಿತ್ರವಂತನು ವಾಸಿಸುವ ಪುರಕ್ಕೆ ಹೋದನು ಆ ಊರಿನ ಉತ್ತರ ದಿಕ್ಕಿನಲ್ಲಿ ಒಂದು ದೊಡ್ಡದಾದ ವನವಿರುವುದು. ಆ ವನದಲ್ಲಿ ಅನೇಕವಾದ ಹೂಗಳಿಂದ ಪ್ರಕಾಶಮಾನವಾದ ಬಳ್ಳಿಗಳಿದ್ದವು. ಅವನ್ನು ಗಾಳಿಯು ಅಲ್ಲಾಡಿಸುತ್ತಿದ್ದುದರಿಂದ ಮನೋಹರವಾಗಿದ್ದಿತು. ಮತ್ತು ಉನ್ಮತ್ತವಾದ ಭ್ರಮರಗಳು ಮಧುರವಾಗಿ ಕೂಗುತ್ತಿದ್ದುದರಿಂದ ರಮ್ಯವಾಗಿದ್ದಿತು.

೧೩. ಆ ಕಾಡಿನಲ್ಲಿರುವ ಒಂದು ನದಿಯ ದಡದಲ್ಲಿ ಕಲ್ಲಿನ ಮೇಲೆ ಕಣ್ಣನ್ನು ಮುಚ್ಚಿಕೊಂಡು ಆನಂದದಿಂದಿರುವ ಆ ಮಿತ್ರವಂತನನ್ನು ನೋಡಿದನು.

ಅಪಿ ಸ್ವಾಭಾವಿಕಂ ವೈರಂ ಹಿತ್ವಾಽನ್ಯೋನ್ಯಂ ವಿರೋಧಿಭಿಃ ।
ಸತ್ವೈರಾವೃತಮುದ್ಯಾನೇ ಮಂದಸ್ಯಂದನಭಸ್ವತಿ ॥ ೧೪ ॥

ಶಾಂತೇಷು ಮೃಗಯೂಥೇಷು ದೃಶಾನಂದಮನೋಜ್ಞಯಾ ।
ಕೃಪಾನುವಿದ್ಧಯಾ ಭೂಮಿಂ ನಿಷಿಂಚಂತಮಿವಾಮೃತಂ ॥ ೧೫ ॥

ಉಪೇತ್ಯ ವಿಸಯೇನಾಮುಮುನ್ಮನಾಃ ಪ್ರೀತಮಾನಸಃ ।
ಕಿಂಚಿದಾನಮ್ರಶಿರಸಾ ತೇನಾಽಪಿ ಸ ತು ಸತ್ಕೃತಃ ॥ ೧೬ ॥

ಉಪತಸ್ಥೇ ತತೋ ವಿದ್ವಾನ್ಮಿತ್ರವಂತಮುಸನ್ಯಧೀಃ ।
ಸಮಾಪ್ತಧ್ಯಾನಕಾಲಂ ತಂ ಪರ್ಯಪೃಚ್ಛತ್ಸಮೀಹಿತಂ ॥ ೧೭ ॥

॥ ದೇವಶರ್ಮೋವಾಚ ॥

ಆತ್ಮಾನಂ ವೇತ್ತುಮಿಚ್ಛಾಮಿ ತದಮುಷ್ಮಿನ್ಮನೋರಥೇ ।
ಲಬ್ಧಸಿದ್ಧಿಮುಪಾಯಂ ಮಾಂ ಉಪದೇಷ್ಟುಂ ತ್ವಮರ್ಹಸಿ ॥ ೧೮ ॥

---

೧೪-೧೫. ಇಲ್ಲಿನ ಪ್ರಾಣಿಗಳು ತಮ್ಮ ತಮ್ಮ ಸ್ವಭಾವವಾದ ವೈರವನ್ನು ಬಿಟ್ಟು ಸ್ನೇಹದಿಂದಿದ್ದುವು. ಗಾಳಿಯು ನಿಧಾನವಾಗಿ ಬೀಸುತ್ತಿದ್ದಿತು. ಮೃಗಗಳೆಲ್ಲವೂ ಶಾಂತವಾಗಿರಲು ಆನಂದವಾಗಿರುವ ಮನಸ್ಸನ್ನು ತೋರಿಸುವ ದೃಷ್ಟಿಯಿಂದಲೂ ಕೃಪೆಯ ದೃಷ್ಟಿಯಿಂದಲೂ ಭೂಮಿಗೆ ಅಮೃತವನ್ನು ಚುಮುಕಿಸುವಂತೆ ಇದ್ದನು.

೧೬. ಈ ದೇವಶರ್ಮನು ಅವನ ಬಳಿಗೆ ಹೋಗಿ ಸಂತೋಷಗೊಂಡನು. ಅಲ್ಲಿ ತಲೆಯನ್ನು ತಗ್ಗಿಸಿಕೊಂಡು ನಮಸ್ಕರಿಸಿದನು. ಆತನೂ ಕೂಡ ಇವನನ್ನು ಕರೆದು ಯೋಗಕ್ಷೇಮವನ್ನು ವಿಚಾರಿಸಿ ಗೌರವಿಸಿ ಸತ್ಕರಿಸಿದನು.

೧೭. ಆಗ ಆ ವಿದ್ವಾಂಸನು ಒಂದೇ ಮನಸ್ಸಿನಿಂದ ಇರುತ್ತಿರಲು ಧ್ಯಾನಕಾಲವು ಮುಗಿದ ಮೇಲೆ ಮಿತ್ರವಂತನು ಇವನನ್ನು ನಿನ್ನ ಇಚ್ಛೆಯೇನೆಂದು ಕೇಳಿದನು.

೧೮ ದೇವಶರ್ಮನು ಹೇಳಿದನು ಅಯ್ಯಾ ! ನಾನು ಆತ್ಮಸ್ವರೂಪವನ್ನು ಕೇಳಬೇಕೆಂದಿದ್ದೇನೆ. ಈ ರೀತಿಯಾದ ಅಪೇಕ್ಷೆಯು ಕೈಗೂಡಲು ನನಗೆ ಸಿದ್ಧಿಯಾಗುವಂತೆ ಉಪದೇಶ ಮಾಡಲು ನೀನು ಯೋಗ್ಯನಾಗಿದ್ದೀಯೆ !

॥ ಶ್ರೀ ಭಗವಾನುವಾಚ ॥

ಪರಾಮೃಶ್ಯ ಕ್ಷಣಂ ಸೋಽಪಿ ಮಿತ್ರವಾನಿದಮಬ್ರವೀತ್ ॥ ೧೯ ॥

॥ ಮಿತ್ರವಾನುವಾಚ ॥

ವಿದ್ವನ್ ವಿದ್ಧಿ ಪುರಾವೃತ್ತಮುಚ್ಯಮಾನಮಿದಂ ಮಯಾ ।
ಅಸ್ತಿ ಗೋದಾನದೀತೀರೇ ಪ್ರತಿಷ್ಠಾನಾಭಿದಂ ಪುರಂ ॥ ೨೦ ॥

ತತ್ರ ದುರ್ದಮನಾಮಾಸೀದನ್ವಯೇ ಚ ಮನೀಷಿಣಾಂ ।
ತತ್ರಾಽಸ್ತಿ ವಿಕ್ರಮೋ ನಾಮ ಸೇವ್ಯಮಾನೋ ಮಹೀಪತಿಃ ॥ ೨೧ ॥

ದಾನಾನಿ ಪ್ರತ್ಯಹಂ ಗೃಹ್ಣನ್ ವರ್ತತೇ ಸ್ವೋದರಂಭರಃ ।
ಕಾಲೇನ ಕಾಲಪಾಶೇನ ಬದ್ಧ್ವಾ ನೀತೋ ಯಮಾಲಯಂ ॥ ೨೨ ॥

ನಿರಯಾನಧಿಗಮ್ಯಾಽಸಾವಾವರ್ತತ ಪುನರ್ಭವಂ ।
ಕಸ್ಮಿಂಶ್ಚಿತ್ಸ ಕುಲೇ ಜಾತೋ ದುರ್ವೃತ್ತಾನಾಂ ದ್ವಿಜನ್ಮನಾಂ ॥ ೨೩ ॥

---

೧೯. ಶ್ರೀ ಭಗವಂತನು ಹೇಳಿದನು- ಕ್ಷಣಕಾಲ ಅವನು ಯೋಚಿಸಿ ಮಿತ್ರವಂತನನ್ನು ಕುರಿತು ಇಂತೆಂದನು.

೨೦. ಮಿತ್ರವಂತನು ಹೇಳಿದನು-ಎಲೈ ವಿದ್ವಾಂಸನೇ! ಒಂದು ಇತಿಹಾಸ ವನ್ನು ಹೇಳುತ್ತೇನೆ. ಕೇಳು. ಗೋದಾವರಿಯ ತೀರದಲ್ಲಿ ಪ್ರತಿಷ್ಠಾನವೆಂಬ ಒಂದೂರಿರುವುದು.

೨೧. ಅಲ್ಲಿ ವಿದ್ವಾಂಸರ ವಂಶದಲ್ಲಿ ಹುಟ್ಟಿದ ದುರ್ದಮನೆಂಬುವನೊಬ್ಬನು ಇದ್ದನು. ಆ ಊರಿನಲ್ಲಿ ವಿಕ್ರಮನೆಂಬ ರಾಜನೊಬ್ಬನೂ ಇದ್ದನು. ಆ ರಾಜ ನನ್ನು ಈತನು ಸೇವಿಸುತ್ತಿದ್ದನು.

೨೨. ಅವನು ನಿತ್ಯವೂ ದಾನಗಳನ್ನು ತೆಗೆದುಕೊಳ್ಳುತ್ತಾ ತನ್ನ ಹೊಟ್ಟೆ ಯನ್ನು ತುಂಬಿಕೊಳ್ಳುತ್ತಿದ್ದನು. ಹೀಗಿರುತ್ತಿರಲು ಮೃತನಾದನು. ಆಗ ಯಮನ ಭಟರು ಅವನನ್ನು ಕಟ್ಟಿ ಯಮನ ಬಳಿಗೆ ತೆಗೆದುಕೊಂಡು ಹೋದರು

೨೩. ನರಕಗಳನ್ನು ಅನುಭವಿಸಿ ಮತ್ತೆ ಅಯೋಗ್ಯರಾದ ಬ್ರಾಹ್ಮಣರ ಒಂದು ವಂಶದಲ್ಲಿ ಹುಟ್ಟಿದನು.

ಭವಾನ್ತರಾನುಪತಿನ್ಯಾ ವಿದ್ಯಯಾ ಸ ಪುರಸ್ಕೃತಃ |
ಉಪಯೇಮೇ ದುರಾಧರ್ಷಾಂ ಕನ್ಯಕಾಮಧಮೇ ಕುಲೇ || ೨೪ ||

ಕಾಲೇನ ಸಾ ವಯೋ ಹಿತ್ವಾ ಶೈಶವಂ ಯೌವನಂ ಯಯೌ |
ಪೀನಸ್ತನೀ ಚ ಸುಶ್ರೋಣೀ ಮದವಿಹ್ವಲಲೋಚನಾ || ೨೫ ||

ನ ಸೇಹೇ ಪತಿದೌರ್ಭಿಕ್ಷ್ಯಂ ಚಕಮೇ ಸಾ ಪತೀನ್ ಪರಾನ್ |
ವೃತ್ತಿಮಾಹರ್ತುಕಾಮೇಽಸ್ಮಿನ್ ನಿರ್ಗತಾ ಸಾ ಪುರಾದ್ಬಹಿಃ || ೨೬ ||

ಸಂಗತಾ ಕಾಮುಕೇನಾಽಸೌ ಚಿರಂ ಚಾಂಡಾಲಜನ್ಮನಾ |
ದಧ್ರೇ ಗರ್ಭಮಸೌ ತಸ್ಮಾತ್ ಸಾ ಚ ಕನ್ಯೋದಪದ್ಯತ || ೨೭ ||

ಸೈವ ಭಾರ್ಯಾಽಥ ತಸ್ಯಾಽಭೂತ್ ಪೂರ್ವಪಾಪಪ್ರಸಂಗತಃ |
ಸಾ ಚ ವೃದ್ಧಾ ತತಃ ಕಾಲೇ ಡಾಕಿನೀ ಸಮಜಾಯತ || ೨೮ ||

---

೨೪. ಹಿಂದಿನ ಜನ್ಮಗಳಿಂದ ಅನುಸರಿಸಿಕೊಂಡು ಬರುತ್ತಿರುವ ಒಂದು ಪಾಪಶೇಷವು ಅವನನ್ನು ಬಿಡದಿದ್ದುದರಿಂದ ಅಧಮ ಕುಲದಲ್ಲಿ ಹುಟ್ಟಿದ ದುರಾಧರ್ಷಳೆಂಬ ಒಬ್ಬಳನ್ನು ಮದುವೆಯಾದನು.

೨೫-೨೬. ಕೆಲವು ಕಾಲದ ಮೇಲೆ ಆಕೆಗೆ ಶೈಶವವು ಕಳೆದು ಯೌವನವು ಬಂದಿತು. ದಪ್ಪವಾದ ಸ್ತನಗಳೂ ಸಣ್ಣದಾದ ನಡುವೂ ಉಂಟಾಗಿ ಚೆನ್ನಾಗಿ ಕಂಗೊಳಿಸುತ್ತ ಮದದಿಂದ ಕಣ್ಣುಗಳನ್ನು ತಿರುಗಿಸುವಂತಾದಳು. ಈ ರೀತಿಯಾಗಿ ಅತ್ಯದ್ಭುತ ಯೌವನವನ್ನು ಹೊಂದಿದ ಈಕೆಯು ಗಂಡನ ಬಡತನವನ್ನು ಸಹಿಸಲಾರದೆ ಹೋದಳು. ಆದುದರಿಂದ ಬೇರೆಯುವರಲ್ಲಿ ಕಣ್ಣಿಡುತ್ತ ವರಿಸುತ್ತ ಬಂದಳು ಇವನು ಜೀವನಕ್ಕೋಸ್ಕರ ಹೊರಗೆ ಹೋದಾಗ ಆಕೆಯು ಊರಿನಿಂದ ಹೊರಕ್ಕೆ ಹೋಗಿ ತನ್ನ ಕೆಟ್ಟ ಕೆಲಸದಲ್ಲಿ ನಿರತಳಾಗುತ್ತಾ ಬಂದಳು

೨೭. ಹೀಗಿರುತ್ತಿರಲು ಕೊಂಚಕಾಲದ ಮೇಲೆ ಒಬ್ಬ ಕಾಮುಕನಾದ ಚಂಡಾಲನೊಡನೆ ಸೇರಿ ಬಹುಕಾಲ ರಮಿಸಿದಳು. ಕೊನೆಗೆ ಅವನಿಂದ ಗರ್ಭವನ್ನು ಹೊಂದಿ ಒಂದು ಹೆಣ್ಣು ಮಗುವನ್ನು ಹೆತ್ತಳು.

೨೮. ಇಂತಹ ಕುಲಗೆಟ್ಟ ಆ ಮಗುವು ವಯಸ್ಸಾದ ಮೇಲೆ ಅವನ ಪಾಪಕರ್ಮದ ಸಂಬಂಧದಿಂದ ಆ ಚಂಡಾಲನ ಹೆಂಡತಿಯಾದಳು. ಅವಳ ತಾಯಿಯೂ ಕೂಡ ಮುದುಕಿಯಾದ ಮೇಲೆ ತಲೆ ಹಿಡುಕಳಾದಳು.

**ಕುಸಂಗಾತ್ಕುಮತಿರ್ಜಾತಾ ದುಷ್ಟನಾರೀಪ್ರಸಂಗತಃ ।**
**ಚಖಾದ ವ್ಯಾಧಿತಂ ವ್ಯಾಧಮಸೃಗಾಸ್ವಾದಲಾಲಸಾ ॥ ೨೯ ॥**

**ಭ್ರಮಂತೀ ವಿಪಿನೇ ಘೋರೇ ಜನೈರ್ದೃಷ್ಟ್ವಾ ಬಹಿಷ್ಕೃತಾ ।**
**ಪರೇತಲೋಕಮಾಸಾದ್ಯ ವ್ಯಾಧೋ ವ್ಯಾಘ್ರೋಽಭ್ಯವರ್ತತ ॥ ೩೦ ॥**

**ನರಕಾನ್ ವಿವಿಧಾನ್ ಭುಕ್ತ್ವಾ ಜೀವಹಿಂಸಾಪ್ರಭಾವತಃ ।**
**ಸಾಽಪಿ ಕಾಲೇನ ದುಷ್ಟಾತ್ಮಾ ಮತ್ಗೃಹೇಹಮುಪಾಗತಾ ॥ ೩೧ ॥**

**ನಿರಯಾನೇತ್ಯ ದುರ್ಧರ್ಷಾನಜಾಽಜಾಯತ ಮದ್ಗೃಹೇ ।**
**ತಾಮನ್ಯಾ ಅಪ್ಯಹಂ ವಿದ್ವನ್ ಪಾಲಯನ್ಕಾನನಾಂತರೇ ॥ ೩೨ ॥**

**ಅಪಶ್ಯಂ ದ್ವೀಪಿನಂ ಘೋರಂ ಜಿಘೃಕ್ಷಂತಮಿವಾಖಿಲಂ ।**
**ಸಮಾಲೋಕ್ಯ ತಮಾಯಾಂತಂ ಭಯೇನ ಪ್ರಪಲಾಯಿತಂ ॥ ೩೩ ॥**

---

೨೯. ಹೀಗೆ ಕೆಟ್ಟವರ ಸಹವಾಸದಿಂದಲೂ ಕೆಟ್ಟ ಹೆಂಗಸರ ಸಹವಾಸದಿಂದಲೂ ದುಷ್ಟಬುದ್ಧಿಯುಂಟಾಯಿತು. ಹೀಗಿರುತ್ತಿರಲು ರಕ್ತಮಾಂಸ ಮುಂತಾದುವುಗಳಲ್ಲಿ ಲೋಲುಪಳಾದ ಈಕೆಯು ವ್ಯಾಧಿಯಿಂದ ಕೂಡಿದ ಒಬ್ಬ ಬೇಡನು ಸಿಕ್ಕಲು ಅವನನ್ನೇ ಕೊಂದು ತಿಂದಳು.

೩೦. ಇದೇ ರೀತಿಯಾಗಿ ರಕ್ತಮಾಂಸಗಳನ್ನು ತಿನ್ನುತ್ತ ಈಕೆಯು ಘೋರವಾದ ಅರಣ್ಯದಲ್ಲಿ ಸುತ್ತುತ್ತಿದ್ದಳು. ಅತ್ತ ಆ ಬೇಡನು ಸತ್ತ ಮೇಲೆ ಹುಲಿಯಾಗಿ ಹುಟ್ಟಿದನು.

೩೧-೩೪. ಆಕೆಯು ಜೀವಹಿಂಸೆಯನ್ನು ಮಾಡಿದುದರಿಂದ ಸತ್ತಮೇಲೆ ಬಹುವಾದ ನರಕಗಳನ್ನನುಭವಿಸಿ ಕೊನೆಗೆ ನನ್ನ ಮನೆಯಲ್ಲಿ ಒಂದು ಆಡಾಗಿ ಹುಟ್ಟಿದಳು. ನಾನು ಆ ಆಡನ್ನೂ ಇತರ ಆಡುಗಳನ್ನೂ ಆ ಕಾಡಿನಲ್ಲಿ ಮೇಯಿಸುತ್ತಿದ್ದೆನು. ಆಗ ಒಂದು ಹುಲಿಯು ಬಂದಿತು ಅದು ಎಲ್ಲಾ ಆಡುಗಳನ್ನೂ ಹಿಡಿದು ತಿನ್ನುವಂತೆ ಕಾಣುತ್ತಿತ್ತು. ಅಷ್ಟು ಭಯಂಕರವಾಗಿಯೂ ಇದ್ದಿತು. ಆ ಹುಲಿಯು ಬರುತ್ತಿರುವುದನ್ನು ನೋಡಿ ಹೆದರಿಕೆಯಿಂದ ನಮ್ಮ ಆಡುಗಳೆಲ್ಲವೂ

ಅಜಾಸಂಘಂ ಪುರಸ್ಕೃತ್ಯ ಮಯಾಮರಣಭೀರುಣಾ ।
ಉಪದುದ್ರಾವ ಸ ದ್ವೀಪೀ ಪೂರ್ವವೈರಮನುಸ್ಮರನ್ ॥ ೩೪ ॥

ಅಜಾ ತು ತತ್ಸಮೀಪೇಽಗಾತ್ ಸತ್ವರಂ ಸರಿದಂತಿಕೇ ।
ತತ್ರ ಸಾ ಭಯಮುತ್ಸೃಜ್ಯ ಹಿತ್ವಾ ವೈರಮನರ್ಗಳಾ ॥ ೩೫ ॥

ಅವತಸ್ಥೇ ಸ ಚ ದ್ವೀಪೀ ತೂಷ್ಣೀಮಾಸೀದಮತ್ಸರಃ ।
ತಂ ತಥಾವಿಧಮಾಲೋಕ್ಯ ಸಾ ವಕ್ತುಮುಪಚಕ್ರಮೇ ॥ ೩೬ ॥

॥ ಅಜೋವಾಚ ॥

ದ್ವೀಪಿನ್ನಭೀಪ್ಸಿತಂ ಭುಂಕ್ಷ್ವ ಮಾಂಸಮುದ್ಧೃತ್ಯ ಸಾದರಂ ।
ನೇಯಂ ಭವತಿ ತೇ ಬುದ್ಧಿಃ ಕಥಂ ಚಿರಮಸಿ ಸ್ಥಿತಃ ॥ ೩೭ ॥

॥ ಮಿತ್ರವಾನುವಾಚ ॥

ಇತ್ಯಾಕರ್ಣ್ಯ ತದಾ ವಾಕ್ಯಂ ಪ್ರಾಹ ದ್ವೀಪೀ ವಿಮತ್ಸರಃ ॥ ೩೮ ॥

---

ಓಡಿಹೋದುವು ನನ್ನನ್ನೆಲ್ಲಿ ತಿಂದು ಹಾಕುವುದೋ ಎಂಬ ಹೆದರಿಕೆ ನನಗಿದ್ದರೂ ನಾನು ಆ ಗುಂಪನ್ನು ಓಡಿಸಿಕೊಂಡು ಓಡಿಹೋದೆನು. ಆ ಹುಲಿಯು ಹಿಂದಿನ ವೈರವನ್ನು ಜ್ಞಾಪಿಸಿಕೊಂಡು ಓಡಿಬರುತ್ತಿದ್ದಿತು.

೩೫-೩೬. ಆ ಹುಲಿಯು ಓಡಿಬರುತ್ತಿರಲು ಅಲ್ಲಿರುವ ಒಂದು ಹೊಳೆಯ ಹತ್ತಿರ ಈ ಆಡು ಅದರ ಬಳಿಗೆ ಭಯವಿಲ್ಲದೆ ಹೋಯಿತು. ಆಗ ಆ ಹುಲಿಯೂ ಕೂಡ ಹಿಂದಿನ ವೈರವನ್ನು ಬಿಟ್ಟು ಸುಮ್ಮನೆ ನಿಂತುಕೊಂಡಿತು. ಈ ರೀತಿಯಾಗಿ ಹುಲಿಯು ನಿಂತುಕೊಳ್ಳಲು ಆ ಆಡು ಇಂತೆಂದು ಹೇಳಿತು.

೩೭. ಆಡು ಹೇಳಿತು-ಎಲೈ ಹುಲಿಯೆ! ನಿನಗೆ ಬೇಕಾದ ನನ್ನ ಮಾಂಸವನ್ನು ತೆಗೆದುಕೊಂಡು ಅಕ್ಕರೆಯಿಂದ ತಿನ್ನು. ನಿನ್ನ ಬುದ್ಧಿಯು ಈಗ ಸುಮ್ಮನಿರಬಾರದು. ಏತಕ್ಕೆ ಬಹಳ ಹೊತ್ತು ಸುಮ್ಮನೆ ನಿಂತುಕೊಂಡೆ.

೩೮. ಮಿತ್ರವಂತನು ಹೇಳಿದನು- ಈ ಮಾತನ್ನು ಕೇಳಿ ಆ ಹುಲಿಯು ದ್ವೇಷವನ್ನು ಬಿಟ್ಟು ಇಂತೆಂದಿತು.

॥ ದ್ವೀಪ್ಯುವಾಚ ॥

ಸ್ಥಾನೇಽಸ್ಮಿನ್ ಮೇ ಗತೋ ದ್ವೇಷಃ ಕ್ಷುತ್ಪಿಪಾಸಾ ಚ ನಿರ್ಯಯೌ ।
ನ ಪ್ರಾರ್ಥಯಾಮಿ ತೇನ ತ್ವಾಮಪಿ ಮೇ ಸಮುಪಸ್ಥಿತಾಂ ॥ ೩೯ ॥

॥ ಮಿತ್ರವಾನುವಾಚ ।

ಸೈವಮುಕ್ತ್ವಾ ಪುನಃ ಪ್ರಾಹ ಜಾತಾಽಹಂ ನಿರ್ಭಯಾ ಕಥಂ ।
ಕಿಮತ್ರ ಕಾರಣಂ ವೇತ್ಸಿ ಯದಿ ಮೇ ವಕ್ತುಮರ್ಹಸಿ ॥ ೪೦ ॥

ಏವಮುಕ್ತಃ ಪುನರ್ದ್ವೀಪೀ ತಾವಮಾಹಾಜಾಂ ನ ವೇದ್ಮ್ಯಹಂ ।
ಪುರೋಗತಮಿಮಂ ಪ್ರಷ್ಟುಂ ಮಹಾಂತಮಿತಿ ನಿರ್ಗತೌ ॥ ೪೧ ॥

ತಾಭ್ಯಾಮುಭಾಭ್ಯಾಮಾಗತ್ಯ ಪೃಷ್ಟೋಽಹಂ ಬಹುವಿಸ್ಮಯಃ ।
ಅಹಂ ಚ ಸಹಿತಸ್ತಾಭ್ಯಾಮಪೃಚ್ಛಂ ವಾನರೇಶ್ವರಂ ॥
ಅನುಯುಕ್ತಸ್ಸ ವಿಪ್ರೇಂದ್ರೋ ಹ್ಯಬ್ರವೀತ್ಸಾದರಂ ಕಪಿಃ ॥ ೪೨ ॥

---

೩೯. ಹುಲಿಯು ಹೇಳಿತು- ಈ ಜಾಗದಲ್ಲಿ ನನ್ನ ದ್ವೇಷವು ಹೋಗಿದೆ. ಹಸಿವು ಬಾಯಾರಿಕೆಗಳೂ ಕೂಡ ಹೋದುವು. ನೀನಾಗಿಯೇ ಎದುರಿಗೆ ಬಂದಿದ್ದರೂ ನನಗೆ ನೀನು ಬೇಡವಾಗಿದ್ದೀಯೆ.

೪೦. ಮಿತ್ರವಂತನು ಹೇಳಿದನು- ಆಗ ಆ ಆಡಿಗೆ ಹುಲಿಯು ಹೀಗೆಂದು ಹೇಳಲು ಆ ಆಡು ನಾನು ಇಲ್ಲಿ ಭಯವನ್ನು ಹೇಗೆ ಬಿಟ್ಟೆನು ? ಇದರ ವಿಷಯವಲ್ಲಿ ನಿನಗೆ ಕಾರಣವು ಗೊತ್ತಿದ್ದರೆ ಹೇಳು.

೪೧. ಹೀಗೆಂದು ಆ ಆಡು ಕೇಳಲು ಹುಲಿಯು ತನಗೆ ಗೊತ್ತಿಲ್ಲವೆಂದು ಹೇಳಿ ಮುಂದುಗಡೆಯಲ್ಲಿರುವ ಈ ಮಹಾತ್ಮನನ್ನು ಕೇಳೋಣವೆಂದು ಅಲ್ಲಿಗೆ ಹೋದುವು.

೪೨. ಅವೆರಡೂ ಬಂದು ನನ್ನನ್ನು ಕೇಳಿದುವು. ನಾನು ಬಹುವಾಗಿ ಆಶ್ಚರ್ಯಪಟ್ಟೆನು. ನಾನು ಅವುಗಳನ್ನು ಕರೆದುಕೊಂಡು ಅಲ್ಲಿದ್ದ ಒಂದು ಕಪಿಯ ಬಳಿಗೆ ಹೋದೆನು. ಅದನ್ನು ಗೌರವಿಸಿ ಕೇಳಲು ಆ ಕಪಿಯು ಪ್ರೀತಿಯಿಂದ ಇಂತೆಂದು ಹೇಳಿತು.

॥ ಕಪಿರುವಾಚ ॥

ಶೃಣು ವಕ್ಷ್ಯಾಮ್ಯಜಾಪಾಲ ವೃತ್ತಮತ್ರ ಪುರಾತನಂ ।
ಇದಮಾಯತನಂ ಪಶ್ಯ ಪುರೋವನಗತಂ ಮಹತ್ ॥ ೪೩ ॥

ಅತ್ರ ತ್ರ್ಯಂಬಕಲಿಂಗಂ ಹಿ ದ್ರುಹಿಣೇನ ಪ್ರತಿಷ್ಠಿತಂ ।
ಸುಕರ್ಮಾ ನಾಮ ಮೇಧಾವೀ ಪರ್ಯುಪಾಸ್ತೇ ತಪಶ್ಚರನ್ ॥ ೪೪ ॥

ವನಪುಷ್ಪಾಣ್ಯುಪಾಹೃತ್ಯ ಸುರಮುಖ್ಯಂ ಪುರಾ ಭವಂ ।
ಸಂಸ್ನಾಪ್ಯ ಸರಿದಂಭೋಭಿಃ ಕೇವಲಂ ಕರ್ಮಣಾ ವಸನ್ ॥ ೪೫ ॥

ಕಾಲೇ ಮಹತಿ ತಸ್ಯಾಽಗಾತ್ ಅತಿಥಿಃ ಕಶ್ಚಿದಂತಿಕಂ ।
ಉಪಾಹೃತ್ಯ ಫಲಾಹಾರಂ ಸ ಚಾಽಸ್ಮೈ ಪರ್ಯಕಲ್ಪಯತ್ ॥
ತೇನಾಽಽತಿಥ್ಯೇನ ಸಂಪ್ರೀತಃ ಸುಕರ್ಮಾಣಮಭಾಷತ ॥ ೪೬ ॥

---

೪೩. ಕಪಿಯು ಹೇಳಿತು- ಎಲೈ ಅಜಾಪಾಲನೆ! ಕೇಳು. ಇಲ್ಲಿನ ಹಿಂದಿನ ವಿಷಯಗಳನ್ನು ಹೇಳುತ್ತೇನೆ. ಈ ಕಾಡಿನಲ್ಲಿ ಎದುರಿಗೆ ಕಾಣುತ್ತಿರುವ ಆ ದೇವ ಸ್ಥಾನವನ್ನು ನೋಡು.

೪೪. ಅಲ್ಲಿ ಬ್ರಹ್ಮನು ಪ್ರತಿಷ್ಠೆಮಾಡಿದ ಒಂದು ಲಿಂಗವಿರುವುದು, ಸುಕರ್ಮನೆಂಬೊಬ್ಬ ಬುದ್ಧಿವಂತನು ತಪಸ್ಸನ್ನು ಮಾಡುತ್ತ ಆ ಲಿಂಗವನ್ನು ಪೂಜಿಸುತ್ತಿರುವನು.

೪೫. ಇವನು ನದಿಯ ನೀರನ್ನು ತಂದು ಆ ಲಿಂಗಕ್ಕೆ ಸ್ನಾನಮಾಡಿಸುತ್ತ ಕಾಡಿನ ಹೂಗಳನ್ನು ತಂದು ಆ ದೇವದೇವನಾದ ಸ್ವಾಮಿಯನ್ನು ಪೂಜೆಮಾಡುತ್ತ ಲೋಕರೀತಿಯಾದ ಕರ್ಮಗಳನ್ನು ಆಚರಿಸಿಕೊಂಡಿರುವನು.

೪೬. ಹೀಗೆ ಬಹುಕಾಲ ಕಳೆಯಲು ಒಬ್ಬ ಅತಿಥಿಯು ಅವನಲ್ಲಿಗೆ ಬಂದನು. ಆಗ ಆ ಸುಕರ್ಮನು ಫಲಗಳನ್ನು ತಂದು ಅವನಿಗೆ ಆತಿಥ್ಯವನ್ನು ಕೊಟ್ಟನು. ಆ ಆತಿಥ್ಯದಿಂದ ಆ ಅತಿಥಿಯು ಸಂತೋಷಗೊಂಡು ಸುಕರ್ಮನನ್ನು ಕುರಿತು ಇಂತೆಂದನು.

॥ ಅತಿಥಿರುವಾಚ ॥

ಕಿಮಿದಂ ಕರ್ಮಣೋ ಮೂಲಂ ಫಲಂ ಭುಕ್ತ್ವಾ ತು ತಿಷ್ಠಸಿ ।
ಗತಾನುಗತಯಾ ವೃತ್ಯಾ ಕಿಂ ವಾ ಕೇವಲಮೀಹಸೆ ॥ ೪೭ ॥

॥ ಕಪಿರುವಾಚ ॥

ಸ ಏವಮುಕ್ತಃ ಪ್ರಾಯೇಣ ಪ್ರೀತೇನಾತ್ಮವಿದಾ ತದಾ ।
ಪ್ರತ್ಯುವಾಚ ವಚಸ್ಪಷ್ಟಮಾತ್ಮನೋ ಹಿತಮುತ್ತರಂ ॥ ೪೮ ॥

॥ ಸುಕರ್ಮೋವಾಚ ॥

ವಿದ್ವನ್ನ ವೇದ್ಮಿ ತತ್ವೇನ ಫಲಮೇತಸ್ಯ ಕರ್ಮಣಃ ।
ಬುಭುತ್ಸಯಾ ಪರಃ ಶಂಭುಃ ಸೇವ್ಯತೇ ಕೇವಲಂ ಮಯಾ ॥ ೪೯ ॥

ಫಲಮೇತಸ್ಯ ಸೇವಾಯಾಃ ಪರಿಪಕ್ವಂ ಕಪರ್ದಿನಃ ।
ಯನ್ಮಾಂ ಸಮನುಗೃಹ್ಣಾಸಿ ಸಂಸ್ಪೃಶ್ಯಾತ್ಮಮನೋರಥಾ ॥ ೫೦ ॥

---

೪೭. ಅತಿಥಿಯು ಹೇಳಿದನು- ಈ ಕರ್ಮಗಳಿಗೆ ಕಾರಣವೇನು ? ಬರಿಯ ಹಣ್ಣುಗಳನ್ನು ತಿಂದುಕೊಂಡಿರುವೆಯಲ್ಲ ! ಲೋಕಗಳು ಅನುಸರಿಸುತ್ತಿರುವ ರೀತಿಯಲ್ಲಿ ನೀನು ನಡೆಯುತ್ತ ಏನನ್ನು ಹೊಂದಬೇಕೆಂದಿದ್ದೀಯೆ ?

೪೮. ಕಪಿಯು ಹೇಳಿತು-- ಆಗ ಅವನು ಸಂತೋಷಗೊಂಡ ಮನಸ್ಸುಳ್ಳವನಾಗಿ ಅವನಿಗೆ ಹಿತವಾದ ಒಂದು ವಿಷಯವನ್ನು ಸ್ಪಷ್ಟವಾಗಿ ಹೇಳಿದನು.

೪೯. ಸುಕರ್ಮನು ಹೇಳಿದನು- ಎಲೈ ವಿದ್ವಾಂಸನೇ ! ಇದಕ್ಕೆ ಫಲವು ಸರಿಯಾಗಿ ನನಗೆ ಗೊತ್ತಿಲ್ಲ. ಆ ವಿಷಯವನ್ನು ತಿಳಿಯಬೇಕೆಂದೇ ನಾನು ಈ ಶಂಭುವನ್ನು ಸೇವಿಸುತ್ತಿದ್ದೇನೆ.

೫೦. ಅಯ್ಯಾ ! ಈ ಸ್ವಾಮಿಯಾದ ಈಶ್ವರನ ಸೇವೆಯ ಫಲವು ಪಕ್ವವಾಗಿದೆ. ನೀನು ನನ್ನ ವಿಷಯಗಳನ್ನೂ ನಿನ್ನ ಮನೋರಥಗಳನ್ನೂ ತಿಳಿದುಕೊಂಡು ನನಗೂ ಅನುಗ್ರಹಮಾಡುತ್ತೀಯೆ.

॥ ಕಪಿರುವಾಚ ॥

ತಸ್ಯೈವಂ ಸೂನೃತಂ ವಾಕ್ಯಂ ಶ್ರುತ್ವಾ ಪ್ರೀತಸ್ತಪೋಧನಃ ।
ದ್ವಿತೀಯಮಾಲಿಲೇಖಾಽಸೌ ಗೀತಾಧ್ಯಾಯಂ ಶಿಲಾತಲೇ ॥ ೫೧ ॥

ಆದಿದೇಶ ಚ ತಂ ವಿಪ್ರಂ ಪಠನಾಽಭ್ಯಸನಾಯ ಚ ।
ಫಲಿಷ್ಯತ್ಯಾತ್ಮನಃ ಸ್ವೈರಂ ಪರಿತಸ್ತೇ ಮನೋರಥಃ ॥ ೫೨ ॥

ಇತ್ಯುಕ್ತ್ವಾಂತರ್ದಧೇ ಧೀಮಾನ್ ಪುರತಸ್ತಸ್ಯ ಪಶ್ಯತಃ ।
ವಿಸ್ಮಿತಸ್ತಸ್ಯ ಚಾದೇಶಾತ್ ಸೋಽನ್ವತಿಷ್ಠದನಾರತಂ ॥ ೫೩ ॥

ತತಃ ಕಾಲೇನ ಮಹತಾ ಭಾವಿತಾತ್ಮಾ ಪ್ರಸನ್ನಧೀಃ ।
ಯತ್ರ ಯತ್ರ ಚಚಾರಾಸೌ ಶಾಂತಂ ತತ್ತತ್ತಪೋವನಂ ॥ ೫೪ ॥

ನ ದ್ವಂದ್ವಬಾಧಾ ನೈವ ಕ್ಷುತ್ಪಿಪಾಸಾ ನ ಚ ವಾ ಭಯಂ ।
ತಪಸಾ ತಸ್ಯ ಜಾನೀಹಿ ದ್ವಿತೀಯಾಽಧ್ಯಾಯಜಾಪಿನಃ ॥ ೫೫ ॥

---

೫೧. ಕಪಿಯು ಹೇಳಿತು– ಅವನ ಈ ಮಾತನ್ನು ಕೇಳಿ ಈ ತಪಸ್ವಿಯು ಸಂತುಷ್ಟನಾಗಿ ಗೀತೆಯ ಎರಡನೆಯ ಅಧ್ಯಾಯವನ್ನು ಆ ಕಲ್ಲಿನ ಮೇಲೆ ಬರೆದನು.

೫೨. ಇದನ್ನು ಓದಿ ಅಭ್ಯಾಸಮಾಡುವಂತೆ ಆತನಿಗೆ ಅಪ್ಪಣೆಮಾಡಿದನು. ನಿನ್ನ ಇಷ್ಟಾರ್ಥವು ಯಥೇಚ್ಛವಾಗಿ ಫಲಿಸುತ್ತದೆ. (ನಿನ್ನ ಇಷ್ಟಾರ್ಥವೆಲ್ಲವೂ ಕೈಗೂಡುತ್ತವೆ.)

೫೩. ಹೀಗೆಂದು ಹೇಳುತ್ತ ಅವನು ನೋಡುತ್ತಿರುವಂತೆಯೇ ಆತನು ಅಂತರ್ಧಾನನಾದನು. ಅವನು ಹೀಗೆ ಹೇಳಿ ಬರೆದುದನ್ನು ನೋಡಿ ಈತನು ಆಶ್ಚರ್ಯಪಟ್ಟು ಅವನು ಹೇಳಿದಂತೆಯೇ ಮಾಡಿದನು.

೫೪. ಅನಂತರ ಹೀಗೆ ಕೆಲವುಕಾಲ ಕಳೆಯಲು ಅವನು ಅದರಿಂದ ಪೂತನಾಗಿ ಸಂತೋಷಗೊಂಡನು. ಇವನು ಎಲ್ಲೆಲ್ಲಿ ಸಂಚಾರಮಾಡುವನೋ ಅಲ್ಲೆಲ್ಲಾ ಆಶ್ರಮವು ಶಾಂತವಾಗುತ್ತಿದ್ದಿತು.

೫೫. ದ್ವಿತೀಯಾಧ್ಯಾಯವನ್ನು ಜಪಿಸುವನಿರುವಲ್ಲಿ ಶೀತೋಷ್ಣಗಳ ಬಾಧೆಯಿರುವುದಿಲ್ಲ. ಹಸಿವು ಬಾಯಾರಿಕೆಗಳಿರುವುದಿಲ್ಲ. ಭಯವಿರುವುದಿಲ್ಲ. ಅವನ ತಪಸ್ಸಿನಿಂದ ಇವೆಲ್ಲವೂ ಹೋಗುತ್ತವೆ.

॥ ಮಿತ್ರವಾನುವಾಚ ॥

ಏವಮುಕ್ತಶ್ಚ ತೇನಾಹಂ ಖ್ಯಾಪಯಿತ್ವಾ ಪರಾಂ ಕಥಾಂ ।
ಅನುಜ್ಞಾತಃ ಪ್ರಸನ್ನೇನ ಛಾಗೀವ್ಯಾಘ್ರಯುತೋಽಗಮಂ ॥ ೫೬ ॥

ಗತ್ವಾ ಶಿಲಾತಲೇಽಪಶ್ಯಮಧ್ಯಾಯಂ ಲಿಖಿತಂ ಪಠೇ ।
ತಸ್ಯೈವಾವರ್ತನಾದಾಪ್ತಂ ತಪಸಃ ಪಾತ್ರಮುತ್ತಮಂ ॥ ೫೭ ॥

ತೇನ ತ್ವಮಪಿ ಕಲ್ಯಾಣ ನಿತ್ಯಮಾವರ್ತುಮರ್ಹಸಿ ।
ಅಧ್ಯಾಯಂ ತೇನ ತೇ ಮುಕ್ತಿರದೂರಸ್ಥಾ ಭವಿಷ್ಯತಿ ॥ ೫೮ ॥

॥ ಶ್ರೀ ಭಗವಾನುವಾಚ ॥

ದೇವಶರ್ಮಾ ಸಮಾದಿಷ್ಟಸ್ತೇನ ಮಿತ್ರವತಾ ಸ್ವಯಂ ।
ಅಭ್ಯರ್ಚ್ಯ ಪ್ರಣತೋ ಭೂತ್ವಾ ಪುರಂದರಪುರಂ ಯಯೌ ॥ ೫೯ ॥

ತತ್ರಾತ್ಮವಿದಮಾಸಾದ್ಯ ದೇವತಾಯತನೇ ಕ್ವಚಿತ್ ।
ವೃತ್ತಮೇತನ್ನಿವೇದ್ಯಾದಾವಧ್ಯಾಯಮಪಠತ್ತತಃ ॥ ೬೦ ॥

---

೫೬. ಮಿತ್ರವಂತನು ಹೇಳಿದನು– ಆ ಕಪಿಯು ಹೀಗೆಂದು ಹೇಳುತ್ತಲೂ ಈ ಕಥೆಯನ್ನು ಪ್ರಸಿದ್ಧಿಪಡಿಸಿ (ಹೇಳಿ) ಅವನ ಅಪ್ಪಣೆಯನ್ನು ಹೊಂದಿ ಆ ಆಡು ಹುಲಿಗಳೊಡನೆ ಹೊರಟುಹೋದೆನು.

೫೭. ಆ ಆಶ್ರಮಕ್ಕೆ ಹೋಗಿ ಕಲ್ಲಿನ ಮೇಲೆ ಬರೆದಿರುವ ಆ ಅಧ್ಯಾಯುವನ್ನು ನೋಡಿದೆನು. ಮತ್ತು ಅದನ್ನು ಓದಿದೆನು. ಅದನ್ನು ನಿತ್ಯವೂ ಓದುತ್ತಿದ್ದುದರಿಂದ ಉತ್ತಮವಾದ ತಪಸ್ಸಿಗೆ ಅರ್ಹನಾದೆನು.

೫೮. ಎಲೈ ಪುಣ್ಯವಂತನೇ ! ಆದುದರಿಂದ ನೀನು ಈ ಅಧ್ಯಾಯವನ್ನು ಆವರ್ತನಮಾಡು. ಅದರಿಂದ ನಿನಗೆ ಮುಕ್ತಿಯು ಜಾಗ್ರತೆಯಾಗಿ ಲಭಿಸುತ್ತದೆ.

೫೯. ಶ್ರೀ ಭಗವಂತನು ಹೇಳಿದನು- ಆ ಮಿತ್ರವಂತನು ದೇವಶರ್ಮನಿಗೆ ಇಂತೆಂದು ಹೇಳಲು ಅವನು ಹಾಗೆಯೇ ಅವನನ್ನು ಗೌರವಿಸಿ ನಮಸ್ಕರಿಸಿ ಆ ಪುರಂದರ ಪಟ್ಟಣಕ್ಕೆ ಹೋದನು.

೬೦. ಅಲ್ಲಿರುವ ದೇವಸ್ಥಾನದಲ್ಲಿ ಆ ಆತ್ಮವಂತನನ್ನು ನೋಡಿ ಈ ವಿಷಯಗಳೆಲ್ಲವನ್ನೂ ಹೇಳಿ ಅನಂತರ ಆ ಅಧ್ಯಾಯವನ್ನು ಓದಿದನು.

ತೇನಾದಿಷ್ಟಸ್ಸಪ್ರೂತಾತ್ಮಾ ಪಠತೇಽಧ್ಯಾಯಮಾದರಾತ್ ।
ದ್ವಿತೀಯಮಾಸಸಾದೋಚ್ಚೈರ್ನಿರವದ್ಯಂ ಪರಂ ಪದಂ ॥ ೬೧ ॥

ದ್ವಿತೀಯಸ್ಯೇದಮಾಖ್ಯಾನಂ ಕಥಿತಂ ಶೃಣು ಸಾಂಪ್ರತಂ ।
ತೃತೀಯಸ್ಯಾಥ ವಕ್ಷ್ಯಾಮಿ ಮಾಹಾತ್ಮ್ಯಮಪಿ ಚೇಂದಿರೇ ॥ ೬೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ದ್ವಿತೀಯಾಧ್ಯಾಯ ಮಾಹಾತ್ಮ್ಯಂ ನಾಮ ದ್ವಿಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೬೧. ಅವನ ಅನುಗ್ರಹದಿಂದ ಆ ಎರಡನೆಯ ಅಧ್ಯಾಯವನ್ನು ಪ್ರೀತಿಯಿಂದ ಓದುತ್ತ ಉತ್ತಮವಾದ ಪರಮಪದವನ್ನು ಹೊಂದಿದೆನು.

೬೨. ಎಲೈ ಸುಂದರಿಯಾದ ಲಕ್ಷ್ಮಿಯೇ ! ನಿನಗೆ ಎರಡನೆಯ ಅಧ್ಯಾಯವ ವಿಷಯವನ್ನು ಹೇಳಿದೆನು. ಈಗ ಮೂರನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಕೇಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಎರಡನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಭಗವಾನುವಾಚ ॥

ಜನಸ್ಥಾನೇ ಜಡೋ ನಾಮ ದ್ವಿಜನ್ಮಾ ಕೌಶಿಕಾನ್ವಯಃ ।
ಹಿತ್ವಾ ಜಾತ್ಯುಚಿತಂ ಧರ್ಮಂ ವಣಿಗ್ವೃತ್ತ್ಯಾಂ ಮನೋ ದಧೇ ॥ ೧ ॥

ವ್ಯಸನೀ ಪರದಾರೇಷು ದೀವ್ಯನ್ನಕ್ಷೈಃ ಪಿಬನ್ಮಧು ।
ಮೃಗಯಾ ನಿರತೋ ನಿತ್ಯಂ ಕಾಲಮೇವಂ ನಿನಾಯ ಸಃ ॥ ೨ ॥

ಕ್ಷೀಣೇ ವಿತ್ತೇ ತತೋ ರಾತ್ರೌ ಚೌರ್ಯಮಾರಬ್ಧವಾಂಸ್ತತಃ ।
ಪ್ರತಿಪೇದೇ ಧನಂ ತೇನ ಯಜ್ವನಾಂ ಯಷ್ಟುಮರ್ಥಿನಾಂ ॥ ೩ ॥

---

## ನೂರ ಎಪ್ಪತ್ತಮೂರನೆಯ ಅಧ್ಯಾಯವು



೧. ಶ್ರೀ ಭಗವಂತನು ಹೇಳಿದನು–ಜನಸ್ಥಾನದಲ್ಲಿ ಕೌಶಿಕಗೋತ್ರದಲ್ಲಿ ಹುಟ್ಟಿದ ಜಡನೆಂಬುವನೊಬ್ಬ ಬ್ರಾಹ್ಮಣನಿದ್ದನು. ಅವನು ತನ್ನ ಜಾತಿಗೆ ಯೋಗ್ಯವಾದ ಕರ್ಮಗಳನ್ನು ಮಾಡದೆ ಬಿಟ್ಟುಬಿಟ್ಟು ವ್ಯಾಪಾರಮಾಡಲು ಮನಸ್ಸುಳ್ಳವನಾಗಿ ವ್ಯಾಪಾರವನ್ನು ಮಾಡುತ್ತಿದ್ದನು.

೨. ಅವನು ಯಾವಾಗಲೂ ಪರರ ಹೆಂಡತಿಯರಲ್ಲಿ ಮನಸ್ಸನ್ನಿಟ್ಟು ರಮಿಸುತ್ತ ಜೂಜಾಡುತ್ತ ಮದ್ಯಪಾನಮಾಡುತ್ತ ಬೇಟೆಯನ್ನಾಡುತ್ತ ಕಾಲವನ್ನು ಕಳೆಯುತ್ತಿದ್ದನು

೩. ಹಣವೆಲ್ಲವೂ ಮುಗಿದುಹೋಗಲು ರಾತ್ರಿಯಲ್ಲಿ ಕಳ್ಳತನಮಾಡ ಬೇಕೆಂದು ಉದ್ದೇಶಿಸಿ ಯಾಗ ಮಾಡಲು ಹಣವನ್ನು ಕೂಡಿಟ್ಟಿದ್ದ ಒಬ್ಬ ದೀಕ್ಷಿತನ ಮನೆಗೆ ಕನ್ನ ಹಾಕಿ ಆ ಹಣವನ್ನು ಕದ್ದನು.

ಸ ದೂರಮುಗಮತ್ತೇನ ವಾಣಿಜ್ಯಾಯೋತ್ತರಾಂ ದಿಶಂ ।
ಕಸ್ತೂರೀಮಗರುಂ ಕೃಷ್ಣಂ ಚಾಮರಾಂಶ್ಚಂದ್ರಿಕೋಜ್ವಲಾ‌ ॥ ೪ ॥

ಗೃಹೀತ್ವಾಽಽವೃತ್ಯ ಚಾನಿನ್ಯೇ ಪಂಚಷಾನಧ್ವಯೋಜನಾತ್ ।
ಅಥಾಽಪರಸ್ಮಿನ್ನಹನಿ ಪ್ರಿಯಾದರ್ಶನದೋಹದೀ ॥ ೫ ॥

ದೂರಮಧ್ವಾನಮುಲ್ಲಂಘ್ಯ ರವಾವಸ್ತಮಿತೇ ಸತಿ ।
ಧ್ವಾಂತೇ ಪ್ರಸರ್ಪತಿ ಸ್ವೈರಂ ದಿಶೋ ದಶ ತರೋಸ್ತಲೇ ॥ ೬ ॥

ಗತೋ ವಶಂ ಸ ದಸ್ಯೂನಾಂ ನಿಜಘ್ನೇ ತೈಶ್ಚ ಸತ್ವರಂ ।
ಧರ್ಮಲೋಪಾದಸೌ ಜಜ್ಞೇ ಘೋರಶ್ಚೋಗ್ರತರೋ ಗ್ರಹಃ ॥ ೭ ॥

ಪಿಪಾಸಿತೋ ಬುಭುಕ್ಷಾರ್ತೋ ಲೇಲಿಹಾನಶ್ಚ ಸೃಕ್ವಿಣೀ ।
ಊರ್ಧ್ವಕೇಶೋಽತಿಜಂಘಾಳುಃ ಪೃಷ್ಠಲಗ್ನೋದರೋ ಮಹಾ‌ ॥ ೮ ॥

ಅಸ್ಥಿಮಾತ್ರಶರೀರೋಭೂತ್ ಉದ್ವೃತ್ತನಯನೋ ಭೃಶಂ ।
ಅತ್ರಾಂತರೇ ಸುತಸ್ತಸ್ಯ ಧರ್ಮಾತ್ಮಾ ವೇದಕೋವಿದಃ ॥ ೯ ॥

---

೪-೧೦. ಆ ಹಣವನ್ನು ತೆಗೆದುಕೊಂಡು ವ್ಯಾಪಾರಕ್ಕೋಸ್ಕರ ಉತ್ತರದೇಶಕ್ಕೆ ಹೋಗಿ ಅದರಿಂದ (ಆ ಹಣದಿಂದ) ಕಸ್ತೂರಿ, ಕೃಷ್ಣಾಗರು, ಬಿಳಿಯಚಾಮರ ಮುಂತಾದುವನ್ನು ತಂದು ಐದಾರು ಯೋಜನ ದೂರದಲ್ಲಿಯೇ ನಿಂತು ವ್ಯಾಪಾರಮಾಡುತ್ತಿದ್ದನು. ಆಮೇಲೆ ಒಂದು ದಿವಸ ಅವನು ತಾನು ತನ್ನ ಹೆಂಡತಿಯನ್ನು ನೋಡಬೇಕೆಂಬಾಸೆಯಿಂದ ಮೊದಲಿನ ಊರಿಗೆ ಬರುತ್ತಿರಲು ಎಲ್ಲಾ ಕಡೆಯಲ್ಲಿಯೂ ಕತ್ತಲು ಕವಿದುಕೊಂಡಮೇಲೆ ಮರಗಳ ಕೆಳಗೆ ಓಡಿಯಾಡು ತ್ತಿದ್ದ ಕಳ್ಳರು ಅವನನ್ನು ಹಿಡಿದುಕೊಂಡು ಕೊಂದರು. ಇವನು ಮಾಡಿದ ಧರ್ಮಲೋಪದಿಂದ ಬಹು ಕ್ರೂರವಾದ ಒಂದು ಪಿಶಾಚಿಯಾದನು. ಅವನು ಯಾವಾಗಲೂ ಬಾಯಾರಿಕೆಯನ್ನು ಹೊಂದಿರುತ್ತ ಹಸಿವುಳ್ಳವನಾಗಿ ತುಟಿಗಳನ್ನು ಯಾವಾಗಲೂ ನೆಕ್ಕುತ್ತಿದ್ದನು. ತಲೆಗೂದಲು ಮೇಲುಮುಖವಾಗಿದ್ದುವು. ಕಾಲುಗಳು ಬಹು ಉದ್ದವಾಗಿದ್ದುವು. ಹೊಟ್ಟೆಯು ಬೆನ್ನಿಗೆ ಹತ್ತಿ ಕೊಂಡಿದ್ದಿತು. ದೇಹದಲ್ಲಿ ಮೂಳೆಗಳು ಮಾತ್ರವೇ ಕಾಣುತ್ತಿದ್ದುವು. ಕಣ್ಣುಗಳು ಯಾವಾಗಲೂ ನೆಟ್ಟುಕೊಂಡೇ ಇರುತ್ತಿದ್ದುವು. ಆ ಜಡನಿಗೊಬ್ಬ ಮಗನಿದ್ದನು. ಅವನು ಧರ್ಮಾತ್ಮನು. ವೇದವನ್ನು ಓದಿರುವನು. ವ್ಯಾಪಾರಕ್ಕೋಸ್ಕರ ಹೋದ

ಪರ್ಯಪಾಲಯದತ್ಯರ್ಥಂ ದಿದೃಕ್ಷುಸ್ತಂ ತಥಾಗತಂ ।
ನಿತ್ಯಮನ್ವೇಷಯನ್ವಾರ್ತಾಂ ಪಾಂಥೇಭ್ಯೋ ನೋಪಲಬ್ಧವಾನ್ ॥ ೧೦ ॥

ತತಃ ಕದಾಚಿದಾಯಾತೋ ಸಹಾಯಿನಿ ಜ ಮಾನವೇ ।
ತಸ್ಮಾದ್ವಿದಿತವೃತ್ತಾಂತಃ ಶುಶೋಚ ಪಿತರಂ ಬಹು ॥ ೧೧ ॥

ತತೋ ವಿಮೃಶ್ಯ ಮೇಧಾವೀ ಚಿಕೀರ್ಷುಃ ಪಾರಲೌಕಿಕಂ ।
ವಾರಾಣಸೀಂ ಸಸಂಭಾರಂ ಸ ಗಂತುಮುಪಚಕ್ರಮೇ ॥ ೧೨ ॥

ಮಾರ್ಗೇ ನಿವಾಸಾನ್ ಸಪ್ತಾಷ್ಟೌ ನೀತ್ವಾ ತಸ್ಯ ತರೋಸ್ತಲೇ ।
ಸಂಧ್ಯಾಂ ಪ್ರಚಕ್ರಮೇ ಕರ್ತುಂ ಯತ್ರಾಸ್ಯ ನಿಹತಃ ಪಿತಾ ॥ ೧೩ ॥

ತತ್ರಾಧ್ಯಾಯಂ ಸ ಗೀತಾನಾಂ ತೃತೀಯಂ ಸಂಜಜಾಪ ಹ ।
ತತೋ ಘೋರಸ್ವರಸ್ತತ್ರ ವ್ಯೋಮಮಧ್ಯೇ ಪರಾಮೃಶತ್ ॥ ೧೪ ॥

---

ತಂದೆಯು ಯಾವಾಗ ಬರುವನೋ ಎಂದು ಎದುರುನೋಡುತ್ತ ಆಕಡೆಯಿಂದ ಬರುತ್ತಿರುವವರನ್ನು ಕುರಿತು ಅವನ ವಿಷಯವನ್ನು ಕೇಳುತ್ತಲೇ ಇದ್ದನು. ಆದರೂ ಯಾವ ಸಮಾಚಾರವೂ ತಿಳಿಯಲೇ ಇಲ್ಲ.

೧೧. ಹೀಗಿರುತ್ತಿರಲು ಆ ತಂದೆಗೆ ಸಹಾಯಕನಾಗಿದ್ದವನು ಬರಲು ಅವನಿಂದ ವಿಷಯಗಳೆಲ್ಲವನ್ನೂ ತಿಳಿದುಕೊಂಡು ತಂದೆಗೋಸ್ಕರ ಬಹುವಾಗಿ ಅತ್ತನು

೧೨. ಅವನು ಅನಂತರ ತಾನು ಯೋಚನೆಮಾಡಿಕೊಂಡು ಅವನಿಗೆ ಪರಲೋಕದ ಕ್ರಿಯೆಗಳನ್ನು ಮಾಡಲುದ್ದೇಶಪಟ್ಟು ಕಾಶಿಗೆ ಎಲ್ಲವನ್ನೂ ತೆಗೆದುಕೊಂಡು ಹೋಗಲು ಹೊರಟನು.

೧೩. ಅವನು ದಾರಿಯಲ್ಲಿ ಏಳೆಂಟು ಮಜಲುಗಳನ್ನು ತಂಗಿದ್ದು ಒಂದುಸಾರಿ ತಂಗುವಿಕೆಯಲ್ಲಿ ತನ್ನ ತಂದೆಯನ್ನು ಕಳ್ಳರು ಯಾವ ಮರದ ಬುಡದಲ್ಲಿ ಕೊಂದರೋ ಅಲ್ಲಿಗೆ ಹೋಗಿ ತಂಗಿ ಅಲ್ಲಿ ಸಂಧ್ಯಾವಂದನಾದಿಗಳನ್ನು ಮಾಡಲು ಮೊದಲು ಮಾಡಿದನು.

೧೪. ಅಲ್ಲಿ ಈತನು ಆಹ್ನಿಕಗಳನ್ನು ಮಾಡುತ್ತ ಗೀತೆಯ ಮೂರನೆಯ ಅಧ್ಯಾಯವನ್ನು ಪಾರಾಯಣಮಾಡಿದನು. ಆಗ ಒಂದು ಭಯಂಕರವಾದ ಧ್ವನಿಯು ಹೊರಟು ಅಂತರಿಕ್ಷವೆಲ್ಲವನ್ನೂ ಆವರಿಸಿಕೊಂಡಿತು.

ದದರ್ಶ ಘೋರಮಾಕಾಶಾತ್ ಪತಂತಂ ಪಿತರಂ ತತಃ ।
ವಿಸ್ಮಯೇನ ಭಯೇನಾಽಪಿ ವಿಕಲೀಕೃತಚೇತನಃ ॥ ೧೫ ॥

ತೇಜಸಾ ಭೂಯಸಾ ವ್ಯಾಪ್ತಮಾಲುಲೋಕೇ ಪುರೇಂಬರೇ ।
ಕಿಂಕಿಣೀಕೋಟಿಸಂಕೀರ್ಣಂ ತೇಜಸಾ ವ್ಯಾಪ್ತದಿಙ್ಮುಖಂ ॥ ೧೬ ॥

ವಿಮಾನಮಗ್ರತೋಽಪಶ್ಯತ್ ದಿವ್ಯಮುವ್ಯಗ್ರಚೇತನಃ ।
ತತ್ರಾಽಪಶ್ಯತ್ಸಮಾರೂಢಂ ದಿವ್ಯಾಭಿಸ್ತ್ರೀಭಿರಾವೃತಂ ॥ ೧೭ ॥

ಸಂಸ್ತೂಯಮಾನಂ ಮುನಿಭಿಃ ಪಿತರಂ ಪೀತವಾಸಸಂ ।
ಪ್ರಣತಸ್ಸ ಸಮಾಲೋಕ್ಯ ಯುಯುಜೇ ತೇನ ಚಾಶಿಷಾ ।
ತತೋಽಪೃಚ್ಛದಿದಂ ವೃತ್ತಂ ಸ ಚ ತಸ್ಮೈ ನ್ಯವೇದಯತ್ ॥ ೧೮ ॥

॥ ಜಡ ಉವಾಚ ॥

ದುಸ್ತ್ಯಜಾತ್ಕರ್ಮಣೋ ವತ್ಸ ವಪುಷೋಽಮುಷ್ಯ ಕಾರಣಾತ್ ।
ಮೋಚಿತೋಽಸ್ಮಿ ತ್ವಯಾ ದೈವಾದಧ್ಯಾಯಂ ಜಪತಾಂತಿಕೇ ॥ ೧೯ ॥

---

೧೫ ೧೮. ಆಗ ಎದುರಿಗೆ ಆಕಾಶದಿಂದ ಕೆಳಕ್ಕೆ ಬೀಳುತ್ತಿರುವ ಭಯಂಕರನಾದ ತನ್ನ ತಂದೆಯನ್ನು ನೋಡಿದನು. ಆಗ ಆಶ್ಚರ್ಯವೂ ಭಯವೂ ಉಂಟಾಗಿ ಹೆದರಿಕೊಂಡು ಬಹುವಾಗಿ ಕಾಂತಿಯಿಂದ ಕೂಡಿರುವ ಆಕಾಶವು ಇರುವುದನ್ನೂ ನೋಡಿದನು. ಅನೇಕವಾದ ಕಿರುಗೆಜ್ಜೆಗಳಿಂದ ಕೂಡಿದ ತನ್ನ ಕಾಂತಿಯಿಂದ ಎಲ್ಲಾ ಕಡೆಯನ್ನೂ ಬೆಳಗುತ್ತಿರುವ ಒಂದು ವಿಮಾನವನ್ನು ಎದುರುಗಡೆಯ ಆಕಾಶದಲ್ಲಿ ನೋಡಿದನು. ಆ ವಿಮಾನದಲ್ಲಿ ತನ್ನ ತಂದೆಯು ಕುಳಿತಿರುವುದನ್ನೂ ಅವನನ್ನು ಅನೇಕ ಜನ ಉತ್ತಮಸ್ತ್ರೀಯರು ಸೇವಿಸುತ್ತಲಿರುವುದನ್ನೂ ಮುನಿಗಳು ಹೊಗಳುತ್ತಿರುವುದನ್ನೂ ನೋಡಿದನು. ಮತ್ತು ಆ ತಂದೆಯು ಬಿಳಿಯ ಬಟ್ಟೆಯನ್ನು ಧರಿಸಿರುವುದನ್ನು ನೋಡಿದನು. ಆ ತಂದೆಯನ್ನು ನೋಡಿ ನಮಸ್ಕರಿಸಿದನು. ಆಗ ಅವನು ಆಶೀರ್ವದಿಸಿದನು. ಅನಂತರ ಮಗನು ಅವನ ವಿಷಯಗಳನ್ನು ಕೇಳಲು ಅವನು ಅದನ್ನೆಲ್ಲಾ ಹೇಳಿದನು.

೧೯. ಜಡನು ಹೇಳಿದನು-ಎಲೈ ವತ್ಸನೆ! ನಾಶವಾಗದ ಕರ್ಮದ ಜೊತೆಯಿಂದ ಈ ದೇಹವನ್ನು ವಿಕಾರವಾಗಿ ಹೊಂದಿದ್ದೆನು. ಅಂತಹ ದೇಹವನ್ನು ಈ ನೀನು ನನ್ನ ಬಳಿಯಲ್ಲಿ ಗೀತಾಽಧ್ಯಾಯವನ್ನು ಓದಿದುದರಿಂದ ಕಳೆದುಕೊಂಡು ಉತ್ತಮ ದೇಹವನ್ನು ಹೊಂದಿದ್ದೇನೆ.

ತನ್ನಿವರ್ತಸ್ವ ಜಪತಃ ಸಾಂಪ್ರತಂ ತ್ವಾಮುಪಸ್ಥಿತಂ ।
ವಾರಾಣಸೀಯದರ್ಥಂ ಯತ್ ತದನುಷ್ಠಿತಮಾತ್ಮನಃ ॥ ೨೦ ॥

॥ ಶ್ರೀ ಭಗವಾನುವಾಚ ॥

ಏವಮುಕ್ತಸ್ಸುತಃ ಪ್ರಾಹ ಪಿತರಂ ದೀಪ್ತತೇಜಸಂ ॥ ೨೧ ॥

॥ ಸುತ ಉವಾಚ ॥

ಹಿತಂ ಮಮಾನುಶಾಧಿ ತ್ವಂ ಕಾರ್ಯಮನ್ಯಚ್ಚ ಕಿಂಚನ ॥ ೨೨ ॥

॥ ಶ್ರೀ ಭಗವಾನುವಾಚ ॥

ತತಃ ಪ್ರಾಹ ಪಿತಾ ಪುತ್ರಂ ಕಾರ್ಯಮೇತತ್ತ್ವಯಾಽನಘ ।
ಯನ್ಮಯಾಚರಿತಂ ಕರ್ಮ ಭ್ರಾತ್ರಾ ಮಮ ತು ತತ್ಕೃತಂ ॥ ೨೩ ॥

ಸ ಯಾತೋ ನರಕಂ ಘೋರಂ ತಂ ಮೋಚಯಿತುಮರ್ಹಸಿ ।
ಅನ್ಯೇ ಮದನ್ವಯಾ ಯೇ ವೈ ನಿರಯಂ ಪ್ರತಿಪೇದಿರೇ ।
ತೇ ಚ ಮೋಚಯಿತವ್ಯಾಸ್ತೇ ಇತಿ ಮೇಽಸ್ತಿ ಮನೋರಥಃ ॥ ೨೪ ॥

---

೨೦. ಆದುದರಿಂದ ಜಪವು ಸಾಕು. ಹಿಂಪಕ್ಕೆ ಹೋಗು ಜಪದಿಂದ ಏನಾಗಬೇಕೋ ಅದು ನಿನಗೆ ಆಗಿದೆ. ಕಾಶಿಗೆ ಯಾತಕ್ಕೆ ಹೋಗಬೇಕೆಂದಿದ್ದೀಯೋ ಅದನ್ನು ನೀನು ಇಲ್ಲಿಯೇ ಮಾಡಿದಂತಾಯಿತು.

೨೧. ಶ್ರೀ ಭಗವಂತನು ಹೇಳಿದನು-ತಂದೆಯು ಹೀಗೆನ್ನುತ್ತಲೂ ಪ್ರಕಾಶಿಸುತ್ತಲಿರುವ ತಂದೆಯನ್ನು ನೋಡಿ ಮಗನಿಂತೆಂದನು.

೨೨. ಮಗನು ಹೇಳಿದನು-ನೀನು ನನಗೆ ಹಿತವಾಗಿರುವ ಮತ್ತೊಂದು ಕೆಲಸವನ್ನು ಹೇಳು.

೨೩-೨೪. ಶ್ರೀ ಭಗವಂತನು ಹೇಳಿದನು-ಆಗ ತಂದೆಯು ಎಲೈ ಮಗನೆ ! ನೀನು ಮತ್ತೊಂದು ಕೆಲಸವನ್ನು ಮಾಡಬೇಕು. ನಾನು ಮಾಡಿದಂತೆಯೇ ನನ್ನ ಸೋದರನೂ ಪಾಪಗಳನ್ನು ಮಾಡಿ ನರಕವನ್ನು ಹೊಂದಿದ್ದಾನೆ. ಅವನನ್ನು ನರಕದಿಂದ ಉದ್ಧರಿಸು. ಅವನೂ ಅಲ್ಲದೆ ನನ್ನ ವಂಶದಲ್ಲಿ ಇನ್ನೂ ಯಾರು ಯಾರು ನರಕವನ್ನು ಹೊಂದಿರುವರೋ ಅವರೆಲ್ಲರನ್ನೂ ಕೂಡ ನೀನು ಬಿಡುಗಡೆ ಮಾಡಬೇಕು. ಇದೇ ನನ್ನ ಇಷ್ಟವು.

॥ ಶ್ರೀ ಭಗವಾನುವಾಚ ॥

ಇತ್ಯೇವಮುಕ್ತಃ ಪುತ್ರಸ್ತು ಪುನಃ ಪ್ರಾಹ ಕೃತಾಂಜಲಿಃ ॥ ೨೫ ॥

॥ ಸುತ ಉವಾಚ ॥

ಕರ್ಮಣಾ ಕೇನ ತಾನ್ ಸರ್ವಾನ್ ಮೋಚಯಾಮಿ ತದಾದಿಶ ॥ ೨೬ ॥

॥ ಶ್ರೀ ಭಗವಾನುವಾಚ ॥

ಏವಂ ನಿವೇದಿತೋ ವಾಕ್ಯಂ ಪಿತಾ ಪುತ್ರಮುವಾಚ ಹ ॥ ೨೭ ॥

॥ ಪಿತೋವಾಚ ॥

ಯೇನಾಹಂ ಮೋಚಿತೋ ವತ್ಸ ತದನುಷ್ಠಾತುಮರ್ಹಸಿ ।
ಅನುಷ್ಠಾಯ ತದುತ್ಪನ್ನಂ ಪುಣ್ಯಂ ತೇಭ್ಯಸ್ಸಮುತ್ಸೃಜ ॥ ೨೮ ॥

ತತೋಽಹಮಿವ ತೇ ಸರ್ವೇ ಪೂರ್ವೇ ಸಂತ್ಯಜ್ಯ ಯಾತನಾಂ ।
ಗಮಿಷ್ಯಂತ್ಯಚಿರೇಣೈವ ತದ್ವಿಷ್ಣೋಃ ಪರಮಂ ಪದಂ ॥ ೨೯ ॥

---

೨೫. ಶ್ರೀ ಭಗವಂತನು ಹೇಳಿದನು–ತಂದೆಯು ಹೀಗೆನ್ನಲು ಮಗನು ಮತ್ತೆ ಕೈಮುಗಿದುಕೊಂಡು ತಂದೆಗೆ ಇಂತೆಂದನು.

೨೬. ಮಗನು ಹೇಳಿದನು–ನಾನು ಯಾವ ಕೆಲಸವನ್ನು ಮಾಡಿ ಅವರೆಲ್ಲರನ್ನೂ ಬಿಡುಗಡೆಮಾಡಲಿ? ಅದನ್ನು ಅಪ್ಪಣೆ ಕೊಡಿಸು.

೨೭. ಶ್ರೀ ಭಗವಂತನು ಹೇಳಿದನು-ಮಗನು ಹೀಗೆನ್ನುತ್ತಲೂ ತಂದೆಯು ಮಗನನ್ನು ಕುರಿತು ಇಂತೆಂದನು.

೨೮. ತಂದೆಯು ಹೇಳಿದನು-ನನಗೆ ಮುಕ್ತಿಯು ಯಾವುದರಿಂದ ಉಂಟಾಯಿತೋ ಆ ಕೆಲಸವನ್ನೇ ಮಾಡು. ಆ ಕೆಲಸವನ್ನು ಮಾಡಿ ಅದರಿಂದ ಬಂದ ಪುಣ್ಯವನ್ನು ಅವರಿಗೆ ದಾನಮಾಡು.

೨೯. ಅವರೆಲ್ಲರೂ ಕೂಡ ನನ್ನಂತೆ ತಮ್ಮ ಆ ನರಕಯಾತನೆಯಿಂದ ಪಾರಾಗಿ ಸ್ವಲ್ಪಕಾಲದಲ್ಲಿಯೇ ವಿಷ್ಣುವಿನ ಆ ಪರಮ ಪದವನ್ನು ಹೊಂದುತ್ತಾರೆ.

|| ಶ್ರೀ ಭಗವಾನುವಾಚ ||

ಸ ಸಂದಿಷ್ಟೋಽವದತ್ಪುತ್ರೋ ಯದ್ಯೇವಂ ತಾತ ನಾರಕಾನ್ ।
ಸರ್ವಾನಪಿ ವಿಮೋಕ್ಷ್ಯಾಮಿ ಯದಿ ತೇ ರೋಚತೇ ವಚಃ || ೩೦ ||

ಏವಮಸ್ತು ಶಿವಂ ಭೂಯಾದುಪಪನ್ನಂ ಮಹತ್ಪ್ರಿಯಂ ।
ಇತ್ಯಾಶ್ವಾಸ್ಯ ಪಿತಾ ಪುತ್ರಂ ಯಯೌ ವಿಷ್ಣೋಃ ಪರಂ ಪದಂ || ೩೧ ||

ಸೋಽಪಿ ತಸ್ಮಾತ್ಪರಾವೃತ್ಯ ಜನಸ್ಥಾನಂ ಪ್ರಪದ್ಯ ಚ ।
ಸುಂದರಸ್ಯ ಪುರಶೌರೇಶ್ಚಾಲಯೇ ಕಾಲಮಭ್ಯಗಾತ್ || ೩೨ ||

ಸ ಕುರ್ವಾಣಸ್ಸಮಾದಿಷ್ಟಂ ಪಿತ್ರಾ ಗೀತಾಜಪೇ ರತಃ ।
ಉತ್ಸಸರ್ಜ ಕೃತಂ ಪುಣ್ಯಂ ಮೋಚಯಿಷ್ಯನ್ ಸ ನಾರಕಾನ್ || ೩೩ ||

ಅತ್ರಾಂತರೇ ಪದಾದ್ವಿಷ್ಣೋರ್ಯಾತನಾಪದಮೀಯುಷಃ ।
ನಾರಕಾನ್ಮೋಚಯಿಷ್ಯಂತಃ ಕಿಂಕರಾ ಯಮಮಭ್ಯಯುಃ || ೩೪ ||

---

೩೦. ಶ್ರೀ ಭಗವಂತನು ಹೇಳಿದನು-ತಂದೆಯು ಹೀಗೆನ್ನಲು ಆ ಮಗನು ಎಲೈ ತಂದೆಯೆ! ಹಾಗೆ ಮುಕ್ತರಾಗುವ ಪಕ್ಷದಲ್ಲಿ ನೀನೊಪ್ಪಿಕೊಂಡರೆ ನರಕದಲ್ಲಿರುವವರನ್ನೆಲ್ಲಾ ಉದ್ಧರಿಸುತ್ತೇನೆ. ಅಪ್ಪಣೆಮಾಡು.

೩೧. ಆಗ ತಂದೆಯು ಎಲೈ ಮಗನೆ! ಹಾಗೆಯೇ ಆಗಲಿ. ಎಂದು ಸಮಾಧಾನವನ್ನು ಹೇಳಿ, ನಿನಗೆ ಮಂಗಳವಾಗಲಿ. ನನಗೆ ಬಹು ಸಂತೋಷವೂ ಪ್ರಿಯವೂ ಆಯಿತು. ಎಂದು ಹೇಳಿ ತಾನು ವಿಷ್ಣುವಿನ ಸ್ಥಾನವಾದ ವೈಕುಂಠಕ್ಕೆ ಹೋದನು.

೩೨. ಆ ಮಗನು ಅಲ್ಲಿಂದ ಹಿಂತಿರುಗಿ ಜನಸ್ಥಾನಕ್ಕೆ ಹೋಗಿ ಅಲ್ಲಿ ಸುಂದರವೆಂಬ ವಿಷ್ಣುದೇವಾಲಯದಲ್ಲಿದ್ದುಕೊಂಡು ಕಾಲವನ್ನು ಕಳೆಯುತ್ತಿದ್ದನು.

೩೩. ತಂದೆಯ ಅಪ್ಪಣೆಯಂತೆ ಅಲ್ಲಿ ಗೀತೆಯ ಜಪವನ್ನು ಮಾಡುತ್ತ ಅದರಿಂದ ಬಂದ ಪುಣ್ಯವನ್ನು ನಾರಕಿಗಳಿಗೆ ಕೊಡುತ್ತಾ ಅವರನ್ನು ಆ ನರಕದಿಂದ ಉದ್ಧಾರಮಾಡಿದನು.

೩೪. ಈ ಸಮಯದಲ್ಲಿ ಆ ಸ್ವಾಮಿಯ ಸ್ಥಾನದಿಂದ ಯಾತನೆಯನ್ನು ಹೊಂದಿದ ನಾರಕಿಗಳನ್ನು ಬಿಡಿಸಲು ಯಮನ ಬಳಿಗೆ ವಿಷ್ಣುದೂತರು ಹೋದರು.

ತೇನ ತೇ ಪೂಜಿತಾಸ್ಸರ್ವೇ ಸತ್ಕ್ರಿಯಾಭಿರನೇಕಧಾ ।
ಕುಶಲಂ ಪರಿಪೃಷ್ಟಾಶ್ಚ ಸರ್ವತಸ್ಸುಖಮೂಚಿರೇ ॥ ೩೫ ॥

ಏವಂ ಸತ್ಕೃತ್ಯ ಮೇಧಾವೀ ಪಿತೃಲೋಕಮಹೇಶ್ವರಃ ।
ಹೇತುಮಾಗಮನೇಽಪೃಚ್ಛತ್ ತೇ ಚ ತಸ್ಮೈ ನ್ಯವೇದಯನ್ ॥ ೩೬ ॥

॥ ವಿಷ್ಣುದೂತಾ ಊಚುಃ ॥

ವಿದ್ಧಿ ಕೀನಾಶನಾಥ ತ್ವಂ ಶೇಷಪರ್ಯಂಕಶಾಯಿನಾ ।
ಶೌರಿಣಾ ಪ್ರಹಿತಾನಸ್ಮಾನ್ ಸಮಾದೇಷ್ಟುಂ ತ್ವದಂತಿಕೇ ॥ ೩೭ ॥

ಅಸ್ಮನ್ಮುಖೇನ ದೇವಸ್ತ್ವಾಂ ಕುಶಲಂ ಪರಿಪೃಚ್ಛತಿ ।
ನಾರಕಾನ್ ಪ್ರಾಣಿನಸ್ಸರ್ವಾನ್ ವಿಮೋಕ್ತುಂ ಚ ನಿಯಚ್ಛತಿ ॥ ೩೮ ॥

॥ ಶ್ರೀ ಭಗವಾನುವಾಚ ॥

ಇತ್ಯಾಕರ್ಣ್ಯ ಸಮಾದಿಷ್ಟಂ ವಿಷ್ಣೋರಮಿತತೇಜಸಃ ।
ನತೇನ ಮೂರ್ಧ್ನಾ ಸಂಭಾವ್ಯ ದಧ್ಯೌ ಕಿಂಚನ ಚೇತಸಾ ॥ ೩೯ ॥

---

೩೫. ಆ ಯಮನು ಅವರನ್ನು ನೋಡಿ ಅನೇಕ ರೀತಿಯಿಂದ ಪೂಜಿಸಿ ಕ್ಷೇಮ ಸಮಚಾರವನ್ನು ಕೇಳಲು ಎಲ್ಲರೂ ಸುಖವನ್ನು ಹೇಳಿದರು.

೩೬. ಬುದ್ಧಿವಂತನಾದ ಆ ಪಿತೃಲೋಕಕ್ಕೆ ಒಡೆಯನಾದ ಆ ಯಮನು ಅವರನ್ನು ಹೀಗೆ ಸತ್ಕರಿಸಿ ಅವರು ಬಂದ ಕಾರಣವನ್ನು ಕೇಳಲು ಅವರು ಆ ಯಮನಿಗಿಂತೆದರು.

೩೭. ವಿಷ್ಣುದೂತರು ಹೇಳಿದರು-ಪ್ರೇತಗಳಿಗೆ ಒಡೆಯನಾದ ಎಲೈ ಯಮನೇ ! ಶೇಷನ ಹಾಸಿಗೆಯಲ್ಲಿ ಮಲಗಿರುವ ಶೌರಿಯು ನಿನ್ನ ಬಳಿಗೆ ಕೆಲವು ಮಾತುಗಳನ್ನು ಹೇಳಲು ಕಳುಹಿಸಿದ್ದಾನೆ. ಎಂಬುದಾಗಿ ನಮ್ಮನ್ನು ತಿಳಿ.

೩೮. ಆ ಸ್ವಾಮಿಯು ನಮ್ಮ ಮುಖಾಂತರ ನಿನ್ನ ಕುಶಲವನ್ನು ಕೇಳುತ್ತಾನೆ. ಮತ್ತು ನರಕದಲ್ಲಿರುವ ಪ್ರಾಣಿಗಳೆಲ್ಲರನ್ನೂ ಬಿಟ್ಟುಬಿಡಲು ಅಪ್ಪಣೆ ಮಾಡಿದ್ದಾನೆ

೩೯. ಶ್ರೀ ಭಗವಂತನು ಹೇಳಿದನು-ಸರ್ವಶಕ್ತನಾದ ವಿಷ್ಣುವು ಹೀಗೆ ಅಪ್ಪಣೆಮಾಡಿದುದನ್ನು ತಲೆಬಾಗಿಸಿಕೊಂಡು ಕೇಳಿ ಮನಸ್ಸಿನಲ್ಲಿ ಏನೇನನ್ನೋ ಯೋಚಿಸಿದನು.

ವಿಮುಕ್ತಾನ್ನಾರಕಾನ್ಮ್ಯಾತಾಂಸ್ತಾನ್ವಿಲೋಕ್ಯ ಮುದೋತ್ಕಟಾನ್ ।
ಸ ತೈರನುರಗತಸ್ಸರ್ವೈಃ ವಿಷ್ಣೋರಾಯತನಂ ತತಃ ॥ ೪೦ ॥

ಯಯೌ ಸ ವರಯಾನೇನ ಯತ್ರಾಸ್ತೇ ದುಗ್ಧವಾರಿಧಿಃ ।
ತದಂತ ಉದಿತಾನೇಕಸೂರ್ಯಕೋಟಿಸಮಪ್ರಭಂ ॥ ೪೧ ॥

ಇಂದೀವರದಳಶ್ಯಾಮಂ ಲೋಕನಾಥಂ ಜಗದ್ಗುರುಂ ।
ಶಯ್ಯಾಫಣಿಫಣಾರತ್ನಮರೀಚ್ಯಾಮಿಶ್ರತೇಜಸಂ ॥ ೪೨ ॥

ವಿಲೋಕ್ಯಾನಂದಯುಕ್ತಂ ತಂ ನಿರ್ಭರಪ್ರೀತಮಾನಸಂ ।
ಭಾವಾನುಗೈರ್ದೃಗಾಲೋಕೈಃ ಶ್ರೀಯಾ ಪ್ರೇಮ್ಣೇಕ್ಷಿತಂ ಮುಹುಃ ॥ ೪೩ ॥

ಯೋಗಿಭಿಃ ಪರಿತೋ ಜುಷ್ಟಂ ಧ್ಯಾನನಿಸ್ಪಂದತಾರಕೈಃ ।
ಸ್ತೂಯಮಾನಂ ಮಹೇಂದ್ರೇಣ ಪರಾಜೇತುಂ ವಿರೋಧಿನಃ ॥ ೪೪ ॥

---

೪೦. ಆ ನರಕದವರೆಲ್ಲರನ್ನೂ ಅಂತೆಯೇ ಬಿಟ್ಟು ಬಿಟ್ಟನು. ಅವರೆಲ್ಲರೂ ಬಹು ಸಂತೋಷದಿಂದ ಹೋಗುತ್ತಿರುವುದನ್ನು ನೋಡಿ ಅವರನ್ನು ಹಿಂಬಾಲಿಸಿ ಕೊಂಡು ತಾನೂ ಆ ವೈಕುಂಠಕ್ಕೆ ಹೋದನು.

೪೧-೪೨. ಉತ್ತಮವಾದ ರಥದಲ್ಲಿ ಕುಳಿತು ಕ್ಷೀರಸಮುದ್ರಕ್ಕೆ ಹೋದನು. ಅಲ್ಲಿ ಆಗ ತಾನೇ ಹುಟ್ಟುತ್ತಿರುವ ಕೋಟಿ ಸೂರ್ಯರಂತೆ ಕಾಂತಿಯುಳ್ಳ ನೀಲೋತ್ಪಲದಂತೆ ಬಣ್ಣವುಳ್ಳ ಲೋಕಕ್ಕೆ ಒಡೆಯನೂ ಗುರುವೂ ಆದ ಆದಿಶೇಷನ ಹೆಡೆಯ ರತ್ನದ ಕಾಂತಿಯಿಂದ ಕೂಡಿಕೊಂಡಿರುವ ತೇಜಸ್ಸುಳ್ಳ ಸ್ವಾಮಿಯನ್ನು ನೋಡಿದನು.

೪೩. ಮನೋಹರವಾದ, ಆನಂದದಿಂದ ಕೂಡಿರುವ, ಬಹುವಾದ ಪ್ರೀತಿಯಿಂದ ಕೂಡಿದ, ಅಭಿಪ್ರಾಯ ಪೂರ್ವಕವಾದ ಕಟಾಕ್ಷಗಳಿಂದ ಲಕ್ಷ್ಮಿಯು ಅವನ ಶರೀರವನ್ನು ಬಾರಿ ಬಾರಿಗೂ ನೋಡುತ್ತಿರುವ ಆ ಸ್ವಾಮಿಯನ್ನು ನೋಡಿದನು.

೪೪. ಧ್ಯಾನದಿಂದ ಅಲ್ಲಾಡದಿರುವ ಕಣ್ಣುಗುಡ್ಡೆಗಳುಳ್ಳ ಯೋಗಿಗಳಿಂದ ಸುತ್ತಲೂ ಸೇವಿಸಲ್ಪಡುತ್ತಿರುವ ಶತ್ರುಗಳನ್ನು ಜಯಿಸಲು ಮಹೇಂದ್ರನಿಂದ ಸ್ತುತಿಸಲ್ಪಡುತ್ತಿರುವ ಆ ಸ್ವಾಮಿಯನ್ನು ನೋಡಿದನು.

ಆಮ್ನಾಯವಚಸಾಮಂತೇ ಬ್ರಹ್ಮಣೋ ನಿಸ್ಸೃತೈರ್ಮುಖಾತ್ ।
ಮೂರ್ತಿಮದ್ಭಿರ್ವಚೋಭಿಶ್ಚ ಗೀಯಮಾನಗುಣೋತ್ಕರಂ ॥ ೪೫ ॥

ಸಂಪ್ರೀತಂ ಚಾಪ್ಯುದಾಸೀನಮಪಿ ಸರ್ವಾಸು ಯೋನಿಷು ।
ಯೋಗಸಂಚಿತಪುಣ್ಯಾನಾಂ ಯೌಗಪದ್ಯೇನ ಜಂತುಷು ॥ ೪೬ ॥

ವಿಲೋಕಮಾನಮಾತ್ಮಾನಮಖಿಲಂ ಸಚರಾಚರಂ ।
ಆವೇದಯನ್ತಮಾಲೋಕೈರಾನಂದಪರಿಪ್ಲೂರಿತೈಃ ॥ ೪೭ ॥

ಆಬಿಭ್ರಾಣಂ ವಪುರ್ವ್ಯಾಪಿ ದ್ಯೋತಿತಂ ಭೋಗಿನಸ್ತ್ವಿಷಾ ।
ಇಂದೀವರದಳಶ್ಯಾಮಂ ಜ್ಯೋತ್ಸ್ನಯೇವ ನಭಸ್ಥಲಂ ।
ವಿಲೋಕ್ಯ ತಂ ಸ ತುಷ್ಟಾವ ಧಿಯಾ ಬಹುಲಯಾ ನತಃ ॥ ೪೮ ॥

---

೪೫. ವೇದಗಳ ಸಾರವಾದ ಉಪನಿಷತ್ತುಗಳಿಂದ ಬ್ರಹ್ಮನು ತನ್ನ ಮುಖಗಳಿಂದಲೇ ಹೇಳುತ್ತಿರುವ ಆಕಾರವನ್ನು ಹೊಂದಿರುವ ಮಾತುಗಳಿಂದ ಸ್ತುತಿಸಲ್ಪಡುತ್ತಿರುವ ಆ ಸ್ವಾಮಿಯನ್ನು ನೋಡಿದನು.

೪೬-೪೮. ಎಲ್ಲಾ ಪ್ರಾಣಿಗಳಲ್ಲಿಯೂ ಪ್ರೀತಿಯುಳ್ಳ ಮತ್ತು ಉದಾಸೀನನೂ ಆಗಿರುವ ಯೋಗದಿಂದ ಪುಣ್ಯವನ್ನು ಸಂಪಾದಿಸಿರುವವರಿಗೆ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಸಾರಿ ಕಂಡುಬರುತ್ತಿರುವ, ತನ್ನನ್ನೇ (ಆತ್ಮನನ್ನೇ) ನೋಡಿಕೊಳ್ಳುತ್ತಿರುವ ಚರಾಚರಾಗಳನ್ನೂ ಕೂಡ ತನ್ನಲ್ಲಿಯೇ ನೋಡಿಕೊಳ್ಳುತ್ತಿರುವ ಆ ಸ್ವಾಮಿಯನ್ನು ನೋಡಿದನು. ಎಲ್ಲಾ ಪ್ರಾಣಿಗಳನ್ನೂ ತನ್ನ ದೃಷ್ಟಿಯಿಂದ ನೋಡುತ್ತ ಸಂತೋಷಪಡಿಸುತ್ತಿರುವ ಸರ್ಪದ ದೇಹಕಾಂತಿಯಿಂದ ತನ್ನ ದೇಹಕಾಂತಿಯನ್ನು ಪ್ರಕಾಶಗೊಳಿಸಿಕೊಳ್ಳುತ್ತಿರುವ ಸ್ವಾಮಿಯನ್ನು ನೋಡಿದನು. ಆ ಸರ್ಪದ ಕಾಂತಿಯು ಈತನ ದೇಹದಮೇಲೆ ಬಿದ್ದಿದ್ದರೆ ಬೆಳದಿಂಗಳಿನಿಂದ ಆಕಾಶವು ಬೆಳಗುವಂತೆ ಕಾಣುತ್ತಿರುವ ಆ ಇಂದೀವರದಂತೆ ಶ್ಯಾಮವರ್ಣವುಳ್ಳ ಸ್ವಾಮಿಯನ್ನು ನೋಡಿ ಉತ್ಕೃಷ್ಟವಾದ ಬುದ್ಧಿಯಿಂದ ನಮಿಸಿ ಆ ಯಮನು ಸ್ತೋತ್ರಮಾಡಿದನು.

॥ ಯಮ ಉವಾಚ ॥

ನಮುಸ್ಸಮಸ್ತನಿರ್ಮಾಣನಿರ್ಮಲೀಭೂತಚೇತಸೇ ।
ವದನೋದ್ಗೀರ್ಣವೇದಾಯ ವಿಶ್ವರೂಪಾಯ ವೇಧಸೇ ॥ ೪೯ ॥

ಬಲವೇಗಸುದುರ್ಧರ್ಷದಾನವೇಂದ್ರಮದದ್ರುಹೇ ।
ನಮಃ ಸ್ಥಿತೌ ಚ ಸತ್ತ್ವಾಯ ವಿಶ್ವಾಧಾರಾಯ ವಿಷ್ಣವೇ ॥ ೫೦ ॥

ನಮಃ ಪಾತಕಸಂಘಾತ ಜಿಷ್ಣವೇಽಖಿಲದೇಹಿನಾಂ ।
ಈಷದುನ್ಮೀಲಲ್ಲಲಾಟ ನೇತ್ರಾಗ್ನಿಪ್ರಭವಾರ್ಚಿಷೇ ॥ ೫೧ ॥

ತ್ವಂ ಹಿ ಸರ್ವಸ್ಯ ಲೋಕಸ್ಯ ಗುರುರಾತ್ಮಾ ಮಹೇಶ್ವರಃ ।
ವಿಸೃಜ್ಯ ವೈಷ್ಣವಾನ್ ಸರ್ವಾನ್ ಅತಸ್ತ್ವಮನುವರ್ತಸೇ ॥ ೫೨ ॥

ವ್ಯಾಪಯನ್ನಿಖಿಲಂ ಲೋಕಂ ಮಾಯಯಾ ಪರಿಬೃಂಹಿತಂ ।
ನ ತಯಾ ಪರಿಭೂತೋಽಸಿ ನ ಚ ತತ್ಪ್ರಭವೈರ್ಗುಣೈಃ ॥ ೫೩ ॥

---

೪೯. ಯಮನು ಹೇಳಿದನು-ಎಲ್ಲವನ್ನೂ ಸೃಷ್ಟಿಸಿದ ಮತ್ತು ನಿರ್ಮಲವಾದ ಮನಸ್ಸುಳ್ಳ ಸ್ವಾಮಿಗೆ ನಮಸ್ಕಾರವು. ವೇದಗಳನ್ನು ಮುಖದಿಂದ ಹೊರಗೆ ಹೊರಡಿಸಿದ ವಿಶ್ವರೂಪನಾದ ಬ್ರಹ್ಮರೂಪನಾದ ಸ್ವಾಮಿಗೆ ನಮಸ್ಕಾರವು.

೫೦. ತಡೆಯಲಸಾಧ್ಯವಾದ ಬಲವೇಗಗಳುಳ್ಳ ದಾನವೇಂದ್ರನ ಮದವನ್ನು ನಾಶಮಾಡಿದ ಸ್ವಾಮಿಗೆ ನಮಸ್ಕಾರವು. ಸೃಷ್ಟಿಸ್ಥಿತಿಗಳನ್ನು ಮಾಡುವ ವಿಶ್ವಾಧಾರನಾದ ಸ್ವಾಮಿಗೆ ನಮಸ್ಕಾರವು.

೫೧. ಎಲ್ಲಾ ಪ್ರಾಣಿಗಳ ಪಾಪವನ್ನೂ ನಾಶಮಾಡುವ ಸ್ವಾಮಿಗೆ ನಮಸ್ಕಾರವು. ಕಣ್ಣಿನಲ್ಲಿ ಸ್ವಲ್ಪವಾಗಿ ಹೊರಹೊಮ್ಮುತ್ತಿರುವ ಬೆಂಕಿಯ ಕಿಡಿಗಳುಳ್ಳ ಸ್ವಾಮಿಗೆ ನಮಸ್ಕಾರವು.

೫೨. ನೀನೇ ಲೋಕಕ್ಕೆಲ್ಲಾ ಗುರುವು. ಆತ್ಮರೂಪನು. ಕೇಳಿದುದನ್ನು ಕೊಡತಕ್ಕವನು. ವೈಷ್ಣವರೆಲ್ಲರನ್ನೂ ಸೃಷ್ಟಿಸಿ ಲೋಕದಲ್ಲಿ ಆ ಜನಗಳನ್ನು ಪಾವನ ಮಾಡುವುದಕ್ಕೆ ಬಿಟ್ಟಿದ್ದೀಯೆ. ಆದುದರಿಂದಲೇ ನೀನು ದಯಾಳುವು.

೫೩. ಲೋಕಗಳನ್ನು ನಿನ್ನ ಮಾಯೆಯಿಂದ ವ್ಯಾಪಿಸಿಕೊಳ್ಳುವಂತೆ ಮಾಡಿದ್ದರೂ ನೀನು ಮಾತ್ರ ಆ ಮಾಯೆಗೆ ಅಧೀನನಾಗಿರುವುದಿಲ್ಲ. ಅದರ ಗುಣಗಳು ನಿನ್ನನ್ನು ತೊಂದರೆಪಡಿಸಲಾರವು.

ಅಂತರಾ ವರ್ತಮಾನೋಽಪಿ ನ ತಾಭ್ಯಾಮಭಿಭೂಯಸೇ |
ದೃಶಾ ವಿಷಯವರ್ತಿನ್ಯಾ ನಿಗೃಹೀತಮನಾ ಅಪಿ || ೫೪ ||

ತಯಾ ಫಲಾಽಭಿಗಾಮಿನ್ಯಾ ಆತ್ಮನ್ಯೇವಾಽಭಿಲೀಯಸೇ |
ನ ತವಾಽಸ್ತಿ ಮಹಿಮ್ನೋಽಂತೋ ಯಥಾ ನಿರವಧಿಸ್ತ್ವಯಂ |
ಮೌನಮೇವ ಪ್ರಯುಕ್ತಂ ಮೇ ವಿಷಯೋಽಸ್ತಿ ಕಥಂ ಗಿರಾಂ || ೫೫ ||

|| ಶ್ರೀ ಭಗವಾನುವಾಚ ||

ಇತಿ ಸ್ತುತ್ವಾ ತತೋ ವಾಕ್ಯಂ ಇದಮಾಹ ಕೃತಾಂಜಲಿಃ || ೫೬ ||

|| ಯಮ ಉವಾಚ ||

ತ್ವನ್ನಿಯೋಗಾದಮೀ ಮುಕ್ತಾ ದೇಹಿನೋ ನಿರ್ಗುಣಾ ಮಯಾ |
ಸಮಾದಿಶ ಯದನ್ಯನ್ಮೇ ಕಾರ್ಯಮಸ್ತಿ ಜಗದ್ಗುರೋ || ೫೭ ||

|| ಶ್ರೀ ಭಗವಾನುವಾಚ ||

ಇತಿ ವಿಜ್ಞಾಪಿತಸ್ತೇನ ತಮಾಹ ಮಧುಸೂದನಃ |
ಮೇಘಗಂಭೀರಯಾ ವಾಚಾ ಸಿಂಚನ್ನಿವ ಸುಧಾರಸೈಃ || ೫೮ ||

---

೫೪. ಮಾಯೆ ಮತ್ತು ಅದರ ಗುಣಗಳ ಮಧ್ಯದಲ್ಲಿಯೇ ಇದ್ದರೂ ಅವುಗಳೊಂದೂ ನಿನ್ನನ್ನು ಅಂಟಿಕೊಳ್ಳಲಾರವು. ನಿನ್ನ ದೃಷ್ಟಿಯು ವಿಷಯ ಸುಖಗಳನ್ನು ತೋರಿಸುತ್ತಿದ್ದರೂ ನೀನು ಮಾತ್ರ ಜಿತಮನಸ್ಸುಳ್ಳವನು.

೫೫. ಫಲವನ್ನು ಕೊಡತಕ್ಕ ಆ ದೃಷ್ಟಿಗಳು ನಿನ್ನ ಆತ್ಮನಲ್ಲಿಯೇ ಲೀನವಾಗುತ್ತವೆ. ನಿನ್ನ ಮಹಿಮೆಗಳಿಗೆ ಕೊನೆಯೇ ಇರುವುದಿಲ್ಲ. ನೀನು ಪಾರವಿಲ್ಲದವನು. ನಿನ್ನನ್ನು ಹೊಗಳುವುದಕ್ಕಿಂತ ಸುಮ್ಮನಿರುವುದೇ ಮೇಲು. ಅಪಾರ ಮಹಿಮೆಯುಳ್ಳ ನಿನ್ನನ್ನು ಹೊಗಳಿ ಮುಗಿಸಲಾದೀತೆ ?

೫೬. ಶ್ರೀ ಭಗವಂತನು ಹೇಳಿದನು–ಈ ರೀತಿಯಾಗಿ ಸ್ತೋತ್ರಮಾಡಿ ಕೈಮುಗಿದುಕೊಂಡು ಇಂತೆಂದನು.

೫೭. ಯಮನು ಹೇಳಿದನು-ಎಲೈ ಸ್ವಾಮಿಯೆ ! ನಿನ್ನ ಅಪ್ಪಣೆಯಿಂದ ಇವರೆಲ್ಲರನ್ನೂ ಗುಣಶೂನ್ಯರನ್ನು ಬಿಟ್ಟು ಬಿಡುವಂತೆ ಬಿಟ್ಟಿದ್ದೇನೆ. ನನಗೆ ಮತ್ತಾವ ಕೆಲಸವನ್ನು ಹೇಳುತ್ತಿಯೇ ? ಅಪ್ಪಣೆ ಮಾಡು.

೫೮. ಶ್ರೀ ಭಗವಂತನು ಹೇಳಿದನು-ಯಮನು ಹೀಗೆ ವಿಜ್ಞಾಪಿಸಿ ಕೊಳ್ಳುತ್ತಲೂ ಮಧುಸೂದನನು ಮೇಘದಂತೆ ಗಂಭೀರವಾದ ಮಾತಿನಿಂದ ಅಮೃತರಸದಿಂದ ಚುಮುಕಿಸುವವನಂತೆ ಇಂತೆಂದನು.

|| ಮಧುಸೂದನ ಉವಾಚ ||

ಪಾಪಾದುದ್ಧಾರ್ಯತೇ ಲೋಕಃ ತ್ವಯಾ ಹಿ ಸಮವರ್ತಿನಾ ।
ತ್ವಯಿ ವಿನ್ಯಸ್ತಭಾರೋಽಹಂ ನಾನುಶೋಚಾಮಿ ದೇಹಿನಃ ।
ತದಾಚರ ನಿಜಂ ಕರ್ಮ ಪ್ರಯಾಹಿ ಸ್ವನಿಕೇತನಂ || ೫೯ ||

|| ಶ್ರೀ ಭಗವಾನುವಾಚ ||

ಇತ್ಯುಕ್ತ್ವಾಂತರ್ದಧೇ ದೇವಃ ಸೋಽಪಿ ಸ್ವಂ ಪುರಮಾಯಯೌ ।
ಸೋಽಪಿ ಸ್ವಜ್ಞಾತಿಜಾನ್ ಸರ್ವಾನ್ನಿರಯಸ್ಥಾನನೇಕಶಃ ।
ಉದ್ಧೃತ್ಯ ವರಯಾನೇನ ವಿಷ್ಣುಲೋಕಂ ಸ್ವಯಂ ಯಯೌ || ೬೦ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ತೃತೀಯಾಧ್ಯಾಯ ಮಾಹಾತ್ಮ್ಯಂ ನಾಮ ತ್ರಿಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೯. ಮಧುಸೂದನನು ಹೇಳಿದನು- ಪಾಪಪುಣ್ಯಗಳೆನ್ನು ಸಮವಾಗಿ ನೋಡುವ ನೀನು ಲೋಕವನ್ನು ಪಾಪದಿಂದ ಕಾಪಾಡುತ್ತೀಯೆ ಆದುದರಿಂದಲೇ ನಿನ್ನಲ್ಲಿ ನಾನು ಭಾರವನ್ನು ಹಾಕಿ ಪ್ರಾಣಿಗಳ ವಿಷಯವಲ್ಲಿ ಯೋಚನೆಯನ್ನು ಬಿಟ್ಟಿದ್ದೇನೆ. ನಿನ್ನ ಕೆಲಸವನ್ನು ನೀನು ಮಾಡು. ನಿನ್ನ ಮನೆಗೆ ಹೋಗು.

೬೦. ಶ್ರೀ ಭಗವಂತನು ಹೇಳಿದನು-ಹೀಗೆಂದು ಹೇಳಿ ಸ್ವಾಮಿಯು ಅಂತರ್ಧಾನನಾದನು. ಯಮನು ತನ್ನ ಪಟ್ಟಣಕ್ಕೆ ಹೋದನು. ಆ ಜಡನ ಮಗನು ತನ್ನ ಜ್ಞಾತಿಗಳೆಲ್ಲರನ್ನೂ ನರಕದಿಂದ ಪಾರುಗಾಣಿಸಿ ತಾನು ವಿಷ್ಣು ಲೋಕವನ್ನು ಹೊಂದಿದನು

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಮೂರನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಸ್ಸಪ್ತತ್ಯಧಿಕಶತತಮೋಽಧ್ಯಾಯಃ ||



॥ ಶ್ರೀ ಭಗವಾನುವಾಚ ॥

ಚತುರ್ಥಸ್ಯಾಪಿ ಮಾಹಾತ್ಮ್ಯ ಮಾಖ್ಯಾಸ್ಯಾಮ್ಯಧುನಾ ಶೃಣು |
ಬದರೀತ್ವಂ ಸಮುತ್ಸೃಜ್ಯ ಯೇನ ಕನ್ಯೇ ದಿವಂ ಗತೇ ॥ ೧ ॥

|| ಶ್ರೀರುವಾಚ ||

ಕಥಂ ಕನ್ಯೇ ದಿವಂ ಯಾತೇ ಬದರೀತ್ವಂ ವಿಸೃಜ್ಯ ವೈ |
ತೇ ಕೇ ಚಾಸ್ತಾಂ ಪುರಾ ದೇವ ಕಥಂ ಪ್ರಾಪ್ತೇ ತು ಮುಖ್ಯತಾಂ || ೨ ||

---

## ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು



೧ ಶ್ರೀ ಭಗವಂತನು ಹೇಳಿದನು-ಈ ಗೀತೆಯ ನಾಲ್ಕನೆಯ ಅಧ್ಯಾಯದ ಮಹಿಮೆಯನ್ನೂ ಹೇಳುತ್ತೇನೆ. ಇದನ್ನು ಕೇಳಿದುದರಿಂದ ಎರಡು ಎಗಚಿ ಮರಗಳು ತಮ್ಮ ಮರದ ಜನ್ಮವನ್ನು ಬಿಟ್ಟು ಎರಡೂ ಕನ್ಯೆಯರಾದರು. ಮತ್ತು ಸ್ವರ್ಗಕ್ಕೆ ಹೋದರು.

೨. ಲಕ್ಷ್ಮಿಯು ಹೇಳಿದಳು-ಎಲೈ ಸ್ವಾಮಿಯೆ! ಅವರಿಬ್ಬರೂ ಎಗಚಿಯ ಮರವಾಗಿರುವಿಕೆಯನ್ನು ಬಿಟ್ಟು ಕನ್ಯೆಯರಾಗಿ ಸ್ವರ್ಗಕ್ಕೆ ಹೇಗೆ ಹೋದರು? ಪೂರ್ವದಲ್ಲಿ ಅವರು ಏನಾಗಿದ್ದರು? ಪ್ರಧಾನರು ತಾನೆ ಹೇಗೆ ಆದರು?

ಏತದ್ವೇದಿತುಮಿಚ್ಛಾಮಿ ನಾಥ ವಕ್ತುಂ ತ್ವಮರ್ಹಸಿ ।
ನ ಹಿ ದೇವಾಽನುತೃಪ್ಯಾಮಿ ಶೃಣ್ವತೀ ಪರಮಾಂ ಕಥಾಂ ॥ ३ ॥

॥ ಶ್ರೀ ಭಗವಾನುವಾಚ ॥

ಅಸ್ತಿ ಭಾಗೀರಥೀತೀರೇ ನಾಮ್ನಾ ವಾರಾಣಸೀ ಪುರೀ ।
ಭರತೋ ನಾಮ ಯುಕ್ತಾತ್ಮಾ ತತ್ರ ವಿಶ್ವೇಶ್ವರಾಲಯೇ ॥ ४ ॥

ನಿತ್ಯಮಾತ್ಮರತಸ್ತುರ್ಯಂ ಜಪತ್ಯಧ್ಯಾಯಮಾದರಾತ್ ।
ತದಭ್ಯಾಸಾದದುಷ್ಟಾತ್ಮಾ ನ ದ್ವಂದ್ವೈರಭಿಭೂಯತೇ ॥ ೫ ॥

ಕಾಲೇ ಕದಾಚನ ಕ್ರೀಡನ್ ಯಯೌ ಸ ನಗರಾದ್ಬಹಿಃ ।
ಉದ್ಯಾನವರ್ತಿನೋ ದೇವಾನ್ ದಿದೃಕ್ಷುಸ್ಸ ತಪೋಧನಃ ॥ ೬ ॥

---

३. ಎಲೈ ನಾಥನೇ ! ಇದನ್ನು ತಿಳಿಯಬೇಕೆಂದಿದ್ದೇನೆ. ನೀನು ಹೇಳಬೇಕು. ಎಲೈ ಸ್ವಾಮಿಯೇ ! ಉತ್ತಮವಾದ ಕಥೆಯನ್ನು ಎಷ್ಟು ಕೇಳಿದರೂ ತೃಪ್ತಿಯೇ ಉಂಟಾಗುವುದಿಲ್ಲ.

४. ಭಗವಂತನು ಹೇಳಿದನು–ಭಾಗೀರಥೀ ನದಿಯ ದಡದಲ್ಲಿ ವಾರಣಾಸೀ ಎಂಬ ಪಟ್ಟಣವೊಂದಿದೆ. ಅಲ್ಲಿ ಒಂದು ವಿಶ್ವೇಶ್ವರ ದೇವಸ್ಥಾನವಿದೆ. ಅದರಲ್ಲಿ ಒಬ್ಬ ಇಂದ್ರಿಯ ನಿಗ್ರಹಿಯಾದ ಭರತನೆಂಬುವನಿದ್ದನು.

೫. ಅವನು ಯಾವಾಗಲೂ ಆತ್ಮಧ್ಯಾನವನ್ನು ಮಾಡುತ್ತ ಪ್ರೀತಿಯಿಂದ ಗೀತೆಯ ನಾಲ್ಕನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಿದ್ದನು. ಆ ಅಧ್ಯಾಯದ ಅಭ್ಯಾಸದ ಬಲದಿಂದ ಶಾಂತನಾಗಿ ಸುಖ ದುಃಖಗಳಿಗೆ ಒಳಗಾಗದಿದ್ದನು.

೬. ಒಂದು ಸಾರಿ ಅವನು ವಿಹಾರಾರ್ಥವಾಗಿ ಊರಿಂದ ಹೊರಗೆ ಹೋದನು. ಆಗ ಅಲ್ಲಿ ಉದ್ಯಾನಗಳಲ್ಲಿರುವ ದೇವಸ್ಥಾನಗಳಲ್ಲಿ ದೇವರುಗಳನ್ನು ನೋಡಲು ಹೋದನು.

ವಿಶಶ್ರಾಮ ತಯೋರ್ಮೂಲೇ ಬದರ್ಯೋರ್ನರ್ಮದಾತಟೇ ।
ಉಪಧಾಯ ತಯೋರೇಕಾಮನ್ಯಾಮಾಲಂಬ್ಯ ಚಾಂಘ್ರಿಣಾ ॥ ೭ ॥

ತಪಸ್ವಿನಿ ತತೋ ಯಾತೇ ಬದರ್ಯೋರೀಶ್ವ ತಥಾ ದ್ವಯಂ ।
ಶುಷ್ಕಂ ನಿಷ್ಪತ್ರಶಾಖಂ ಚ ದಿವಸೈಃ ಪಂಚಷೈರಭೂತ್ ॥ ೮ ॥

ಗೃಹೇ ಶುಚಿನಿ ವಿಪ್ರಾಣಾಂ ಜಜ್ಞೇ ತೇ ಕನ್ಯಕೇ ತತಃ ।
ವರ್ಧಮಾನಂ ತಯೋರ್ಯುಗ್ಮಂ ಸಪ್ತಭಿಃ ಪರಿವತ್ಸರೈಃ ॥ ೯ ॥

ವಿಹೃತ್ಯ ದೂರದೇಶೇಭ್ಯೋ ಯತಿಮಾಯಾಂತಮೈಕ್ಷತ ।
ಗೃಹೀತ್ವಾ ಚರಣೌ ತಸ್ಯ ವಚನ್ಸೂನೃತಪ ಬ್ರವೀತ್ ॥ ೧೦ ॥

॥ ಕನ್ಯಾಯುಗ್ಮಮುವಾಚ ॥

ತ್ವತ್ಪ್ರಸಾದಾದೇವ ಮುನೇ ನೋಚಿತಂ ದ್ವಂದ್ವಮಾವಯೋಃ ।
ಉತ್ಸೃಜ್ಯ ಬದರೀಭಾವಂ ಮಾನುಷ್ಯಂ ಪ್ರತ್ಯಪದ್ಯತ ॥ ೧೧ ॥

---

೭. ಆ ಜಾಗದಲ್ಲಿ ಎರಡು ಎಗಚಿ ಮರಗಳಿದ್ದವು. ಅವುಗಳ ಮಧ್ಯದಲ್ಲಿ ಮಲಗಿ ಒಂದನ್ನು ತಲೆಗೆ ಒರಗಿಸಿಕೊಂಡು ಮತ್ತೊಂದನ್ನು ಕಾಲಿಗೆ ದಿಂಬನ್ನಾಗಿ ಮಾಡಿಕೊಂಡನು.

೮. ಅನಂತರ ಆ ತಪಸ್ವಿಯಾದ ಭರತನು ಹೊರಟುಹೋದನು. ಇತ್ತ ಈ ಮರಗಳೆರಡೂ ಒಣಗಿದ್ದುವು. ಎಲೆಗಳೂ ಕೊಂಬೆಗಳೂ ಕೂಡ ಐದಾರು ದಿನಗಳಲ್ಲಿಯೇ ಇಲ್ಲದಂತಾದುವು.

೯. ಆ ಎರಡು ಎಗಚೀ ಮರಗಳೂ ಒಬ್ಬ ಯೋಗ್ಯನಾದ ಬ್ರಾಹ್ಮಣನ ಮನೆಯಲ್ಲಿ ಎರಡು ಕನ್ಯೆಯರಾಗಿ ಹುಟ್ಟಿದರು. ಅವರು ಏಳು ವರ್ಷದವರೆಗೂ ಬೆಳೆಯುತ್ತಿದ್ದರು.

೧೦. ಆಟವಾಡಲು ಸ್ವಲ್ಪ ದೂರ ಹೋಗಿರಲು ಒಬ್ಬ ಯತಿಯು ಬರುತ್ತಿರುವುದನ್ನು ನೋಡಿದರು. ಆಗ ಅವನ ಪಾದಗಳಿಗೆ ನಮಸ್ಕರಿಸಿ ಒಳ್ಳೆಯ ಮಾತಿನಿಂದ ಇಂತೆಂದರು.

೧೧. ಇಬ್ಬರು ಕನ್ಯೆಯರು ಹೇಳಿದರು–ಎಲೈ ಮುನಿಯೇ! ನಿನ್ನ ಅನುಗ್ರಹದಿಂದ ನಮ್ಮಿಬ್ಬರ ಎಗಚೀ ಮರವಾಗಿರುವಿಕೆಯು ಹೋಯಿತು. ಮತ್ತು ಮನುಷ್ಯರಾಗಿಯೂ ಹುಟ್ಟಿದೆವು.

॥ ಶ್ರೀ ಭಗವಾನುವಾಚ ॥

ಏವಮುಕ್ತೋ ಮುನಿಸ್ತಾಭ್ಯಾಂ ವಿಸ್ಮಿತಃ ಪ್ರತ್ಯುವಾಚ ಸಃ ॥ ೧೨ ॥

॥ ಮುನಿರುವಾಚ ॥

ಕದಾ ವತ್ಸೇ ಯುವಾಂ ಕೇನ ಹೇತುನಾ ಮೋಚಿತೇ ಮಯಾ ।
ಯುವಯೋರ್ಬದರೀತ್ವೇ ಚ ಹೇತುಂ ನೂನಂ ನ ವೇದ್ಮ್ಯಹಂ ॥ ೧೩ ॥

॥ ಶ್ರೀ ಭಗವಾನುವಾಚ ॥

ಊಚತುಃ ಕನ್ಯಕೇ ತಸ್ಮೈ ಬಾದರ್ಯೋರ್ಹೇತುಮಾತ್ಮನಃ ।
ಆದೌ ವಿಮೋಚನೇ ತಸ್ಮಾದ್ದುಸ್ತ್ಯಜಾದಪಿ ಕಾರಣಂ ॥ ೧೪ ॥

॥ ಕನ್ಯಕೇ ಊಚತುಃ ॥

ಅಸ್ತಿ ಗೋದಾವರೀತೀರೇ ತೀರ್ಥಂ ಪುಣ್ಯಪ್ರದಂ ನೃಣಾಂ ।
ಛಿನ್ನಪಾಪಮಿತಿ ಖ್ಯಾತಂ ಪರಾಂ ಕೋಟಿಮುಪಾಪ ಯತ್ ॥ ೧೫ ॥

---

೧೨. ಭಗವಂತನು ಹೇಳಿದನು—ಆ ಋಷಿಯು ಅವರು ಹೀಗೆಂದುದನ್ನು ಕೇಳಿ ಆಶ್ಚರ್ಯಗೊಂಡು ಇಂದೆಂದನು.

೧೩. ಮುನಿಯು ಹೇಳಿದನು-ಎಲೈ ಹುಡುಗಿಯರಿರಾ! ನಿಮ್ಮನ್ನು ಯಾವಾಗ ಬಿಡಿಸಿದೆನೋ ಅದು ನನಗೆ ಗೊತ್ತಿಲ್ಲ. ಅದಕ್ಕೆ ಕಾರಣವೂ ನನಗೆ ಗೊತ್ತಿಲ್ಲ. ನೀವು ಎಗಚಿಯ ಮರವಾಗಿದ್ದುದಕ್ಕೆ ಕಾರಣವನ್ನೂ ನಾನು ತಿಳಿಯೆನು- ಇದು ನಿಶ್ಚಯವು.

೧೪. ಭಗವಂತನು ಹೇಳಿದನು-ಆಗ ಆ ಕನ್ಯೆಯರು ತಾವು ಆ ಎಗಚಿ ಮರವಾಗಿದ್ದುದಕ್ಕೆ ಕಾರಣವನ್ನೂ ಅದು ಹೋದುದಕ್ಕೆ ಕಾರಣವನ್ನೂ ಹೇಳಿದರು.

೧೫. ಕನ್ಯೆಯರು ಹೇಳಿದರು- ಗೋದಾವರಿಯ ದಡದಲ್ಲಿ ಮನುಷ್ಯರಿಗೆ ಪುಣ್ಯವನ್ನು ಕೊಡುವ ಛಿನ್ನಪಾಪವೆಂಬ ಒಂದು ತೀರ್ಥವಿದೆ. ಅದು ಬಹು ಉತ್ಕೃಷ್ಟವಾದುದು.

ತತ್ರ ಸತ್ಯತಪಾ ನಾಮ ತಪಸ್ತೇಪೇ ಸುದಾರುಣಂ ।
ಗ್ರೀಷ್ಮೇ ಮಹತಿ ದೀಪ್ತಾನಾಂ ಮಧ್ಯಗೋ ಜಾತವೇದಸಾಂ ॥ ೧೬ ॥

ವರ್ಷಾಸು ಜಲಧಾರಾಭಿಃ ನಿತ್ಯಮಾಸಿಕ್ತಮೂರ್ಧಜಃ ।
ಶಿಶಿರೇ ಚ ಮಸನ್ನಪ್ಸು ಬಿಭ್ರತ್ಕಂಟಕಿತಾಂ ತನುಂ ॥ ೧೭ ॥

ವಿಶುದ್ಧಸ್ಸತತಂ ಕಾಲೇ ತಪಸ್ತಪ್ತ್ವಾ ಸ ಸಂಯಮೀ ।
ಆತ್ಮನ್ಯೇವ ರತಿಂ ಚಕ್ರೇ ಪರಾಂ ಪ್ರಾಪ್ಯ ಸುನಿರ್ವೃತಿಂ ॥ ೧೮ ॥

ಸದಾ ಫಲಾನಿ ಬಿಭ್ರತ್ಸು ಸಾಂದ್ರಚ್ಛಾಯೇಷು ಶಾಖಿಷು ।
ನಿರ್ಮತ್ಸರೇಷು ಸತ್ವೇಷು ಬಧ್ವಾ ಪ್ರೀತಿಂ ಪರಾಮಪಿ ॥ ೧೯ ॥

ತಪಃ ಫಲಾನುಸಂಧಾನ ವ್ಯೈದುಷ್ಯೇನೋಪಜಾದಿತಂ ।
ಬ್ರಹ್ಮಾಪ್ಯೇನಂ ಸ್ವಯಂ ಗಚ್ಛನ್ ಉಪತಸ್ಥೇ ತಮುನ್ನಹಂ ॥ ೨೦ ॥

---

೧೬-೧೮. ಆ ಜಾಗದಲ್ಲಿ ಸತ್ಯತಪನೆಂಬುವನೊಬ್ಬ ಮುನಿಯು ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಗ್ರೀಷ್ಮ ಋತುವಿನಲ್ಲಿ ಉರಿಯುತ್ತಿರುವ ಪಂಚಾಗ್ನಿಗಳ ಮಧ್ಯದಲ್ಲಿಯೂ ಮಳೆಗಾಲದಲ್ಲಿ ನೀರಿನ ಧಾರೆಗಳಿಂದ ನೆನೆಯುತ್ತಲೂ ಚಳಿಗಾಲದಲ್ಲಿ ನೀರಿನಲ್ಲಿ ಇದ್ದುಕೊಂಡೂ ತಪಸ್ಸುಮಾಡುತ್ತಿದ್ದನು. ಈ ರೀತಿಯಾಗಿ ಶುದ್ಧನಾಗಿ ಇಂದ್ರಿಯನಿಗ್ರಹ ಮಾಡಿಕೊಂಡು ತಪಸ್ಸನ್ನು ಮಾಡುತ್ತಾ ಆತ್ಮನಲ್ಲಿಯೇ ಪ್ರೀತಿಯನ್ನು ಹೊಂದಿರುತ್ತ ಬಹು ಸುಖದಿಂದಿದ್ದನು.

೧೯ ಆಗ ಅವನ ತಪಸ್ಸಿನ ಪ್ರಭಾವದಿಂದ ಮರಗಳಲ್ಲಿ ಯಾವಾಗಲೂ ಹಣ್ಣುಗಳಿರುತ್ತಿದ್ದುವು. ಆ ಮರಗಳು ದಟ್ಟವಾದ ನೆರಳನ್ನು ಕೊಡುತ್ತಿದ್ದುವು. ಅಲ್ಲಿನ ಪ್ರಾಣಿಗಳು ವೈರವನ್ನು ಬಿಟ್ಟು ಇರುತ್ತ ಒಂದಕ್ಕೊಂದು ಪ್ರೀತಿಯಿಂದ ಇರುತ್ತಿದ್ದುವು.

೨೦-೨೧. ಇವನು ತಪಸ್ಸುಮಾಡುವ ಜಾಣತನದಿಂದ ಅಲ್ಲಿ ಉಂಟಾಗಿರುವ ತಪಸ್ಸಿನ ಪ್ರಭಾವವನ್ನು ನೋಡುವುದಕ್ಕೆ ಬ್ರಹ್ಮನು ನಿತ್ಯವೂ ಅಲ್ಲಿಗೆ

ತೇನ ಸಂಕೋಚಹೀನತ್ವಾದ್ಬ್ರಹ್ಮಣ್ಯುಪಗತೇಽಸ್ವಹಂ ।
ತದ್ಧ್ಯಾನಾನುಗತವ್ಯಕ್ತೀಃ ವವೃಧೇ ತಸ್ಯ ತತ್ತಪಃ ॥ ೨೧ ॥

ವಿಮುಕ್ತಕಲ್ಪಂ ಮನ್ವಾನಃ ಸನ್ಮೃದ್ಧಾದಾತ್ಮನಃ ಪದಾತ್ ।
ಅಂತರಾಯಶತಂ ಚಕ್ರೇ ತತೋ ಭೀತಃ ಪುರಂದರಃ ।
ಆಹೂಯಾಪ್ಸರಸಾಂ ಮಧ್ಯಾದಾವಾಂ ತುಲ್ಯಂ ಸಮಾದಿಶತ್ ॥ ೨೨ ॥

॥ ಇಂದ್ರ ಉವಾಚ ॥

ಕುರುತಂ ತತ್ತಪೋವಿಘ್ನಂ ಮನುಷ್ಯಾಚರಿತಂ ಯುವಾಂ ।
ಯೋ ಮಾಂ ಪದಾದಪಷ್ಟಭ್ಯ ಸ್ವರಾಜ್ಯಂ ಭೋಕ್ತುಮಿಚ್ಛತಿ ॥ ೨೩ ॥

॥ ಕನ್ಯಕೇ ಊಚತುಃ ॥

ಇತಿ ಸಂದೇಶಮಾಪನ್ನೇ ಪುರಸ್ತಾಚ್ಚ ಬಿಡೌಜಸಃ ।
ಗೋದಾವರೀಮಗಚ್ಛಾವ ಸ ಮುನಿರ್ಯತ್ರ ವರ್ತತೇ ॥ ೨೪ ॥

---

ಬರುತ್ತಿದ್ದನು. ಈರೀತಿ ಬ್ರಹ್ಮನು ಬರುತ್ತಿರುವುದನ್ನು ಆ ಋಷಿಯು ನೋಡಿ ಸಂತೋಷಪಡುತ್ತಾ ಅವನನ್ನೇ ಧ್ಯಾನಮಾಡುತ್ತಿರಲು ಅವನ ತಪಸ್ಸು ಮತ್ತೂ ಹೆಚ್ಚುತ್ತಾ ಬಂದಿತು.

೨೨. ಆಗ ಇಂದ್ರನು ಇವನ ತಪಸ್ಸನ್ನು ನೋಡಿ ತನ್ನ ಸ್ಥಾನದಿಂದ ತನಗೆ ಇವನಿಂದ ಚ್ಯುತಿಯುಂಟಾಗಬಹುದೆಂದು ತಿಳಿದು ಹೆದರಿ ಅನೇಕವಾದ ವಿಘ್ನಗಳನ್ನು ಅವನ ತಪಸ್ಸಿಗೆ ತಂದೊಡ್ಡಿದನು. ಅನಂತರ ಅಪ್ಸರಸ್ಸುಗಳನ್ನು ನೋಡಿ ಅವರ ಮಧ್ಯದಲ್ಲಿದ್ದ ನಮ್ಮಿಬ್ಬರನ್ನೂ ಕರೆದು ಇಂತೆಂದು ಆಜ್ಞಾಪಿಸಿದನು.

೨೩. ಇಂದ್ರನು ಹೇಳಿದನು- ಎಲೈ ಅಪ್ಸರೆಯರಿರಾ ! ಇವನ ತಪಸ್ಸಿಗೆ ನೀವು ವಿಘ್ನವನ್ನು ಮಾಡಿರಿ. ಈತನು ನನ್ನನ್ನು ಇಂದ್ರಪದವಿಯಿಂದ ಓಡಿಸಿ ಅದನ್ನು ತಾನು ಅನುಭವಿಸಲು ಅಪೇಕ್ಷಿಸುತ್ತಿದ್ದಾನೆ.

೨೪. ಕನ್ಯಕೆಯರು ಹೇಳಿದರು– ಇಂದ್ರನು ನಮಗೆ ಈ ರೀತಿಯಾಗಿ ಅಪ್ಪಣೆಮಾಡಲು ಆ ಅಪ್ಪಣೆಯನ್ನು ಶಿರಸಾವಹಿಸಿ ಆ ಋಷಿಯು ತಪಸ್ಸು ಮಾಡುತ್ತಿದ್ದ ಆ ಗೋದಾವರಿಯ ದಡಕ್ಕೆ ಬಂದೆವು.

ಮೃದಂಗೈರ್ಮಂದ್ರಗಂಭೀರೈರ್ವೇಣುಭಿಃ ಕಲವಾದಿಭಿಃ ।
ಅಪ್ಸರೋಭಿಃ ಕಲಂ ಗೀತಂ ತನ್ವತೀಭಿಸ್ಸಮನ್ವಿತಂ ॥ ೨೫ ॥

ಉದ್ವಹನ್ತ್ಯಾ ಪೃಥುಶ್ರೋಣೀಂ ಘನಮೇವಪಯೋಧರೇ ।
ಸ್ಮಯಸ್ಮೇರ ಮುಖಾಂಭೋಜೇ ಕಿಂಚಿದಾಕುಂಚಿತಾಲಕೇ ॥ ೨೬ ॥

ಮಣಿಕುಂಡಲ ಘೃಷ್ಟಾಂಸೇ ಪುಂಡರೀಕೋಜ್ವಲೇಕ್ಷಣೇ ।
ತನುಮಧ್ಯೇ ಸವೃತ್ತೋರೂ ವಹನ್ತ್ಯೌ ಚ ಸಮೇ ಪದೇ ॥ ೨೭ ॥

ನೃತ್ಯನ್ತ್ಯೌ ಯೋಗಿವಶ್ಯಾರ್ಥೇ ಸ್ವರತಾಳಲಯಾನುಗಂ ।
ದರ್ಶಯನ್ತ್ಯೌ ಸ್ವತಃ ಕೃತ್ಸ್ನಾಂ ಗತಿಂ ಭಾವಾನುಗಾಮಿನೀಂ ॥ ೨೮ ॥

ಮೃದೂಪಕ್ರಮಮುತ್ಪನ್ನಂ ಮಂದಂ ಮಂದಂ ವಿವರ್ಧಿತಂ ।
ಗರ್ಜಯಾಮಾಸ ದಿಕ್ಚಕ್ರಂ ತತ್ತಯೋರ್ನೃತ್ಯಮಾನಯೋಃ ॥ ೨೯ ॥

---

೨೫. ಆ ಅಪ್ಸರಸ್ತ್ರೀಯರು ಮಂದ್ರದಲ್ಲಿ ಧ್ವನಿಮಾಡುವಂತೆ ಮೃದಂಗಗಳನ್ನು ಬಡಿಯುತ್ತಾ ಕೊಳಲುಗಳನ್ನು ಮನೋಹರವಾಗಿರುವಂತೆ ಊದುತ್ತಾ ಮನೋಹರವಾಗಿರುವಂತೆ ಹಾಡುತ್ತಾ ಅಲ್ಲಿಗೆ ಬಂದರು.

೨೬–೨೮. ಅವರು ದಪ್ಪನಾಗಿರುವ ಕುಂಡೆಗಳನ್ನೂ, ದಪ್ಪನಾಗಿರುವ ಸ್ತನಗಳನ್ನೂ ಹೊಂದಿ ನೋಡಲು ಮನೋಹರವಾಗಿದ್ದರು. ಮುಗುಳು ನಗೆಯನ್ನು ಬೀರುತ್ತಿದ್ದರು. ತಲೆಯ ಮುಂಗುರುಳುಗಳು ಸ್ವಲ್ಪಸ್ವಲ್ಪ ವಕ್ರವಾಗಿ ಮನೋಹರವಾಗಿದ್ದುವು. ಕಿವಿಗೆ ಹಾಕಿಕೊಂಡಿರುವ ಓಲೆಗಳು ಭುಜಗಳನ್ನು ತಿಕ್ಕುತ್ತಿದ್ದುವು. ಕಣ್ಣುಗಳು ನೀಲೋತ್ಪಲದಂತಿದ್ದುವು. ನಡುವು ಸಣ್ಣನಾಗಿತ್ತು. ತೊಡೆಗಳು ದುಂಡಗೆ ಕ್ರಮದಿಂದ ಸಣ್ಣನಾಗಿದ್ದುವು. ಹೆಜ್ಜೆಗಳು ಒಂದೇ ಸಮನಾಗಿದ್ದುವು. ಈ ರೀತಿ ಸುಂದರಿಯರಾದ ಇವರು ಆ ಯೋಗಿಯನ್ನು ವಶಮಾಡಿಕೊಳ್ಳಲು ತಾಳಕ್ಕೆ ಸರಿಯಾಗಿ ಕುಣಿಯುತ್ತ ಅಭಿಪ್ರಾಯಕ್ಕೆ ಸರಿಯಾದ ಹಾವಭಾವಗಳನ್ನೂ ಗತಿಯನ್ನೂ ತೋರಿಸುತ್ತ ಬಂದರು.

೨೯. ಮೃದುವಾಗಿಯೂ ಮಂದವಾಗಿಯೂ ತಾನ ಗಾನ ನೃತ್ಯಗಳನ್ನು ಉಪಕ್ರಮಿಸಿದರು. ಈ ರೀತಿಯಿಂದ ದಿಕ್ಕುಗಳನ್ನೆಲ್ಲಾ ಕೋಲಾಹಲಮಾಡಿದರು.

ತತೋ ಜಹಾರ ವೇಗೇನ ವಾಯುರ್ವಾಸಸ್ಸುಶೀತಲಃ |
ಈಷದುಚ್ಛ್ವಸಿತೇ ಚೈಲೇ ದರ್ಶಯನ್ಸ್ತ್ಯೌ ಪಯೋಧರೌ || ೩೦ ||

ಉದ್ವರ್ಧಯಂತೀ ಕಂದರ್ಪಮುಲ್ಬಣಾಗತಿರಾವಯೋಃ |
ಕೋಪಮುತ್ಪಾದಯಾಮಾಸ ಮುನೇರವಿಕೃತಾತ್ಮನಃ || ೩೧ ||

ತತಶ್ಚಶಾಪ ಕೋಪೇನ ಜಲಮುತ್ಸೃಜ್ಯ ಪಾಣಿನಾ |
ಬದರೀತ್ವಂ ಪ್ರಪದ್ಯೇಥಾಂ ಜಾಹ್ನವೀರೋಧಸೀತಿ ನೌ || ೩೨ ||

ಆವಾಭ್ಯಾಂ ಪಾರತಂತ್ರ್ಯೇಣ ಯದ್ದುಶ್ಚರಿತಮಾಸ್ಥಿತಂ |
ತತ್ ಕ್ಷಮಸ್ವ ವಿನಮ್ರಾಭ್ಯಾಂ ಮುನಿಃ ಪಶ್ಚಾತ್ಪ್ರಸಾದಿತಃ || ೩೩ ||

ತತಶ್ಶಾಪವಿಮೋಕ್ಷಂ ನೌ ಕೃಪಯಾಮಾಸ ಪುಣ್ಯಧೀಃ |
ಭರತಾಗಮನಾಂತೋಽಯಮಿತಿ ಸತ್ಯತಯಾ ಮುನಿಃ || ೩೪ ||

---

೩೦. ಆಗ ತಂಪಾದ ಗಾಳಿಯು ಅವರ ಬಟ್ಟೆಗಳನ್ನು ಮೇಲಕ್ಕೆ ಹಾರಿಸುತ್ತಿದ್ದಿತು. ಸೆರಗನ್ನೂ ಸ್ವಲ್ಪ ಸ್ವಲ್ಪ ಹಾರಿಸುತ್ತಾ ಸ್ತನಗಳನ್ನು ಸ್ವಲ್ಪ ಸ್ವಲ್ಪವಾಗಿ ಕಾಣುವಂತೆ ಮಾಡುತ್ತಿದ್ದರು

೩೧. ಈ ರೀತಿ ನಮ್ಮಿಬ್ಬರ ಉನ್ನತವಾದ ಈ ಸ್ಥಿತಿಯು ಮನ್ಮಥನ ವಿಕಾರವನ್ನು ಉಂಟುಮಾಡುತ್ತ ಆ ಋಷಿಗೆ ಕೋಪವನ್ನು ಹೆಚ್ಚಿಸಿತು-

೩೨. ಆಗ ಅವನು ಬಹು ಕೋಪದಿಂದ ಕೈಯ್ಯಲ್ಲಿ ನೀರನ್ನು ತೆಗೆದುಕೊಂಡು ಬಿಡುತ್ತಾ ನೀವಿಬ್ಬರೂ ಗಂಗಾನದಿಯ ದಡದಲ್ಲಿ ಎಗಚಿಯ ಮರವಾಗಿರಿ. ಎಂದು ಶಪಿಸಿದನು

೩೩. ಆಗ ನಾವು ಎಲೈ ಋಷಿಯೇ! ನಮ್ಮಿಷ್ಟದಂತೆ ಈ ತೊಂದರೆಯನ್ನು ನಿನಗೆ ಮಾಡಲಿಲ್ಲ. ನಾವು ಪರಾಧೀನರು. ಇಂದ್ರನ ಆಳುಗಳು. ಅವನ ಅಪ್ಪಣೆಯಂತೆ ನಾವು ಹೀಗೆ ಮಾಡಬೇಕಾಯಿತು. ನಮ್ಮ ಈ ಅವಿನಯವನ್ನು ಕ್ಷಮಿಸು. ಎಂದು ಕೇಳಿಕೊಂಡೆವು ಅದಕ್ಕೆ ಅವನು ಪ್ರಸನ್ನನಾದನು.

೩೪-೩೬. ಆಗ ಆ ಪುಣ್ಯಾತ್ಮನು ನಮ್ಮ ಶಾಪಕ್ಕೆ ಪ್ರತೀಕಾರವನ್ನು ಹೇಳಿದನು. ನಿಮಗೆ ಈ ಶಾಪವು ನಿಮ್ಮ ಬಳಿಗೆ ಭರತನು ಬರುವವರೆಗೂ ಇರುತ್ತದೆ. ಆನಂತರ ಈ ಎಗಚೀ ಮರದಿಂದ ಮೋಕ್ಷವನ್ನು ಹೊಂದಿ ಮನುಷ್ಯಜನ್ಮವನ್ನು

ಮರ್ತ್ಯೇಷು ಜನ್ಮಲಾಭಶ್ಚ ಸ್ಮೃತಿಶ್ಚಾತೀತಜನ್ಮನಾಂ ।
ಆವಯೋರಂತಿಕಂ ಗತ್ವಾ ಬದರೀಭೂತಯೋಸ್ತತಃ ॥ ೩೫ ॥

ಸ್ಮರತಾ ತುರ್ಯಮಧ್ಯಾಯಂ ಭವತಾ ನಿಷ್ಕೃತಿಃ ಕೃತಾ ।
ತತ್ತ್ವಾವತ್ಪ್ರಣಮಾವಸ್ತ್ವಾಂ ಶಾಪಾದೇವ ಸ ಕೇವಲಾತ್ ॥
ಘೋರಾದಪಿ ಚ ಸಂಸಾರಾತ್ತ್ವಯೈತೇನ ವಿಮೋಚಿತೇ ॥ ೩೬ ॥

॥ ಶ್ರೀ ಭಗವಾನುವಾಚ ॥

ಏವಮುಕ್ತೋ ಮುನಿಸ್ತಾಭ್ಯಾಮತಿಪ್ರೀತಮನಾಸ್ತತಃ ।
ಪೂಜಿತಸ್ತೇ ಸಮಾಮಂತ್ರ್ಯ ಯಥಾಗತಮಸೌ ಯಯೌ ।
ಕನ್ಯೇ ಚತುರ್ಥಮಧ್ಯಾಯಂ ಜೇಪತುರ್ನಿತ್ಯಮಾದರಾತ್ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಚತುರ್ಥಾಧ್ಯಾಯ ಮಾಹಾತ್ಮ್ಯಂ ನಾಮ ಚತುಸ್ಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

ಹೊಂದುತ್ತೀರಿ. ಆ ಜನ್ಮದಲ್ಲಿ ನಿಮ್ಮಗಳಿಗೆ ಹಿಂದಿನ ಜನ್ಮದ ನಡವಳಿಕೆಗಳು ಜ್ಞಾಪಕಕ್ಕೆ ಬರುತ್ತವೆ. ನಾವಿಬ್ಬರೂ ಎಗಚಿಯ ಮರವಾಗಿರುವಾಗ ನಮ್ಮಿಬ್ಬರ ಮಧ್ಯದಲ್ಲಿ ಆ ಭರತನಾದ ನೀನು ಬಂದು ಮಲಗಿ ಗೀತೆಯ ನಾಲ್ಕನೆಯ ಅಧ್ಯಾಯವನ್ನು ಸ್ಮರಿಸಿಕೊಂಡೆ ಇದರಿಂದ ನಮ್ಮಗಳಿಗೆ ಈ ಶಾಪವಿಮೋಚನೆ ಯಾಯಿತು. ಆ ಶಾಪವನ್ನು ನೀನು ನಮಗೆ ನಾಶಮಾಡಿದುದರಿಂದ ನಿನ್ನನ್ನು ನಾವು ನಮಸ್ಕರಿಸುತ್ತೇವೆ. ಸುಮ್ಮನೆ ನಮಸ್ಕರಿಸುತ್ತಿಲ್ಲ. ಅಲ್ಲದೆ ಈ ಘೋರವಾದ ಸಂಸಾರದಿಂದಲೂ ಈ ನಾವು ನಿನ್ನಿಂದ ಬಿಡಿಸಲ್ಪಟ್ಟೆವು.

೩೭. ಶ್ರೀ ಭಗವಂತನು ಹೇಳಿದನು– ಹೀಗೆ ಅವರಿಬ್ಬರೂ ಹೇಳಿ ಆತನನ್ನು ಪೂಜಿಸಲು ಆವನು ಸಂತೋಷಗೊಂಡು ಹೊರಟುಹೋದನು. ಅನಂತರ ಈ ಇಬ್ಬರು ಕನ್ಯೆಯರೂ ಆ ನಾಲ್ಕನೆಯ ಅಧ್ಯಾಯವನ್ನು ಜಪಿಸುತ್ತ ಬಂದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ನಾಲ್ಕನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಸಪ್ತತ್ಯಧಿಕಶತತಮೋಽಧ್ಯಾಯಃ ||



|| ಶ್ರೀ ಭಗವಾನುವಾಚ ||

ಪಂಚಮಸ್ಯಾಧುನಾ ದೇವಿ ಮಾಹಾತ್ಮ್ಯಂ ಲೋಕಪೂಜಿತಂ ।
ಕಥಯಾಮಿ ಸಮಾಸೇನ ಸಾವಧಾನಾ ಶೃಣು ಪ್ರಿಯೇ || ೧ ||

ಪಿಂಗಳೋ ನಾಮ ಮದ್ರೇಷು ಪುರುಕುತ್ಸಪುರೇ ದ್ವಿಜಃ ।
ಅವದಾತೇ ಕುಲೇ ಜಾತೋ ವಿಶ್ರುತೇ ವೇದವಾದಿನಾಂ || ೨ ||

ಕುಲೋಚಿತಾನಿ ಶಾಸ್ತ್ರಾಣಿ ತಥಾ ವೇದಾನ್ ವಿಸೃಜ್ಯ ಸಃ ।
ತೌರ್ಯತ್ರಿಕೇ ಮತಿಂ ಚಕ್ರೇ ನಾದಯಸ್ಮರಜಾದಿಕಂ || ೩ ||

---

## ನೂರ ಎಪ್ಪತ್ತೈದನೆಯ ಅಧ್ಯಾಯವು



೧. ಶ್ರೀ ಭಗವಂತನು ಹೇಳಿದನು—ಎಲೈ ದೇವಿಯೆ! ಈ ಲೋಕ ಪೂಜಿತವಾದ ಐದನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಅದನ್ನು ಸಮಾಧಾನದಿಂದ ಕೇಳು.

೨. ಮದ್ರದೇಶದಲ್ಲಿ ಪುರುಕುತ್ಸಪಟ್ಟಣವೆಂಬೊಂದು ಪಟ್ಟಣವುಂಟು. ಅದರಲ್ಲಿ ಪಿಂಗಳನೆಂಬವನೊಬ್ಬ ಬ್ರಾಹ್ಮಣನಿದ್ದನು. ಅವನು ವೇದವನ್ನು ಓದಿದ ಪ್ರಸಿದ್ಧವೂ ಪವಿತ್ರವೂ ಆದ ವಂಶದಲ್ಲಿ ಹುಟ್ಟಿದ್ದನು.

೩. ಆತನು ತನ್ನ ಕುಲಕ್ಕೆ ಬಂದ ವಿದ್ಯೆಯನ್ನು ಬಿಟ್ಟು ಬಿಟ್ಟು ನೃತ್ತಗೀತವಾದ್ಯಗಳಲ್ಲಿ ಪರಿಶ್ರಮವನ್ನು ಹೊಂದುತ್ತಾ ಮೊದಲೇ ಬಾರಿಸುವುದರಲ್ಲಿ ಬುದ್ಧಿವಂತನಾದನು.

ಕೃತಶ್ರಮಸ್ತತಸ್ತತ್ರ ಗೀತೇ ನೃತ್ಯೇ ಚ ವಾದನೇ ।
ಪರಾಂ ಪ್ರಸಿದ್ಧಿಮಾಸಾದ್ಯ ನೃಪಸದ್ಮ ವಿವೇಶ ಸಃ ॥ ೪ ॥

ಸಮುತಸ್ಥೇ ಸ ತೇನಾಸೌ ಪುರಾ ಭೂಮಿಭುಜಾ ಸಹ ।
ಪರದಾರಾನುಪಾಹೃತ್ಯ ಬುಭುಜೇ ತಾನನನ್ಯಧೀಃ ॥ ೫ ॥

ತತ ಉತ್ಸಿಕ್ತಗರ್ವೋಽಯಂ ಸೂಚಮಾನೋ ನಿರಂಕುಶಃ ।
ಪರಚ್ಛಿದ್ರಾಣಿ ಚಾಽಮುಷ್ಮೈ ವಿವಿಕ್ತೇ ಸ ನಿರಂತರಂ ॥ ೬ ॥

ತಸ್ಯಾಸೀದರುಣಾ ನಾಮ ಭಾರ್ಯಾ ಹೀನಕುಲೋದ್ಭವಾ ।
ಭ್ರಮತ್ಯನ್ವೇಷಯನ್ತೀ ಸಾ ಕಾಮುಕೇನ ವಿಹಾರಿಣೇ ॥ ೭ ॥

ತಮಂತರಾಯಂ ಮನ್ವಾನಾ ನಿಶೀಥಿನ್ಯಾ ನಿಜಾಲಯೇ ।
ನಿಜಘಾನ ಶಿರಶ್ಛಿತ್ವಾ ನಿಚಖಾನ ಮಹೀತಲೇ ॥ ೮ ॥

---

೪. ಕಡೆಗೆ ನೃತ್ಯಗೀತವಾದ್ಯಗಳಲ್ಲಿ ಬುದ್ಧಿವಂತನಾಗಿ ಬಹುವಾಗಿ ಪ್ರಖ್ಯಾತವಾಗಿ ಕೊನೆಗೆ ರಾಜನವರೆಗೂ ತಿಳಿದು ಅರಮನೆಗೆ ಪ್ರವೇಶವು ದೊರಕಿತು.

೫. ಹೀಗೆ ಅರಮನೆಗೆ ಪ್ರವೇಶ ದೊರೆಯಲು ರಾಜನೊಡನೆ ಸುಖವಾಗಿರುತ್ತಾ ಬಂದನು. ಮತ್ತು ಪರರ ಹೆಂಡತಿಯರನ್ನು ಅಲ್ಲಿಗೆ ಬರಮಾಡಿ ಕೊಂಡು ಅವರನ್ನೂ ಅನುಭವಿಸುತ್ತಾ ಬಂದನು.

೬. ಆಮೇಲೆ ಈ ಬ್ರಾಹ್ಮಣನು ರಾಜನೊಡನೆ ಇರುವ ಸ್ನೇಹದಿಂದ ಯಾರನ್ನೂ ಲಕ್ಷಿಸದೆ ಇತರರ ತಪ್ಪುಗಳನ್ನು ಆ ರಾಜನಿಗೆ ಯಾವಾಗಲೂ ಗುಟ್ಟಾಗಿ ಹೇಳುತ್ತ ಬಂದನು.

೭. ಆ ಬ್ರಾಹ್ಮಣನಿಗೆ ನೀಚಕುಲದಲ್ಲಿ ಹುಟ್ಟಿದವಳೊಬ್ಬಳು ಹೆಂಡತಿ ಯಿದ್ದಳು. ಅವಳ ಹೆಸರು ಅರುಣಳೆಂದು. ಅವಳು ಕಾಮುಕರನ್ನು ಹುಡಿಕಿಕೊಂಡು ವಿಹರಿಸುತ್ತಾ ಅಲ್ಲಿ ಇಲ್ಲಿ ಅಲೆಯುತ್ತಿದ್ದಳು.

೮. ಆ ಅರುಣೆಯು ತನ್ನ ವಿಹಾರಕ್ಕೆ ಈ ಗಂಡನು ವಿಘ್ನಕಾರಿಯಾಗಿರು ವನೆಂದು ತಿಳಿದು ತನ್ನ ಮನೆಯಲ್ಲಿ ಆತನ ಕತ್ತನ್ನು ಕತ್ತರಿಸಿ ಭೂಮಿಯಲ್ಲಿ ಹೂಳಿದಳು.

ವಿಯೋಜಿತಸ್ತತಃ ಪ್ರಾಣೈಃ ಉಪೇತ್ಯ ಯಮಸಾದನಂ ।
ದುರ್ಜಯಾನ್ ನರಕಾನ್ ಭುಕ್ತ್ವಾ ಗೃಧ್ರೋऽಭೂದ್ವಿಜನೇ ವನೇ ॥ ೯ ॥

ಭಗಂದರೇಣ ರೋಗೇಣ ಸಾಪಿ ಹಿತ್ವಾ ವರಾಂ ತನುಂ ।
ಉಪೇತ್ಯ ನರಕಾನ್ ಘೋರಾನ್ ಜಜ್ಞೇ ತತ್ರ ವನೇ ಶುಕೀ ೧೦ ॥

ಕಣಾನಾದಾತುಕಾಮಾಂ ತಾಂ ಸಂಚರಂತೀಮಿತಸ್ತತಃ ।
ವಿದದಾರ ನಖೈಸ್ತೀಕ್ಷ್ಣೈಃ ಗೃಧ್ರೋ ವೈರಮನುಸ್ಮರನ್ ॥ ೧೧ ॥

ನೃಕಪಾಲೇ ಪಯಃಪೂರ್ಣೇ ಸಪತಂತೀ ತತಶ್ಶುಕೀ ।
ಅಭಿದುದ್ರಾವ ಗೃಧ್ರೋऽಪಿ ನಿಜಘ್ನೇ ಸ ಚ ಜಾಲಿಕೈಃ ॥ ೧೨ ॥

ಪತ್ನೀ ವಿಯೋಜಿತಾ ಪ್ರಾಣೈಃ ನೃಕಪಾಲೇ ಜಲೇ ತತಃ ।
ತತ್ರೈವ ನಿಮಮಜ್ಜಾಸಾವೇತ್ಯ ಕ್ರೂರತರಃ ಖಗಃ ॥ ೧೩ ॥

---

೯. ಹೀಗೆ ಪ್ರಾಣಕಳೆದುಕೊಂಡವನು ಯಮನ ಪಟ್ಟಣಕ್ಕೆ ಹೋಗಿ ಕ್ರೂರವಾದ ನರಕಗಳನ್ನು ಅನುಭವಿಸಿ ಒಂದು ನಿರ್ಜನವಾದ ಕಾಡಿನಲ್ಲಿ ಹದ್ದಾಗಿ ಹುಟ್ಟಿದನು.

೧೦. ಆ ಅರುಣೆಯೂ ಕೂಡ ಭಗಂದರವೆಂಬ ರೋಗದಿಂದ ನರಳಿ ಸತ್ತು ಅನೇಕವಾದ ಕೆಟ್ಟನರಕಗಳನ್ನು ಅನುಭವಿಸಿ ಅನಂತರ ಆ ಹದ್ದು ಹುಟ್ಟಿದ್ದಲ್ಲಿಯೇ ಹೆಣ್ಣುಗಿಳಿಯಾಗಿ ಹುಟ್ಟಿದಳು.

೧೧. ಆ ಗಿಳಿಯು ಆಹಾರಕ್ಕೋಸ್ಕರ ಕಾಳುಗಳನ್ನು ತರಲು ಸಂಚರಿಸುತ್ತಿದ್ದಾಗ ಆ ಹದ್ದು ಹಿಂದಿನ ವೈರವನ್ನು ಸ್ಮರಿಸಿಕೊಂಡು ಅದನ್ನು ಉಗುರುಗಳಿಂದ ಸೀಳಿತು.

೧೨. ಅಲ್ಲಿದ್ದ ಒಂದು ನರಕಪಾಲದಲ್ಲಿ ನೀರು ತುಂಬಿರಲು ಅದರಲ್ಲಿ ಆ ಗಿಳಿಯು ಬಿದ್ದಿತು. ಈ ಹದ್ದೂ ಕೂಡ ಅದನ್ನು ಅಟ್ಟಿಸಿಕೊಂಡು ಹೋಗುತ್ತಲಿತ್ತು. ಆಗ ಬೇಡರು ಅದನ್ನು ಕೊಂದರು.

೧೩-೧೫. ಮೊದಲು ಹೆಂಡತಿಯಾದ ಗಿಳಿಯು ಯಾವ ಕಪಾಲದ ನೀರಿನಲ್ಲಿ ಬಿದ್ದು ಪ್ರಾಣಬಿಟ್ಟದ್ದಿತೋ ಅನಂತರ ಏಟನ್ನು ತಿಂದ ಹದ್ದೂ ಕೂಡ ಆ ನೀರಿನಲ್ಲೇ ಬಿದ್ದು ಪ್ರಾಣವನ್ನು ಬಿಟ್ಟಿತು. ಅವೆರಡನ್ನೂ ಯಮಕಿಂಕರು ಯಮ ಲೋಕಕ್ಕೆ

ಪಿತೃಲೋಕಂ ಪ್ರಪೇದಾತೇ ನೀತೌ ತೌ ಯಮಕಿಂಕರೈಃ ।
ಪ್ರಾಕ್ಕೃತಂ ದುಷ್ಕೃತಂ ಕರ್ಮ ಸ್ಮರಂತೌ ಭಯಭಾಗಿನೌ ॥ ೧೪ ॥

ತತೋ ಯಮಸ್ಸಮಾಲೋಕ್ಯ ತಯೋಃ ಕರ್ಮ ಜುಗುಪ್ಸಿತಂ ।
ಅಕಸ್ಮಾದೇವ ತತ್ ಸ್ನಾನಾನ್ಮರಣೇ ದುಷ್ಕೃತಂ ಗತಂ ॥ ೧೫ ॥

ಅನುಜಜ್ಞೇ ತತೋ ಲೋಕಮೀಪ್ಸಿತಂ ಗಂತುಮೇತಯೋಃ ।
ಮಹಾಪಾತಕಸಂಘಾತೈರಪಿ ದುರ್ಧರ್ಷತೇಜಸೌ ॥ ೧೬ ॥

ತತೋ ವಿಸ್ಮಯಮಾಪನ್ನೌ ಸ್ಮೃತ್ವಾ ತೌ ದುಷ್ಕೃತಂ ನಿಜಂ ॥
ಉಪೇತ್ಯ ಪ್ರಣತೌ ಭೂತ್ವಾ ವೈವಸ್ವತಮಪೃಚ್ಛತಾಂ ॥ ೧೭ ॥

॥ ಗೃಧ್ರಶುಕ್ಯಾವೂಚತುಃ ॥

ಸಂಚಿತಂ ದುಷ್ಕೃತಂ ಪೂರ್ವಮಾವಾಭ್ಯಾಮಪಿ ಗರ್ಹಿತಂ ।
ಲೋಕಾನಾಮೀಪ್ಸಿತಾನಾಂ ತು ಕೋ ಹೇತುಸ್ತದ್ವದಸ್ವ ನೌ ॥ ೧೮ ॥

---

ಕರೆದುಕೊಂಡು ಹೋದರು. ಅವೆರಡೂ ಕೂಡ ತಮ್ಮ ಹಿಂದಿನ ಕರ್ಮವನ್ನು ಜ್ಞಾಪಿಸಿಕೊಳ್ಳುತ್ತಾ ಭಯಪಡುತ್ತಿದ್ದುವು.

೧೫. ಆಗ ಯಮನು ಅವುಗಳ ಈ ಅಸಹ್ಯಕರವಾದ ಪಾಪದ ಕೆಲಸಗಳನ್ನು ನೋಡಿದನು ಅನಂತರ ಹಠಾತ್ತಾಗಿ ಅವು ಆ ನರಕಪಾಲದಲ್ಲಿ ಬಿದ್ದುದನ್ನು ನೋಡಿದನು. ಹಾಗೆ ಆ ನೀರಿನಲ್ಲಿ ಅವು ಬಿದ್ದುದರಿಂದ ಅವುಗಳ ಪಾಪಗಳು ಹೋಯಿತೆಂದೂ ತಿಳಿದನು.

೧೬. ಮಹಾಪಾಪಗಳನ್ನು ಮಾಡಿದ್ದರೂ ಕೂಡ ಉತ್ತಮವಾದ ತೇಜಸ್ಸನ್ನು ಹೊಂದಿರುವ ಇವನ್ನು ನೋಡಿ ನೀವು ನಿಮಗೆ ಬೇಕಾದ ಲೋಕಗಳಿಗೆ ಹೋಗಬಹುದೆಂದು ಅಪ್ಪಣೆಮಾಡಿದನು.

೧೭. ಅನಂತರ ಅವುಗಳೆರಡೂ ತಮ್ಮ ಹಿಂದಿನ ಪಾಪವನ್ನು ಜ್ಞಾಪಿಸಿಕೊಂಡು ಆಶ್ಚರ್ಯಪಡುತ್ತ ಆ ಯಮನ ಬಳಿಗೆ ಹೋಗಿ ಅವನನ್ನು ಕುರಿತು ಇಂತೆಂದು ಕೇಳಿದುವು.

೧೮. ಹದ್ದು ಗಿಳಿಗಳು ಕೇಳಿದುವು—ಎಲೈ ವೈವಸ್ವತನೆ! ನಾವಿಬ್ಬರೂ ಪೂರ್ವದಲ್ಲಿ ಬಹುವಾದ ಪಾಪವನ್ನು ಮಾಡಿದ್ದೇವೆ. ನಮಗೆ ಮಾತ್ರ ಬೇಕಾದ ಲೋಕಗಳಿಗೆ ಹೋಗಿರೆಂದು ಹೇಳಲು (ಅಪ್ಪಣೆಮಾಡಲು) ಕಾರಣವೇನು?

|| ಶ್ರೀ ಭಗವಾನುವಾಚ ||

ಏವಮುಕ್ತಸ್ತತಸ್ತಾಭ್ಯಾಮಾಹ ವೈವಸ್ವತೋ ವಚಃ || ೧೯ ||

|| ಯಮ ಉವಾಚ ||

ಆಸೀದ್ಗಂಗಾತಟೇ ನಾಮ್ನಾ ವಟುರ್ಬ್ರಹ್ಮವಿದುತ್ತಮಃ |
ಏಕಾಕೀ ನಿರ್ಮಮಶ್ಶಾನ್ತೋ ವೀತರಾಗೋ ವಿಮತ್ಸರಃ || ೨೦ ||

ಗೀತಾನಾಂ ಪಂಚಮಾಧ್ಯಾಯಮಾವರ್ತಯತಿ ಸರ್ವದಾ |
ಪಾಪೀಯಾನಪಿ ಯಂ ಶ್ರುತ್ವಾ ಬೋಧೇದ್ಬ್ರಹ್ಮ ಸನಾತನಂ || ೨೧ ||

ತೇನ ಪುಣ್ಯೇನ ಪೂತಾತ್ಮಾ ತನುಮುತ್ಸೃಷ್ಟವಾನಸೌ |
ನಿರ್ಮಲೀಕೃತದೇಹಸ್ಯ ಗೀತಾಭಿರ್ಭಾವಿತಾತ್ಮನಃ || ೨೨ ||

ತತ್ಕಪಾಲಜಲಂ ಪ್ರಾಪ್ಯ ಯುವಾಂ ಯಾತೌ ಪವಿತ್ರತಾಂ |
ತದ್ಗಚ್ಛತಂ ಯುವಾಂ ಲೋಕಾನ್ ಮನೋರಥಪಥೇ ಸ್ಥಿತಾನ್ |
ಗೀತಾನಾಂ ಪಂಚಮಾಽಧ್ಯಾಯಮಾಹಾತ್ಮ್ಯೇನ ಪವಿತ್ರಿತೌ || ೨೩ ||

---

೧೯. ಶ್ರೀ ಭಗವಂತನು ಹೇಳಿದನು–ಅವುಗಳೆರಡೂ ಹೀಗೆಂದು ಕೇಳಲು ಆಗ ಆ ಯಮನು ಇಂತೆಂದು ಹೇಳಿದನು

೨೦. ಯಮನು ಹೇಳಿದನು-ಗಂಗಾತೀರದಲ್ಲಿ ಪರಬ್ರಹ್ಮನನ್ನು ಬಲ್ಲ ವಟುವೆಂಬುವನೊಬ್ಬನಿದ್ದನು. ಅವನು ಒಬ್ಬಂಟಿಗನು. ಮಮಕಾರವಿಲ್ಲದವನು. ಶಾಂತನು. ಆಸೆಯನ್ನು ಬಿಟ್ಟಿರತಕ್ಕವನು. ಹೊಟ್ಟೆಯಕಿಚ್ಚೆಂಬುದೇ ಅವನಿಗಿಲ್ಲ.

೨೧. ಆತನು ಗೀತೆಯ ಐದನೆಯ ಅಧ್ಯಾಯವನ್ನು ಯಾವಾಗಲೂ ಹೇಳುತ್ತಿದ್ದನು. ಅದನ್ನು ಕೇಳುತ್ತಿದ್ದರೆ ಪಾಪಿಯಾದವನೂ ಸಹ ಆ ಸನಾತನನಾದ ಬ್ರಹ್ಮನನ್ನು ತಿಳಿಯುತ್ತಿದ್ದನು.

೨೨-೨೩. ಆ ಐದನೆಯ ಅಧ್ಯಾಯವನ್ನು ಆವರ್ತಿಮಾಡುತ್ತಿದ್ದ ಆತನು ಈ ದೇಹವನ್ನು ಬಿಟ್ಟನು ಗೀತೆಯನ್ನೋದಿದುದರಿಂದ ಈತನ ದೇಹವು ಪವಿತ್ರವಾಗಿದ್ದಿತು ಅಂತಹವನ ತಲೆಯ ಕಪಾಲದಲ್ಲಿ ನಿಂತಿದ್ದ ನೀರಿನಲ್ಲಿ ನೀವು ಪ್ರಾಣವನ್ನು ಬಿಟ್ಟದ್ದರಿಂದ ಪವಿತ್ರರಾದಿರಿ. ಗೀತೆಯ ಐದನೆಯ ಅಧ್ಯಾಯದ ಮಹಿಮೆಯಿಂದ ಪವಿತ್ರರಾದ ನೀವು ನಿಮಗೆ ಇಷ್ಟಬಂದ ಲೋಕಗಳನ್ನು ಹೊಂದಿರಿ.

॥ ಶ್ರೀ ಭಗವಾನುವಾಚ ॥

ಏವಂ ತೌ ಬೋಧಿತೌ ತೇನ ಮುದಿತೌ ಸಮವರ್ತಿನಾ ।
ವ್ಯೋಮಯಾನಂ ಸಮಾರುಹ್ಯ ಜಗ್ಮತುರ್ವೈಷ್ಣವಂ ಪದಂ ॥ ೨೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಪಂಚಮಾಧ್ಯಾಯ ಮಾಹಾತ್ಮ್ಯಂ ನಾಮ ಪಂಚಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೪. ಶ್ರೀ ಭಗವಂತನು ಹೇಳಿದನು-ಈ ರೀತಿಯಾಗಿ ಯಮನು ಹೇಳಲು ಅವರಿಬ್ಬರೂ ಸಂತೋಷಗೊಂಡರು. ಮತ್ತು ವಿಮಾನವನ್ನು ಹತ್ತಿ ವೈಕುಂಠವನ್ನು ಹೊಂದಿದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಐದನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಟ್‌ಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಶಿವ ಉವಾಚ ॥

**ಷಷ್ಠಾಽಧ್ಯಾಯಸ್ಯ ಮಾಹಾತ್ಮ್ಯಂ ಪ್ರವಕ್ಷ್ಯಾಮಿ ವರಾನನೇ ।**
**ಯದಾಕರ್ಣಯತಾಂ ನೃಣಾಂ ಮುಕ್ತಿಃ ಕರತಲೇ ಸ್ಥಿತಾ ॥ ೧ ॥**

**ಅಸ್ತಿ ಗೋದಾವರೀತೀರೇ ಪ್ರತಿಷ್ಠಾನಂ ಪುರಂ ಮಹತ್ ।**
**ಪಿಪ್ಪಲೇಶಾಽಭಿಧಾನೋಽಹಂ ಯತ್ರಾಽಸ್ಮಿ ಸ್ಮೇರಲೋಚನೇ ॥ ೨ ॥**

**ಯತ್ರ ಗೋದಾವರೀ ವಾರಿ ಶೀಕರೈರೇವ ಶೀತಲೈಃ ।**
**ಹಂಸಾ ಪಕ್ಷಪುಟೋದ್ಧಿರ್ಣೈಃ ಹರಂತಿ ಯಮಿನಾಂ ಶ್ರಮಂ ॥ ೩ ॥**

---

### ನೂರ ಎಪ್ಪತ್ತಾರನೆಯ ಅಧ್ಯಾಯವು



೧. ಶ್ರೀ ಶಿವನು ಹೇಳಿದನು-ಎಲೈ ಸುಂದರಿಯೆ! ಆರನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಅದನ್ನು ಕೇಳಿದರೆ ಮನುಷ್ಯರಿಗೆ ಮುಕ್ತಿಯು ಕೈಯಲ್ಲಿಯೇ ಇರುತ್ತದೆ.

೨. ಗೋದಾವರಿಯ ನದಿಯ ದಡದಲ್ಲಿ ಪ್ರತಿಷ್ಠಾನಪುರವೆಂಬ ಒಂದು ದೊಡ್ಡಪಟ್ಟಣವುಂಟು. ಅಲ್ಲಿ ಪಿಪ್ಪಲೇಶನೆಂಬ ಹೆಸರುಳ್ಳ ಒಂದು ಶಿವದೇವರ ಲಿಂಗವಿದೆ.

೩. ಆ ಜಾಗದಲ್ಲಿ ಹಂಸಗಳು ಗೋದಾವರೀ ನದಿಯ ತುಂತುರುಗಳಲ್ಲಿ ರೆಕ್ಕೆಗಳನ್ನು ನೆನೆಸಿಕೊಂಡು ಆ ರೆಕ್ಕಗಳ ಗಾಳಿಯಿಂದ ಅಲ್ಲಿನ ತಪಸ್ವಿಗಳ ಶ್ರಮವನ್ನು ನಾಶಮಾಡುತ್ತವೆ.

ಸ್ಫುರತ್ಪದ್ಮಾವಲೀಕೋಶಪರಾಗಸುರಭೀಕೃತಂ ।
ಶ್ಲಾಘ್ಯಂ ಗೋದಾವರೀತೋಯಂ ಯೇನ ತೇ ನಿರ್ಜರಾ ನರಾಃ ॥ ೪ ॥

ಧಿಕ್ ಸುಧಾಮೋಷಧೀನಾಥಬಿಂಬಕ್ಷಯವಿಧಾಯಿನೀಂ ।
ಮಹಾರಾಷ್ಟ್ರವಧೂನಾಂ ಚ ಮಜ್ಜತೀನಾಂ ಮುನೀಶ್ವರಾಃ ॥ ೫ ॥

ಸ್ಪೃಶಂತಿ ಯತ್ರ ವಕ್ತ್ರಾಣಿ ಫುಲ್ಲಪಂಕಜಶಂಕಯಾ ।
ಯತ್ರ ಖೇಲನ್ಮಹಾರಾಷ್ಟ್ರೀಕ್ವಣತ್ಕಂಕಣದಂತುರಾಃ ॥ ೬ ॥

ಹರಂತಿ ಧ್ವನಯೋಽಳೀನಾಂ ಮನಾಂಸ್ಯಪಿ ತಪಸ್ವಿನಾಂ ।
ಅತ್ಯುಚ್ಚಸೌಧಶಿಖರವಿಹಾರಿವನಿತಾಮುಖಂ ॥ ೭ ॥

ಪಶ್ಯನ್ನನುದಿನಂ ಯತ್ರ ಕ್ಷೀಯತೇ ಮೃಗಲಾಂಛನಃ ।
ಅತ್ಯುಚ್ಚಸೌಧವಲಭೀಮಹಾಮಣಿಮರೀಚಿಭಿಃ ॥ ೮ ॥

---

೪. ಆ ಗೋದಾವರಿಯ ನೀರು ಅರಳಿರುವ ಕಮಲದ ಧೂಳಿಯಿಂದ ವಾಸನೆಯನ್ನು ಹೊಂದಿ ಬಹು ಶ್ಲಾಘ್ಯವಾಗಿದ್ದಿತು. ಆ ನೀರನ್ನು ಕುಡಿಯುವುದರಿಂದ ಅಲ್ಲಿನ ಜನರು ದೇವತೆಗಳಾಗಿದ್ದರು. (ಮುಪ್ಪಿಲ್ಲದವರಾಗಿದ್ದರು.)

೫-೬. ಓಷಧಿಗಳಿಗೆ ಒಡೆಯನಾದ ಚಂದ್ರನು ತಿಂಗಳು ತಿಂಗಳಿಗೂ ಕ್ಷಯವನ್ನು ಹೊಂದುತ್ತಿರುವುದರಿಂದ ಅವನಲ್ಲಿರುವ ಅಮೃತವು ಉತ್ತಮವಾದುದಲ್ಲ. ಚಂದ್ರನಂತೆ ಮುಖವುಳ್ಳ ಮಹಾರಾಷ್ಟ್ರದ ಸ್ತ್ರೀಯರ ಮುಖವು ಕ್ಷಯಿಸದಿರುವುದರಿಂದ ಅದರಲ್ಲಿರುವ ಅಮೃತವು ನಾಶರಹಿತವಾದುದು. ಅಲ್ಲದೆ ಆ ನದಿಯಲ್ಲಿ ಸ್ನಾನಮಾಡುತ್ತಿರುವ ಆ ಸ್ತ್ರೀಯರ ಮುಖವನ್ನು ಅಲ್ಲಿರುವ ಜನರು ನೋಡಿ ಇದು ಅರಳಿರುವ ಕಮಲವು. ಎಂಬ ಸಂಶಯದಿಂದ ಅವನ್ನು ಮುಟ್ಟಿ ತಿಳಿದುಕೊಳ್ಳುತ್ತಿದ್ದರು.

೭-೧೩. ಆ ಸ್ಥಳದಲ್ಲಿ ಆಟವಾಡುತ್ತಿರುವ ಮಹಾರಾಷ್ಟ್ರ ಸ್ತ್ರೀಯರ ಕೈಬಳೆಗಳ ಶಬ್ದವು ದುಂಬಿಗಳ ಧ್ವನಿಯನ್ನು ತಿರಸ್ಕರಿಸುತ್ತಿದ್ದುವು. ಅಲ್ಲದೆ ತಪಸ್ವಿಗಳ ಮನಸ್ಸನ್ನೂ ಅಪಹರಿಸುತ್ತಿದ್ದುವು. ಆ ಊರಿನಲ್ಲಿರುವ ಮಹಡಿಯ ಮನೆಗಳಮೇಲೆ ಆಟವಾಡುತ್ತಿರುವ ಹೆಂಗಸರ ಮುಖವನ್ನು ದಿನವೂ ಚಂದ್ರನು ನೋಡುತ್ತಿರುವುದರಿಂದಲೇ ಅವರಂತೆ ನಾನಾಗದೆ ಇರುವೆನಲ್ಲ? ಎಂದು ಕ್ಷಯವನ್ನು ಹೊಂದುತ್ತಿರುತ್ತಾನೆ. ಆ ಊರಿನಲ್ಲಿರುವ ಮಹಡಿಯ ಮನೆಗಳ

ಚುಂಬ್ಯತೇ ಮುನಿಗಂಧರ್ವೈಃ ದೂರ್ವಾಚಂದನಚಂಚಲೈಃ ।
ಯಸ್ಮಿನ್ನಾಧೂಯಮಾನಾನಾಂ ಪತಾಕಾನಾಂ ಸಮೀರಣೈಃ ॥ ೯ ॥

ಗತಶ್ರಮಾ ರವೇರ್ಯಾನೇ ಭವಂತಿ ರಥವಾಜಿನಃ ।
ರಾಶೀಕೃತೈರ್ಮಲಯಜೈಃ ಅಸಂಖ್ಯೈರ್ವಣಿಜಾಂ ಗಣೈಃ ॥ ೧೦ ॥

ಯಸ್ಮಿನ್ನುಪಲಶೇಷೋಽಸೌ ಲಕ್ಷ್ಯತೇ ಮಲಯಾಚಲಃ ।
ಪುಂಜೀಕೃತಾನಿ ದೃಶ್ಯಂತೇ ಯತ್ರ ಮುಕ್ತಾಫಲಾನ್ಯಪಿ ॥ ೧೧ ॥

ನಗರೀದೇವತಾಹಾಸ್ಯಸ್ತಬಕಾ ಇವ ಸರ್ವತಃ ।
ತತ್ರ ಜಾನಶ್ರುತಿರ್ನಾಮ್ನಾ ಮೇದಿನೀವಲ್ಲಭೋಽಭವತ್ ॥ ೧೨ ॥

ಯಸ್ಮಿನ್ನುದ್ಧರತಿ ಕ್ಷೋಣೀಂ ಶೇಷೋಯಂ ಮಣಿಸನ್ನಿಭಾಂ ।
ಅಪಿ ಪ್ರತಾಪಮಾರ್ತಂಡಮಂಡಲೀಕೃತತೇಜಸಿ ॥ ೧೩ ॥

---

ಗೋಡೆಗಳಲ್ಲಿ ಸೇರಿಸಿರುವ ಒಳ್ಳೆಯ ಮಣಿಗಳ ಕಾಂತಿಯನ್ನು ಗರಿಕೆ ಚಂದನಗಳಲ್ಲಿ ಆಸಕ್ತರಾಗಿ (ಮಂಗಳಕರವಾದ್ದರಿಂದ) ಗಂಧರ್ವಮುನಿಗಳು ಅವನ್ನು ಬಂದು ಭ್ರಾಂತಿಯಿಂದ ಮುಟ್ಟುತ್ತಿರುತ್ತಾರೆ. ಆ ಊರಿನಲ್ಲಿ ಮಹಡಿಯ ಮೇಲುಗಡೆ ಕಟ್ಟಿರುವ ಪತಾಕೆಗಳ ಗಾಳಿಯಿಂದ ಆಕಾಶದಲ್ಲಿ ಸಂಚರಿಸುತ್ತಿರುವ ಸೂರ್ಯನ ಕುದುರೆಗಳು ತಮ್ಮ ಶ್ರಮವನ್ನು ಕಳೆದುಕೊಳ್ಳುತ್ತವೆ. ಆ ಊರಿನಲ್ಲಿ ವರ್ತಕರು ಗಂಧದ ಮರಗಳನ್ನು ರಾಶಿರಾಶಿಯಾಗಿ ಹಾಕಿಕೊಂಡಿರುವುದನ್ನು ನೋಡಿದರೆ ಮಲಯಪರ್ವತದಲ್ಲಿ ಕಲ್ಲುಗಳನ್ನು ಮಾತ್ರ ಬಿಟ್ಟು ಮಿಕ್ಕ ಗಂಧದ ಮರಗಳನ್ನೆಲ್ಲಾ ತೆಗೆದುಕೊಂಡು ಬಂದಿರುವರೆನ್ನುವಂತಿದೆ. ಮುತ್ತಿನ ಗೊಂಚಲುಗಳನ್ನು ಆ ಊರಿನಲ್ಲಿ ಅಲ್ಲಲ್ಲಿಯೇ ತೂಗುಹಾಕಿದ್ದರೆ ಅವನ್ನು ನೋಡುವವರಿಗೆ ಆ ನಗರದ ದೇವತೆಗಳು ನಗುತ್ತಿರುವುದರಿಂದ ಬಂದ ಆ ನಗುಗಳ ರಾಶಿಯೋ ಎನ್ನುವಂತೆ ಕಾಣುತ್ತಿದ್ದಿತು. ಇಂತಹ ಊರಿನಲ್ಲಿ ಜಾನಶ್ರುತಿಯೆಂಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ಆ ರಾಜನು ರಾಜ್ಯಭಾರ ಮಾಡುತ್ತಿರಲು ಶೇಷನು ಭೂಭಾರವನ್ನು ಇಳಿಸಿ ವಿಶ್ರಾಂತಿ ಹೊಂದುತ್ತಿದ್ದನು. ಮತ್ತು ಬಹುವಾಗಿ ಪ್ರಕಾಶಿಸುತ್ತಿರುವ ಸೂರ್ಯಮಂಡಲವು ಈ ರಾಜನ ತೇಜಸ್ಸಿನ ಕಾಂತಿಯಿಂದ ಕೂಡಿಕೊಂಡು ಮಂಡಲಾಕಾರದ ತೇಜಸ್ಸುಳ್ಳದ್ದಾಗಿದ್ದಿತು (ಪರಿವೇಷವು ಕಟ್ಟಿದಂತಿದ್ದಿತು)

ನಿತ್ಯಮಧ್ವರಧೂಮೇನ ಶ್ಯಾಮಲಾಃ ಕಲ್ಪಶಾಖಿನಃ ।
ಅಸಾಧಾರಣದಾತೃತ್ವಂ ಪಶ್ಯಂತ ಇವ ಲಜ್ಜಯಾ ॥ ೧೪ ॥

ಯದಧ್ವರಪುರೋಡಾಶಚರ್ವಣಾಸ್ವಾದಲಂಪಟಾಃ ।
ನ ತತ್ತ್ಯಜುಃ ಸುಪರ್ವಾಣಃ ಪ್ರತಿಷ್ಠಾನಪುರಂ ಪರಾಕ್ ॥ ೧೫ ॥

ಯಸ್ಯ ದಾನಾಂಬುಧಾರಾಭಿಃ ಪ್ರತಾಪಜ್ಯೋತಿಷಾನಿಶಂ ।
ಮಖಧೂಮೈಶ್ಚ ಸಂಪುಷ್ಟಾ ವವೃಷುಃ ಸಮಯೇ ಘನಾಃ ॥ ೧೬ ॥

ಅಪಿ ಕಾಮಂ ಸ್ವಲ್ಪಮಾತ್ರಂ ನ ಪದಂ ಪ್ರಾಪುರೀತಯಃ ।
ನೀತಯಃ ಪ್ರಸರಂತಿ ಸ್ಮ ಯಸ್ಮಿನ್ ಶಾಸತಿ ಮೇದಿನೀಂ ॥ ೧೭ ॥

---

ಅಲ್ಲಿ ಯಾವಾಗಲೂ ಯಾಗಗಳೂ ಅಗ್ನಿಹೋತ್ರಾದಿಗಳೂ ನಡೆಯುತ್ತಿರುವುದರಿಂದ ಹೊಗೆಯು ಹೊರಡುತ್ತಿದ್ದಿತು. ಕಲ್ಪವೃಕ್ಷಗಳಿಗೆ ಈ ಹೊಗೆಯು ಕಟ್ಟಿಕೊಂಡು ಇದ್ದುದರಿಂದ ಕಪ್ಪಗಾಗಿದ್ದುವು. ಇದನ್ನು ನೋಡಿದರೆ ಇಲ್ಲಿ ನಡೆಯುತ್ತಿರುವ ದಾನವನ್ನು ನೋಡಿ ಕಲ್ಪವೃಕ್ಷಗಳು ಲಜ್ಜೆಯಿಂದ ಕಾಂತಿಹೀನವಾಗಿರುವುವೋ ಎಂಬಂತಿದ್ದುವು. ಹೀಗೆ ಕಾಂತಿಗುಂದಿ ಅಲ್ಲಿ ನಡೆಯುವ ದಾನವನ್ನು ನೋಡು ತ್ತಿರುವುವೋ ಎಂಬಂತೆಯೂ ಇದ್ದುವು.

೧೫. ಆ ಪ್ರತಿಷ್ಠಾನ ಪುರದಲ್ಲಿ ನಡೆಯುತ್ತಿರುವ ಯಾಗಗಳಲ್ಲಿ ಹವಿಸ್ಸನ್ನು (ಪುರೋಡಾಶವನ್ನು) ತಿನ್ನುತ್ತಾ ದೇವತೆಗಳು ರುಚಿಯಲ್ಲಿ ಆಸಕ್ತರಾಗಿ ಆ ಊರನ್ನು ಬಿಡಲಾರದವರಾಗಿದ್ದರು.

೧೬. ಆ ಊರಿನಲ್ಲಿ ನಡೆಯುತ್ತಿರುವ ದಾನದ ನೀರಿನಿಂದಲೂ ಪ್ರತಾಪದ ಕಾವಿನಿಂದಲೂ ಯಾಗದ ಹೊಗೆಯಿಂದಲೂ ಕೂಡಿ ಕೊಬ್ಬಿದ ಆ ಮೇಘಗಳು ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸುತ್ತಿದ್ದುವು.

೧೭. ಆ ಊರನ್ನು ಜಾನಶ್ರುತಿಯು ಆಳುತ್ತಿರಲು ಈತಿಬಾಧೆಗಳು ತಮ್ಮ ಇಷ್ಟಗಳನ್ನು ಸ್ವಲ್ಪವೂ ಹೊಂದಲೇ ಇಲ್ಲ. ನೀತಿಗಳು ಅನೇಕ ರೀತಿಯಲ್ಲಿ ಹರಡಿದ್ದುವು.

ವಾಪೀಕೂಪತಟಾಕಾನಾಂ ಛದ್ಮನಾ ಯೋಸುವಾಸರಂ ।
ಹೃದಯಸ್ಥಾನಿ ಮೇದಿನ್ಯಾ ವಿಧಾನಾನಿ ವ್ಯಲೋಕಯುತ್ ॥ ೧೮ ॥

ಪಾಂಡುರಾಭಿಃ ಪತಾಕಾಭಿಃ ಪ್ರಾಸಾದೋ ಯಸ್ಯ ರಾಜತೇ ।
ವಿಯದ್ಗಂಗಾತರಂಗೌಘೈಃ ಹಿಮಾದ್ರಿರಿವ ಸಾನುಮಾನ್ ॥ ೧೯ ॥

ದಾನೈಸ್ತಪೋಭಿರ್ಯಜ್ಞೈಶ್ಚ ಪ್ರಜಾನಾಂ ಪಾಲನೇನ ಚ ।
ತೋಷ್ಟಾಸ್ಸ್ವರ್ಗೌಕಸಸ್ತಸ್ಮೈ ವರಂ ದಾತುಂ ಸಮಾಗಮನ್ ॥ ೨೦ ॥

ತತೋಽಂತರಿಕ್ಷಮಾರ್ಗೇಣ ಧುನ್ವಾನಾಃ ಪಕ್ಷಸಂಹತೀಃ ।
ಮೃಣಾಳಧವಳಾ ದೇವಿ ದೇವಹಂಸಾ ವಿನಿರ್ಗತಾಃ ॥ ೨೧ ॥

ತ್ವರಯಾ ಗಚ್ಛತಾಂ ತೇಷಾಮನ್ಯೋನ್ಯಂ ಪ್ರತಿಭಾಷಿಣಾಂ ।
ಭದ್ರಾಶ್ಚ ಪ್ರಮುಖಾ ದ್ವಿತ್ರಾಃ ಪುರಸ್ತಾನ್ನಿರ್ಯಯುರ್ಜವಾತ್ ॥ ೨೨ ॥

---

೧೮. ಆ ರಾಜನು ಭಾವಿ ಕೊಳ ಕೆರೆಯೆಂಬ ನೆಪದಿಂದ ನಿತ್ಯವೂ ಭೂಮಿ ಹೃದಯವನ್ನು ನೋಡುತ್ತಿದ್ದನು. ( ಭಾವಿ ಕೆರೆ ಕೊಳಗಳನ್ನು ಬಹುವಾಗಿ ತೋಡಿಸುತ್ತಿದ್ದನು)

೧೯. ಆ ಊರಿನಲ್ಲಿ ಕಟ್ಟಿರುವ ಬೆಳ್ಳಗಿರುವ ಪತಾಕೆಗಳಿಂದ ಆ ರಾಜನ ಅರಮನೆಯು ಪ್ರಕಾಶಿಸುತ್ತಿದ್ದಿತು. ಮತ್ತು ಈ ಪತಾಕೆಗಳು ಅಂತರಿಕ್ಷದಲ್ಲಿ ಹಾರಾಡುತ್ತಿದ್ದರೆ ಆಕಾಶ ಗಂಗೆಯಿಂದ ಹಿಮವಂತನ ತಪ್ಪಲು ಪ್ರದೇಶಗಳು ಪ್ರಕಾಶಿಸುವಂತೆ ಪ್ರಕಾಶಿಸುತ್ತಿದ್ದುವು.

೨೦. ದಾನಗಳಿಂದಲೂ ತಪಸ್ಸಿನಿಂದಲೂ ಯಜ್ಞದಿಂದಲೂ ಪ್ರಜಾಪಾಲನೆ ಯಿಂದಲೂ ಸಂತೋಷಗೊಂಡ ದೇವತೆಗಳು ಆ ರಾಜನಿಗೆ ವರವನ್ನು ಕೊಡಲು ಅಲ್ಲಿಗೆ ಬಂದರು.

೨೧. ಆಗ ಅಂತರಿಕ್ಷದ ಮಾರ್ಗದಲ್ಲಿ ರಕ್ಕೆಗಳನ್ನು ಅಲ್ಲಾಡಿಸುತ್ತಾ ಕಮಲದ ದಂಟುಗಳಂತೆ ಬೆಳ್ಳಗಿರುವ ದೇವ ಹಂಸಗಳು ಹೊರಹೊರಟುವು.

೨೨. ಆ ದೇವಹಂಸಗಳು ಒಂದಕ್ಕೊಂದು ಮಾತನಾಡಿಕೊಳ್ಳುತ್ತಾ ಜಾಗ್ರತೆಯಾಗಿ ಹೋಗುತ್ತಿದ್ದುವು. ಅವುಗಳಲ್ಲಿ ಶಕ್ತವಾಗಿರುವ ಕೆಲವು ಹಂಸಗಳು ವೇಗದಿಂದ ಮುಂದೆ ಹೊರಟವು. ಆಗ ಮುಂದೆ ಹೋಗುತ್ತಿರುವುವುಗಳನ್ನು ಹಿಂದುಳಿದವುಗಳು ನೋಡಿ ಇಂತೆಂದುವು.

॥ ಪಾಶ್ಚಾತ್ಯಹಂಸಾ ಊಚುಃ ॥

ಕಥಂ ವೇಗೇನ ನಿರ್ಯಾತಾ ಭವಂತಃ ಪುರತಃ ಸ್ಥಿತಾಃ ।
ಸರ್ವೈರ್ಮಿಳಿತ್ವಾ ಗಂತವ್ಯಂ ಅಸ್ಮಿನ್ನಧ್ವನಿ ದುರ್ಗಮೇ ॥ ೨೩ ॥

ಪ್ರಕಾಶಮಾನಂ ಪುರತಸ್ತೇಜಃಪುಂಜಂ ನ ಪಶ್ಯಥ ।
ಜಾನಶ್ರುತೇರ್ಮಹೀಭರ್ತುಃ ಪುಣ್ಯಮೂರ್ತೇರತಿಸ್ಫುಟಂ ॥ ೨೪ ॥

॥ ಶ್ರೀ ಶಿವ ಉವಾಚ ॥

ನಿಶಮ್ಯೇತಿ ವಚಸ್ಸಮ್ಯಕ್ಪಾಶ್ಚಾತ್ಯಾನಾಂ ಪುರಸ್ಸ್ಥಿತಾಃ ।
ಹಂಸಾ ಹಸಿತ್ವಾ ಸಾವಜ್ಞಮೂಚುರ್ವಚನಮುಚ್ಚಕೈಃ ॥ ೨೫ ॥

॥ ಪುರಸ್ಥಿತ ಹಂಸಾ ಊಚುಃ ॥

ರೈಕ್ವಾಭಿಧಸ್ಯ ದುರ್ಧರ್ಷತೇಜಸೋ ಬ್ರಹ್ಮವಾದಿನಃ ।
ಕಿಂ ತು ಜಾನಶ್ರುತೇರಸ್ಯ ರಾಜ್ಞಸ್ತ್ರೀವ್ರತರಂ ಮಹಃ ॥ ೨೬ ॥

---

೨೩. ಹಿಂದಿನ ಹಂಸಗಳು ಹೇಳಿದವು–ಎಲೈ ಹಂಸಗಳಿರಾ ! ನೀವು ಮುಂದುಗಡೆಯಿದ್ದವರು ಬೇಗನೆ ಹೊರಟೇ ಹೋಗುತ್ತಿರುವಿರಲ್ಲ ! ಈ ಜಾಗವು ಬಹು ಕಷ್ಟಕರವಾಗಿರುವುದರಿಂದ ಎಲ್ಲರೂ ಒಟ್ಟಿಗೆ ಹೋಗಬೇಕು

೨೪. ಮುಂದುಗಡೆಯಲ್ಲಿ ಪ್ರಕಾಶವಾಗಿ ಕಾಣುತ್ತಿರುವ ಆ ತೇಜಸ್ಸಿನ ಗುಂಪು ಕಾಣುವುದಿಲ್ಲವೇ ? ಅದು ಜಾನಶ್ರುತಿಯೆಂಬ ಪ್ರಸಿದ್ಧನಾದ ರಾಜನ ಪಟ್ಟಣವೆಂದು ಗೊತ್ತಾಗುವುದಿಲ್ಲವೇ ? ಚೆನ್ನಾಗಿ ವ್ಯಕ್ತವಾಗಿದೆಯಲ್ಲ !

೨೫. ಶ್ರೀ ಶಿವನು ಹೇಳಿದನು- ಮುಂದೆ ಹೋಗುತ್ತಿರುವ ಹಂಸಗಳು ಹಿಂದಿನ ಹಂಸಗಳು ಈ ರೀತಿ ಹೇಳಿದುದನ್ನು ಕೇಳಿ ನಗುತ್ತ ತಿರಸ್ಕಾರದಿಂದ ಗಟ್ಟಿಯಾಗಿ ಇಂತೆಂದುವು.

೨೬. ಮುಂದುಗಡೆಯ ಹಂಸಗಳು ಹೇಳಿದುವು- ಎಲೈ ಹಂಸಗಳಿರಾ ! ಬ್ರಹ್ಮಜ್ಞಾನಿಯಾದ ಉಗ್ರವಾದ ತೇಜಸ್ಸುಳ್ಳ ರೈಕ್ವ ಬ್ರಹ್ಮರ್ಷಿಯ ತೇಜಸ್ಸಿಗಿಂತಲೂ ಈ ಜಾನಶ್ರುತಿ ರಾಜನ ತೇಜಸ್ಸು ತೀವ್ರವಾಗಿದೆಯೆ ?

॥ ಶ್ರೀ ಶಿವ ಉವಾಚ ॥

ಇತಿ ಶುಶ್ರಾವ ಹಂಸಾನಾಂ ಗಿರೋ ಜಾನಶ್ರುತಿರ್ನೃಪಃ ।
ಅತ್ಯುಚ್ಚ ಸೌಧಭವನಾದವರುಹ್ಯ ಸುಖಂ ಸ್ಥಿತಃ ॥ ೨೭ ॥

ತತಸ್ಸಾರಥಿಮಾಹೂಯ ಭೂಪಾಲೋ ವಿಸ್ಮಯಾನ್ವಿತಃ ।
ಸಂದಿದೇಶ ಮಹಾತ್ಮಾಽಸೌ ರೈಕ್ವ ಆನೀಯತಾಮಿತಿ ॥ ೨೮ ॥

ತತೋಽವಧಾರ್ಯ ಭೂಪಾಲವಚಃ ಪೀಯೂಷಸೋದರಂ ।
ನಿರ್ಜಗಾಮ ಮಹೋ ನಾಮ್ನಾ ಸಾರಥಿಃ ಪ್ರಥಯನ್ಮುದಾ ॥ ೨೯ ॥

ಯತ್ರ ವಾರಾಣಸೀ ನಾಮ ನಗರೀ ಮುಕ್ತಿದಾಯಿನೀ ।
ಯತ್ರ ವಿಶ್ವೇಶ್ವರೋ ನ್ರೄಣಾಮುಪದೇಷ್ಟಾ ಜಗತ್ಪತಿಃ ॥ ೩೦ ॥

ತತೋ ಗಯಾಽಭಿಧೇ ಕ್ಷೇತ್ರೇ ಯತ್ರ ದೇವೋ ಗದಾಧರಃ ।
ಉದ್ಧರ್ತುಮಖಿಲಾಂಲ್ಲೋಕಾನ್ ವಸತ್ಯುತ್ಫುಲ್ಲಲೋಚನಃ ॥ ೩೧ ॥

---

೨೭. ಶ್ರೀ ಶಿವನು ಹೇಳಿದನು-ಈ ರೀತಿಯಾಗಿ ಹೇಳುತ್ತಿರುವ ಆ ಹಂಸಗಳ ಮಾತನ್ನು ಆ ಜಾನಶ್ರುತಿಯು ಕೇಳಿದನು. ಅನಂತರ ಆ ದೊಡ್ಡ ಮಹಡಿಯಿಂದ ಕೆಳಕ್ಕೆ ಮೆತ್ತಗೆ ಇಳಿದು ಬಂದನು

೨೮. ಆಮೇಲೆ ಸಾರಥಿಯನ್ನು ಕರೆದು ಆ ರಾಜನು ಆಶ್ಚರ್ಯಪಡುತ್ತ ಮಹಾತ್ಮನಾದ ರೈಕ್ವನನ್ನು ಕರೆದುಕೊಂಡು ಬಾ ಎಂದು ಆಜ್ಞಾಪಿಸಿದನು.

೨೯. ಆಗ ಮಹಸ್ಸೆಂಬ ಹೆಸರಿನ ಆ ಸಾರಥಿಯು ಅಮೃತದಂತಿರುವ ಆ ಮಾತನ್ನು ಕೇಳಿ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತ ಹೊರಟನು.

೩೦. ಮಹಸ್ಸೆಂಬ ಸಾರಥಿಯು ವಿಶ್ವೇಶ್ವರನು ತಾರಕ ಮಂತ್ರವನ್ನು ಉಪದೇಶಿಸುತ್ತ ಮುಕ್ತಿಯನ್ನು ಕೊಡುತ್ತ ಸ್ವಂತವಾಗಿ ನಿಂತಿರುವ ವಾರಾಣಸಿಗೆ ಹೋದನು.

೩೧. ಅನಂತರ ಗದಾಧರನು ಎಲ್ಲಾ ಜನರನ್ನೂ ಉದ್ಧಾರಮಾಡಲು ಸಂತೋಷದಿಂದ ಕಣ್ಣುಗಳನ್ನು ಅರಳಿಸಿಕೊಂಡಿರುವ ಗಯಾ ಕ್ಷೇತ್ರಕ್ಕೆ ಹೋದನು.

ತತೋ ಗೌರೀಗುರೋಃ ಪಾರ್ಶ್ವೇ ಸರ್ವೈಸ್ತೀರ್ಥೈರನೇಕಧಾ ।
ಪರ್ಯಟನ್ ಗತವಾನ್ ಯತ್ರ ಕೇದಾರಃ ಪಾಪದಾರಣಃ ॥ ೩೨ ॥

ಯಮಾಲೋಕ್ಯ ಸಕೃನ್ಮರ್ತ್ಯಾ ಮುಕ್ತಾಸ್ಯುರ್ನಾತ್ರ ಸಂಶಯಃ ।
ಮಹಾಪಾತಕನಿರ್ಮುಕ್ತಾ ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ॥ ೩೩ ॥

ತತೋ ಗೌಡೇಷು ನಿರ್ಯಾತೋ ಯತ್ರಾಸ್ತೇ ಪುರುಷೋತ್ತಮಃ ।
ಯಸ್ಯಾಲೋಕನಮಾತ್ರೇಣ ನರಾಃ ಸ್ವರ್ಲೋಕಗಾಮಿನಃ ॥ ೩೪ ॥

ತತೋ ದ್ವಾರಾವತೀಮಾಗಾನ್ನಗರೀಂ ಮುಕ್ತಿದಾಯಿನೀಂ ।
ಯತ್ರಾಸ್ತಿ ಗೋಮತೀತೀರೇ ರುಕ್ಮಿಣೀವಲ್ಲಭೋ ಹರಿಃ ॥ ೩೫ ॥

ಸ್ನಾತ್ವಾ ತು ಗೋಮತೀತೀರ್ಥೇ ಪಂಚ ಕೃಷ್ಣಾನ್ನಿರೀಕ್ಷ್ಯ ವೈ ।
ಮರ್ತ್ಯೋ ಮುಕ್ತಿಮವಾಪ್ನೋತಿ ಭುಕ್ತ್ವಾ ಭೋಗಾನ್
ಯಥೇಪ್ಸಿತಾನ್ ॥ ೩೬ ॥

---

೩೨. ಅಲ್ಲಿಂದ ಹಿಮವತ್ಪರ್ವತದ ತಪ್ಪಲಿನಲ್ಲಿರುವ ಅನೇಕ ತೀರ್ಥಗಳಲ್ಲಿ ಹುಡುಕುತ್ತ ಕೊನೆಗೆ ಪಾಪನಾಶಕವಾದ ಕೇದಾರೇಶ್ವರ ಕ್ಷೇತ್ರಕ್ಕೆ ಹೋದನು.

೩೩. ಯಾವ ಕೇದಾರ ಕ್ಷೇತ್ರವನ್ನು ನೋಡಿದ ಮಾತ್ರದಿಂದಲೇ ಪಾಪಗಳನ್ನು ಕಳೆದುಕೊಂಡು ಅನೇಕವಾದ ಭೋಗಗಳನ್ನು ಅನುಭವಿಸಿ ಮುಕ್ತಿಯನ್ನು ಹೊಂದುತ್ತಾರೆಯೋ ಅಂತಹ ಕೇದಾರಕ್ಕೆ ಹೋದನು.

೩೪. ಅಲ್ಲಿಂದ ಹೊರಟು ಗೌಡದೇಶದಲ್ಲಿ ಸುತ್ತುತ್ತ ಯಾವ ಪುರುಷೋತ್ತಮನನ್ನು ದರ್ಶನಮಾಡಿದ ಮಾತ್ರದಿಂದಲೇ ಜನರು ಸ್ವರ್ಗವನ್ನು ಹೊಂದುತ್ತಾರೆಯೋ ಅಂತಹ ಪುರುಷೋತ್ತಮ ಕ್ಷೇತ್ರಕ್ಕೆ ಹೋದನು.

೩೫. ಅಲ್ಲಿಂದ ಹೊರಟು ಗೋಮತಿಯ ದಡದಲ್ಲಿ ರುಕ್ಮಿಣೀ ವಲ್ಲಭನಾದ ಹರಿಯು ಇದ್ದುಕೊಂಡು ಅಲ್ಲಿಗೆ ಬಂದವರಿಗೆಲ್ಲಾ ಮುಕ್ತಿಯನ್ನು ಕೊಡುತ್ತಿರುವ ದ್ವಾರಾವತೀ ಪಟ್ಟಣಕ್ಕೆ ಹೋದನು.

೩೬. ಯಾವ ಗೋಮತಿಯ ತೀರ್ಥದಲ್ಲಿ ಸ್ನಾನಮಾಡಿ ಅಲ್ಲಿರುವ ಐದು ಕೃಷ್ಣನ ವಿಗ್ರಹಗಳನ್ನೂ ಸಂದರ್ಶನಮಾಡಿ ಮನುಜನು ಇಷ್ಟವಾದ ಭೋಗಗಳನ್ನೆಲ್ಲಾ ಅನುಭವಿಸಿ ಮುಕ್ತಿಯನ್ನು ಹೊಂದುತ್ತಾನೆಯೋ ಅಂತಹ ದ್ವಾರಕೆಗೆ ಹೋದನು.

ತತಸ್ಸಮುದ್ರಮಾಸಾದ್ಯ ಸೋಮನಾಥಂ ವಿಲೋಕ್ಯ ಚ ।
ಭುಕ್ತಿಮುಕ್ತಿಪ್ರದಂ ದೇವಂ ತತೋ ನಿರಗಮತ್ಸುಧೀಃ || ೩೭ ||

ತತೋಽವಂತೀಪುರೀಂ ಪ್ರಾಪ್ತೋ ಭುಕ್ತಿಮುಕ್ತಿಪ್ರದಾಯಿನೀಂ ।
ಯತ್ರೋಮಯಾ ಸುಖಂ ಕ್ರೀಡನ್ ಮಹಾಕಾಲೋಽಸ್ತಿ ಶಂಕರಃ ॥ ೩೮ ॥

ಅಥೋಂಕಾರಂ ಸಮಾಸಾದ್ಯ ಶರ್ಮದಂ ನರ್ಮದಾತಟೇ ।
ಭುಕ್ತಿಮುಕ್ತಿಪ್ರದಾತಾರಂ ತ್ವರಯಾ ನಿರ್ಗತಸ್ತತಃ ॥ ೩೯ ॥

ಅಶ್ವಮೇಧಕರಂ ನಾಮ್ನಾ ನಗರಂ ಪರ್ಯಟಂಸ್ತತಃ ।
ಯತ್ರ ಶಾರ್ಙ್ಗಧರಸ್ಸಾಕ್ಷಾದಾಸ್ತೇ ಲಕ್ಷ್ಮೀಪತಿಃ ಸ್ವಯಂ ॥ ೪೦ ॥

ತತೋ ವಿಷ್ಣುಗಯಾಂ ಪ್ರಾಪ್ತಃ ಕುಂಡಂ ಲೋಣಾರಸಂಜ್ಞಿತಂ ।
ಯತ್ರ ಸ್ನಾತ್ವಾ ಚ ಪೀತ್ವಾ ಚ ಮುಚ್ಯತೇ ಬಂಧನಾನ್ನರಃ ॥ ೪೧ ॥

---

೩೭. ಅಲ್ಲಿಂದ ಹೊರಟು ಸಮುದ್ರದ ದಡಕ್ಕೆ ಹೋಗಿ ಅಲ್ಲಿ ಭುಕ್ತಿ ಮುಕ್ತಿಗಳನ್ನು ಕೊಡುವ ಸೋಮನಾಥನನ್ನು ನೋಡಿದನು ಅಲ್ಲಿಂದ ಮುಂದಕ್ಕೆ ಹೊರಟನು.

೩೮. ಹೊರಟು ಅವಂತೀ ಪಟ್ಟಣಕ್ಕೆ ಹೋಗಿ ಅಲ್ಲಿ ಭುಕ್ತಿ ಮುಕ್ತಿಗಳನ್ನು ಕೊಡುವ ಪಾರ್ವತಿಯೊಡನೆ ಕ್ರೀಡಿಸುತ್ತಿರುವ ಮಹಾಕಾಲನೆಂಬ ಶಂಕರನನ್ನು ನೋಡಿದನು.

೩೯. ಆ ಮೇಲೆ ನರ್ಮದೆಯ ದಡದಲ್ಲಿರುವ ಸುಖಪ್ರದನಾದ ಭುಕ್ತಿ ಮುಕ್ತಿಗಳನ್ನು ಕೊಡುವ ಓಂಕಾರೇಶ್ವರನನ್ನು ನೋಡಿ ಮುಂದೆ ಹೊರಟನು.

೪೦. ಅಲ್ಲಿಂದ ಅಶ್ವಮೇಧಕರವೆಂಬ ಪಟ್ಟಣಕ್ಕೆ ಹೋಗಿ ಅಲ್ಲಿ ನೋಡಿದನು. ಅಲ್ಲಿ ಲಕ್ಷ್ಮೀಪತಿಯಾದ ಸಾಕ್ಷಾದ್ವಿಷ್ಣುವು ಇದ್ದಾನೆ.

೪೧. ಯಾವ ವಿಷ್ಣು ಗಯೆಯಲ್ಲಿರುವ ಲೋಣಾರವೆಂಬ ಕುಂಡದಲ್ಲಿ ಸ್ನಾನಮಾಡಿದರೆ ಮನುಷ್ಯನು ಸಂಸಾರ ಬಂಧನವನ್ನು ಕಳೆದುಕೊಳ್ಳುತ್ತಾನೆಯೋ ಅಂತಹ ವಿಷ್ಣುಗಯೆಗೆ ಹೋದನು.

ತತಃ ಕೊಲ್ಹಾಪುರಂ ನಾಮ ಗತೋರುದ್ರಗಯಾಂ ಪ್ರತಿ ।
ಆಸ್ತೇ ಭಗವತೀ ಯತ್ರ ಲಕ್ಷ್ಮೀರ್ಭಕ್ತಿಪ್ರದಾಯಿನೀ ॥ ೪೨ ॥

ಪಂಚನದ್ಯಾಂ ನರಸ್ಸ್ನಾತ್ವಾ ಮಹಾಲಕ್ಷ್ಮೀಂ ವಿಲೋಕ್ಯ ಚ ।
ಭುಕ್ತ್ವಾ ಭೋಗಾನ್ ಯಥಾಕಾಮಂ ಭಕ್ತಿಂ ಚ ಪ್ರತಿಪದ್ಯತೇ ॥ ೪೩ ॥

ತತೋಽಮಲಗಿರಿಂ ನಾಮ ನಗರೀಂ ಪ್ರತಿಪದ್ಯ ಚ ।
ನಂದಿಕೇಶ್ವರಮಾರುಹ್ಯ ಸೋಮನಾಥೋಽಸ್ತಿ ಯತ್ರ ತು ॥ ೪೪ ॥

ದೃಷ್ಟ್ವಾ ಚತುರ್ಭುಜಂ ದೇವಂ ವರದಾನೋದ್ಯತಂ ಶಿವಂ ।
ಸೋಮನಾಥಂ ನೃಣಾಂ ಮುಕ್ತಿರ್ಭವತ್ಯೇವ ನ ಸಂಶಯಃ ॥ ೪೫ ॥

ತುಂಗಭದ್ರಾ ನದೀತೀರೇ ದೃಷ್ಟ್ವಾ ಹರಿಹರಂ ತತಃ ।
ಯುಗೇ ಯುಗೇ ಭುಜಾ ಯಸ್ಯ ಪತಂತ್ಯವನಿಮಂಡಲೇ ॥ ೪೬ ॥

---

೪೨. ಅಲ್ಲಿಂದ ಹೊರಟು ರುದ್ರಗಯೆಯೆಂದು ಪ್ರಸಿದ್ಧವಾದ ಕೊಲ್ಲಾಪುರಕ್ಕೆ ಹೋದನು. ಅಲ್ಲಿ ಪೂಜ್ಯಳಾದ ಲಕ್ಷ್ಮಿಯು ಎಲ್ಲರಿಗೂ ಭಕ್ತಿಯನ್ನು ಉಪದೇಶಿಸುತ್ತಿರುವಳು.

೪೩. ಅಲ್ಲಿರುವ ಪಂಚನದಿಯಲ್ಲಿ ಸ್ನಾನಮಾಡಿ ಮಹಾಲಕ್ಷ್ಮಿಯ ದರ್ಶನವನ್ನು ಮಾಡಿದರೆ ಭಕ್ತಿಯನ್ನು ಹೊಂದುವುದಲ್ಲದೆ ಅನೇಕವಾದ ಭೋಗಗಳನ್ನೂ ಹೊಂದುತ್ತಾರೆ.

೪೪. ಅಲ್ಲಿಂದ ಹೊರಟು ಅಮಲಗಿರಿಯೆಂಬ ಊರಿಗೆ ಹೋದನು. ಅಲ್ಲಿ ಸೋಮನಾಥನು ನಂದಿಕೇಶ್ವರನನ್ನು ಹತ್ತಿಕೊಂಡು ಪ್ರಕಾಶಿಸುತ್ತಲಿರುವನು.

೪೫. ಆ ವರದನಾದ ಚತುರ್ಭುಜವುಳ್ಳ ಶಿವನನ್ನು ದರ್ಶನಮಾಡಿದರೆ ಮನುಜರಿಗೆ ಮುಕ್ತಿಯು ಬಂದೇಬರುತ್ತದೆ. ಸಂಶಯವಿಲ್ಲ. ಇದು ನಿಶ್ಚಯವು.

೪೬. ಅಲ್ಲಿಂದ ಹೊರಟು ತುಂಗಭದ್ರಾನದಿಯ ದಡಕ್ಕೆ ಬಂದು ಯುಗಯುಗದಲ್ಲಿಯೂ ಯಾವನ ಭುಜಗಳು ಭೂಮಿಯಲ್ಲಿ ಬೀಳುತ್ತವೆಯೋ ಅಂತಹ ಹರಿಹರೇಶ್ವರನನ್ನು ನೋಡಿದನು.

ಯದ್ವಿಲೋಕ್ಯ ನರಾಸ್ಸರ್ವೇ ರಮ್ಯಂ ಹರಿಹರಂ ವಪುಃ ।
ಭುಕ್ತ್ವಾ ಭೋಗಾನ್ ಯಥಾಕಾಮಂ ಮುಚ್ಯತೇ ಬಂಧನಾನ್ನರಾಃ ॥ ೪೭ ॥

ಸ್ವರ್ಗೇ ಕಲ್ಪಶತಂ ಸ್ಥಿತ್ವಾ ಮುಕ್ತಸಂಸಾರಬಂಧನಾಃ ।
ತತಃ ಸ್ವಾಮಿನಮಾಲೋಕ್ಯ ಲೋಕಾನಾಂ ಸ್ವಾಮಿನಂ ವಿಭುಂ ॥ ೪೮ ॥

ಯಮಾಲೋಕ್ಯ ನ ಪಶ್ಯಂತಿ ನಿರಯಂ ಜಾತು ಚಿನ್ನರಾಃ ।
ಸ್ವರ್ಗೇ ಕಲ್ಪಶತಂ ಸ್ಥಿತ್ವಾ ಮುಕ್ತಸಂಸಾರವಾಸನಾಃ ॥ ೪೯ ॥

ಮುಕ್ತಿಂ ಚ ಪ್ರತಿಪದ್ಯಂತೇ ನಾತ್ರ ಕಾರ್ಯಾ ವಿಚಾರಣಾ ।
ತತಶ್ಶ್ರೀಶೈಲಮಾಸಾದ್ಯ ಸಿದ್ಧಗಂಧರ್ವಸೇವಿತಂ ॥ ೫೦ ॥

ಗಿರಿಜಾವಲ್ಲಭೋಯತ್ರ ಮಲ್ಲಿನಾಥಾಭಿಧಾನಕಃ ।
ಉದ್ಧರ್ತುಮಖಿಲಾಂಲ್ಲೋಕಾನ್ ಸಂಸಾರಾಂಭೋಧಿಮಧ್ಯತಃ ॥ ೫೧ ॥

ಕಾಲೇ ಕಾಲೇ ಪರಂ ಜ್ಯೋತಿರ್ಯಸ್ಸಂದರ್ಶಯತೇ ಸ್ವಯಂ ।
ಅವಲೋಕಯತಾಂ ನೃಣಾಂ ಯಮನುಸ್ಮರತಾಮಪಿ ॥ ೫೨ ॥

---

೪೭- ಅಲ್ಲಿರುವ ಆ ಹರಿಹರೇಶ್ವರನನ್ನು ನೋಡಿದರೆ ಜನರು ಅನೇಕ ಭೋಗಗಳನ್ನು ಅನುಭವಿಸಿ ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ.

೪೮. ಹಾಗೆ ಸಂಸಾರ ಬಂಧನವನ್ನು ತಪ್ಪಿಸಿಕೊಂಡು ಸ್ವರ್ಗದಲ್ಲಿ ನೂರಾರು ಕಲ್ಪಗಳವರೆಗೂ ಇದ್ದು ಸುಖಿಸುತ್ತಾರೆ. ಲೋಕವಿಭುವಾದ ಈ ಸ್ವಾಮಿಯ ದರ್ಶನದ ಫಲವು ಈ ರೀತಿಯಾದುದು

೪೯-೫೮. ಆ ಸ್ವಾಮಿಯ ದರ್ಶನವನ್ನು ಮಾಡಿದರೆ ಜನರು ಸಂಸಾರದ ಕಟ್ಟನ್ನು ಕಳೆದುಕೊಂಡು ಸ್ವರ್ಗದಲ್ಲಿ ನೂರು ಕಲ್ಪಗಳವರೆಗೂ ಇದ್ದು ಕೊನೆಗೆ ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ. ಅನಂತರ ಸಿದ್ಧಗಂಧರ್ವರು ಸೇವಿಸುತ್ತಿರುವ ಶ್ರೀ ಶೈಲಕ್ಕೆ ಹೋದನು. ಅಲ್ಲಿ ಗಿರಿಜಾವಲ್ಲಭನಾದ ಶಂಕರನು ಮಲ್ಲಿನಾಥನೆಂಬ ಹೆಸರಿನಿಂದ ಪ್ರಸಿದ್ಧನಾಗಿ ಅಲ್ಲಿ ನೆಲಸಿರುವನು. ಮತ್ತು ಪ್ರಾಣಿಗಳನ್ನೆಲ್ಲಾ ಈ ಸಂಸಾರ ಸಾಗರದಿಂದ ಪಾರುಮಾಡಲು ತನ್ನ ತೇಜಸ್ಸನ್ನು ಅವರೆಲ್ಲರಿಗೂ ತೋರಿಸುತ್ತಿರುವನು. ಆ ಮಲ್ಲಿನಾಥನನ್ನು ದರ್ಶನ ಮಾಡುವವರಿಗೂ ಸ್ಮರಿಸುವವರಿಗೂ ಪಾಪಗಳು ದೂರವಾಗುತ್ತವೆ. ಮತ್ತು ನರಕ ಯಾತನೆಗಳೂ

ದೂರೇ ತಿಷ್ಠಂತಿ ಸಂತ್ರಸ್ತಾ ದೂರೇ ನಿರಯಯಾತನಾಃ ।
ಸ್ವರ್ಗಲೋಕೇ ಸುಖಂ ಭುಕ್ತ್ವಾ ಮುಕ್ತಸಂಸಾರಯಾತನಾಃ ॥ ೫೩ ॥

ಮುಕ್ತಿಂ ಚ ಪ್ರತಿಪದ್ಯಂತೇ ಮಾನವಾ ನಾಽತ್ರ ಸಂಶಯಃ ।
ರಾಮೋಽಪಿ ಸಾನುಜಸ್ಸಾರ್ಧಂ ಜಾನಕ್ಯಾಪಿ ತತೋ ಗತಃ ॥ ೫೪ ॥

ತತ್ರ ಸ್ನಾತ್ವಾ ಚ ಪೀತ್ವಾ ಚ ಮುಚ್ಯತೇ ನರಕಾದ್ಧ್ರುವಂ ।
ಕಲ್ಪಕೋಟಿಶತಂ ಭುಕ್ತ್ವಾ ಸ್ವರ್ಗಲೋಕೇ ಸುಖಂ ನರಾಃ ॥ ೫೫ ॥

ಮುಕ್ತಸಂಸಾರವತ್ಮಾ೯ನಃ ಮುಕ್ತಿಂ ಯಾಂತಿ ನ ಸಂಶಯಃ ।
ತತೋ ನಿವೃತ್ತ ಆಯಾತಃ ಪಶ್ಯನ್ ಭೀಮರಥೀತಟೇ ॥ ೫೬ ॥

ದ್ವಿಭುಜಂ ವಿಟ್ಠಲಂ ವಿಷ್ಣುಂ ಭುಕ್ತಿಮುಕ್ತಿಪ್ರದಾಯಕಂ ।
ಯತ್ರ ಭೀಮರಥೀತೀರೇ ಬಿಂದುಮಾಧವಸಂಜ್ಞಿತಃ ॥ ೫೭ ॥

ಹರಿಸ್ಸ ವರ್ತತೇಽದ್ಯಾಪಿ ಭುಕ್ತಿಮುಕ್ತಿಪ್ರದೋ ನೃಣಾಂ ।
ಯತ್ರ ಗೋದಾವರೀಜನ್ಮಸ್ಥಾನಂ ಬ್ರಹ್ಮಗಿರಿರ್ಮಹಾನ್ ॥ ೫೮ ॥

---

ದೂರವಾಗುತ್ತವೆ. ಈ ರೀತಿಯಾಗಿ ಸಂಸಾರಬಂಧನವನ್ನು ಕಳೆದುಕೊಂಡು ಸ್ವರ್ಗದಲ್ಲಿ ಸುಖವನ್ನನುಭವಿಸಿ ಮನುಜರು ಮುಕ್ತಿಯನ್ನು ಹೊಂದುತ್ತಾರೆ ಎಂಬುದರಲ್ಲಿ ಸಂಶಯವಿಲ್ಲ. ರಾಮನೂ ಕೂಡ ಸೀತೆ ಲಕ್ಷ್ಮಣರೊಡಗೂಡಿ ಅಲ್ಲಿಗೆ ಹೋಗಿದ್ದನು. ಅಲ್ಲಿ ಸ್ನಾನ ಪಾನಗಳನ್ನು ಮಾಡಿದರೆ ನರಕದ ಬಾಧೆಯಿರುವುದಿಲ್ಲ. ಸ್ವರ್ಗಲೋಕದಲ್ಲಿ ಕೋಟಿನೂರು ಕಲ್ಪಗಳು ಕಳೆಯುವವರೆಗೂ ಸುಖವನ್ನು ಅನುಭವಿಸಿ ಸಂಸಾರವನ್ನು ಕಳೆದುಕೊಂಡು ಮುಕ್ತಿಯನ್ನು ಹೊಂದುತ್ತಾರೆ. ಸಂಶಯವಿಲ್ಲ. ಅಲ್ಲಿಂದ ಹಿಂತಿರುಗಿ ಭೀಮರಥಿಯ ದಡಕ್ಕೆ ಬಂದು ಎರಡು ತೋಳುಗಳನ್ನು ಹೊಂದಿ ಮುಕ್ತಿಗಳನ್ನು ಕೊಡುತ್ತಿರುವ ವಿಟ್ಠಲನ ದರ್ಶನವನ್ನು ಮಾಡಿದನು. ಆ ಭೀಮರಥಿಯ ದಡದಲ್ಲಿ ಒಬ್ಬ ಮಾಧವನೆಂಬ ಹೆಸರಿನ ದೇವರಿದ್ದಾನೆ. ಆ ದೇವರು ಎಲ್ಲರಿಗೂ ಭುಕ್ತಿ ಮುಕ್ತಿಗಳನ್ನು ಕೊಡುತ್ತಿದ್ದಾನೆ. ಅಲ್ಲಿ ಗೋದಾವರಿಯು ಹುಟ್ಟುವ ಬ್ರಹ್ಮಗಿರಿಯು ಇದೆ.

ಗೌತಮಾಲಯಮಾಸಾದ್ಯ ಯತ್ರಾಸ್ತೇ ತ್ರ್ಯಂಬಕೇಶ್ವರಃ ।
ಅರುಣಾವರುಣಾಮಧ್ಯೇ ಯತ್ರ ಗೋದಾವರೀನದೀ ॥ ೫೯ ॥

ತತ್ರ ಸ್ನಾತ್ವಾ ಚ ಪೀತ್ವಾ ಚ ಬ್ರಹ್ಮಹತ್ಯಾ ವಿಲೀಯತೇ ।
ಅಸಂಖ್ಯತೀರ್ಥಸಂಪನ್ನಂ ದೃಷ್ಟ್ವಾ ಬ್ರಹ್ಮಗಿರಿಂ ನರಾಃ ॥ ೬೦ ॥

ಮುಕ್ತಿಮೇವ ಪ್ರಪದ್ಯಂತೇ ಮುಕ್ತಾಸ್ಸಂಸಾರದುಃಖತಃ ।
ಗೌತಮ್ಯುಭಯತೀರ್ಥಸ್ಥತೀರ್ಥಾನ್ವೇಷಣಕೌತುಕೀ ॥ ೬೧ ॥

ತತೋ ಜಗಾಮ ಸೂತಸ್ತು ಮಧುರಾಂ ಪಾಪನಾಶಿನೀಂ ।
ಯತ್ರ ಸ್ವಾಯಂಭುವಂ ದೇವಂ ಭಜಂತಿ ಸುರಮಾನವಾಃ ॥ ೬೨ ॥

ಆದ್ಯಂ ಭಗವತಃ ಸ್ಥಾನಂ ಮಹನ್ಮುಕ್ತಿಪ್ರದಾಯಕಂ ।
ತ್ರೈಲೋಕ್ಯೇಶಜನಿಸ್ಥಾನಂ ವಿಖ್ಯಾತಂ ವೇದಶಾಸ್ತ್ರಯೋಃ ॥ ೬೩ ॥

---

೫೯. ಅಲ್ಲಿಂದ ಮುಂದೆ ಗೌತಮ ಕ್ಷೇತ್ರವಿರುವುದು. ಅಲ್ಲಿ ತ್ರ್ಯಂಬಕೇಶ್ವರನಿರುವನು. ಮತ್ತು ಗೋದಾವರೀ ನದಿಯು ಅರುಣಾವರುಣಗಳ ಮಧ್ಯದಲ್ಲಿ ಹರಿಯುತ್ತದೆ.

೬೦-೬೧. ಅಲ್ಲಿ ಸ್ನಾನ ಮಾಡಿ ನೀರು ಕುಡಿದರೆ ಬ್ರಹ್ಮಹತ್ಯೆಯು ನಾಶವಾಗುತ್ತದೆ. ಆ ಬ್ರಹ್ಮಗಿರಿಯು ಅನೇಕ ತೀರ್ಥಗಳಿಂದ ಕೂಡಿದೆ. ಅದನ್ನೆಲ್ಲಾ ನೋಡಿದರೆ ಮುಕ್ತಿಯನ್ನು ಹೊಂದಿ ಸಂಸಾರ ದುಃಖವನ್ನು ಕಳೆದುಕೊಳ್ಳುತ್ತಾರೆ. ಆ ಗೌತಮ ಕ್ಷೇತ್ರದ ಸುತ್ತಲೂ ಇರುವ ತೀರ್ಥಗಳಲ್ಲಿ ನೋಡಲು ಆಸೆಪಟ್ಟು ಸುತ್ತಿದನು.

೬೨. ಅನಂತರ ಆ ಸಾರಥಿಯು ಪಾಪನಾಶಕವಾದ ಮಧುರೆಯನ್ನು ಹೊಂದಿದನು. ಆ ಜಾಗದಲ್ಲಿ ತಾನಾಗಿಯೇ ಹುಟ್ಟಿರುವ ಭಗವಂತನನ್ನು ದೇವ ಮಾನವರು ಸೇವಿಸುತ್ತಿದ್ದಾರೆ.

೬೩–೬೫. ಆ ಮಧುರೆಯು ಸ್ವಾಮಿಗೆ ಮೊದಲನೆಯ ಸ್ಥಾನವು. ಮುಕ್ತಿಯನ್ನು ಕೊಡತಕ್ಕದ್ದು. ವೇದಶಾಸ್ತ್ರಗಳೂ ಕೂಡ ಸ್ವಾಮಿಯು ಮೊದಲು ಇಲ್ಲೇ

ನಾನಾದೇವಗಣೈರ್ಜುಷ್ಟಂ ದ್ವಿಜರ್ಷಿಗಣಸೇವಿತಂ ।
ಕಾಳಿಂದೀಕೂಲಸಂಶೋಭಿ ಹ್ಯರ್ಧಚಂದ್ರಪ್ರಭಾಕೃತಿ ॥ ೬೪ ॥

ಸರ್ವತೀರ್ಥನಿವಾಸೈಕಪೂರ್ಣಮಾನಂದಸುಂದರಂ ।
ಗೋವರ್ಧನಗಿರಿಸ್ಪ್ರಖ್ಯಂ ಪುಣ್ಯದ್ರುಮಲತಾಽಽವೃತಂ ॥ ೬೫ ॥

ದ್ವಿಷಡ್ವನಂ ಮಹಾಪುಣ್ಯಂ ವಿಶ್ರಾಂತಿಶ್ರುತಿಸಾರಭೃತ್ ।
ತತಃ ಕಾಶ್ಮೀರನಗರಮುಪಶ್ಯತ್ಪ್ರತ್ಯಗುತ್ತರಂ ॥ ೬೬ ॥

ದೃಷ್ಟ್ವಾ ಧರ್ಮಧುರಂ ಕ್ಷೇತ್ರಂ ಕುರುಕ್ಷೇತ್ರಂ ಸಮನ್ತತಃ ।
ಯತ್ರಾಭ್ರಂಲಿಹಗೇಹಾನಾಂ ಪಂಕ್ತಯಃ ಶಂಖಪಾಂಡುರಾಃ ॥ ೬೭ ॥

ತಾ ಜಾತಾ ಧೂರ್ಜಟೇಃ ಸ್ಪಷ್ಟಮುಟ್ಟಹಾಸದೃಶಾ ಇವ ।
ಭಕ್ತಿಃ ಪ್ರಾಸಾದಮಾಲಾನಾಂ ಸುವರ್ಣಕಲಶೈರ್ವೃತಂ ॥ ೬೮ ॥

---

ಅವತರಿಸಿದನೆಂದು ಹೇಳುತ್ತವೆ. ಅನೇಕ ದೇವರ್ಷಿಗಳೂ ಬ್ರಹ್ಮರ್ಷಿಗಳೂ ಆಸ್ವಾಮಿಯನ್ನು ಸೇವಿಸುತ್ತಾರೆ. ಅಲ್ಲಿ ಕಾಳಿಂದೀ ನದಿಯು ಹರಿಯುತ್ತದೆ. ಆನದಿಯು ಅರ್ಧಚಂದ್ರನ ಆಕಾರವಾಗಿ ಡೊಂಕಾಗಿ ಹರಿಯುತ್ತದೆ. ಅಲ್ಲಿ ಗೋವರ್ಧನಪರ್ವತವಿದೆ ಅದು ಅನೇಕ ಪುಣ್ಯತೀರ್ಥಗಳಿಂದ ಕೂಡಿದೆ. ಆನಂದಕರವಾದುದು. ಮತ್ತು ಪುಣ್ಯಕರಗಳಾದ ಮರ ಬಳ್ಳಿಗಳಿಂದ ಕೂಡಿರುತ್ತದೆ.

೬೬-೬೮. ಆ ಸ್ಥಳದಲ್ಲಿ ಹನ್ನೆರಡು ಪುಣ್ಯವನಗಳಿವೆ. ಅವು ಮಹಾಪುಣ್ಯಪ್ರದವಾದುವು. ಅನಂತರ ಕಾಶ್ಮೀರ ನಗರಕ್ಕೆ ಹೋದನು. ಅದು ಸ್ವಲ್ಪ ಹಿಂದಕ್ಕೆ ಉತ್ತರದಿಕ್ಕಿಗಿರುವುದು. ಅದರ ಸುತ್ತಲೂ ಧರ್ಮಪ್ರಧಾನವಾದ ಕುರುಕ್ಷೇತ್ರವು ಇದೆ. ಅಲ್ಲಿರುವ ಮಹಡಿಯ ಮನೆಗಳು ಶಂಖದಂತೆ ಬೆಳ್ಳಗಿವೆ. ಮತ್ತು ಅಂತರಿಕ್ಷವನ್ನು ಚುಚ್ಚುವಂತಿವೆ. ಅವನ್ನು ನೋಡಿದರೆ ಈಶ್ವರನ ನಗುವಿನಂತೆ ಬೆಳ್ಳಗೆ ಪ್ರಕಾಶಿಸುತ್ತಿವೆ. ಆ ಮಹಡಿಗಳ ರೀತಿಯು ಬಹು ರಮ್ಯವಾಗಿದ್ದು ಚಿನ್ನದ ಕಲಶಗಳಿಂದ ಕೂಡಿವೆ.

ಸ್ವಸ್ಸಿಂಧೋಃ ಪತಿತಾನೀವ ಹೇಮಪದ್ಮಾನಿ ಮಾರುತೈಃ |
ಯತ್ರ ಪ್ರಾಸಾದಶಿಖರೇ ನೀಲಪಟ್ಟಪತಾಕಿಕಾಃ || ೬೯ ||

ಶೈವಾಲಾವಳಯೋ ಭಾಂತಿ ಸ್ವಸ್ಸಿಂಧೋರ್ಲತಿಕಾ ಇವ |
ಯತ್ರ ಕಾಶ್ಮೀರಮಾಶ್ರಿತ್ಯ ನಿತ್ಯಂ ವಸತಿ ಭಾರತೀ || ೭೦ ||

ನೋ ಚೇದ್ಯುಗಪದೇವೇದಂ ಕಥಂ ಲಿಖತಿ ವಾಙ್ಮಯಂ |
ವಿಶ್ರಾಮ್ಯಂತ್ಯಾಃ ಸರಸ್ವತ್ಯಾಃ ಚಿರಂ ಯತ್ರ ಮದಾಲಸಾಃ || ೭೧ ||

ಮೃಣಾಲಚಂಚವೋ ಹಂಸಾ ವಾಹನಾ ವಿಚರಂತ್ಯಮೀ |
ಕಲಾವಿಶೇಷಂ ಪ್ರಹಿತಾ ಯತ್ರ ಬೋದ್ಧುಂ ವಿರಿಂಚಿನಾ || ೭೨ ||

ತಾರಾ ಇವ ವಿರಾಜಂತೇ ಹಂಸಾ ಯಾತಾಸ್ಸಮಂತತಃ |
ಸ್ಥಲಪದ್ಮಾನಿ ದೃಶ್ಯಂತೇ ಕರಸ್ಪರ್ಶ ಸುಖಾನಿ ಚ || ೭೩ ||

---

೬೯–೭೧. ಆ ಕಲಶಗಳನ್ನು ನೋಡಿದರೆ ಆಕಾಶಗಂಗೆಯಿಂದ ಕಮಲಗಳು ಗಾಳಿಗೆ ಹಾರಿ ಬಂದು ಅಲ್ಲಿ ಆರೀತಿ ನಿಂತಿವೆಯೋ ಎಂಬಂತಿವೆ ಆ ಮಹಡಿಗಳ ಶಿಖರದಲ್ಲಿ ನೀಲಿಯ ಪತಾಕೆಗಳು ಹಾರಾಡುತ್ತಿವೆ. ಅವನ್ನು ನೋಡಿದರೆ ದೇವ ಗಂಗೆಯಲ್ಲಿ ಅಲ್ಲಾಡುತ್ತಿರುವ ಪಾಚಿಗಳಂತೆ ಕಾಣುತ್ತಿವೆ. ಈ ಕಾಶ್ಮೀರದಲ್ಲಿ ಯಾವಾಗಲೂ ಸರಸ್ವತಿಯು ಇರುವಳು. ಹಾಗಿಲ್ಲದಿದ್ದರೆ ಈ ವೇದಶಾಸ್ತ್ರ ಗಳನ್ನೆಲ್ಲಾ ಒಂದೇ ಸಾರಿ ಬರೆಯಲು ಹೇಗೆ ತಾನೆ ಸಾಧ್ಯವಾಗುತ್ತಲಿದ್ದಿತು ?

೭೨-೭೩. ಸರಸ್ವತಿಯು ಆ ಕಾಶ್ಮೀರದೇಶದಲ್ಲಿ ವಿಶ್ರಾಂತಿಯನ್ನು ಹೊಂದು ತ್ತಿರಲು ಅವಳ ವಾಹನಗಳಾದ ಹಂಸಗಳು ಕಮಲದ ದಂಟುಗಳನ್ನು ಕೊಕ್ಕಿನಲ್ಲಿ ಹಿಡಿದುಕೊಂಡು ಸಂಚರಿಸುತ್ತಿವೆ. ಬ್ರಹ್ಮನೂ ಕೂಡ ತನ್ನ ವಾಹನಗಳಾದ ಹಂಸಗಳನ್ನು ಕಲೆಯನ್ನೂ ಅದರಲ್ಲಿನ ಗುಟ್ಟನ್ನೂ ತಿಳಿಯಲು ಕಳುಹಿಸಿರುವಂತಿವೆ. ಮತ್ತು ಎಲ್ಲಾ ಕಡೆಯಲ್ಲಿಯೂ ಸಂಚರಿಸುತ್ತಿರುವ ಆ ಹಂಸಗಳನ್ನು ನೋಡಿದರೆ ನಕ್ಷತ್ರಗಳಂತೆ ಕಾಣುತ್ತಿದ್ದುವು. ಎಂದರೆ ಅಲ್ಲಿ ಹಂಸಗಳು ಸಂಚರಿಸುತ್ತಿದ್ದುವು.

ಶಯನಾಯ ನಿತಂಬಿನ್ಯಾ ಯಸ್ಮಿನ್ ದಾನವವೈರಿಣಃ ।
ಉಪನ್ಯಾಸೈರ್ದ್ವಿಜಾತೀನಾಂ ಯತ್ರ ನ ಶ್ರೂಯತೇ ಸ್ಫುಟಂ ॥ ೭೪ ॥

ಮೂಕೋಽಪಿ ನಿರ್ಜರೋ ವಾಚಾ ಪದಕಲ್ಲೋಲಡಂಬರಃ ।
ಯದೀಯಾಧ್ವರಧೂಮೇನ ವ್ಯಾಪ್ತಂ ಗಗನಮಂಡಲಂ ॥ ೭೫ ॥

ಅಪಿ ಚ ಕ್ಷಾಲಿತಂ ಮೇಘೈಃ ಕಾಳಿಮಾನಂ ನ ಮುಂಚತಿ ।
ಗಳಿತಾಯಾಸ್ಸುಧಾಯಾಸ್ತು ಯತ್ರಾಧ್ವರಮಹಾರ್ಚಿಷಾ ॥ ೭೬ ॥

ಲಾಂಛಿತಂ ಛದ್ಮನಾ ಸ್ಥಾನಂ ದೃಶ್ಯತೇ ತುಹಿನತ್ವಿಷಿ ।
ಜನ್ಮಾಭ್ಯಾಸವಶಾದೇವ ಪಠಂತಿ ವಟವಸ್ಸ್ವಯಂ ॥ ೭೭ ॥

ಯತ್ರೋಪಾಧ್ಯಾಯ ಸಾನ್ನಿಧ್ಯ ಮಾಶ್ರಿತ್ಯ ಸಕಲಾಃ ಕಲಾಃ ।
ಯತ್ರ ಬ್ರಾಹ್ಮಣ ಪತ್ನೀನಾಂ ಕಪೋಲ ಫಲಕಂ ಮುಹುಃ ॥ ೭೮ ॥

---

೭೪-೭೫. ಅಲ್ಲಿರುವ ಸ್ಥಳಪದ್ಮಗಳು ಮುಟ್ಟಿದರೆ ಮೆತ್ತಗಿದ್ದು ದಾನವೈರಿಯಾದ ಶ್ರೀಕೃಷ್ಣನ ಹೆಂಡತಿಯರಿಗೆ ಮಲಗಲು ಯೋಗ್ಯವಾಗಿರುವುವು. ಆ ಕಾಶ್ಮೀರದಲ್ಲಿರುವ ದ್ವಿಜರು ಉಪನ್ಯಾಸ ಮಾಡುವುದರಿಂದ ಆ ಸ್ಥಳದಲ್ಲಿ ಮೂಗನಾದವನೆ ಇರಲಿಲ್ಲ. ಅವನೂ ಕೂಡ ಮಾತಿನಮಲ್ಲನಾಗಿ ಬೃಹಸ್ಪತಿಯಾಗಿದ್ದನು.

೭೬-೭೭. ಆ ಊರಿನಲ್ಲಿ ನಡೆಯುತ್ತಿರುವ ಯಾಗಗಳಿಂದ ಹೊರಟ ಹೊಗೆಯು ಅಂತರಿಕ್ಷದಲ್ಲೆಲ್ಲಾ ತುಂಬಿಕೊಂಡಿದ್ದಿತು ನೀರುಳ್ಳ ಮೇಘಗಳು ಆ ಅಂತರಿಕ್ಷವನ್ನೆಲ್ಲಾ ತೊಳೆವರೂ ಆ ಕಪ್ಪುಹೋಗುವುದೇ ಇಲ್ಲ. ಅಮೃತದ ಮೂರ್ತಿಯಾದ ಚಂದ್ರನು ಆಕಾಶದಲ್ಲಿ ಸಂಚರಿಸುತ್ತಿದ್ದಾಗ ಯಾಗದ ಅಗ್ನಿಯಿಂದ ಮೇಲಕ್ಕೆ ಹೊರಟ ಶಿಖೆಯಿಂದ ಚಂದ್ರನಲ್ಲಿರುವ ಅಮೃತವು ಮಧ್ಯಭಾಗದಲ್ಲಿ ಕರಗಿ ಹೋದುದರಿಂದ ಆ ಜಾಗವು ಚಂದ್ರನಲ್ಲಿ ಕಳಂಕವಾಗಿ ಕಾಣುತ್ತಿರುವುದು.

೭೭-೭೮. ಅಲ್ಲಿನ ಹುಡುಗರು ಹುಟ್ಟಿದೊಡನೆಯೇ ಬಂದಿರುವ ಒಂದು ಬಗೆಯಾದ ಸಂಸ್ಕಾರದಿಂದ ತಾವಾಗಿಯೇ ಓದುವುದನ್ನು ಅಭ್ಯಾಸಮಾಡಿಕೊಳ್ಳುತ್ತಾರೆ. ಅನಂತರ ಉಪಾಧ್ಯಾಯರ ಹತ್ತಿರಕ್ಕೆ ಬಂದು ಮಿಕ್ಕ ಕಲೆಗಳೆಲ್ಲವನ್ನೂ ಕಲಿತುಕೊಳ್ಳುತ್ತಾರೆ. ಆ ಕಾಶ್ಮೀರ ದೇಶದಲ್ಲಿರುವ ಬ್ರಾಹ್ಮಣರ ಹೆಂಡತಿಯರ ಕಪೋಲದ ಮೇಲೆ ಬೀಸಿದ ಗಾಳಿಯು ಅವರ ಕಪೋಲವನ್ನು ಮುಟ್ಟಿದುದಕ್ಕೆ ಶಾಪವನ್ನು ಎಲ್ಲಿ ಕೊಡುವರೋ ಎಂಬ ಹೆದರಿಕೆಯಿಂದ ಮೆಲ್ಲಗೆ ಬೀಸುತ್ತದೆ.

ಸ್ಪೃಶನ್ ಸಮೀರಣೋ ಮಂದಂ ವಾತಿ ಶಾಪಭಯಾದಿವ ।
ಯತ್ರ ಬ್ರಾಹ್ಮಣ ಪತ್ನೀನಾಂ ಕಂಕಣಧ್ವನಿಹುಂಕೃತಿಃ ॥ ೭೯ ॥

ಲುಂಪತ್ಯನುದಿನಂ ಬಿಭ್ಯದ್ಭ್ರಮರಾವಳಿ ಗುಂಜಿತಂ ।
ಮಾಣಿಕ್ಯೇಶ್ವರ ನಾಮಾsಸೌ ಯತ್ರ ಶೀತಾಂಶುಶೇಖರಃ ॥ ೮೦ ॥

ವಸತ್ಯನುದಿನಂ ದೇವೋ ವರದಾನಾಯ ದೇಹಿನಾಂ ।
ಅರ್ಚಿತೋ ಭೂಪತೀನ್ ಜಿತ್ವಾ ಮಣಿಕೇಶ ಉದಾಹೃತಃ ॥ ೮೧ ॥

ಮಾಣಿಕ್ಯೇಶ್ವ ಇತ್ಯಾಖ್ಯಾಂ ತದಾ ಪ್ರಭೃತಿ ಯೋ ದಧೌ ।
ರಾಜ್ಞಾ ಕಾಶ್ಮೀರ ದೇವೇನ ದಿಗ್ಜಯೋತ್ಸವಕಾರಿಣಾ ॥ ೮೨ ॥

ಅಸೌ ಸುಪೂಜಿತೋ ಯಸ್ಮಾನ್ಮಾಣಿಕ್ಯೈರ್ಭೂರಿಭೂತಿಭಿಃ ।
ಸಂಸೇವಮಾನಂ ತದ್ವಾರಿ ಚ್ಛಾಯಾಂ ಶಕಟಿಕೋಪರಿ ॥ ೮೩ ॥

ಕಂಡೂಯಮಾನಮಂಗಾನಿ ಯಂತಾ ರೈಕ್ವಮಪಶ್ಯತ ।
ರಾಜ್ಞಾಪಿ ಕಥಿತೈಸ್ತೈಸ್ತೈಶ್ಚಿಹ್ನೈಃ ಪರಿಚಿತಂ ಜವಾತ್ ॥
ಪ್ರಣತಸ್ಸಾರಥೀ ರೈಕ್ವಂ ಸಂಪ್ರಣಮ್ಯಾsಭ್ಯಭಾಷತ ॥ ೮೪ ॥

---

೭೯-೮೦. ಅಲ್ಲಿರುವ ಬ್ರಾಹ್ಮಣರ ಹೆಂಡತಿಯರ ಕೈಬಳೆಯ ಶಬ್ದವು ಆ ಊರಿನಲ್ಲಿ ಅಲ್ಲಲ್ಲೇ ಕೂಗಿಕೊಂಡು ಸುತ್ತುತ್ತಿರುವ ಭ್ರಮರಗಳ ಸದ್ದನ್ನು ತಿರಸ್ಕರಿಸಿ ಕೇಳಿಸುವಂತೆ ಇರುತ್ತದೆ. ಮಾಣಿಕ್ಯೇಶ್ವರನೆಂಬ ಈಶ್ವರದೇವರು ಇಲ್ಲಿ ಪ್ರಾಣಿಗಳಿಗೆ ವರಕೊಡುವುದಕ್ಕೇನೇ ನಿತ್ಯವೂ ವಾಸವಾಗಿರುತ್ತಾನೆ.

೮೧-೮೨. ಎಲ್ಲಾ ದಿಕ್ಕುಗಳನ್ನೂ ಜಯಿಸಿ ವಿಜಯೋತ್ಸವವನ್ನು ಮಾಡಿದ ಆ ಕಾಶ್ಮೀರದೇಶದ ರಾಜನಾದ ಮಣಿಕೇಶನೆಂಬುವವನು ಈ ದೇವರನ್ನು ಪೂಜಿಸಿದುದರಿಂದ ಈ ಶಿವನಿಗೆ ಮಾಣಿಕ್ಯೇಶ್ವರನೆಂದು ಆಗಿನಿಂದಲೂ ಹೆಸರು ಬಂದಿತು.

೮೩-೮೪. ಅಲ್ಲದೆ ಈ ಸ್ವಾಮಿಯನ್ನು ಆ ರಾಜನು ಬಹುವಾದ ಮಾಣಿಕ್ಯದ ಮಣಿಗಳಿಂದ ಪೂಜಿಸಿದುದರಿಂದ ಮಾಣಿಕ್ಯೇಶ್ವರನೆಂದು ಹೆಸರು ಬಂದಿತು. ಇಂತಹ ಆ ದೇವಸ್ಥಾನದ ಬಾಗಿಲಿನಲ್ಲಿ ನೆರಳಿನಲ್ಲಿದ್ದುಕೊಂಡು ಮೈಯನ್ನು ಕೆರೆದುಕೊಳ್ಳುತ್ತಿರುವ ಆ ರೈಕ್ವನನ್ನು ರಥದ ಮೇಲಿನ ಸಾರಥಿಯು ನೋಡಿದನು. ತನ್ನ ರಾಜನು ಹೇಳಿದ್ದ ಆಯಾಯ ಜಾಗಗಳ ಗುರುತುಗಳಿಂದ ಇವನೇ ರೈಕ್ವನೆಂದು ಸಾರಥಿಯು ಗುರುತು ತಿಳಿದುಕೊಂಡು ಅವನಿಗೆ ನಮಸ್ಕರಿಸಿ ಇಂತೆಂದನು.

|| ಸಾರಥಿರುವಾಚ ||

ಕಸ್ಮಿನ್ ಬ್ರಹ್ಮನ್ ಕಿನ್ನಾಮಾಪಿ ಸ್ವಚ್ಛಂದೋಽಸಿ ನಿರಂತರಂ |
ಕಿಮರ್ಥಮತ್ರ ವಿಶ್ರಾಂತಃ ಕಿಂ ಚ ಕರ್ತುಂ ಚಿಕೀರ್ಷಸಿ || ೮೫ ||

|| ಶ್ರೀ ಶಿವ ಉವಾಚ ||

ಇತ್ಯಾಕರ್ಣ್ಯ ಚ ತದ್ವಾಕ್ಯಂ ಪರಮಾನಂದ ನಿರ್ಭರಃ |
ಸ್ಮೃತ್ವಾ ಸಾರಿಥಿಮಿಚ್ಛ್ಯಾಚೇ ವಯಂ ಪೂರ್ಣಮನೋರಥಾಃ || ೮೬ ||

ಪರಂ ಕೇನಾಪಿ ಬಹುನಾ ಪರಿಚರ್ಯಾ ವಿಧಾಯಿನಾ |
ಭವಿತವ್ಯಂ ಮನೋವೃತ್ತಿಂ ಜಾನತಾಽಸ್ಮಾಕಮೇವ ಹಿ || ೮೭ ||

ಹೃದಯಸ್ಥಿತಮಾದಾಯ ರೈಕ್ವಾಽಭಿಪ್ರಾಯಮಾದರಾತ್ |
ಶನೈರ್ನಿರಗಮದ್ಯಂತಾ ಯತ್ರಾಸ್ತೇ ವಸುಧಾಽಧಿಪಃ || ೮೮ ||

ತತಃ ಪ್ರಣಮ್ಯ ಭೂಪಾಲಂ ಯಥಾವೃತ್ತಂ ನ್ಯವೇದಯತ್ |
ಬದ್ಧಾಂಜಲಿಪುಟೋ ಹೃಷ್ಟಃ ಸಾರಥಿಸ್ಸ್ವಾಮಿದರ್ಶನಾತ್ || ೮೯ ||

---

೮೫. ಸಾರಥಿಯು ಹೇಳಿದನು—ಎಲೈ ಬ್ರಾಹ್ಮಣನೆ! ನೀನು ಎಲ್ಲಿಯವನು? ನಿನ್ನ ಹೆಸರೇನು? ಯಾವಾಗಲೂ ಕಟ್ಟುಪಾಡಿಗೆ ಒಳಪಡದ ಮನಸ್ಸು ಬಂದಂತೆ ಇರುವೆಯಲ್ಲ! ಇಲ್ಲಿ ಏತಕ್ಕೋಸ್ಕರ ವಿಶ್ರಮಿಸಿಕೊಳ್ಳುತ್ತಿದ್ದೀಯೆ?

೮೬-೮೭. ಶಿವನು ಹೇಳಿದನು—ಸಾರಥಿಯ ಆ ಮಾತನ್ನು ಕೇಳಿ ಬಹುವಾದ ಆನಂದದಿಂದ ಕೂಡಿದವನಾಗಿ ಎಲ್ಲವನ್ನೂ ಜ್ಞಾಪಿಸಿಕೊಂಡು ಎಲೈ ಸಾರಥಿಯೇ! ನಾನು ಸಕಲ ಇಷ್ಟಾರ್ಥಗಳನ್ನೂ ಪೂರ್ತಿಮಾಡಿಕೊಂಡಿದ್ದೇನೆ ಆದರೆ ಯಾವನಾದರೊಬ್ಬನು ನನ್ನ ಮನಸ್ಸನ್ನು ತಿಳಿದುಕೊಂಡು ನನ್ನನ್ನು ಸೇವಿಸಬೇಕು. ಅಂತಹವನೊಬ್ಬನು ನನಗೆ ಬೇಕಾಗಿದ್ದಾನೆ. ಎಂದನು.

೮೮. ಈ ಸಾರಥಿಯು ಆ ರೈಕ್ವನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡು ತನ್ನ ಯಜಮಾನನಿರುವಲ್ಲಿಗೆ ಹೊರಟುಹೋದನು.

೮೯. ಆ ಸಾರಥಿಯು ಊರಿಗೆ ಹೋಗಿ ಸ್ವಾಮಿಯನ್ನು ನೋಡಿ ಸಂತೋಷಗೊಂಡು ಕೈಮುಗಿದುಕೊಂಡು ಆತನಿಗೆ ಅಲ್ಲಿ ನಡೆದುದೆಲ್ಲವನ್ನೂ ಹೇಳಿದನು.

ತತೋ ನಿಶಮ್ಯ ತದ್ವಾಕ್ಯಂ ವಿಸ್ಮಯಸ್ಮೇರಲೋಚನಃ ।
ಶ್ರದ್ಧಾಳುರಭವದ್ಭೂಯೋ ರೈಕ್ವಸಂಭಾವನಾವಿಧೌ ॥ ೯೦ ॥

ಆದಾಯಾಶ್ವತರೀಯುಗ್ಮಯುತಾಂ ಶಕಟಿಕಾಮಗಾತ್ ।
ಮುಕ್ತಾಹಾರದುಕೂಲಾನಿ ಸಹಸ್ರಂ ಚ ಗವಾಂ ನೃಪಃ ॥ ೯೧ ॥

ಗತೋಽಸೌ ತತ್ರ ಯತ್ರಾಸ್ತೇ ಯೋಗೀ ಕಾಶ್ಮೀರಮಂಡಲೇ ।
ತನ್ನಿವೇದ್ಯ ಪುರೋ ರಾಜಾ ದಂಡವತ್ಪತಿತೋ ಭುವಿ ॥ ೯೨ ॥

ನಮ್ರಾಯ ಪರಯಾ ಭಕ್ತ್ಯಾ ರೈಕ್ವೋ ರಾಜ್ಞೇ ಚುಕೋಪ ಹ ।
ರೇ ಶೂದ್ರ ಮಾಮಕಂ ವೃತ್ತಂ ನ ಜಾನಾಸಿ ದುರೀಶ್ವರ ॥ ೯೩ ॥

ಗೃಹಾಣ ಶಕಟೀಮೇತಾಮಚ್ಚಾಮುಶ್ಚ ತರೀಯುತಾಂ ।
ವಸ್ತ್ರಾಣಿ ಮುಕ್ತಾಹಾರಾಂಶ್ಚ ಗಾಶ್ಚ ದೋಗ್ಧ್ರೀರಪಿ ಸ್ವಯಂ ॥ ೯೪ ॥

---

೯೦. ಆ ಸಾರಥಿಯ ಮಾತನ್ನು ಕೇಳಿ ಆಶ್ಚರ್ಯ ಹೊಂದಿ ಆ ರಾಜನು ರೈಕ್ವನನ್ನು ನೋಡಿ ಗೌರವಿಸಬೇಕೆಂದು ಬಹು ಶ್ರದ್ಧೆಯನ್ನು ಹೊಂದಿದನು.

೯೧-೯೪. ಆಗ ರಾಜನು ಎರಡು ಒಳ್ಳೆಯ ಹೇಸರಕತ್ತೆಗಳನ್ನು ರಥಕ್ಕೆ ಕಟ್ಟಿಸಿ ಅದರಲ್ಲಿ ಕುಳಿತುಕೊಂಡು ಮುತ್ತಿನ ಹಾರಗಳು, ರೇಷ್ಮೆಯ ಬಟ್ಟೆಗಳು, ಸಾವಿರ ಹಸುಗಳು ಇವನ್ನು ತೆಗೆದುಕೊಂಡು ಕಾಶ್ಮೀರ ದೇಶದಲ್ಲಿ ಆ ಯೋಗಿ ಇರುವಲ್ಲಿಗೆ ಹೋದನು. ಆ ದೊರೆಯು ಅವೆಲ್ಲವನ್ನೂ ಆ ರೈಕ್ವನಿಗೆ ಒಪ್ಪಿಸಿ ಮುಂದುಗಡೆಯಲ್ಲಿ ದೀರ್ಘದಂಡ ನಮಸ್ಕಾರ ಮಾಡಲು ಆ ರೈಕ್ವನು ಬಹು ಭಕ್ತಿಯಿಂದ ನಮ್ರನಾಗಿ ನಮಸ್ಕರಿಸುವ ರಾಜನ ಮೇಲೆ ಕೋಪ ಮಾಡಿಕೊಂಡನು. ಎಲೈ ಶೂದ್ರನಾದ ಕೆಟ್ಟ ದೊರೆಯೆ! ನನ್ನ ವಿಷಯವು ನಿನಗೆ ಗೊತ್ತಿಲ್ಲ. ಈ ರಥವನ್ನೂ, ಹೇಸರುಗತ್ತೆಗಳನ್ನೂ, ಬಟ್ಟೆಗಳನ್ನೂ, ಮುತ್ತಿನ ಹಾರಗಳನ್ನೂ, ಕರೆಯುವ ಹಸುಗಳನ್ನೂ ಕೂಡ ತೆಗೆದುಕೊಂಡು ಹೋಗು.

ಇತ್ಥಮಾಜ್ಞಪ್ತವಾನ್ ಭೂಯೋ ರೈಕ್ವೋಽಸ್ಯ ಭಯಮಾದಧೇ |
ತತಶ್ಶಾಪಭಯಾದ್ರಾಜಾ ತತ್ಪಾದಾಂಬುರುಹದ್ವಯಂ ||
ಗೃಹ್ಣನ್ ಭಕ್ತ್ಯಾ ಪ್ರಸೀದೇತಿ ಬ್ರಹ್ಮನ್ ಇತ್ಯೂಚಿವಾನ್ ಸ್ವಯಂ || ೯೫ ||

|| ರಾಜೋವಾಚ ||

ಭಗವಂಸ್ತವ ಮಾಹಾತ್ಮ್ಯಂ ಏತದತ್ಯದ್ಭುತಂ ಕುತಃ |
ಪ್ರಸನ್ನೀಭೂಯ ಭಗವನ್ ವ್ಯಾಖ್ಯಾಹಿ ಮಮ ತತ್ವತಃ || ೯೬ ||

|| ರೈಕ್ವ ಉವಾಚ ||

ಗೀತಾನಾಂ ಷಷ್ಠಮಧ್ಯಾಯಂ ಜಪಾಮಿ ಪ್ರತ್ಯಹಂ ನೃಪ |
ತೇನೈವ ತೇಜೋರಾಶಿರ್ಮೇ ಸುರಾಣಾಮಪಿ ದುಸ್ಸಹಃ || ೯೭ ||

|| ಶ್ರೀ ಶಿವ ಉವಾಚ ||

ಗೀತಾನಾಂ ಷಷ್ಠಮಧ್ಯಾಯಂ ರೈಕ್ವಾದಭ್ಯಸ್ಯ ಯತ್ನತಃ |
ಜಾನಶ್ರುತಿರ್ಮಹೀಪಾಲೋ ಮುಕ್ತಿಮಾಪ ತತಸ್ಸುಧೀಃ || ೯೮ ||

---

೯೫. ಆ ರೈಕ್ವನು ಹೀಗೆ ಅಪ್ಪಣೆಮಾಡುತ್ತ ರಾಜನ ಮೇಲೆ ಕೋಪಿಸಿಕೊಂಡು ಭಯಪಡಿಸಿದನು. ಅನಂತರ ರಾಜನು ಶಾಪದ ಭಯದಿಂದ ಅವನ ಪಾದಕಮಲಗಳನ್ನು ಹಿಡಿದುಕೊಂಡು ಪ್ರಸನ್ನನಾಗಬೇಕೆಂದು ಬೇಡಿಕೊಳ್ಳುತ್ತಾ ಇಂತೆಂದನು.

೯೬. ರಾಜನು ಹೇಳಿದನು-ಎಲೈ ಭಗವಂತನೆ! ನಿನ್ನ ಮಹಿಮೆಯು ಬಹು ಆಶ್ಚರ್ಯಕರವಾಗಿದೆ. ನೀನು ನನಗೆ ಪ್ರಸನ್ನನಾಗಿ ಅದರ ನಿಜಾಂಶವನ್ನು ಹೇಳು.

೯೭. ರೈಕ್ವನು ಹೇಳಿದನು–ಎಲೈ ದೊರೆಯೆ! ನಾನು ನಿತ್ಯವೂ ಗೀತೆಯ ಆರನೆಯ ಅಧ್ಯಾಯವನ್ನು ಜಪಿಸುತ್ತೇನೆ. ಅದರಿಂದ ನನ್ನ ತೇಜಸ್ಸು ದೇವತೆಗಳೂ ತಡೆಯಲು ಅಸಾಧ್ಯವಾಗಿದೆ.

೯೮. ಶಿವನು ಹೇಳಿದನು–ಆಗ ಆ ಜಾನಶ್ರುತಿಯೆಂಬ ರಾಜನು ಬಹು ಕಷ್ಟದಿಂದ ಆ ರೈಕ್ವನಿಂದ ಗೀತೆಯ ಆರನೆಯ ಅಧ್ಯಾಯವನ್ನು ಅಭ್ಯಾಸಮಾಡಿ ಮುಕ್ತಿಯನ್ನು ಪಡೆದನು.

ರೈಕ್ವೋಽಪಿ ಸುಖಮಾಲೇಭೇ ಮಾಣಿಕ್ಯೇಶ್ವರ ಸನ್ನಿಧೌ ।
ಗೀತಾನಾಂ ಷಷ್ಠಮಧ್ಯಾಯಂ ಜಪನ್ಮೋಕ್ಷಪ್ರದಾಯಕಂ ॥ ೯೯ ॥

ಮರಾಳ ವೇಷಮಾಸ್ಥಾಯ ವರದಾನಾರ್ಥಮಾಗತಾಃ ।
ದಿವೌಕಸೋಽಪಿ ನಿರ್ಜಗ್ಮುಃ ಸ್ವೈರಂ ವಿಸ್ಮಯಕಾರಿತಾಃ ॥ ೧೦೦ ॥

ಇಮಮಧ್ಯಾಯಮಪ್ಯೇಕಂ ಯೋ ಜಪೇತ್ಸತತಂ ನರಃ ।
ಸೋಽಪಿ ತತ್ಪದವೀಮೇತಿ ವಿಷ್ಣೋರೇವ ನ ಸಂಶಯಃ ॥ ೧೦೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಷಷ್ಠಾಧ್ಯಾಯ ಮಾಹಾತ್ಮ್ಯಂ ನಾಮ ಷಟ್‌ಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೯೯. ಆ ರೈಕ್ವನೂ ಕೂಡ ಮಾಣಿಕ್ಯೇಶ್ವರನ ಸನ್ನಿಧಿಯಲ್ಲಿ ಗೀತೆಯ ಆರನೆಯ ಅಧ್ಯಾಯವನ್ನು ಜಪಿಸುತ್ತ ಸುಖವಾಗಿದ್ದನು.

೧೦೦. ಹಂಸಗಳ ವೇಷವನ್ನು ಹೊಂದಿ ವರವನ್ನು ಕೊಡಲು ಬಂದಿದ್ದ ದೇವತೆಗಳೂ ಕೂಡ ಆಶ್ಚರ್ಯಪಟ್ಟು ವರಗಳನ್ನು ಕೊಟ್ಟು ಕೃತಾರ್ಥರಾಗಿ ಹೊರಟುಹೋದರು.

೧೦೧. ಈ ಅಧ್ಯಾಯವೊಂದನ್ನೇ ಯಾವಾಗಲೂ ಜಪಿಸುವವನು ಆ ವಿಷ್ಣುವಿನ ಸ್ಥಾನವಾದ ವೈಕುಂಠವನ್ನು ಹೊಂದುವುದರಲ್ಲಿ ಸಂಶಯವಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಆರನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಶಿವ ಉವಾಚ ॥

**ಅಪರ್ಣೇ ವರ್ಣಯಿಷ್ಯಾಮಿ ಸಪ್ತಮಾಧ್ಯಾಯಗೌರವಂ ।**
**ಯದಾಕರ್ಣ್ಯ ಸುಧಾಪೂರಪೂರ್ತಿರ್ಭವತಿ ಕರ್ಣಯೋಃ ॥ ೧ ॥**

**ಅಸ್ತಿ ಪಾಟಲಿಪುತ್ರಾಖ್ಯಂ ದುರ್ಗಮುತ್ತುಂಗಗೋಪುರಂ ।**
**ತತ್ರಾಭೂದ್ಬ್ರಾಹ್ಮಣೋ ನಾಮ ಶಂಕುಕರ್ಣೋ ನಯಾರ್ಣವಃ ॥ ೨ ॥**

**ವೈಶ್ಯವೃತ್ತಿಂ ಸಮಾಸಾದ್ಯ ಧನಮರ್ಜಿತವಾನ್ ಬಹು ।**
**ಪಿತೃನ್ನ ತರ್ಪಯಾಮಾಸ ಪೂಜಯಾಮಾಸ ನೋ ಸುರಾನ್ ॥ ೩ ॥**

---

## ನೂರ ಎಪ್ಪತ್ತೇಳನೆಯ ಅಧ್ಯಾಯವು



೧. ಶ್ರೀ ಶಿವನು ಹೇಳಿದನು–ಎಲೈ ಪಾರ್ವತಿಯೆ! ಗೀತೆಯ ಏಳನೆಯ ಅಧ್ಯಾಯದ ಗೌರವವನ್ನು ಹೇಳುತ್ತೇನೆ. ಕೇಳು. ಇದನ್ನು ಕೇಳಿದರೆ ಕಿವಿಗಳಿಗೆ ಅಮೃತವನ್ನು ಸುರಿಸಿದಂತಾಗುತ್ತದೆ.

೨. ಪಾಟಲೀಪುತ್ರವೆಂಬ ಒಂದು ಉತ್ತಮೋತ್ತಮವಾದ ಪಟ್ಟಣವಿರುವುದು. ಅದರಲ್ಲಿ ನೀತಿಶಾಸ್ತ್ರದಲ್ಲಿ ಪಾರಂಗತನಾದ ಶಂಕುಕರ್ಣನೆಂಬುವ ಒಬ್ಬ ಬ್ರಾಹ್ಮಣನಿದ್ದನು.

೩. ಅವನು ವೈಶ್ಯನ ಕೆಲಸವಾದ ವ್ಯಾಪಾರವನ್ನು ಅನುಸರಿಸಿ ಬಹುವಾದ ಹಣವನ್ನು ಸಂಪಾದಿಸಿದನು. ಆದರೆ ಪಿತೃಗಳಿಗೆ ತೃಪ್ತಿಪಡಿಸಲಿಲ್ಲ. ದೇವತೆಗಳನ್ನು ಪೂಜಿಸಲಿಲ್ಲ.

ಪಾರ್ಥಿವಾನ್ ಭೋಜಯಾಂಚಕ್ರೇ ಧನಾರ್ಜನಪರಾಯಣಃ |
ತುರೀಯ ಪಾಣಿಗ್ರಹಣಮಂಗಳಾರ್ಥಂ ಗೃಹಾಂತರಂ　　॥ ೪ ॥

ತನುಜೈರ್ಬಂಧುಭಿಸ್ಸಾರ್ಧಂ ಸಂಪ್ರತಸ್ಥೇ ಕದಾಚನ |
ರಜನ್ಯಾಮರ್ಧಕಲ್ಪಾಯಾಂ ನಿದ್ರಾಲೋಸ್ತಸ್ಯ ದೋಸ್ತಲಂ　　॥ ೫ ॥

ದಶತಿ ಸ್ಮ ತಮಾಗತ್ಯ ದಂದಶೂಕಃ ಕುತಶ್ಚನ |
ಸ ದಷ್ಟಮಾತ್ರೋಽಸಾಧ್ಯಾತ್ಮಾ ಮಣಿಮಂತ್ರೌಷಧಾದಿಭಿಃ |　　॥ ೬ ॥

ಕ್ಷಣೈಃ ಕತಿಪಯೈರೇವ ಗತಾಸುರಭವತ್ತತಃ
ಪಿಚುಮಂದದಳೈರ್ನಾಳೈರವಗುಂಠಿತವಿಗ್ರಹಂ　　॥ ೭ ॥

ತಮಾರೋಪ್ಯ ತರುಸ್ಕಂಧೇ ಸೂನವೋ ಗೃಹಮಾಯಯುಃ |
ತತಃ ಕಾಲೇನ ಬಹುನಾ ಪ್ರೇತೋ ಜಾತಸ್ಸರೀಸೃಪಃ　　॥ ೮ ॥

---

೪. ಹಣದ ಆಸೆಗೋಸ್ಕರ ರಾಜರಿಗೆ ಅನ್ನ ಹಾಕುತ್ತಿದ್ದನು. ಈತನು ಒಂದುಸಾರಿ ನಾಲ್ಕನೆಯ ಮದುವೆಯನ್ನು ಮಾಡಿಕೊಳ್ಳಲು ಮತ್ತೊಂದು ಊರಿಗೆ ಹೋಗಬೇಕಾಗಿ ಬಂದಿತು.

೫. ಮಕ್ಕಳೊಡನೆಯೂ ಬಂಧುಗಳೊಡನೆಯೂ ಕೂಡಿಕೊಂಡು ಒಂದು ಬಾರಿ ಹೊರಟನು. ಆಗ ಅರ್ಧರಾತ್ರಿಯ ಸಮಯವಾಗಲು ಹಾಗೆಯೇ ಮಲಗಿ ನಿದ್ರಿಸಿದನು.

೬ ಆಗ ಎಲ್ಲಿಂದಲೋ ಒಂದು ಸರ್ಪವು ಬಂದು ಆತನ ತೋಳನ್ನು ಕಚ್ಚಿತು. ಆ ಹಾವು ಕಡಿದೊಡನೆಯೇ ಚಿಕಿತ್ಸೆಮಾಡಿದರು. ಮಣಿ ಮಂತ್ರ ಓಷಧಿಗಳೊಂದರಿಂದಲೂ ಆ ವಿಷವು ನಿವಾರಣೆಯಾಗಲಿಲ್ಲ.

೭. ಆಗ ಕೆಲವು ಹೊತ್ತಿನಲ್ಲಿಯೇ ಅವನು ಸತ್ತುಹೋದನು. ಆವನ ಶವವನ್ನು ಬೇವಿನ ಸೊಪ್ಪು ಅದರ ಕಡ್ಡಿಗಳಿಂದ ಮುಚ್ಚಿ ಒಂದು ಮರದ ಮೇಲೆ ಇಟ್ಟರು.

೮. ಅನಂತರ ಆತನ ಮಕ್ಕಳು ಮನೆಗೆ ಹೋದರು. ಕೆಲವು ಕಾಲದಮೇಲೆ ಪ್ರೇತನಾಗಿದ್ದ ಆ ತಂದೆಯು ಸರ್ಪವಾಗಿ ಆದನು

ತದ್ವಾಸನಾ ನಿಬದ್ಧಾತ್ಮಾ ಪೂರ್ವವೃತ್ತಮನುಸ್ಮರನ್ ।
ವಂಚಯಿತ್ವಾ ಸುತಾನೇತಾನ್ ಪೂರಯಾಮಿ ಗೃಹಾದ್ಬಹಿಃ ॥ ೯ ॥

ಆತ್ಮನಃ ಕೋಟಿಸಂಖ್ಯಾಕಂ ಯತ್ರಾಸ್ತೇ ಸ್ಥಾಪಿತಂ ವಸು ।
ತತೋ ನಾರಾಯಣಬಲಿಂ ಶ್ರದ್ಧಯಾ ಪರಯಾನ್ವಿತಾ ॥ ೧೦ ॥

ಕೃತವಂತಃ ಪರೇತಸ್ಯ ಸೂನವೋ ಹಿ ದ್ವಿಜನ್ಮನಃ ।
ಏಕದಾ ಸ್ವಪ್ನಮಾಗತ್ಯ ಪೀಡಿತಸ್ಸರ್ಪಜನ್ಮನಾ ॥ ೧೧ ॥

ಅಭಾಷಯತ್ ಮನೋವೃತ್ತಿಂ ಪುತ್ರಾಣಾಮಗ್ರತಃ ಪಿತಾ ।
ತತಸ್ತೇ ಪ್ರಾತರುತ್ಥಾಯ ಪರಂ ವಿಸ್ಮಯಮಾಗತಾಃ ॥ ೧೨ ॥

ಇತರೇತರಮಾಖ್ಯಾಯ ಪಶ್ಯಂತಸ್ತೇ ನಿರಂಕುಶಾಃ ।
ಏಕಸ್ತತ್ರ ಪಿತುಸ್ನೇಹಾದುದ್ಧರ್ತುಮಪಿ ವಾಂಛತಿ ॥ ೧೩ ॥

---

೯. ಮನೆಯ ಹಣದಲ್ಲಿ ಆಸೆ ಹೊಂದಿದ್ದ ಆತನು ಹಾವಾದ ಮೇಲೆಯೂ ಮಕ್ಕಳಿಗೆ ವಂಚನೆಮಾಡಿ ಹೂತಿಟ್ಟಿದ್ದ ಹಣದ ವಾಸನೆಯಿಂದ ಮನೆಯ ಬಳಿಗೆ ಹೋದನು.

೧೦. ಆ ಕೋಟಿಸಂಖ್ಯೆಯ ಹಣವನ್ನು ಹೂತಿರುವಲ್ಲಿಯೇ ನಾನೂ ಆ ಮನೆಯ ಹೊರಗೆ ಇರುತ್ತೇನೆಂದು ಸಂಕಲ್ಪಿಸಿಕೊಂಡನು.

೧೧. ಹೀಗೆ ನಿಶ್ಚಯಿಸಿಕೊಂಡು ಆ ಮನೆಯ ಹೊರಗೆ ಸರ್ಪ ರೂಪದಿಂದ ಬಂದು ನಿಂತನು. ಆತನ ಮಕ್ಕಳು ಬಹು ಶ್ರದ್ಧೆಯಿಂದ ತಂದೆಗೆ ನಾರಾಯಣ ಬಲಿ ಎಂಬ ಪ್ರೇತಕೃತ್ಯವನ್ನು ಮಾಡಿದರು.

೧೨. ಒಂದುಸಾರಿ ಸರ್ಪದ ಜನ್ಮದಲ್ಲಿದ್ದಾಗ ತಂದೆಯು ಈ ಮಕ್ಕಳ ಕನಸಿನಲ್ಲಿ ಬಂದು ಅವರಿಗೆ ತನ್ನ ಮನಸ್ಸಿನ ಅಭಿಪ್ರಾಯವನ್ನು ತಿಳಿಸಿದನು.

೧೨-೧೩. ಅನಂತರ ಅವರು ಬೆಳಗ್ಗೆ ಎದ್ದು ಆಶ್ಚರ್ಯಪಡುತ್ತ ಒಬ್ಬರಿಗೊಬ್ಬರು ನಿರಂಕುಶರಾಗಿ ಮಾತನಾಡಿಕೊಳ್ಳುತ್ತಿದ್ದರು. ಅವರಲ್ಲಿ ಒಬ್ಬನು ತಂದೆಯ ಮೇಲಿನ ಪ್ರೀತಿಯಿಂದ ಅವನಿಗೆ ಆ ಕಷ್ಟವು ನಿವಾರಣೆಯಾಗಲು ಅವನು ಹೇಳಿದಂತೆ ಮಾಡಬೇಕೆನ್ನುತ್ತಾನೆ.

ಅನ್ಯೋ ದ್ರವಿಣಲೋಭೇನ ನಿಹಂತುಂ ಸರ್ಪಮೀಹತೇ ।
ಇತರಸ್ತು ಪಿತೃಸ್ನೇಹರಸಮೋಹಿತಮಾನಸಃ ॥ ೧೪ ॥

ಚಿರಾದಹಿಮಯೋ ನ ಸ್ಯಾಚ್ಚೋಚನ್ ರೋದಿತಿ ಕೇವಲಂ ।
ಮಧ್ಯಮಸ್ತು ತತಃ ಪುತ್ರೋ ವಂಚಯಿತ್ವಾ ಸಹೋದರೌ ॥ ೧೫ ॥

ಕೇನಾಪಿ ಚ್ಛದ್ಮನೋತ್ಥಾಯ ಜಗಾಮ ನಿಜಮಾಲಯಂ ।
ತತಶ್ಚೈಸ್ಸಮಾಹೂಯ ಗೃಹಿಣೀಂ ಗುಣಶಾಲಿನೀಂ ॥ ೧೬ ॥

ಕುದ್ದಾಲಹಸ್ತೋ ನಿರಗಾದ್ಯತ್ರಾಸ್ತೇ ಪನ್ನಗಃ ಪಿತಾ ।
ತೇನಾಽವಿದಿತವಿತ್ತೇನ ಚಿಹ್ನೈರ್ನಿಶ್ಚಿತ್ಯ ತತ್ವತಃ ॥ ೧೭ ॥

ಸ್ಥಾನಮಾಗತ್ಯ ತಂ ಹಂತುಂ ವಲ್ಮೀಕಂ ಲೋಭಬುದ್ಧಿತಃ ।
ಭಾರ್ಯಯೋತ್ಸಾರ್ಯತೇ ಮೃತ್ಸಾ ಸ್ವಯಂ ತೇನ ಚ ಖನ್ಯತೇ ॥ ೧೮ ॥

ನಿಖನ್ಯಮಾನಾದತ್ಯುಗ್ರೋ ವಲ್ಮೀಕಾದಹಿರುತ್ಥಿತಃ ।
ತತೋ ಗರಳಗಂಡೂಷೈಃ ನಿರ್ಗತೈರತಿದುಸ್ಸಹೈಃ ।
ದಿಶಃ ಕಬಳಯಾಂಚಕ್ರೇ ಫಣೀ ಫೂತ್ಕಾರಮಾರುತೈಃ ॥ ೧೯ ॥

---

೧೪-೧೯. ಮತ್ತೊಬ್ಬನು ಹಣದ ಆಸೆಯಿಂದ ಆ ಸರ್ಪವನ್ನು ಕೊಲ್ಲಲು ಅಪೇಕ್ಷಿಸುತ್ತಾನೆ. ಮತ್ತೊಬ್ಬನು ತಂದೆಯಲ್ಲಿನ ಸ್ನೇಹದಿಂದ ಮನೆಯೆಲ್ಲವೂ ಹಾವಿನ ಹುತ್ತವಾಗಿ ಪ್ರಸರಿಸಬಾರದೆಂದೂ ಅವನ ದುಃಖವನ್ನು ನೋಡಿ ಅಳುವನು. ಇಷ್ಟರಲ್ಲಿ ಮಧ್ಯದವನು ಮತ್ತಿಬ್ಬರು ಸಹೋದರರಿಗೂ ವಂಚಿಸಿ ಯಾವುದೋ ನೆಪಮಾಡಿಕೊಂಡು ಮನೆಗೆ ಹೊರಟುಹೋದನು. ಅನಂತರ ಹೆಂಡತಿಯನ್ನು ಗುಟ್ಟಾಗಿ ಕರೆದು ಕೈಯ್ಯಲ್ಲಿ ಗುದ್ದಲಿಯನ್ನು ತೆಗೆದುಕೊಂಡು ಸರ್ಪರೂಪನಾದ ತಂದೆಯಿದ್ದಲ್ಲಿಗೆ ಹೋದನು. ಅವನಿಗೆ ಆ ಹಣವಿರುವ ಜಾಗವು ಗೊತ್ತಿಲ್ಲದಿದ್ದರೂ ಗುರುತುಗಳಿಂದ ನಿರ್ಧರಿಸಿಕೊಂಡು ಅಲ್ಲಿದ್ದ ಹುತ್ತವನ್ನು ಹಣದಾಸೆಯಿಂದ ಅಗೆದನು ಈತನು ಮಣ್ಣನ್ನು ಗುದ್ದಲಿಯಿಂದ ಅಗೆಯುತ್ತಿದ್ದನು. ಹೆಂಡತಿಯು ಆ ಮಣ್ಣನ್ನು ತೆಗೆದುಹಾಕುತ್ತಿದ್ದಳು. ಅವರು ಈರೀತಿಯಾಗಿ ಅಗೆಯುತ್ತಿರುವಾಗಲೇ ಒಂದು ಉಗ್ರವಾದ ಸರ್ಪವು ಹೊರಗೆ ಬಂದಿತು. ಅದು ಇತರರು ತಡೆಯಲಾಗದ ಉಸಿರನ್ನು ಬಿಡುತ್ತ ತನ್ನ ಫೂತ್ಕಾರದಿಂದ ಎಲ್ಲಾ ಕಡೆಯನ್ನೂ ತುಂಬಿತು.

॥ ಅಹಿರುವಾಚ ॥

ಕಸ್ತ್ವಂ ಕಿಮರ್ಥಮಾಯಾತಃ ಕಥಂ ವಾ ಖನ್ಯತೇ ಬಿಲಂ । ॥ ೨೦ ॥

॥ ಪುತ್ರ ಉವಾಚ ॥

ಪುತ್ರಸ್ತೇಽಹಂ ಶಿವೋ ನಾಮ ಹೇಮಗ್ರಹಣಕೌತುಕೀ ।
ಆಗತೋ ರಾತ್ರಿಲಬ್ಧಸ್ಯ ಸ್ವಪ್ನಸ್ಯ ತು ಸುವಿಸ್ಮಿತಃ ॥ ೨೧ ॥

॥ ಶ್ರೀ ಶಿವ ಉವಾಚ ॥

ಇತ್ಥಮಾಕರ್ಣ್ಯ ಪುತ್ರಸ್ಯ ಗಿರಂ ಲೋಕವಿಗರ್ಹಿತಾಂ ।
ವಕ್ತುಮಾರಭತ ಸ್ಪಷ್ಟಂ ಹಸನ್ನುಚ್ಚೈಃ ಫಣೀ ತದಾ ॥ ೨೨ ॥

॥ ಅಹಿರುವಾಚ ॥

ಯದಿ ಪುತ್ರೋಽಸಿ ಮೇ ತೂರ್ಣಂ ಮಾಮುನ್ಮೋಚಯ ಬಂಧನಾತ್ ।
ನಿಕ್ಷೇಪಾರ್ಥಾಯ ಸಂಜಾತಂ ಪನ್ನಗಂ ಪೂರ್ವಜನ್ಮನಃ ॥ ೨೩ ॥

---

೨೦. ಸರ್ಪವು ಹೇಳಿತು- ಅಯ್ಯಾ! ನೀನು ಯಾರು? ಏತಕ್ಕೆ ಬಂದಿದ್ದೀಯೆ? ಈ ಬಿಲವನ್ನೇಕೆ ಅಗೆಯುತ್ತಿದ್ದೀಯೆ? ಯಾರು ನಿನ್ನನ್ನು ಕಳುಹಿಸಿದರು? ಅದೆಲ್ಲವನ್ನೂ ನನಗೆ ಹೇಳು.

೨೧. ಮಗನು ಹೇಳಿದನು- ನಾನು ನಿನ್ನ ಮಗನು. ನನ್ನ ಹೆಸರು ಶಿವನೆಂದು. ಇಲ್ಲಿರುವ ಹಣವನ್ನು ಆಶಿಸುತ್ತೇನೆ. ರಾತ್ರಿಯಲ್ಲಿ ತಿಳಿದ ಸ್ವಪ್ನ ವೃತ್ತಾಂತದಂತೆ ಬಂದಿದ್ದೇನೆ.

೨೨. ಪರಮೇಶ್ವರನು ಹೇಳಿದನು- ಮಗನು ಹೇಳಿದ ಈ ಅಯೋಗ್ಯವಾದ ಮಾತನ್ನು ಕೇಳಿ ಆ ಸರ್ಪವು ನಗುತ್ತ ಗಟ್ಟಿಯಾಗಿ ಎಲ್ಲರಿಗೂ ಕೇಳುವ ಹಾಗೆ ಇಂತೆಂದಿತು.

೨೩. ಸರ್ಪವು ಹೇಳಿತು-ನಾನು ಪೂರ್ವಜನ್ಮದಲ್ಲಿ ಇಟ್ಟಿದ್ದ ಈ ಹಣಕ್ಕೋಸ್ಕರವೇ ಹಾವಾಗಿ ಹುಟ್ಟಿದ್ದೇನೆ. ನೀನು ನನ್ನ ಮಗನಾಗಿದ್ದರೆ ಈ ಸರ್ಪಜನ್ಮದ ಬಂಧನವನ್ನು ನಿವೃತ್ತಿಮಾಡು.

॥ ಪುತ್ರ ಉವಾಚ ॥

ಪಿತಃ ಕಥಂ ತೇ ಮುಕ್ತಿಃ ಸ್ಯಾತ್ ಇತ್ಯಾಚಕ್ಷ್ವ ಮಮಾಗ್ರತಃ ।
ಪರಿತ್ಯಜ್ಯಾಽಖಿಲಂ ಲೋಕಂ ಆಗತೋಽಹಂ ಯಥಾ ನಿಶಿ ॥ ೨೪ ॥

॥ ಪಿತೋವಾಚ ॥

ನ ತೀರ್ಥಾನಿ ನ ದಾನಾನಿ ನ ತಪಾಂಸಿ ನ ಚಾಧ್ವರಾಃ ।
ಮಾಮುನ್ಮೋಚಯಿತುಂ ಪುತ್ರ ಪ್ರಭವಂತಿ ಚ ಸರ್ವಥಾ ॥ ೨೫ ॥

ಗೀತಾನಾಂ ಸಪ್ತಮಾಧ್ಯಾಯಮನ್ತರೇಣ ಸುಧಾಮಯಂ ।
ಜಂತೋರ್ಜರಾಮೃತ್ಯುದುಃಖನಿರಾಕರಣಕಾರಣಂ ॥ ೨೬ ॥

ಸಪ್ತಮಾಧ್ಯಾಯಿನಂ ವಿಪ್ರಂ ಮದೀಯೇ ಶ್ರಾದ್ಧವಾಸರೇ ।
ಭೋಜಯ ಶ್ರದ್ಧಯಾ ಪುತ್ರ ತೇನ ಮುಕ್ತಿರ್ನ ಸಂಶಯಃ ॥ ೨೭ ॥

ಅನ್ಯಾನಪಿ ದ್ವಿಜಾನ್ ವತ್ಸ ವೇದವಿದ್ಯಾವಿಶಾರದಾನ್ ।
ಸಂಭೋಜಯ ಯಥಾಶಕ್ತ್ಯಾ ಪರಮಶ್ರದ್ಧಯಾನ್ವಿತಃ ॥ ೨೮ ॥

---

೨೪. ಮಗನು ಹೇಳಿದನು- ಎಲೈ ತಂದೆಯೇ ! ನಿನಗೆ ಈ ಸರ್ಪಜನ್ಮ ದಿಂದ ವಿಮೋಚನೆಯಾಗುವುದು ಹೇಗೆ ಎಂಬುದನ್ನು ಹೇಳು. ಆದುದರಿಂದಲೇ ಜನಗಳು ಕಾಣದಂತೆ ರಾತ್ರಿಯಲ್ಲಿ ಇಲ್ಲಿಗೆ ಬಂದಿದ್ದೇನೆ.

೨೫. ತಂದೆಯು ಹೇಳಿದನು– ಎಲೈ ಮಗನೇ ! ತೀರ್ಥಗಳಾಗಲೀ, ದಾನಗಳಾಗಲೀ, ತಪಸ್ಸುಗಳಾಗಲೀ, ಯಾಗವೇ ಮುಂತಾದುವುಗಳಾಗಲೀ ನನ್ನ ಬಂಧನವನ್ನು ಬಿಡಿಸಲಾರವು.

೨೬–೨೭. ಗೀತೆಯ ಏಳನೆಯ ಅಧ್ಯಾಯವು ಅಮೃತಮಯವಾದುದು. ಜಂತುವಿನ ಮುಪ್ಪು, ಮೃತ್ಯು, ದುಃಖಗಳನ್ನು ನಾಶಮಾಡುವುದರಲ್ಲಿ ಅದೇ ಮುಖ್ಯಕಾರಣವು ಗೀತೆಯ ಏಳನೆಯ ಅಧ್ಯಾಯವನ್ನು ಪಾರಾಯಣ ಮಾಡುವ ಬ್ರಾಹ್ಮಣನನ್ನು ನನ್ನ ಶ್ರಾದ್ಧದ ದಿನ ಭೋಜನಮಾಡಿಸು. ಅದರಿಂದ ನನಗೆ ಮುಕ್ತಿಬರುವುದರಲ್ಲಿ ಸಂಶಯವಿಲ್ಲ.

೨೮. ಅಲ್ಲದೆ ವೇದವಿದ್ಯೆಯಲ್ಲಿ ಪಂಡಿತರಾದ ಇನ್ನೂ ಅನೇಕ ಜನ ಬ್ರಾಹ್ಮಣರನ್ನೂ ಶ್ರದ್ಧೆಯಿಂದ ಭೋಜನಮಾಡಿಸು.

॥ ಶ್ರೀ ಶಿವ ಉವಾಚ ॥

ಇತ್ಯಾಕರ್ಣ್ಯ ಪಿತುರ್ವಾಕ್ಯಮುರಗತ್ವಮುಪೇಯುಷಃ ।
ತೇ ಸರ್ವೇ ಸೂನವೋಽಕುರ್ವನ್ ಯಥಾಽಽದಿಷ್ಟಂ ತತೋಽಧಿಕಂ ॥ ೨೯ ॥

ಶಂಕುಕರ್ಣಸ್ತತಶ್ರೀಮಾನುತ್ಸೃಜ್ಯ ತನುಮೌರಗೀಂ ।
ಕೃತ್ವಾ ತು ಪುತ್ರಸಾದ್ದ್ರವ್ಯಂ ದಿವ್ಯದೇಹಮುಪಾದದೌ ॥ ೩೦ ॥

ವಿಭಜ್ಯ ದತ್ತಂ ಯತ್ಪಿತ್ರಾ ದ್ರವ್ಯಂ ತತ್ಕೋಟಿಸಂಖ್ಯಯಾ ।
ತೇನ ತೇ ಸೂನವಸ್ಸರ್ವೇ ಮುಮುದುಃ ಸಾಧುವೃತ್ತಯಃ ॥ ೩೧ ॥

ವಾಪೀಕೂಪಸರೋಯಜ್ಞ ದೇವಪ್ರಾಸಾದಹೇತವೇ ।
ಅನ್ನಶಾಲಾಂ ತತೋಽಕುರ್ವನ್ ಪುತ್ರಾಸ್ತೇ ಧರ್ಮಬುದ್ಧಯಃ ॥ ೩೨ ॥

ಸಪ್ತಮಾಧ್ಯಾಯಜಪತಃ ಮುಕ್ತಿಭಾಜೋಽಭವಂಸ್ತತಃ ।
ಷಷ್ಠಮಿಷ್ಟತಮಂ ಜ್ಞಾತ್ವಾ ನಿರ್ವಾಣಾರ್ಪಿತದೃಷ್ಟಯಃ ॥ ೩೩ ॥

---

೨೯. ಶ್ರೀ ಶಿವನು ಹೇಳಿದನು- ಇದನ್ನು ಕೇಳಿ ಆ ಮಕ್ಕಳೆಲ್ಲರೂ ಆ ಹಾವಿನ ಜನ್ಮವನ್ನು ಹೊಂದಿರುವ ತಂದೆಯು ಹೇಳಿದುದಕ್ಕಿಂತ ಹೆಚ್ಚಾಗಿಯೇ ಮಾಡಿದರು.

೩೦. ಆಗ ಆ ಶಂಕುಕರ್ಣನು ತನ್ನ ಹಾವಿನ ದೇಹವನ್ನು ಬಿಟ್ಟು ತನ್ನ ಹಣವನ್ನೆಲ್ಲಾ ಮಕ್ಕಳವನ್ನಾಗಿ ಮಾಡಿ ಉತ್ತಮ ದೇಹವನ್ನು ಹೊಂದಿದನು.

೩೧. ತಂದೆಯು ಕೊಟ್ಟ ಹಣವನ್ನು ತೆಗೆದುಕೊಂಡು ಕೋಟಿಗಟ್ಟಲೆಯಾಗಿ ವಿಭಾಗಮಾಡಿಕೊಂಡು ಆ ಮಕ್ಕಳು ಸಂತೋಷಗೊಂಡು ಸುಖವಾಗಿ ಇದ್ದರು.

೩೨. ಧರ್ಮಬುದ್ಧಿಯುಳ್ಳ ಆ ಮಕ್ಕಳು ಭಾವಿ, ಕೊಳ, ಸರೋವರ, ಯಾಗ ಮಂಟಪ, ದೇವಸ್ಥಾನ, ಅನ್ನ ಸತ್ರಗಳನ್ನೂ ಬಹುವಾಗಿ ಕಟ್ಟಿಸಿದರು-

೩೩. ಈ ರೀತಿಯಾಗಿ ಏಳನೆಯ ಅಧ್ಯಾಯವನ್ನು ಜಪಿಸಿ ಅವರೂ (ಆ ಮಕ್ಕಳೂ) ಮುಕ್ತಿಯನ್ನು ಹೊಂದಿದರು. ಆರನೆಯದೂ ಕೂಡ ಮುಕ್ತಿಯನ್ನು ಕೊಡತಕ್ಕದ್ದಾಗಿದೆ. ಅದನ್ನೂ ಓದುತ್ತಿದ್ದರು.

ಏತತ್ತೇ ಸಪ್ತಮಾಧ್ಯಾಯಮಾಹಾತ್ಮ್ಯಂ ಕಥಿತಂ ಶಿವೇ।
ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೩೪ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಸಪ್ತಮಾಧ್ಯಾಯ ಮಾಹಾತ್ಮ್ಯಂ ನಾಮ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೪. ಎಲೈ ಪಾರ್ವತಿಯೇ! ಈ ಏಳನೆಯ ಅಧ್ಯಾಯದ ಮಹಿಮೆಯನ್ನು ನಿನಗೆ ಹೇಳಿದ್ದೇನೆ. ಇದನ್ನು ಕೇಳುವುದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಏಳನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಶಿವ ಉವಾಚ ॥

ಅಷ್ಟಮಾಧ್ಯಾಯಮಾಹಾತ್ಮ್ಯಂ ಶೃಣು ವಕ್ಷ್ಯಾಮಿ ಪಾರ್ವತಿ ।
ಯಸ್ಯ ಶ್ರವಣಮಾತ್ರೇಣ ಪರಾಂ ಮುದಮವಾಪ್ಸ್ಯಸಿ ॥ ೧ ॥

ಆಮರ್ದಕಂ ಪುರಂ ನಾಮ್ನಾ ವಿಶ್ರುತಂ ದಕ್ಷಿಣಾಪಥೇ ।
ದ್ವಿಜನ್ಮಾ ಭಾವಶರ್ಮೇತಿ ತತ್ರಾಸೀದ್ಗಣಿಕಾಪತಿಃ ॥ ೨ ॥

ಖಾದನ್ಮಾಂಸಂ ಪಿಬನ್ಸೀಧುಂ ಚೋರಯನ್ಸಾಧುಸಂಪದಃ ।
ರಮಮಾಣಃ ಪರಸ್ತ್ರೀಭಿರಾಖೇಟಕಕುತೂಹಲೀ ॥ ೩ ॥

---

## ನೂರ ಎಪ್ಪತ್ತೆಂಟನೆಯ ಅಧ್ಯಾಯವು



೧. ಶ್ರೀ ಶಿವನು ಹೇಳಿದನು- ಗೀತೆಯ ಎಂಟನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ, ಕೇಳು. ಎಲೈ ಪಾರ್ವತಿಯೇ! ಅದನ್ನು ಕೇಳಿದ ಮಾತ್ರದಿಂದಲೇ ನಿನಗೆ ಬಹಳ ಸಂತೋಷವಾಗುತ್ತದೆ.

೨. ದಕ್ಷಿಣ ದೇಶದಲ್ಲಿ ಆಮರ್ದಕ ಪುರವೆಂಬ ಒಂದೂರಿರುವುದು. ಆ ಊರಿನಲ್ಲಿ ಭಾವಶರ್ಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಯಾವಾಗಲೂ ಸೂಳೆಯರಲ್ಲಿ ಆಸಕ್ತನಾಗಿರುತ್ತಿದ್ದನು.

೩. ಮಾಂಸವನ್ನು ತಿನ್ನುತ್ತ ಹೆಂಡವನ್ನು ಕುಡಿಯುತ್ತ ಸಜ್ಜನರ ಸಂಪತ್ತನ್ನು ಕದಿಯುತ್ತ ಪರಸ್ತ್ರೀಯರಲ್ಲಿ ರಮಿಸುತ್ತ ಯಾವಾಗಲೂ ಬೇಟೆಯಲ್ಲಿ ಪ್ರೀತಿಯುಳ್ಳವನಾಗಿದ್ದನು.

ಅತ್ಯವಾಹಯದತ್ಯುಗ್ರೋ ಗರೀಯಾಂಸಂ ಮನೋರಥಂ ।
ಸ ಕದಾಚಿತ್ಪಾನಗೋಷ್ಠ್ಯಾಂ ತಾಳೀಫಲಸುಧಾರಸಂ ॥ ೪ ॥

ನಿಪೀಯ ಕಂಠಪರ್ಯಂತಮಜೀರ್ಣೇನಾತಿಪೀಡಿತಃ ।
ಮೃತಃ ಕಾಲೇನ ಪಾಪಾತ್ಮಾ ಜಾತಸ್ತಾಲೀತರುರ್ಮಹಾನ್ ॥ ೫ ॥

ತಸ್ಯ ಚ್ಛಾಯಾಮುಪಾಶ್ರಿತ್ಯ ನಿಬಿಡಾಮತಿಶೀತಳಾಂ ।
ಅಭೂತಾಂ ದಂಪತೀ ಕೌಚಿತ್ ಬ್ರಹ್ಮರಾಕ್ಷಸತಾಂ ಗತೌ ॥ ೬ ॥

॥ ಶ್ರೀ ದೇವ್ಯುವಾಚ ॥

ಕಿಂಜಾತೀಯೌ ಕಿಮಾತ್ಮಾನೌ ಕಿಂವೃತ್ತಾವಿತ್ಯುದೀರಯ ।
ಕರ್ಮಣಾ ಕೇನ ವಾ ದೇವ ಬ್ರಹ್ಮರಾಕ್ಷಸತಾ ತಯೋಃ ॥ ೭ ॥

॥ ಶ್ರೀ ಶಿವ ಉವಾಚ ॥

ವೇದವೇದಾಂಗತತ್ವಜ್ಞಃ ಸರ್ವಶಾಸ್ತ್ರಾರ್ಥಕೋವಿದಃ ।
ಸದಾಚಾರೊಭವತ್ಕಶ್ಚಿತ್ ದ್ವಿಜೋ ನಾಮ ಕುಶೀಬಲಃ ॥ ೮ ॥

---

೪-೫. ಈ ರೀತಿಯಾಗಿ ತನ್ನ ಮನಸ್ಸಿಗೆ ಬಂದ ಅಪೇಕ್ಷೆಗಳನ್ನೆಲ್ಲಾ ಪೂರ್ತಿಮಾಡಿಕೊಳ್ಳುತ್ತಿದ್ದನು. ಒಂದು ಸಾರಿ ಪಾನಗೋಷ್ಠಿಯಲ್ಲಿ ತಾಳಫಲದ ರಸವನ್ನು ಬಹುವಾಗಿ ಕುಡಿದುದರಿಂದ ಅಜೀರ್ಣವಾಯಿತು. ಇದರಿಂದ ಅವನು ಸತ್ತು ಒಂದು ತಾಳೆಯಮರವಾಗಿ ಹುಟ್ಟಿದನು.

೬. ಆ ತಾಳೆಯ ಮರದ ನೆರಳನ್ನು ಆಶ್ರಯಿಸಿಕೊಂಡು ಹಿಂದಿನ ಪಾಪ ಕರ್ಮದಿಂದ ಬ್ರಹ್ಮ ರಾಕ್ಷಸರಾಗಿದ್ದ ಇಬ್ಬರು ಗಂಡಹೆಂಡತಿಯರಿದ್ದರು.

೭ ಪಾರ್ವತಿಯು ಹೇಳಿದಳು- ಎಲೈ ದೇವನೆ! ಅವರಿಬ್ಬರೂ ಯಾವ ಜಾತಿಯವರು? ಅವರ ಸ್ಥಿತಿಯು ಯಾವ ರೀತಿಯಾದುದು? ಯಾವ ನಡತೆಯವರು? ಯಾವ ಪಾಪದಿಂದ ಅವರು ಬ್ರಹ್ಮರಾಕ್ಷಸತನವನ್ನು ಹೊಂದಿದರು? ಎಂಬುದನ್ನು ಹೇಳು.

೮. ಶ್ರೀ ಶಿವನು ಹೇಳಿದನು- ವೇದ ವೇದಾಂಗಗಳನ್ನು ಬಲ್ಲ, ಎಲ್ಲಾ ಶಾಸ್ತ್ರಗಳನ್ನೂ ಓದಿರುವ ಸದಾಚಾರಿಯಾದ ಕುಶೀಬಲನೆಂಬೊಬ್ಬ ಬ್ರಾಹ್ಮಣನು ಇದ್ದನು.

ಜಾಯಾ ತು ತಸ್ಯ ಕುಮತಿನಾಮಧೇಯಾ ದುರಾಶಯಾ।
ಸ ಸಭಾರ್ಯೋ ಮಹಾದಾನಾನ್ಯಾದದಾನೋತಿಲೋಭವಾ‌ || ೯ ||

ಮಹೀಷೀಂ ಕಾಲಪುರುಷಂ ಹಯಾದೀನನುವಾಸರಂ।
ಅಪ್ರಯಚ್ಛ ದ್ವಿಜಾತಿಭ್ಯೋ ದಾನಲಬ್ಧಾಂ ವರಾಟಿಕಾಂ || ೧೦ ||

ಕಾಲೇನ ದಂಪತೀ ವೃತ್ತೌ ಬ್ರಹ್ಮರಾಕ್ಷಸರೂಪಿಣೌ।
ಪರ್ಯಟನ್ತೌ ಮಹೀಚಕ್ರಂ ಕ್ಷುತ್ತೃಷಾಕುಲವಿಗ್ರಹೌ || ೧೧ ||

ವಿಶಶ್ರಮತುರಾಗತ್ಯ ಮೂಲಂ ತಾಳತರೋಸ್ತತಃ।
ಕಥಮೇತನ್ಮಹಾದುಃಖಮಾವಯೋರುಪಗಚ್ಛತಿ || ೧೨ ||

ಕಥಂ ವಾ ಜಾಯತೇ ಮುಕ್ತಿರ್ಬ್ರಹ್ಮರಾಕ್ಷಸಯೋನಿತಃ।
ಇತಿಪೃಷ್ಟೋಗೃಹಿಣ್ಯಾಸೌ ಬ್ರಾಹ್ಮಣಸ್ಸಮಭಾಷತ || ೧೩ ||

---

೯. ಅವನ ಹೆಂಡತಿಯು ಕುಮತಿಯೆಂಬ ಹೆಸರಿನವಳೊಬ್ಬಳಿದ್ದಳು. ಅವಳು ಕೆಟ್ಟ ಮನಸ್ಸಿನವಳು. ಅವನು ಆ ಹೆಂಡತಿಯೊಡನೆ ಬಹು ಆಸೆಪಟ್ಟು ಕೊಂಡು ಮಹಾದಾನಗಳನ್ನು ತೆಗೆದುಕೊಳ್ಳುತ್ತಿದ್ದನು.

೧೦. ಎಮ್ಮೆ, ಕಾಲಪುರುಷ, (ಯಮ) ಕುದುರೆ ಇವುಗಳೇ ಮುಂತಾದು ವುಗಳ ರೂಪವಾದ ದುಷ್ಟದಾನಗಳನ್ನು ದಿನವೂ ತೆಗೆದುಕೊಳ್ಳುತ್ತಿದ್ದರು. ಆದರೆ ಆ ಪಾಪದ ಪರಿಹಾರಕ್ಕೋಸ್ಕರ ಬ್ರಾಹ್ಮಣರಿಗೆ ಒಂದು ಕಾಸನ್ನೂ ಕೊಡುತ್ತಲೇ ಇರಲಿಲ್ಲ.

೧೧. ಹೀಗಿರುತ್ತಲು ಅವರು ಸತ್ತು ಬ್ರಹ್ಮರಾಕ್ಷಸರಾದರು. ಅನಂತರ ಹಸಿವು ಬಾಯಾರಿಕೆಗಳಿಂದ ಕೂಡಿ ಅಲ್ಲಿ ಇಲ್ಲಿ ಸುತ್ತುತ್ತಿದ್ದರು.

೧೨-೧೩. ಕೊನೆಗೆ ಈ ತಾಳೆಯ ಮರದ ಕೆಳಗೆ ಬಂದು ಸುದಾರಿಸಿಕೊಂಡು ನಿಂತರು. ಆಗ ಹೆಂಡತಿಯು ಗಂಡನನ್ನು ಕುರಿತು ನಮ್ಮಗಳಿಗೆ ಈ ಮಹಾ ದುಃಖವು ಹೇಗೆ ಹೋದೀತು ? ಈ ಬ್ರಹ್ಮರಾಕ್ಷಸ ಜನ್ಮದಿಂದ ನಿವೃತ್ತಿಯಾಗಿ ಮುಕ್ತಿಯು ಹೇಗೆ ಬಂದೀತು ? ಎಂಬುದಾಗಿ ಕೇಳಲು ಆತನು ಆಕೆಯನ್ನು ಕುರಿತು ಇಂತೆಂದನು.

ಬ್ರಹ್ಮವಿದ್ಯೋಪದೇಶೇನ ವಿನಾಧ್ಯಾತ್ಮವಿಚಾರಣಂ ।
ವಿನಾ ಕರ್ಮವಿಧಿಜ್ಞಾನಾತ್ಕಥಂ ಮುಚ್ಯೇತ ಸಂಕಟಾತ್ ॥ ೧೪ ॥

॥ ಭಾರ್ಯೋವಾಚ ॥

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।
ಏತಾವದುಕ್ತೇ ತತ್ಪತ್ನ್ಯಾ ಯದಾಶ್ಚರ್ಯಮಭೂಚ್ಛೃಣು ॥ ೧೫ ॥

ಅಷ್ಟಮಾಧ್ಯಾಯಶ್ಲೋಕಾರ್ಧಶ್ರವಣಾತ್ಸತರುಸ್ತದಾ ।
ವಿಹಾಯತಾಳರೂಪಂ ತದ್ಬಭೂವ ದಿವ್ಯರೂಪವಾನ್ ॥ ೧೬ ॥

ಸದ್ಯೋ ಜ್ಞಾನವಿಧೂತಾತ್ಮಾ ವಿಮುಕ್ತಃ ಪಾಪಕಂಚುಕಾತ್ ।
ತನ್ಮಾಹಾತ್ಮ್ಯಾದ್ವಿನಿರ್ಮುಕ್ತೌ ದಂಪತೀ ತೌ ಬಭೂವತುಃ ॥ ೧೭ ॥

ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।
ಏತಾವದೇವ ಉಕ್ತಂ ಚ ದೈವಾನ್ನಿರ್ಗತ್ಯ ತನ್ಮುಖಾತ್ ॥ ೧೮ ॥

---

೧೪. ಎಲೈ ಭಾರ್ಯೆಯೇ ! ಬ್ರಹ್ಮವಿದ್ಯೆಯ ಉಪದೇಶವಾಗದಿದ್ದರೆ ಅಧ್ಯಾತ್ಮ ವಿಚಾರಣೆಗೆ ಅವಕಾಶವಿರುವುದಿಲ್ಲ. ಆ ಕರ್ಮವಿಧಿಯ ಜ್ಞಾನವು ಬರದಿದ್ದರೆ ಸಂಕಟವು ನಾಶವಾಗುವುದಿಲ್ಲ.

೧೫. ಆ ಬ್ರಹ್ಮವಾವುದು ? ಆ ಅಧ್ಯಾತ್ಮವಾವುದು ? ಆ ಕರ್ಮವು ತಾನೆ ಯಾವುದು ? ಎಂದು ಹೆಂಡತಿಯು ಕೇಳಲು ಆಗ ಅಲ್ಲಿ ಉಂಟಾದ ಆಶ್ಚರ್ಯವನ್ನು ಹೇಳುತ್ತೇನೆ. ಕೇಳು.

೧೬. ಅಷ್ಟಮಾಧ್ಯಾಯದ ಈ ಅರ್ಧ ಶ್ಲೋಕನ್ನು ಕೇಳಿದೊಡನೆಯೇ ಆ ತಾಳೆಯ ಮರವು ಆ ತಾಳೆಯ ಮರದ ರೂಪವನ್ನು ಬಿಟ್ಟು ದಿವ್ಯರೂಪವನ್ನು ಹೊಂದಿತು. ( ಕಿಂತದ್ಬ್ರಹ್ಮ ಎಂಬ ಪದ್ಯವು ಗೀತೆಯ ಅಷ್ಟಮಾಧ್ಯಾಯದ್ದು)

೧೭. ಅದರ ಮಹಿಮೆಯಿಂದಲೇ ಜ್ಞಾನವನ್ನು ಹೊಂದಿ ಈ ಕಾಶೀ ಬಲನೂ ಪಾಪವನ್ನು ಕಳೆದುಕೊಂಡನು. ಮತ್ತು ಅದರ ಮಹಿಮೆಯಿಂದಲೇ ಆತನ ಹೆಂಡತಿಯೂ ಪಾಪದಿಂದ ಮುಕ್ತಳಾದಳು.

೧೮-೧೯. “ ಕಿಂತದ್ಬ್ರಹ್ಮ, ಕಿಮಧ್ಯಾತ್ಮಂ ಕಿಂಕರ್ಮ ಪುರುಷೋತ್ತಮ ಎಂಬ ಇಷ್ಟು ಮಾತ್ರವೇ ಅವರ ಅದೃಷ್ಟದಿಂದ ಬಾಯಿಂದ ಹೊರಡಲು ಇವರಿಗೆ

ತತೋಂತರಿಕ್ಷಾದಾಯಾತಂ ಕ್ವಣತ್ಕಿಂಕಿಣಿಕಂ ಶುಭಂ ।
ದಿವಿ ದಿವ್ಯಾಂಗನಾವಕ್ತ್ರಚಂದ್ರಮಂಡಲಮಂಡಿತಂ ॥ ೧೯ ॥

ಅಪ್ಸರೋವದನಾಂಭೋಜಭ್ರಾಮ್ಯದ್ಭ್ರಮರಸಂಕುಲಂ ।
ನಿರ್ಮಥ್ಯಮಾನದುಗ್ಧಾಬ್ಧಿವೇಲಾಡಿಂಡಿಮಪಾಂಡುರೈಃ ॥ ೨೦ ॥

ಗಂಗಾತರಂಗಸುಭಗೈಶ್ಚಾಮರೈರುಪಶೋಭಿತಂ ।
ಗಾಯದ್ಗಂಧರ್ವಸುಭಗಂ ನೃತ್ಯತ್ಸುರವಧೂಶತಂ ॥ ೨೧ ॥

ದಿವ್ಯಂವಿಮಾನಮಾರೂಢೌ ದಂಪತೀ ಜಗ್ಮತುರ್ದಿವಂ ।
ಅತ್ರತ್ಯಂ ವೃತ್ತಮಖಿಲಮೇತದ್ವಿಸ್ಮಯಕಾರಕಂ ॥ ೨೨ ॥

ತತೋ ಲಿಲೇಖ ಮೇಧಾವೀ ಶ್ಲೋಕಾರ್ಥಮಿದಮಾದರಾತ್ ।
ಯಯೌ ವಾರಾಣಸೀಂ ನಾಮ ನಗರೀಂ ಮುಕ್ತಿದಾಯಿನೀಂ ॥ ೨೩ ॥

ಆರಾಧಯಿತುಮನ್ವಿಚ್ಛನ್ದೇವದೇವಂ ಜನಾರ್ದನಂ ।
ಸ ತತ್ರ ಕರ್ತುಮಾರೇಭೇ ತಪಃ ಪರಮುದಾರಧೀಃ ॥ ೨೪ ॥

---

ಒಳ್ಳೆ ದೇಹಬಂದುದಲ್ಲದೆ ಅಂತರಿಕ್ಷದಲ್ಲಿ ಒಳ್ಳೆಯ ಗೆಜ್ಜೆಗಳನ್ನು ಅಲ್ಲಾಡಿಸುತ್ತಿರುವ ಉತ್ತಮವಾದ ಸ್ತ್ರೀಯರಿಂದ ಕೂಡಿರುವ ವಿಮಾನವು ಬಂದಿತು.

೨೦-೨೩. ಆ ಅಪ್ಸರ ಸ್ತ್ರೀಯರ ಮುಖದ ಮೇಲೆ ವಾಸನೆಗೆ ಭ್ರಮರಗಳು ಸುತ್ತುತ್ತಿದ್ದುವು. ಕ್ಷೀರ ಸಮುದ್ರವನ್ನು ಕಡೆಯುವಾಗ ಹುಟ್ಟಿದ ನೊರೆಗಳಂತಿರುವ, ಗಂಗೆಯ ಅಲೆಗಳಂತಿರುವ, ಚಾಮರಗಳನ್ನು ಹೊಂದಿರುವ, ಗಂಧರ್ವರು ಗಾನ ಮಾಡುತ್ತಿರುವ, ಅಪ್ಸರ ಸ್ತ್ರೀಯರು ನರ್ತನಮಾಡುತ್ತಿರುವ, ಉತ್ತಮವಾದ ವಿಮಾನವನ್ನು ಆ ದಂಪತಿಗಳು ಹತ್ತಿಕೊಂಡು ಸ್ವರ್ಗಕ್ಕೆ ಹೋದರು. ಇಲ್ಲಿ ನಡೆದ ಈ ವಿಸ್ಮಯವನ್ನುಂಟುಮಾಡಿದುದನ್ನೆಲ್ಲವನ್ನೂ ಈ ಭಾವಶರ್ಮನು ನೋಡಿ ಆ ಶ್ಲೋಕಾರ್ಥವನ್ನು ಬರೆದುಕೊಂಡನು. ಅನಂತರ ಮುಕ್ತಿಯನ್ನು ಕೊಡುವ ವಾರಾಣಸಿಗೆ ಹೋದನು.

೨೪. ಅಲ್ಲಿ ಆ ದೇವದೇವನಾದ ಜನಾರ್ದನನ್ನು ಆರಾಧಿಸುವುದಕ್ಕೆ ಇಚ್ಛಿಸಿ ಉಗ್ರವಾದ ತಪಸ್ಸನ್ನು ಮಾಡಲುಪಕ್ರಮಿಸಿದನು.

ಅತ್ರಾಂತರೇ ಜಗನ್ನಾಥೋ ದೇವದೇವೋ ಜನಾರ್ದನಃ ।
ಪೃಷ್ಟೋದುಗ್ಧಾಬ್ಧಿ ಸುತಯಾ ಸಂಯೋಜ್ಯ ಕರಪಂಕಜಂ ।
ನಿದ್ರಾಪಥಂ ವಿಹಾಯೈವ ಸ್ಥೀಯತೇ ಕಥಮಿತ್ಯುತ ॥ ೨೫ ॥

॥ ಶ್ರೀ ಭಗವಾನುವಾಚ ॥

ಕಾಶ್ಯಾಂ ಭಾಗೀರಥೀತೀರೇ ತಪಸ್ಯತಿ ತರಾಂ ದ್ವಿಜಃ ।
ಭಾವಶರ್ಮಾತಿಮೇಧಾವೀ ಮದ್ಭಕ್ತಿರಸಪೂರಿತಃ ॥ ೨೬ ॥

ಜಪನ್ ಗೀತಾಷ್ಟಮಾಧ್ಯಾಯಶ್ಲೋಕಾರ್ಧಂ ನಿಯತೇಂದ್ರಿಯಃ ।
ಸಂತುಷ್ಟವಾನಹಂ ದೇವಿ ತದೀಯತಪಸಾ ಭೃಶಂ ॥ ೨೭ ॥

ಚಿರಂ ವಿಚಾರಯನ್ನೇವ ತತ್ತಪಸ್ಸದೃಶಂ ಫಲಂ ।
ದಾತುಮುತ್ಕಂಠಿತಮನಾ ವರ್ತೇಯ ಸಾಂಪ್ರತಂ ಪ್ರಿಯೇ ॥ ೨೮ ॥

॥ ಪಾರ್ವತ್ಯುವಾಚ ॥

ಹರಿಃ ಪ್ರಸನ್ನಭೂತೋಽಪಿ ಚಿಂತಾಂ ಪ್ರಾಪ ಯದಿ ಪ್ರಭೋ ।
ಭಾವಶರ್ಮಾ ಹರೇರ್ಭಕ್ತಃ ಕಿಂ ಪ್ರಾಪ ತತ್ಫಲಂ ಪುನಃ ॥ ೨೯ ॥

---

೨೫. ಈ ಮಧ್ಯದಲ್ಲಿ ಸಮುದ್ರರಾಜನ ಮಗಳಾದ ಲಕ್ಷ್ಮಿಯು ಕೈ ಮುಗಿದುಕೊಂಡು ವಿಷ್ಣುವನ್ನು ಕುರಿತು ಎಲೈ ಸ್ವಾಮಿಯೇ ! ನೀನು ನಿದ್ದೆಯನ್ನು ಬಿಟ್ಟು ಯೋಚಿಸುತ್ತಿರಲು ಕಾರಣವೇನೆಂದು ಕೇಳಿದಳು.

೨೬-೨೭. ಎಲೈ ದೇವಿಯೇ ! ಕಾಶಿಯಲ್ಲಿ ಭಾಗೀರಥಿಯ ದಡದಲ್ಲಿ ಮೇಧಾವಿಯು ನನ್ನಲ್ಲಿ ಅತಿಭಕ್ತಿಯನ್ನಿಟ್ಟುಕೊಂಡು ಬಹುವಾಗಿ ತಪಸ್ಸನ್ನು ಮಾಡುತ್ತಿದ್ದಾನೆ. ಗೀತೆಯ ಎಂಟನೆಯ ಅಧ್ಯಾಯದ ಒಂದು ಶ್ಲೋಕದ ಅರ್ಧವನ್ನು ಜಪಿಸುತ್ತಿರುವನು. ಅವನ ತಪಸ್ಸಿಗೆ ಬಹಳ ಸಂತೋಷಪಟ್ಟಿದ್ದೇನೆ.

೨೮. ಅವನ ತಪಸ್ಸಿಗೆ ಸರಿಯಾದ ಫಲವನ್ನು ಬಹು ಹೊತ್ತಿನಿಂದ ಯೋಚಿಸುತ್ತ ಅದನ್ನು ಕೊಡಲು ಈಗ ಆಸೆಯುಳ್ಳವನಾಗಿದ್ದೇನೆ.

೨೯. ಪಾರ್ವತಿಯು ಹೇಳಿದಳು- ಎಲೈ ಪ್ರಭುವೇ ! ಹರಿಯು ಆ ಭಾವಶರ್ಮನ ತಪಸ್ಸಿಗೆ ಪ್ರಸನ್ನನಾದರೂ ಯೋಚನೆ ಮಾಡುತ್ತಿದ್ದನು ಎಂದೆಯಲ್ಲ ! ಹರಿಭಕ್ತನಾದ ಭಾವಶರ್ಮನು ಹರಿಯಿಂದ ತಪಸ್ಸಿನ ಫಲವನ್ನು ಹೊಂದಿದನೇ ? ಹೇಳು.

|| ಶ್ರೀ ಮಹಾದೇವ ಉವಾಚ ||

ತತಃ ಪ್ರಸಾದಮಾಸಾದ್ಯ ಪ್ರಸನ್ನಸ್ಯ ಮುರದ್ವಿಷಃ ।
ಸುಖಮಾತ್ಯಂತಿಕಂ ಪ್ರಾಪ ಭಾವಶರ್ಮಾ ದ್ವಿಜೋತ್ತಮಃ || ೩೦ ||

ಲೇಭಿರೇ ಪದವೀಂ ಸರ್ವೇ ತದೀಯಾ ಅಪಿ ವಂಶಜಾಃ ।
ತತ್ಕರ್ಮವಶತೋ ಯೇ ವೈ ಸಂಪ್ರಾಪ್ತಾ ಯಾತನಾಂ ಪುರಾ || ೩೧ ||

ಏತದೇವಾಷ್ಟಮಾಧ್ಯಾಯಮಾಹಾತ್ಮ್ಯಂ ಕಿಂಚಿದೇವ ತೇ ।
ಕಥಿತಂ ಮೃಗಶಾಬಾಕ್ಷಿ ದ್ರಷ್ಟವ್ಯಂ ತು ಸದೈವ ಚ || ೩೨ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಅಷ್ಟಮಾಧ್ಯಾಯ ಮಾಹಾತ್ಮ್ಯಂ ನಾಮ ಅಷ್ಟಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೦. ಶ್ರೀ ಮಹಾದೇವನು ಹೇಳಿದನು-ಅನಂತರ ಪ್ರಸನ್ನನಾದ ಆ ಶ್ರೀ ವಿಷ್ಣುವಿನಿಂದ ಭಾವಶರ್ಮನು ಅನುಗ್ರಹವನ್ನು ಹೊಂದಿ ಕೊನೆಯ ಸುಖವಾದ ಮೋಕ್ಷವನ್ನು ಹೊಂದಿದನು.

೩೧. ಆ ಭಾವಶರ್ಮನು ಮಾಡಿದ ಪಾಪಕೆಲಸದಿಂದ ನರಕವನ್ನು ಹೊಂದಿದ್ದ ಅವನ ವಂಶದವರೆಲ್ಲರೂ ಅವನ ತಪಸ್ಸಿನಿಂದ ಉತ್ತಮಸ್ಥಾನವನ್ನು ಹೊಂದಿದರು.

೩೨. ಎಲೈ ಪಾರ್ವತಿಯೆ ! ಈ ಎಂಟನೆಯ ಅಧ್ಯಾಯದ ಮಹಿಮೆಯನ್ನು ಸ್ವಲ್ಪವನ್ನೇ ಹೇಳಿದ್ದೇನೆ. ಇದನ್ನು ಯಾವಾಗಲೂ ಸ್ಮರಿಸುತ್ತಿರಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಎಂಟನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವಸಪ್ತತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ನವಮಾಧ್ಯಾಯಮಾದರಾತ್ ।
ಸಂಶೃಣುಷ್ವ ಸ್ಥಿರೀಭೂಯ ತುಹಿನಾಚಲಕನ್ಯಕೇ ॥ ೧ ॥

ಅಸ್ತಿ ಮಾಹಿಷ್ಮತೀ ನಾಮ ನಗರೀ ನರ್ಮದಾತಟೇ ।
ತತ್ರಾಸೀನ್ಮಾಧವೋ ನಾಮ ದ್ವಿಜನ್ಮಾ ಸ ಶಿವದ್ವಿಜಃ ॥ ೨ ॥

ವೇದವೇದಾಂಗತತ್ತ್ವಜ್ಞಃ ಕಾಲೇ ಕಾಲೇಽತಿಥಿಪ್ರಿಯಃ ।
ಅರ್ಜಯಿತ್ವಾ ಬಹುಧನಂ ವಿದ್ಯಯೈವ ವಿಶುದ್ಧಧೀಃ ॥ ೩ ॥

---

## ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು- ಎಲೈ ಹಿಮವತ್ಪುತ್ರಿಯೇ! ಇನ್ನು ಮೇಲೆ ಒಂಭತ್ತನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಆದರದಿಂದ ಕೇಳು.

೨. ನರ್ಮದಾ ನದಿಯ ದಡದಲ್ಲಿ ಮಾಹಿಷ್ಮತಿಯೆಂಬ ಪಟ್ಟಣವೊಂದಿರುವುದು. ಅಲ್ಲಿ ಮಾಧವನೆಂಬ ಶಿವಭಕ್ತನಾದ ಬ್ರಾಹ್ಮಣನೊಬ್ಬನಿದ್ದನು.

೩. ಅವನು ವೇದವೇದಾಂಗಗಳಲ್ಲಿ ಅತಿ ಪಂಡಿತನು. ಅತಿಥಿಗಳಲ್ಲಿ ಪ್ರೀತಿಯುಳ್ಳವನಾಗಿ ಅವರನ್ನು ಆಯಾ ಕಾಲಗಳಲ್ಲಿ ಪೂಜಿಸುತ್ತಿದ್ದನು. ಇವನು ವಿದ್ಯೆಯಿಂದಲೇ ಬಹುವಾದ ಹಣವನ್ನು ಸಂಪಾದನೆ ಮಾಡಿದ್ದನು. ಮತ್ತು ಶುದ್ಧವಾದ ಬುದ್ಧಿಯೂ ಇದ್ದಿತು.

ಮಹಾನ್ತಮಧ್ವರಂ ಕರ್ತುಂ ಸಮಾರೇಭೇ ಕದಾಚನ।
ಆಲಂಭನಾರ್ಥಮಾನೀತಶ್ಛಾಗಃ ಪೂಜಿತವಿಗ್ರಹಃ ।
ವಾಚಮೂಚೇ ಹಸನ್ನುಚ್ಚೈರ್ಜಗದ್ವಿಸ್ಮಯಕಾರಕಂ ॥ ೪ ॥

॥ ಛಾಗ ಉವಾಚ ॥

ಕಿಮೇತೈರ್ಬಹುಭಿರ್ಯಜ್ಞೈರ್ವಿಧಿವದ್ವಿಹಿತೈರಪಿ ।
ವಿನಶ್ವರಫಲೈರ್ಜನ್ಮಜರಾಮರಣಹೇತುಭಿಃ ।
ಏತಾವತ್ಯಪಿ ಮೇ ವಿಪ್ರ ದಶೇಯಂ ದೃಶ್ಯತಾಮಿತಿ ॥ ೫ ॥

॥ ಶ್ರೀ ಶಿವ ಉವಾಚ ॥

ಛಾಗಸ್ಯೈವಂ ವಚೋರೇವ ಕುತೂಹಲಪರಂ ಜನಾಃ ।
ನಿಶಮ್ಯ ವಿಸ್ಮಯಂ ಯಾತಾಃ ಕ್ರತುಮಂಡಪವಾಸಿನಃ ॥ ೬ ॥

ತತೋ ಬದ್ಧಾಂಜಲಿಪುಟೋ ದ್ವಿಜಾತಿಸ್ಸ್ತಿಮಿತೇಕ್ಷಣಃ ।
ಪ್ರಣಮ್ಯ ಶ್ರದ್ಧದಾನಸ್ತಮಪೃಚ್ಛಚ್ಛಾಗಮಾದರಾತ್ ॥ ೭ ॥

---

೪. ಅವನು ಒಂದು ಸಾರಿ ಒಂದು ದೊಡ್ಡ ಯಾಗವನ್ನು ಮಾಡಲು ಮೊದಲು ಮಾಡಿ ಕೊಳ್ಳುವುದಕ್ಕೋಸ್ಕರ ಒಂದು ಹೋತವನ್ನು ತಂದು ಅದನ್ನು ಪೂಜಿಸಿದನು. ಆಗ ಆ ಹೋತವು ಪ್ರಪಂಚಕ್ಕೇ ಆಶ್ಚರ್ಯವಾಗುವಂತೆ ಗಟ್ಟಿಯಾಗಿ ಇಂತೆಂದಿತು.

೫. ಹೋತನು ಹೇಳಿತು- ಎಲೈ ಬ್ರಾಹ್ಮಣನೇ ! ವಿಧಿವತ್ತಾಗಿ ಮಾಡಿದ ಅನೇಕವಾದ ಈ ಯಾಗಗಳಿಂದ ತಾನೇ ಪ್ರಯೋಜನವೇನು ? ಇವೆಲ್ಲವೂ ನಾಶವಾಗತಕ್ಕ ಫಲವುಳ್ಳವಗಳು. ಮುಪ್ಪು, ಮರಣ, ದುಃಖಗಳನ್ನು ಕೊಡುತ್ತವೆ. ಇಷ್ಟನ್ನೂ ನಾನು ಮಾಡಿದ್ದೇನೆ. ಆದರೂ ನನ್ನ ಸ್ಥಿತಿಯನ್ನು ನೋಡು.

೬. ಶ್ರೀ ಶಿವನು ಹೇಳಿದನು- ಹೋತನ ಈ ಮಾತನ್ನು ಕೇಳಿ ಅಲ್ಲಿರುವ ಜನರೆಲ್ಲರೂ ಆಶ್ಚರ್ಯಪಟ್ಟರು. ಯಾಗ ಮಂಟಪದಲ್ಲಿದ್ದವರೂ ಅದೆಲ್ಲವನ್ನೂ ಕೇಳುತ್ತ ಆಶ್ಚರ್ಯಪಟ್ಟು ಕುತೂಹಲದಿಂದ ಕೂಡಿದರು.

೭. ಆಗ ಒಬ್ಬ ಬ್ರಾಹ್ಮಣನು ಆಸೆಯಿಂದಲೂ ಏಕಾಗ್ರತೆಯಿಂದಲೂ ಕೈ ಮುಗಿದುಕೊಂಡು ನಮಸ್ಕರಿಸಿ ಆ ಹೋತನನ್ನು ಕುರಿತು ಇಂತೆಂದು ಕೇಳಿದನು.

॥ ದ್ವಿಜ ಉವಾಚ ॥

ಕಿಂಜಾತೀಯಃ ಕಿಮಾತ್ಮಾ ತ್ವಂ ಕಿಂವೃತ್ತ ಇತಿ ಮೇ ವದ ।
ಕೇನ ವಾ ಕರ್ಮಣಾವಾಪ್ತಂ ಛಾಗತ್ವಮಿತಿ ಪೃಚ್ಛತಃ ॥ ೮ ॥

॥ ಛಾಗ ಉವಾಚ ॥

ಆಸಂ ಪುರಾ ದ್ವಿಜಾತೀನಾಮನ್ವಯೇ ಚಾತಿನಿರ್ಮಲೇ ।
ಆಹರ್ತಾ ಕ್ರತುಸಂಘಾನಾಂ ವೇದವಿದ್ಯಾವಿಶಾರದಃ ॥ ೯ ॥

ಏಕದಾ ಮಮ ಗೇಹಿನ್ಯಾ ಪುತ್ರರೋಗಪ್ರಶಾನ್ತಯೇ ।
ಛಾಗಃ ಪ್ರಯಾಚಿತೋ ಮತ್ತಃ ಚಂಡಿಕಾಭಕ್ತಿನಮ್ರಯಾ ॥ ೧೦ ॥

ತತೋ ನಿಹನ್ಯಮಾನಸ್ಯ ಚಂಡಿಕಾಮಂಡಪಸ್ಥಳೇ ।
ಛಾಗಸ್ಯ ಜನನೀ ಮಾಂ ತು ಶಶಾಪ ಬ್ರಹ್ಮವಾದಿನೀ ॥ ೧೧ ॥

---

೮. ಬ್ರಾಹ್ಮಣನು ಹೇಳಿದನು-ಅಯ್ಯಾ, ನೀನು ಯಾವ ಜಾತಿಯವನು ? ಯಾವ ಆತ್ಮನು ? ಯಾವ ಆಚಾರವುಳ್ಳವನು ? ಯಾವ ಕರ್ಮದಿಂದ ನಿನಗೆ ಈ ದೇಹವು ಬಂದಿತು? ನಾನು ಸಂದೇಹಪಟ್ಟು ಕೇಳುತ್ತಿದ್ದೇನೆ ಹೇಳು

೯. ಹೋತನು ಹೇಳಿತು- ನಾನು ಪೂರ್ವದಲ್ಲಿ ಒಂದು ಪವಿತ್ರವಾದ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದವನಾಗಿದ್ದೆನು. ವೇದವಿದ್ಯೆಯಲ್ಲಿ ಪಂಡಿತನಾಗಿ ಅನೇಕ ಯಾಗಗಳನ್ನು ಮಾಡಿದೆನು.

೧೦. ಒಂದು ಸಾರಿ ನನ್ನ ಮಗನಿಗೆ ರೋಗ ಬಂದಿತು. ಆಗ ಆ ರೋಗವು ವಾಸಿಯಾಗಲು ನನ್ನ ಹೆಂಡತಿಯು ಆ ರೋಗವು ಹೋದರೆ ಹೋತನನ್ನು ಬಲಿ ಕೊಡುವುದಾಗಿ ಚಂಡಿಕೆಗೆ ಹರಕೆ ಮಾಡಿಕೊಂಡಳು ಅದರಂತೆ ವಾಸಿಯಾಗಲು ನಾನು ಯಾಗಕ್ಕೋಸ್ಕರ ತಂದಿದ್ದ ಹೋತನನ್ನು ನನ್ನಿಂದ ತೆಗೆದುಕೊಂಡಳು.

೧೧. ಅದನ್ನು ಆ ಚಂಡಿಕೆಯ ಮಂಟಪದ ಬಳಿ ಕಡಿಯುತ್ತಿರಲು ಬ್ರಹ್ಮವಾದಿನಿಯಾದ ಅದರ ತಾಯಿಯು ನನಗೆ ಶಾಪವನ್ನು ಕೊಟ್ಟಿತು.

ಅಶಾಸ್ತ್ರೀಯಮಾರ್ಗೇಣ ಹಿಂಸನ್ ಮತ್ಸುತಂ ಯಜ್ಞಿಯಾನ್ ಪಶೂನ್ ಹಿಂಸಸಿ ।
ದ್ವಿಜಾತ್ಯಧಮ ತೇನ ತ್ವಮಜಾಯೋನಿಮವಾಪ್ಸ್ಯಸಿ ॥ ೧೨ ॥

ತತೋಽಹಂ ಪ್ರೇತ್ಯಕಾಲೇನ ಚ್ಛಾಗೋ ಭೂತ್ವಾ ದ್ವಿಜೋತ್ತಮ ।
ನಿಸ್ತೀರ್ಯ ಚಾನೇಕವಿಧಾಯೋನಿಸಂವೃತಯಾತನಾಃ ।
ಜಾತಿಸ್ಮರತ್ವಮಪ್ಯಸ್ತಿ ಪಶುಯೋನಿಮುಪೇಯುಷಃ ॥ ೧೩ ॥

॥ ವಿಪ್ರ ಉವಾಚ ॥

ತ್ವದೀಯಜನ್ಮಶುಶ್ರೂಷಾಕುತೂಹಲರಸೋನ್ಮುಖಂ ।
ಮನಸ್ಸರ್ವಾನ್ದ್ವಿಜಾನೇತಾನಪಿ ನಃ ಕಥಯಾಖಿಲಂ ॥ ೧೪ ॥

॥ ಛಾಗ ಉವಾಚ ॥

ಕದಾಚಿನ್ಮರ್ಕಟೋ ಭೂತ್ವಾ ನೀತಸ್ತುಂಡಿಕಶಿಕ್ಷಯಾ ।
ಕ್ರೀಡದ್ಭಿರ್ವೀಕ್ಷಿತೋ ಡಿಂಭೈಃ ನೃತ್ಯನ್ ಪ್ರತಿಗೃಹಾಂಗಣೇ ॥ ೧೫ ॥

---

೧೨. ಎಲೈ ಬ್ರಾಹ್ಮಣನೆ ! ನೀನು ಶಾಸ್ತ್ರ ಸಮ್ಮತವಲ್ಲದ ರೀತಿಯಿಂದ ನನ್ನ ಮಗನನ್ನು ಕೊಲ್ಲಲು ಅಪೇಕ್ಷಿಸುತ್ತೀಯೆ. ಆದ್ದರಿಂದ ಎಲೈ ಬ್ರಾಹ್ಮಣಾಧಮನೆ! ನೀನೂ ಕೂಡ ಆಡಾಗಿ ಹುಟ್ಟುತ್ತೀಯೆ. ಎಂದು ಶಪಿಸಿತು.

೧೩. ಅನಂತರ ಕೆಲವು ಕಾಲದಮೇಲೆ ಸತ್ತು ಆಡಾಗಿ ಹುಟ್ಟಿದೆನು. ಅದೇ ರೀತಿಯಾದ ಅನೇಕ ಜನ್ಮಗಳನ್ನು ಎತ್ತಿದನು. ಈಗ ಹೋತನಾಗಿ ಹುಟ್ಟಿದ್ದೇನೆ. ಆದರೂ ನನಗೆ ಜಾತಿಗಳನ್ನು ಸ್ಮರಿಸಿಕೊಳ್ಳುವ ಶಕ್ತಿಯು ಇರುತ್ತದೆ.

೧೪. ಬ್ರಾಹ್ಮಣನು ಹೇಳಿದನು- ಎಲೈ ಹೋತನೆ ! ನಿನ್ನ ಜನ್ಮದ ಸಂಬಂಧವಾದ ವಿಷಯವನ್ನು ಕೇಳಬೇಕೆಂಬ ಕುತೂಹಲವು ನನಗಿದೆ. ಅಲ್ಲದೆ ಇಲ್ಲಿರುವವರಿಗೆಲ್ಲರಿಗೂ ಆ ಆಸೆಯಿದೆ. ಎಲ್ಲವನ್ನೂ ಹೇಳಿ ಅದನ್ನು ನಿವೃತ್ತಿಮಾಡು.

೧೫-೧೬. ಹೋತನು ಹೇಳಿತು- ಎಲೈ ಬ್ರಾಹ್ಮಣನೇ ! ಒಂದು ಸಾರಿ ನಾನು ಕಪಿಯ ಜನ್ಮದಲ್ಲಿ ಹುಟ್ಟಿದೆನು. ಒಬ್ಬ ಹಾವಾಡಿಗನು ನನ್ನನ್ನು ಹಿಡಿದುಕೊಂಡು ನನಗೆ ಕುಣಿತವೇ ಮುಂತಾದ ಆಟಗಳನ್ನು ಕಲಿಸಿದನು. ಅವನು ನನ್ನನ್ನು ಮನೆಮನೆಗೂ ಕರೆದುಕೊಂಡು ಹೋಗಿ ಕುಣಿಸುತ್ತಿದ್ದನು.

ಉದಾರಾನಾತ್ಮನೋ ದಾರಾ್ ವಿಲೋಕ್ಯ ತನಯಾನಪಿ ।
ಕ್ರಿಯಾಪರಾಙ್ಮುಖೋ ಜಾತಃ ತ್ಯಕ್ತನರ್ತನಸಂಭ್ರಮಃ ॥ ೧೬ ॥

ತತೋ ವರ್ತುಲದಂಡೈಶ್ಚ ದುಸ್ಸಹೈರಾಹಿತುಂಡಿಕಃ ।
ಮಾಮುಚ್ಚೈಸ್ತಾಡಯಾಂಚಕ್ರೇ ರುಷಾ ಲೋಹಿತಲೋಚನಃ ॥ ೧೭ ॥

ತತೋಽಹಂ ಮೂರ್ಛಿತೋಽಭೂವಂ ಕ್ಷರತ್ ಕ್ಷತಜಸಂತತಿಃ ।
ಅಜಿಘ್ರನ್ನನ್ನಮುದಕಮಗಮಂ ಕಾಲಧರ್ಮತಾಂ ॥ ೧೮ ॥

ತತೋಽಹಮಾಸಂ ಶುನಕಃ ಪರಿಭ್ರಾಮ್ಯನ್ ಗೃಹೇ ಗೃಹೇ ।
ಕುಕ್ಷಿಂಭರಿರಹಂ ಮಾರ್ಗೇ ತ್ಯಕ್ತೋಚ್ಛಿಷ್ಟಾನ್ನಭಕ್ಷಕಃ ॥ ೧೯ ॥

ಕದಾಚಿದಾವಿಶಂ ಶ್ವಾ ಸನ್ ಆತ್ಮವೇಶ್ಮಮಹಾನಸಂ ।
ಬುಭುಕ್ಷಿತೋ ಭಕ್ಷಯಿತುಂ ಸ್ಥಾಲೀಸ್ಥಾಪಿತಮೋದನಂ ॥ ೨೦ ॥

---

ಒಂದುಸಾರಿ ಒಂದು ಮನೆಯಲ್ಲಿ ನನ್ನನ್ನು ಕುಣಿಸುತ್ತಿರಲು ಅಲ್ಲಿ ನನ್ನ ಪತ್ನಿಯೂ ಮಕ್ಕಳೂ ಇದ್ದರು. ಅವರೆಲ್ಲರನ್ನೂ ನೋಡಿದೆನು. ಆಗ ಅವರೆಲ್ಲರನ್ನೂ ನೋಡುತ್ತ ಈ ಕುಣಿಯುವಿಕೆಯನ್ನು ಬಿಟ್ಟು ಬಿಟ್ಟು ಸಂತೋಷಪಡುತ್ತಿದ್ದೆನು.

೧೭. ಆಗ ಆ ಹಾವಾಡಿಗನು ಕೋಪಗೊಂಡು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ನನ್ನನ್ನು ಗಂಟುಗಂಟಾದ ಒಂದು ಡೊಂಕು ಕೋಲಿನಿಂದ ಬಲವಾಗಿ ಹೊಡೆದನು.

೧೮. ಆ ಏಟನ್ನು ತಡೆಯಲಾರದೆ ನನಗೆ ಮೂರ್ಛೆ ಬಂದಿತು. ಮತ್ತು ಆ ಏಟನಿಂದ ರಕ್ತವು ಸುರಿಯುತ್ತಿದ್ದಿತು. ಅನಂತರ ಆ ನೋವನ್ನು ತಡೆಯಲಾರದೆ ಅನ್ನ ನೀರನ್ನು ತೆಗೆದುಕೊಳ್ಳದೆ ಕೊನೆಗೆ ಸತ್ತು ಹೋದೆನು.

೧೯. ಆಮೇಲೆ ನಾನು ನಾಯಿಯಾಗಿ ಹುಟ್ಟಿ ಮನೆಮನೆಗೂ ಸುತ್ತುತ್ತ ಎಸೆದ ಅನ್ನವನ್ನೂ ಎಂಜಲನ್ನವನ್ನೂ ತಿನ್ನುತ್ತ ಹೊಟ್ಟೆಹೊರೆದುಕೊಳ್ಳುತ್ತಿದ್ದೆನು.

೨೦. ಒಂದು ಸಾರಿ ನನಗೆ ಬಹು ಹಸಿವಾಗಲು ನನ್ನ ಮನೆಯ ಅಡಿಗೆಯ ಮನೆಗೆ ನುಗ್ಗಿ ತಪ್ಪಲೆಯಲ್ಲಿಟ್ಟಿದ್ದ ಅನ್ನವನ್ನು ತಿನ್ನಬೇಕೆಂದು ಪ್ರಯತ್ನಿಸಿದೆನು.

ಜಿಘ್ರನ್ ಭೂಮಿತಲಂ ಪಶ್ಯನ್ ದಿಶೋ ದಶ ಶನೈರ್ಭಯಾತ್ ।
ಶಂಕಮಾನೋ ಜನಂ ಸ್ವಾನ್ತೇ ಪಾರ್ಶ್ವೇ ಚ ವಿಲಿಹನ್ನಪಿ ॥ ೨೧ ॥

ತತಃ ಕದಾಚಿದಾಗತ್ಯ ವೀಕ್ಷಿತಸ್ತಸುಜೈರ್ನಿಜೈಃ ।
ಜಾಯಯಾ ಚ ಜರತ್ಯಾಹಂ ತಾಡಿತೋಲಗುಡಾದಿಭಿಃ ॥ ೨೨ ॥

ತತೋ ಭಗ್ನಕಟೀಯಂತ್ರೋ ಬಹುಶೋಣಿತಮುದ್ವಮನ್ ।
ನಿರ್ಜಗಾಮ ಬಹಿರ್ಗೇಹಾತ್ ಕಥಂ ಚಿನ್ಮೂರ್ಛಯಾಕುಲಃ ॥ ೨೩ ॥

ಅಂಗೇಷು ಪೂತಿಗಂಧೇಷು ಕ್ರಿಮಿಗರ್ಭೇಷು ಕಾಲತಃ ।
ತತಃ ಕದಾಚಿದಾಯಾತಃ ಪ್ರೇತ್ಯ ಶೌಂಡಿಕಸದ್ಮನಿ ॥ ೨೪ ॥

ಅಶ್ವೋಭವಮಹಂ ವಿದ್ಧಿ ತತಃ ಕಾಲಕ್ರಮಾದಿಹ ।
ಕದಾಚಿಚ್ಚ ತ್ವರೇ ತೇನ ಸಮಾನೀತೊ ಜನಾಕುಲೇ ॥ ೨೫ ॥

---

೨೧. ಆಗ ನೆಲವನ್ನು ಮೂಸಿನೋಡಿ ವಾಸನೆಯನ್ನು ತಿಳಿಯುತ್ತ ಹೆದರಿಕೆಯಿಂದ ಎಲ್ಲ ಕಡೆಯನ್ನೂ ನೋಡುತ್ತ ಮನಸ್ಸಿನಲ್ಲಿ ಯಾರು ಬರುವರೋ ಎಂದು ಸಂದೇಹಿಸುತ್ತಾ ಆ ಪಾತ್ರೆಗಳನ್ನು ನೆಕ್ಕುತ್ತಿದ್ದೆನು.

೨೨. ಆಮೇಲೆ ನನ್ನ ಮಕ್ಕಳೂ ಮುದುಕಿಯಾದ ನನ್ನ ಹೆಂಡತಿಯೂ ಬಂದು ನನ್ನನ್ನು ನೋಡಿ ದೊಣ್ಣೆ ಮುಂತಾದುವನ್ನು ತೆಗೆದುಕೊಂಡು ನನ್ನನ್ನು ಹೊಡೆದರು.

೨೩. ಆಗ ನನ್ನ ಸೊಂಟದ ಕೀಲು ಮುರಿದು ಹೋಯಿತು. ಬಹುವಾಗಿ ರಕ್ತವು ಬಾಯಲ್ಲಿ ಸುರಿಯಲಾರಂಭಿಸಿತು. ಆದರೂ ಜ್ಞಾನವಿಲ್ಲದವನಾಗಿಯೇ ಆ ಮನೆಯಿಂದ ಹೇಗೋ ಹೊರಗೆ ಬಂದೆನು.

೨೪-೨೫. ಆ ನಡು ಮುರಿದು ಹೋದುದರಿಂದ ಒಳಗೆ ದೇಹವು ಕೊಳೆತು ಹುಳು ಬಿದ್ದಿತು. ಆ ಕಷ್ಟದಿಂದಲೇ ಪ್ರಾಣವನ್ನು ಬಿಟ್ಟೆನು. ಅನಂತರ ಒಬ್ಬ ಹೆಂಡ ಮಾರುವವನ ಮನೆಯಲ್ಲಿ ಕುದುರೆಯಾಗಿ ಹುಟ್ಟಿದೆನು. ಆಮೇಲೆ ನಾನು ಮುದಿಯಾಗುತ್ತಲೂ ಸಂತೆಯಲ್ಲಿ ನನ್ನನ್ನು ಮಾರಲು ತಂದನು. ಆಗ ನಾನು

ವಿಕ್ರಯಾಯ ಜರಾಲೀಢಪತಯಾಳುರದಾವಳಿಃ ।
ಜಾಯಯಾ ದ್ವಾರಕಾಯಾತ್ರಾಂ ಕರ್ತುಮುದ್ಯತಯಾ ಸಕೃತ್ ॥ ೨೬ ॥

ಮೌಲ್ಯೇನಾಲ್ಪೀಯಸಾ ಕ್ರೀತುಂ ತುರಂಗಂ ಚೇಷ್ಟಮಾನಯಾ ।
ಜಗೃಹೇಹಂ ತಯಾ ದಾಮ್ನಿ ಹ್ಯಲ್ಪೇನ ವಸುನಾ ಜರ್ನ ॥ ೨೭ ॥

ಗಂತುಂ ಚಾರಭ್ಯತ ದ್ವಿತ್ರೈಃ ಪುತ್ರೈರಾರುಹ್ಯ ಮಾಂ ಸಮಂ ।
ಶನೈಶ್ಶನೈಸ್ಸರಸ್ತೀರೇ ಮಗ್ನೋಽಹಂ ಗುರುಕರ್ದಮೇ ॥ ೨೮ ॥

ತತ್ರಾಹಂ ಕುಂಠಿತಗ್ರೀವಮುಪತಂ ಕರ್ದಮಾಂತರೇ ।
ತಾಡ್ಯಮಾನೋ ಮುಹುಃ ಪುತ್ರೈರ್ಲಗುಡೋಪಲಪಾಣಿಭಿಃ ॥ ೨೯ ॥

ಉತ್ಥಾಪ್ಯಮಾನೋ ಬಹುಧಾ ಪ್ರಾಣಾನ್ಮೋಚಿತವಾನಹಂ ।
ತತೋ ನಿಶ್ಚಿತ್ಯ ಮಾಂ ತತ್ರ ಮೃತಂ ಭಗ್ನೋದ್ಯಮಾಃ ಸುತಾಃ ॥ ೩೦ ॥

---

ಮುದಿಯಾಗಿ ನನ್ನ ಹಲ್ಲೆಲ್ಲವೂ ಬೀಳುವ ಸ್ಥಿತಿಗೆ ಬಂದು ಅಲ್ಲಾಡುತ್ತಿದ್ದುವು. ಆಗ ನನ್ನ ಹೆಂಡತಿಯು ದ್ವಾರಕೆಯ ಯಾತ್ರೆಯನ್ನು ಮಾಡಲು ಮನಸ್ಸು ಮಾಡಿ ಒಂದು ಕುದುರೆಯನ್ನು ಹುಡುಕುತ್ತಿದ್ದಳು. ನನ್ನನ್ನು ನೋಡಿ ಸ್ವಲ್ಪವಾದ ಕ್ರಯಕ್ಕೇನೇ ನನ್ನನ್ನು ಕೊಂಡುಕೊಂಡು ಹಗ್ಗವನ್ನು ಹಾಕಿ ಈ ಮುದಿಯಾದ ನನ್ನನ್ನು ಹಿಡಿದುಕೊಂಡಳು.

೨೮. ಆಕೆಯು ಇಬ್ಬರು ಮೂವರು ಮಕ್ಕಳನ್ನು ನನ್ನಮೇಲೆ ಕೂರಿಸಿಕೊಂಡು ಪ್ರಯಾಣಮಾಡಿದಳು. ನಾನು ಮೆಲ್ಲಮೆಲ್ಲಗೆ ಹೋಗುತ್ತ ಒಂದು ಸರೋವರದ ತೀರದಲ್ಲಿ ಹೆಚ್ಚಾದ ಕೆಸರು ಸಿಕ್ಕಲು ಅದರಲ್ಲಿ ಹೂತುಕೊಂಡೆನು.

೨೯-೩೧. ಆಗ ನಾನು ಕತ್ತನ್ನು ಮಡಿಸಿಕೊಂಡು ಆ ಕೆಸರಿನಲ್ಲಿ ಬಿದ್ದುಬಿಟ್ಟೆನು. ಆಗ ನನ್ನ ಮಕ್ಕಳು ಕೈಗಳಿಂದಲೂ ದೊಣ್ಣೆಗಳಿಂದಲೂ ಹೊಡೆದೆಬ್ಬಿಸಲು ಮೊದಲು ಮಾಡಿದರು. ಆ ಏಟನ್ನು ತಡೆಯಲಾರದೆ ಅಲ್ಲಿಯೇ ಪ್ರಾಣಗಳನ್ನು ಬಿಟ್ಟೆನು ನಾನು ಅಲ್ಲಿ ಸತ್ತುಹೋದುದನ್ನು ನೋಡಿ ಮುಂದೆಹೋಗಲು ಸಾಧ್ಯವಿಲ್ಲದವರಾಗಿ ಆ ಮುದುಕಿಯಾದ ತಾಯಿಯನ್ನು

ಆಕೃಷ್ಯ ಮಾತರಂ ದೀನಾಂ ಪ್ರಾವೃತ್ಯ ನಿರ್ಯಯುರ್ಗೃಹಂ ।
ತತೋ ಸಂಪ್ರೇತ್ಯ ಬಹುನಾ ಕಾಲೇನ ಚ್ಛಾಗತಾಂ ಗತಃ ।
ನೀಸ್ತೀರ್ಣಾನೇಕಹೀನೋಚ್ಚಯೋನಿಸಂಪಾತಯಾತನಃ ॥ ೩೦ ॥

॥ ದ್ವಿಜ ಉವಾಚ ॥

ಕಿಮನೇನ ಮಹಾಯಾಗದುಃಖಜಾತೇನ ನಿತ್ಯಶಃ ।
ಯಥಾವದಂಜಸಾ ಮಹ್ಯಂ ಸುಖಮಾತ್ಯಂತಿಕಂ ಭವೇತ್ ॥ ೩೧ ॥

॥ ಛಾಗ ಉವಾಚ ॥

ಆಶ್ಚರ್ಯಂ ಕಥಯಿಷ್ಯಾಮಿ ಪುನರನ್ಯದಪಿ ದ್ವಿಜ ।
ಸ್ವಸ್ಥಮಾಪೃಚ್ಛಮಾನಸ್ಯ ತವಾಸ್ತಿ ಯದಿ ಕೌತುಕಂ ॥ ೩೩ ॥

ಅಸ್ತಿ ನಾಮ್ನಾ ಕುರುಕ್ಷೇತ್ರಂ ನಗರಂ ಮೋಕ್ಷದಾಯಕಂ ।
ಸೂರ್ಯವಂಶೋಽಭವತ್ತತ್ರ ಚಂದ್ರಶರ್ಮಾ ಮಹೀಪತಿಃ ॥ ೩೪ ॥

ಸೂರ್ಯೋಪರಾಗಸಮಯೇ ಶ್ರದ್ಧಯಾ ಪರಯಾನ್ವಿತಃ ।
ದಾನಂ ಸ ಕಾಲಪುರುಷಂ ದಾತುಂ ಸಮುಪಚಕ್ರಮೇ ॥ ೩೫ ॥

---

ಎಳೆದುಕೊಂಡು ಹಿಂತಿರುಗಿ ಮನೆಗೆ ಹೋದರು. ಆಮೇಲೆ ಅನೇಕವಾದ ಹೀನವಾದ ಮತ್ತು ನಿಕೃಷ್ಟವಾದ ಜನ್ಮಗಳನ್ನು ಹೊಂದಿ ಕೊನೆಗೆ ಬಹುಕಾಲದ ಮೇಲೆ ಈ ಹೋತವಾಗಿ ಹುಟ್ಟಿದೆನು.

೩೨. ಬ್ರಾಹ್ಮಣನು ಹೇಳಿದನು-ಎಲೈ ಹೋತನೇ! ನಿತ್ಯವೂ ಈ ದುಃಖಕರವಾದ ಮಹಾಯಾಗಗಳಿಂದ ಉಪಯೋಗವೇನು? ನನಗೆ ಉತ್ತಮವಾದ ಸುಖವು ಬೇಕು. ಅಂತಹುದನ್ನು ಸರಿಯಾಗಿ ಹೇಳು

೩೩. ಹೋತವು ಹೇಳಿತು-ಎಲೈ ಬ್ರಾಹ್ಮಣನೆ! ಮತ್ತೊಂದು ಆಶ್ಚರ್ಯಕರವಾದ ಸಂಗತಿಯನ್ನು ಹೇಳುತ್ತೇನೆ. ನಿನಗೆ ಅಪೇಕ್ಷೆಯಿದ್ದರೆ ಕೇಳು. ನೀನೂ ಬೇರೆ ಯೋಚನೆಯಿಲ್ಲದೆ ಕೇಳುವವನಂತೆ ಕಾಣುತ್ತೀಯೆ.

೩೪. ಮೋಕ್ಷವನ್ನು ಕೊಡುವ ಕುರುಕ್ಷೇತ್ರವೆಂಬ ಒಂದು ಪಟ್ಟಣವಿರುವುದು. ಆದರಲ್ಲಿ ಸೂರ್ಯವಂಶದಲ್ಲಿ ಹುಟ್ಟಿದ ಚಂದ್ರಶರ್ಮನೆಂಬ ರಾಜನಿದ್ದನು.

೩೫. ಒಂದುಸಾರಿ ಸೂರ್ಯಗ್ರಹಣ ಬರಲು ಆ ರಾಜನು ಬಹುವಾದ ಶ್ರದ್ಧೆಯಿಂದ ಕಾಲಪುರುಷ ದಾನವನ್ನು ಕೊಡಲು ಯತ್ನಿಸಿದನು.

ಸಮಾಹೂಯ ದ್ವಿಜನ್ಮಾನಂ ವೇದವೇದಾಂಗಪಾರಗಂ ।
ಸ್ನಾತುಂ ಪುಣ್ಯೋದಕೈಃ ಪುಣ್ಯೋ ಯಯೌ ಸಾರ್ಧಂ ಪುರೋಧಸಾ ।
ಅಥೋಜ್ಯೈಃ ಕಾಲಪುರುಷೋ ವಾಚಮೂಚೇ ಹಸನ್ನಿವ || ೩೬ ||

|| ಕಾಲಪುರುಷ ಉವಾಚ ||

ಅನ್ಯೇ ನೈವ ಪ್ರಗೃಹ್ಣಂತಿ ಕ್ಷೇತ್ರೇತ್ರಾಣ್ಯಪಿ ಕಿಂಚನ ।
ಸೂರ್ಯೋಪರಾಗಸಮಯೇ ಕುರುಕ್ಷೇತ್ರಾಭಿಧೇ ಸ್ಥಲೇ || ೩೭ ||

ದಾನಂ ಚ ಕಾಲಪುರುಷಂ ಜಿಘೃಕ್ಷಸಿ ಕಥಂ ದ್ವಿಜ ।
ಜ್ಞಾತ್ವಾಪಿ ನಿಶ್ಚಿತಂ ಸರ್ವಮೇತತ್ಪಾತಕಕಾರಕಂ ।
ಪ್ರವರ್ತಸೇ ಕಥಂ ಕರ್ತುಂ ಧನಲೋಭಾಂಧಯಾ ಧಿಯಾ || ೩೮ ||

|| ಭಾಗ ಉವಾಚ ||

ಇತ್ಥಮಾಕರ್ಣ್ಯ ತದ್ವಾಕ್ಯಂ ಜಗದ್ವಿಸ್ಮಯಕಾರಕಂ ।
ಕಿಮನೇನ ಮಹಾದಾನಭಯೇನೈತ್ಯವದದ್ದ್ವಿಜಃ || ೩೯ ||

---

೩೬. ಆಗ ದಾನ ಕೊಡಲು ಒಬ್ಬ ವೇದವೇದಾಂಗಗಳನ್ನು ತಿಳಿದಿರುವ ಬ್ರಾಹ್ಮಣನನ್ನು ಕರೆಸಿ ಆ ಕಾಲಪುರುಷ ವಿಗ್ರಹವನ್ನು ಅಲ್ಲಿಟ್ಟು ತಾನು ಪುಣ್ಯೋದಕದಲ್ಲಿ ಸ್ನಾನಮಾಡಿ ಬರಲು ಪುರೋಹಿತನೊಡನೆ ಹೋದನು. ಇತ್ತ ಆ ಕಾಲಪುರುಷನು ನಗುತ್ತ ಆ ಬ್ರಾಹ್ಮಣನನ್ನು ಕುರಿತು ಇಂತೆಂದನು

೩೭–೩೮. ಕಾಲಪುರುಷನು ಹೇಳಿದನು–ಎಲೈ ದ್ವಿಜನೆ! ಈ ಕ್ಷೇತ್ರದಲ್ಲಿ ಬೇರೆ ಯಾರೂ ಕೂಡ ಬಂದು ದಾನವನ್ನು ತೆಗೆದುಕೊಳ್ಳುವುದಿಲ್ಲ. ನೀನು ಈ ಕುರುಕ್ಷೇತ್ರದಲ್ಲಿ ಅದರಲ್ಲಿಯೂ ಸೂರ್ಯಗ್ರಹಣ ಸಮಯದಲ್ಲಿ ಕಾಲಪುರುಷನನ್ನು ತೆಗೆದುಕೊಳ್ಳಲು ಅಪೇಕ್ಷೆಯುಳ್ಳವನಾಗಿದ್ದೀಯಲ್ಲ! ಇದೇನು? ಇದು ಪಾಪಕೆಲಸವೆಂದು ಸರಿಯಾಗಿ ನಿನಗೆ ತಿಳಿದಿದ್ದರೂ ಹಣದ ಆಶೆಯಿಂದ ಈ ಕೆಟ್ಟ ಕೆಲಸವನ್ನು ಮಾಡಲು ಉದ್ಯುಕ್ತನಾಗಿರುತ್ತೀಯಲ್ಲ! ಏನೆಂದು ಹೇಳಲಿ!

೩೯. ಹೋತವು ಹೇಳಿತು-ಆ ಬ್ರಾಹ್ಮಣನು ಕಾಲಪುರುಷನ ಈ ಆಶ್ಚರ್ಯಕರವಾದ ಮಾತನ್ನು ಕೇಳಿ ಈ ಮಹಾದಾನದಿಂದ ಭಯಪಡುವುದೇತಕ್ಕೆ?

ಏವಂವಿಧಮಹಾದಾನಪಾತಕಾಗಾಧವಾರಿಧಿಂ ।
ಜಾನಾಮಿ ತರಿತುಂ ಸಮ್ಯಗುಪಾಯಮಹಮೇವ ಹಿ ॥ ೪೦ ॥

ತತಸ್ಸ್ನಾತ್ವಾ ಮಹೀಪಾಲಃ ಪರಿಧಾಯ ಚ ವಾಸಸೀ ।
ಶುಚಿಃ ಪ್ರಸನ್ನಹೃದಯಃ ಸಿತಮಾಲ್ಯಾನುಲೇಪನಃ ॥ ೪೧ ॥

ಅವಲಂಬ್ಯ ಕರಾಂಭೋಜಂ ಪಾರ್ಶ್ವವರ್ತಿಪುರೋಧಸಃ ।
ಸಮಾಯಯೌ ಸೇವ್ಯಮಾನಃ ಸ ತತ್ಕಾಲೋಚಿತೈರ್ಜನೈಃ ॥ ೪೨ ॥

ಸಮಾಗತ್ಯ ಚ ಭೂಪಾಲಃ ಪ್ರಾದಾತ್ತತ್ಕಾಲಪೂರುಷಂ ।
ಯಥೋಚಿತೇನ ವಿಧಿನಾ ತಸ್ಮೈ ಭಕ್ತ್ಯಾ ದ್ವಿಜನ್ಮನೇ ॥ ೪೩ ॥

ನಿರ್ಭಿದ್ಯ ಕಾಲಪುರುಷಹೃದಯಂ ನಿರ್ದಯೋದಯಃ ।
ಪಾಪಾತ್ಮಾ ನಿತ್ಯಯೌ ಕಶ್ಚಿಚ್ಚಾಂಡಾಲೋ ರಕ್ತಲೋಚನಃ ॥ ೪೪ ॥

ಕಿಂಚಿತ್ಪ್ರಾಸಿತಕಾಲಶ್ಚ ಪರನಿಂದಾರಸೋತ್ಸವೇ ।
ನಿಂದಾ ಚಂಡಾಲಿಕಾ ದೇಹಾತ್ ಪಾರ್ಶ್ವಮಾಗಾದ್ದ್ವಿಜನ್ಮನಃ ॥ ೪೫ ॥

---

೪೦. ಇಂತಹ ಮಹಾದಾನಗಳ ಪಾಪವು ಸಮುದ್ರದಷ್ಟಾದರೂ ಅವನ್ನು ದಾಟಲು ನಾನು ಉಪಾಯವನ್ನು ಚೆನ್ನಾಗಿ ಬಲ್ಲೆನು. ಎಂದನು.

೪೧-೪೨. ಇತ್ತ ಆ ರಾಜನು ಸ್ನಾನಮಾಡಿಕೊಂಡು ಮಡಿಬಟ್ಟೆಗಳನ್ನು ಧರಿಸಿಕೊಂಡು ಶುಚಿಯಾಗಿ ಬಿಳಿಯ ಹೂವು ಗಂಧಗಳನ್ನು ಧರಿಸಿಕೊಂಡು ಒಳ್ಳೆಯ ಮನಸ್ಸುಳ್ಳವನಾಗಿ ಪಕ್ಕದಲ್ಲಿರುವ ಪುರೋಹಿತನ ಕೈಯನ್ನು ಹಿಡಿದುಕೊಂಡು ಪರಿಜನರಿಂದ ಸೇವಿಸಲ್ಪಡುತ್ತ ಅಲ್ಲಿಗೆ ಬಂದನು.

೪೩. ಆ ರಾಜನು ಅಲ್ಲಿಗೆ ಬಂದು ಕ್ರಮವಾದ ವಿಧಿಯಿಂದಲೂ ಭಕ್ತಿಯಿಂದಲೂ ಆ ಬ್ರಾಹ್ಮಣನಿಗೆ ಆ ಕಾಲಪುರುಷ ದಾನವನ್ನು ಕೊಟ್ಟನು.

೪೪. ಆಗ ಆ ಕಾಲಪುರುಷ ಪ್ರತಿಮೆಯ ಎದೆಯನ್ನು ಸೀಳಿಕೊಂಡು ದಯಾಶೂನ್ಯನಾಗಿ ಹುಟ್ಟಿದ ಪಾಪಿಯಾದ ಕೆಂಪಗೆ ಕಣ್ಣುಗಳುಳ್ಳ ಒಬ್ಬ ಚಂಡಾಲನು ಬಂದನು.

೪೫. ಯಾವಾಗಲೂ ಇತರರನ್ನು ನಿಂದಿಸುವುದೇ ಸ್ವಭಾವವಾಗಿಯೂ ಆಸೆಯಾಗಿಯೂ ಉಳ್ಳ ಕಪ್ಪು ಬಣ್ಣದ ಒಂದು ನಿಂದೆಯೂ ಆ ಚಂಡಾಲನ ದೇಹದಿಂದ ಹೊರಟು ಆ ಬ್ರಾಹ್ಮಣನ ಪಕ್ಕಕ್ಕೆ ಹೆಣ್ಣುರೂಪದಿಂದ ಬಂದಿತು.

ಏಕಚಾಂಡಾಲಯುಗಳಂ ನಿರ್ಗತ್ಯಾರುಣಲೋಚನಂ ।
ತತಸ್ಸಂಚರಿತುಂ ಚಕ್ರೇ ಪ್ರಸಹ್ಯಾಂಗೇ ದ್ವಿಜನ್ಮನಃ ॥ ೪೬ ॥

ಗೀತಾನಾಂ ನವಮಾಧ್ಯಾಯಂ ಜಪಂತಂ ಚ ಹೃದಿ ಸ್ಥಿತಂ ।
ಕಂಪಮಾನಂ ದ್ವಿಜಂ ಕಿಂಚಿತ್ತೂಷ್ಣೀಂ ಪಶ್ಯತಿ ಭೂಪತೌ ॥ ೪೭ ॥

ಅಂತರ್ನಿದ್ರಾಣಗೋವಿಂದಂ ಕಂಪಮಾನಮಿವಾಂಬುಧಿಂ ।
ಮರುದಾಂದೋಳನೈರ್ನಿದ್ರಾ ದ್ವಿಜನ್ಮಾಪ ಸ್ವಸಂಶ್ರಯಂ ॥ ೪೮ ॥

ತತೋ ಗೀತಾಕ್ಷರೋದ್ಭೂತೈಃ ವೈಷ್ಣವೈಃ ಪರಿಪೀಡಿತಂ ।
ಪಲಾಯಮಾನಂ ಚಂಡಾಲಯುಗಳಂ ನಿಷ್ಫಲೋದ್ಯಮಂ ॥ ೪೯ ॥

ತನ್ನಿಶ್ಚಕ್ರಾಮ ವೇಗೇನ ದ್ವಿಜಾತೇಃ ಪಾರ್ಶ್ವವರ್ತಿ ಯತ್ ।
ಶರೀರೇ ವರ್ತಮಾನಂ ಚ ಪರನಿಂದಾರಸೋತ್ಸವಂ ॥ ೫೦ ॥

---

೪೬. ಈ ಎರಡು ಚಂಡಾಲ ಪ್ರಕೃತಿಗಳೂ ಕಣ್ಣನ್ನು ಕೆಂಪಗೆ ಮಾಡಿಕೊಂಡು ಆ ಬ್ರಾಹ್ಮಣನ ದೇಹದಲ್ಲಿ ಸಂಚರಿಸಲು ಮೊದಲಿಟ್ಟುವು.

೪೭. ಗೀತೆಯ ಒಂಭತ್ತನೆಯ ಅಧ್ಯಾಯವನ್ನು ಮನಸ್ಸಿನಲ್ಲಿಯೇ ಜಪಿಸುತ್ತಿರುವ ಸ್ವಲ್ಪ ನಡುಗುತ್ತಿರುವ ಆ ಬ್ರಾಹ್ಮಣನನ್ನು ರಾಜನು ಸುಮ್ಮನೆ ನಿಂತು ಕೊಂಡು ನೋಡುತ್ತಿದ್ದನು.

೪೮. ಆಗ ಬ್ರಾಹ್ಮಣನು ಸಮುದ್ರದಲ್ಲಿ ಮಲಗಿಕೊಂಡು ಗಾಳಿಯು ಬೀಸುವುದರಿಂದ ಎದ್ದ ಅಲೆಗಳಿಂದ ಅಲ್ಲಾಡುತ್ತಿರುವ ಸ್ವಾಮಿಯಾದ ಆ ಗೋವಿಂದನನ್ನು ದೇಹದಲ್ಲಿ ಹೊಂದಿದ್ದನು. ಆ ಜಪದಿಂದ ಅವನ ದೇಹದಲ್ಲಿ ಹಾಗೆ ಆ ಸ್ವಾಮಿಯಿದ್ದನು.

೪೯. ಆ ಮೇಲೆ ಆ ಗೀತಾಕ್ಷರಗಳಿಂದ ಹುಟ್ಟಿದ ವೈಷ್ಣವರು ಆ ಚಂಡಾಲರನ್ನು ತೊಂದರೆಪಡಿಸಲು ಅವರು ತಮ್ಮ ಪ್ರಯತ್ನವನ್ನು ಸಾಗಿಸಲಾರದೆ ಓಡಿದರು.

೫೦. ಆಗ ಆ ಬ್ರಾಹ್ಮಣನ ಪಕ್ಕದಲ್ಲಿದ್ದ ಆ ಚಂಡಾಲನೂ ದೇಹದಲ್ಲಿದ್ದ ಪರನಿಂದೆಯ ಆಸಕ್ತಿರೂಪಳಾದ ಚಂಡಾಲಳೂ ಓಡಿದರು.

ಇತ್ಥಂ ಕಲಿತವೃತ್ತಾಂತಃ ಪ್ರತ್ಯಕ್ಷಂ ಕ್ಷಿತಿವಲ್ಲಭಃ ।
ಪರ್ಯಪೃಚ್ಛದ್ದ್ವಿಜನ್ಮಾನಂ ವಿಸ್ಮಯಸ್ಮೇರಲೋಚನಃ ॥ ೫೧ ॥

॥ ರಾಜೋವಾಚ ॥

ಕಥಮಾಪದಿಯಂ ಘೋರಾ ನಿಸ್ತೀರ್ಣಾ ಮಹತೀ ತ್ವಯಾ ।
ಕಿಂ ಮಂತ್ರಂ ಜಪತಾ ವಿಪ್ರ ಕಂ ವಾ ಸಂಸ್ಮರತಾ ಸುರಂ ॥ ೫೨ ॥

ಕಃ ಪುಮಾನ್ಕಾ ಚ ಯೋಷಿತ್ಸಾ ಕಥಮೇತಾವುಪಸ್ಥಿತೌ ।
ಕಥಂ ಚ ಶಾಂತಿಮಾಪನ್ನಾವಿತ್ಯುದೀರಯ ಮೇ ದ್ವಿಜ ॥ ೫೩ ॥

॥ ದ್ವಿಜ ಉವಾಚ ॥

ಚಾಂಡಾಲಮೂರ್ತಿಮಾಸಾದ್ಯ ಮೂರ್ತಂ ಕಿಲ್ಬಿಷಮುಲ್ಬಣಂ ।
ಯೋಷಿನ್ಮೂರ್ತಿಮಯೀ ನಿಂದಾ ದ್ವಯಮೇತದವೈಮ್ಯಹಂ ॥ ೫೪ ॥

ಗೀತಾನಾಂ ನವಮಾಧ್ಯಾಮಂತ್ರಮಾಲಾ ಮಯಾ ಸ್ಮೃತಾ ।
ತನ್ಮಾಹಾತ್ಮ್ಯಮಿದಂ ಸರ್ವಂ ತ್ವಮವೇಹಿ ಮಹೀಪತೇ ॥ ೫೫ ॥

---

೫೧. ರಾಜನು ಹೀಗೆ ಕಣ್ಣೆದುರಿಗೇ ವಿಷಯವೆಲ್ಲವನ್ನೂ ನೋಡಿ ಆಶ್ಚರ್ಯ ಪಡುತ್ತ ಆ ಬ್ರಾಹ್ಮಣನನ್ನು ಕೇಳಿದನು.

೫೨. ರಾಜನು ಹೇಳಿದನು-ಎಲೈ ದ್ವಿಜನೆ! ಈ ಘೋರವಾದ ವಿಪತ್ತನ್ನು ನೀನು ಹೇಗೆ ದಾಟಿದೆ? ಯಾವ ಮಂತ್ರವನ್ನು ಜಪಿಸಿದೆ? ಅಥವಾ ಯಾವ ದೇವರನ್ನು ಸ್ಮರಿಸಿದೆ?

೫೩. ಎಲೈ ದ್ವಿಜನೇ! ಆ ಗಂಡಸು ಯಾರು? ಆ ಹೆಂಗಸು ಯಾರು? ಅವರೆಲ್ಲರೂ ಹೊರಟು ಹೋದುದು ಹೇಗೆ? ಇದೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

೫೪-೫೫. ಬ್ರಾಹ್ಮಣನು ಹೇಳಿದನು-ಈ ದಾನ ತೆಗೆದುಕೊಂಡದ್ದರಿಂದ ಬಂದ ಪಾಪವು ಚಂಡಾಲ ಆಕಾರವನ್ನು ಹೊಂದಿಯೂ ಅದರಿಂದ ಬಂದ ನಿಂದೆಯು ಚಂಡಾಲ ಹೆಂಗಸಿನ ರೂಪದಿಂದಲೂ ಈ ಎರಡು ರೂಪವಾಗಿ ಬಂದಿತೆಂದು ನನಗೆ ತಿಳಿದಿದೆ. ಆಗ ನಾನು ಗೀತೆಯ ಒಂಭತ್ತನೆಯ ಅಧ್ಯಾಯದ ಮಂತ್ರಗಳ ಸರಣಿಯನ್ನು ಸ್ಮರಿಸಿಕೊಂಡೆನು. ಅದ್ದರಿಂದ ಅವು ಹೊರಟು ಹೋದುವು. ಆ ನವಮಾಧ್ಯಾಯದ ಮಹಿಮೆಯೆಂದು ಇದನ್ನು ನೀನು ತಿಳಿ.

**ಗೀತಾನಾಂ ನವಮಾಧ್ಯಾಯಂ ಜಪಾಮಿ ಪ್ರತ್ಯಹಂ ನೃಪ ।**
**ನಿಸ್ತೀರ್ಣಾಶ್ಚಾಪದಸ್ತೇನ ಕುಪ್ರತಿಗ್ರಹಸಂಭವಾಃ　　|| ೫೬ ||**

**|| ಶ್ರೀ ಶಿವ ಉವಾಚ ||**

**ಅಭ್ಯಸ್ಯ ನವಮಾಧ್ಯಾಯಂ ರಾಜಾ ತಸ್ಮಾದ್ದ್ವಿಜನ್ಮನಃ ।**
**ತಾವುಭಾವಪಿ ಲೇಭಾತೇ ಪರಾಂ ನಿರ್ವೃತಿಮುತ್ತಮಾಂ　　|| ೫೭ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ನವಮಾಧ್ಯಾಯ ಮಾಹಾತ್ಮ್ಯಂ ನಾಮ ನವಸಪ್ತತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೫೬. ಎಲೈ ದೊರೆಯೆ! ಗೀತೆಯ ಒಂಭತ್ತನಯ ಅಧ್ಯಾಯವನ್ನು ಯಾವಾಗಲೂ ಜಪಿಸುತ್ತಿರುತ್ತೇನೆ. ಅದರಿಂದ ಈ ದುರ್ದಾನಗಳನ್ನು ತೆಗೆದು ಕೊಂಡ ಆಪತ್ತೆಲ್ಲವೂ ನಾಶವಾಗುತ್ತವೆ.

೫೭. ಶ್ರೀ ಶಿವನು ಹೇಳಿದನು-ಆಗ ಆ ರಾಜನು ಆ ಬ್ರಾಹ್ಮಣನಿಂದ ಗೀತೆಯ ಒಂಭತ್ತನೆಯ ಅಧ್ಯಾಯವನ್ನು ಅಭ್ಯಾಸ ಮಾಡಿದನು. ಇದರಿಂದ ಅವರಿಬ್ಬರೂ ಉತ್ತಮವಾದ ಮುಕ್ತಿ ಸುಖವನ್ನು ಹೊಂದಿದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಒಂಭತ್ತನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಶೀತ್ಯಧಿಕಶತತಮೋಽಧ್ಯಾಯಃ ॥



॥ ದೇವ್ಯುವಾಚ ॥

ಸರ್ವಜ್ಞ ಸರ್ವಚೈತನ್ಯ ಸರ್ವೇಶ್ವರ ಗಿರಾಂ ಗುರೋ ।
ಧನ್ಯಾಸ್ಮಿ ಶಿವ ಮಾನ್ಯೇತಿ ದೃಷ್ಟ್ವಾ ಮಾನ್ಯೇನ ಯತ್ತ್ವಯಾ ॥ ೧ ॥

ನಿರೂಪಿತಮಿದಂ ಪುಣ್ಯಂ ನವಮಾಧ್ಯಾಯವೈಭವಂ ।
ಅನೇಕವಿಸ್ಮಯಸ್ವಾದುಕಥಾನಕಮಯಂ ಮಧುಃ ॥ ೨ ॥

ಶೃಣ್ವತ್ಯಾ ಮಮ ದೇವೇಶ ನ ತೃಪ್ತಿರ್ಜಾತು ಜಾಯತೇ ।
ಅಕುಂಠಾ ಶ್ರವಣೋತ್ಕಂಠಾ ವರ್ಧತೇ ವೃಷಭಧ್ವಜ ॥ ೩ ॥

---

## ನೂರ ಎಂಭತ್ತನೆಯ ಅಧ್ಯಾಯವು



೧ ದೇವಿಯು ಹೇಳಿದಳು-ಎಲೈ ಸರ್ವಜ್ಞನೂ ಸರ್ವಚೈತನ್ಯನೂ ಸರ್ವೇಶ್ವರನೂ ವಿದ್ಯೆಗೆ ಅಧಿಪತಿಯೂ ಆದ ಶಿವನೆ! ಗೌರವಸ್ಥನಾದ ನೀನು ಗೌರವಸ್ಥಳೆಂದು ನನ್ನನ್ನು ಕಂಡುದರಿಂದ ನಾನು ಧನ್ಯಳಾಗಿದ್ದೇನೆ.

೨. ನೀನು ಒಂಭತ್ತನೆಯ ಅಧ್ಯಾಯದ ಪುಣ್ಯಪ್ರದವಾದ ಆ ವೈಭವವನ್ನು ಹೇಳಿದೆ. ಅದು ಬಹು ಆಶ್ಚರ್ಯಕರವಾಗಿರುತ್ತದೆ.

೩. ಎಲೈ ದೇವೇಶನೆ! ನಾನು ಎಷ್ಟು ಕೇಳುತ್ತಿದ್ದರೂ ತೃಪ್ತಿಯೇ ಉಂಟಾಗುವುದಿಲ್ಲ. ನನಗೆ ಕೇಳಬೇಕೆಂಬ ಆಸೆಯು ಕಡಿಮೆಯಾಗದೆ ದಿನದಿನಕ್ಕೂ ಹೆಚ್ಚುತ್ತಿದೆ.

ಅಸೀಮಾ ಮಹಿಮಾಂಭೋಧಿರ್ಗೀತಾನಾಂ ಶ್ರುತಿಜೀವಿತಂ ।
ತತ್ರಾಪಿ ದಶಮಾಧ್ಯಾಯಂ ಪ್ರಧಾನಂ ಮುನಯೋ ಜಗುಃ ॥
ತಮುದ್ದಿಶ್ಯ ಮಹಾಧ್ಯಾಯಮಭಿದೇಹಿ ಕಥಾನಕಂ ॥ ೪ ॥

॥ ಶ್ರೀ ಶಿವ ಉವಾಚ ॥

ಶೃಣು ಸುಶ್ರೋಣಿ ನಿಶ್ರೇಣಿಂ ಸ್ವರ್ಗದುರ್ಗಸ್ಯ ದುರ್ಲಭಾಂ ।
ಸಭಾಮಿವ ಪ್ರಭಾವಾನಾಂ ಪಾವನೀಂ ಪರಮಾಂ ಕಥಾಂ ॥ ೫ ॥

ಆಸೀತ್ಕಾಶೀಪುರೇ ವಿಪ್ರಃ ಪುಣ್ಯಕೀರ್ತಿಪರಾಯಣಃ ।
ಪ್ರಶಾಂತಚೇತಾ ನಿರ್ಮುಕ್ತಹಿಂಸಾಕಾರ್ಕಶ್ಯಸಾಹಸಃ ॥ ೬ ॥

ನಿವೃತ್ತಿನಿರತೋ ನಿತ್ಯಂ ಜಿತೇಂದ್ರಿಯತಯಾ ತಥಾ ।
ಧೀರಧೀರಿತಿ ವಿಖ್ಯಾತೋ ನಂದೀವ ಮಯಿ ಭಕ್ತಿಮಾನ್ ॥ ೭ ॥

---

೪. ಗೀತೆಯ ಮಹಿಮೆಯು ವೇದಗಳಿಂದ ಪೋಷಿಸಲ್ಪಟ್ಟು ಬಹು ಹೆಚ್ಚಾದುದಾಗಿದೆ. ಈ ಗೀತೆಯೊಳಗೆ ಹತ್ತನೆಯ ಅಧ್ಯಾಯವು ಬಹು ಮುಖ್ಯವಾದುದೆಂದು ಹೇಳುತ್ತಾರೆ. ಆ ಅಧ್ಯಾಯವನ್ನು ಉದ್ದೇಶಿಸಿಕೊಂಡು ಅದರ ಕಥೆಗಳನ್ನೂ ಮಹಿಮೆಯನ್ನೂ ಹೇಳು.

೫. ಶ್ರೀ ಶಿವನು ಹೇಳಿದನು– ಎಲೈ ಸುಶ್ರೋಣಿಯೇ! ಸ್ವರ್ಗವೆಂಬ ದುರ್ಗಕ್ಕೆ ಸೋಪಾನ ರೂಪವಾದ ಮಹಿಮೆಗಳಿಗೆ ಗುಂಪಾದ ಪಾವನವಾದ ಆ ಗೀತೆಯ ಉತ್ತಮ ಕಥೆಯನ್ನು ಕೇಳು.

೬. ಕಾಶೀಪಟ್ಟಣದಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಒಳ್ಳೆಯ ಯಶಸ್ಸುಳ್ಳವನು. ಶಾಂತನು ಹಿಂಸಾ ಕಾರ್ಯಗಳನ್ನಾಗಲೀ, ಸಾಹಸ ಕಾರ್ಯಗಳನ್ನಾಗಲೀ ಮಾಡುತ್ತಿರಲಿಲ್ಲ.

೭. ಅವನು ದಾನ ತೆಗೆದುಕೊಳ್ಳುತ್ತಿರಲಿಲ್ಲ. ಜಿತೇಂದ್ರಿಯನಾಗಿದ್ದನು. ಆದ್ದರಿಂದಲೇ ಅವನಿಗೆ ಜನರು ಧೀರಧೀ ಎಂದು ಹೆಸರಿಟ್ಟಿದ್ದರು. ನಂದಿಯು ಹೇಗೆ ನನ್ನಲ್ಲಿ ಭಕ್ತಿಯನ್ನಿಟ್ಟಿರುವನೋ ಹಾಗೇ ಅವನೂ ನನ್ನಲ್ಲಿ ಭಕ್ತಿಯನ್ನು ಇಟ್ಟಿದ್ದನು.

ನಿಸ್ತೀರ್ಣನಿಗಮಾಂಭೋಧಿಃ ಸರ್ವಶಾಸ್ತ್ರಾರ್ಥಕೋವಿದಃ ।
ತಸ್ಯ ಧ್ಯಾನಪರಾಧೀನಚೇತಸಃ ಪ್ರತಿಗಚ್ಛತಃ ॥ ೮ ॥

ಅಂತರಾತ್ಮನಿ ನಿರ್ಮಗ್ನಮನಸಸ್ತತ್ತ್ವಚಕ್ಷುಷಃ ।
ಕರಾವಲಂಬನಂ ತಸ್ಯ ಧಾವನ್ ಪ್ರೀತ್ಯಾ ದದಾಮ್ಯಹಂ ॥ ೯ ॥

ಕದಾಚನ ಚಮತ್ಕಾರಕಾರಕಂ ವಿಮನಾ ಮುನಿಃ ।
ಆಚಾಂತಃ ಕಿಂಚಿನ್ನಾಸಾಗ್ರೇ ಪರಮಾನಂದಮೇದುರಾಂ ॥ ೧೦ ॥

ದೃಶಮಾಸಾದ್ಯ ನಿದ್ರಾಣಕರಣೋಯಮವಸ್ಥಿತಃ ।
ಉಪಧಾಯ ವಿಶಾಲಾಕ್ಷಿ ವಿಶಾಲಾಂ ದ್ವಾರದೇಹಳೀಂ ॥ ೧೧ ॥

ಅಶೇತ ನಿಶಿ ನಿಶ್ಯಂಕಂ ತಾವಲ್ಲಂಬೇಕ್ಷಣಃ ಕ್ಷಣಂ ।
ಮಾಮಪೃಚ್ಛದ್ಭೃಂಗಿರಿಟಿಃ ಪ್ರಣಮ್ಯ ಪಾದಪಂಕಜಂ ॥ ೧೨ ॥

---

೮–೯. ಅವನು ವೇದಗಳೆಂಬ ಸಮುದ್ರವನ್ನು ದಾಟಿದ್ದನು. ಎಲ್ಲಾ ಶಾಸ್ತ್ರಗಳನ್ನೂ ಓದಿ ಪಂಡಿತನಾಗಿದ್ದನು. ಅವನು ಧ್ಯಾನಮಾಡುತ್ತ ಅಂತರಾತ್ಮನಲ್ಲಿ ಮನಸ್ಸಿಟ್ಟು ತತ್ತ್ವವನ್ನು ಯೋಚಿಸುತ್ತ ಹೋಗುವ ಸಮಯದಲ್ಲಿ ನಾನು ಜಾಗ್ರತೆಯಾಗಿ ಓಡಿಹೋಗಿ ಕರಾವಲಂಬನವನ್ನು ಕೊಡುತ್ತಿದ್ದೆನು.

೧೦-೧೧. ಹೀಗಿರಲು ಒಂದು ಸಾರಿ ಒಂದು ಚಮತ್ಕಾರವು ನಡೆಯಿತು. ಒಂದು ಸಾರಿ ಆಚಮನಮಾಡಿ ಮೂಗಿನ ತುದಿಯಲ್ಲಿ ಪರಮಾನಂದ ಹೇತುಕವಾದ ದೃಷ್ಟಿಯನ್ನಿಟ್ಟು ನಿದ್ದೆಮಾಡುವವನಂತೆ ಬೇರೆ ಮನಸ್ಸಿನಿಂದಿದ್ದನು. ಆಗ ಆತನು ಬಾಗಿಲಿನ ಹೊಸಲನ್ನು ಒರಗಿಕೊಂಡು ಇದ್ದನು.

೧೨. ಅದೇ ರೀತಿಯಲ್ಲಿ ಕಣ್ಣನ್ನು ಇಟ್ಟುಕೊಂಡು ರಾತ್ರಿಯಲ್ಲೆಲ್ಲಾ ಮಲಗಿದ್ದನು. ಆಗ ಭೃಂಗಿರಿಟಿಯು ನನಗೆ ನಮಸ್ಕರಿಸಿ ಈ ರೀತಿಯಾಗಿ ಕೇಳಿದನು.

॥ ಭೃಂಗಿರಿಟಿರುವಾಚ ॥

ಅನೇನ ವಿಧಿನಾ ಕೇನ ವಿಹಿತಂ ತವ ದರ್ಶನಂ ।
ತಪಸ್ತಪ್ತಂ ಹುತಂ ಜಪ್ತಂ ಕಿಮನೇನ ಮಹಾತ್ಮನಾ ॥ ೧೩ ॥

ದತ್ತೇ ಪ್ರತಿಪದಂ ದೇವೋ ಯಸ್ಯ ಹಸ್ತಾವಲಂಬನಂ ।
ಅಯಂ ನ ಲಭತೇ ಗನ್ತುಂ ಕಸ್ಮಾದಸ್ಮಾತ್ಪುರಾದ್ಬಹಿಃ ॥ ೧೪ ॥

ಯದೃಚ್ಛಯಾ ಯದಾ ಕಾಶೀ ಸೀಮಾಮುಲ್ಲಂಘ್ಯ ಗಚ್ಛತಿ ।
ನ ಪಶ್ಯತಿ ತದಾ ಸರ್ವಾನ್ ಪಾರ್ಶ್ವಸ್ಥಾನಪಿ ದೇಹಿನಃ ॥ ೧೫ ॥

ಅತ್ರ ಹೇತುಮಹಂ ಜ್ಞಾತುಮಿಚ್ಛಾಮಿ ಸ್ವಾಮಿಭಾಷಿತಂ ।
ಅನುಗ್ರಾಹ್ಯೋಽಸ್ಮಿ ಚೇದ್ವಕ್ತುಂ ಯುಕ್ತಂ ಚೇತ್ತದುದೀರಯ ॥ ೧೬ ॥

॥ ಶ್ರೀ ಶಿವಉವಾಚ ॥

ಇಮಂ ಭೃಂಗಿರಿಟೇಃ ಪ್ರಶ್ನಂ ಸಮಾಕರ್ಣ್ಯಾಹಮೂಚಿವಾನ್ ।
ಕದಾಚಿದ್ವಾಸಂ ಕೈಲಾಸಪಾರ್ಶ್ವೇ ಪುನ್ನಾಗಕಾನನೇ ॥ ೧೭ ॥

---

೧೩. ಭೃಂಗಿರಿಟಿಯು ಹೇಳಿದನು- ಎಲೈ ಸ್ವಾಮಿಯೇ ! ಈ ರೀತಿಯಿಂದ ಯಾರು ನಿನ್ನ ದರ್ಶನವನ್ನು ಮಾಡಿರುವರು ? ಈ ಮಹಾತ್ಮನು ಯಾವ ತಪಸ್ಸನ್ನು ಮಾಡಿರುವನು ? ಯಾವ ಹೋಮವನ್ನು ಮಾಡಿರುವನು ? ಯಾವ ಜಪವನ್ನು ಮಾಡಿರುವನು ?

೧೪. ಅವನಿಗೆ ಚರಾಚರಗುರುವಾದ ನೀನು ಹಸ್ತಾವಲಂಬನವನ್ನು ಕೊಡುತ್ತಿರುವೆಯಲ್ಲ ! ಇವನು ಯಾತಕ್ಕೋಸ್ಕರ ಈ ಊರಿನಿಂದ ಹೊರಗೆ ಹೋಗಲಾರನು ?

೧೫. ಇವನು ಕಾಶಿಯನ್ನು ಬಿಟ್ಟು ಹೊರಟಾಗ ತನ್ನ ಅಕ್ಕಪಕ್ಕದಲ್ಲಿರುವವರನ್ನು ಕೂಡ ನೋಡುವುದಿಲ್ಲ.

೧೬. ಈ ವಿಷಯದಲ್ಲಿ ನೀನು ಕಾರಣವನ್ನು ಹೇಳಬೇಕೆಂದು ಕೇಳುತ್ತೇನೆ. ನನ್ನಲ್ಲಿ ದಯೆಯಿದ್ದರೆ ನೀನು ಹೇಳಬಹುದಾದರೆ ನನಗೆ ಅದನ್ನು ಹೇಳು.

೧೭–೧೮. ಶ್ರೀ ಶಿವನು ಹೇಳಿದನು–ಈ ಭೃಂಗಿರಿಟಿಯ ಪ್ರಶ್ನೆಯನ್ನು ನಾನು ಕೇಳಿ ಹೀಗೆಂದೆನು. ಒಂದು ಸಾರಿ ಕೈಲಾಸ ಪರ್ವತದ ಪಕ್ಕದಲ್ಲಿರುವ ಪುನ್ನಾಗದ

ರಣತ್ಪೇಚಕಸುಶ್ರೋಣಿಪೂರ್ಣಸ್ತಬಕಕಾನನೇ ।
ಕಲಕಂಠಕುಲಾಲಾಪಕಲ್ಲೋಲಿತದಿಗಸ್ತರೇ ॥ ೧೮ ॥

ಗರುತ್ಮದಾದಿದಾತ್ಯೂಹಸಮೂಹಸ್ವರಸಂಕುಲೇ ।
ಭ್ರಮದ್ವಾರುಘಟೀಯಂತ್ರಪ್ರೋಲ್ಲಸದ್ಬಿಂದುದನ್ತುರೇ ॥ ೧೯ ॥

ಪ್ರವರೋಮಾರಣಿಪ್ರಾಸ್ತಕದಳೀಕಂದಲಾಲಯೇ ।
ಕಸ್ತೂರೀಹರಿಣೋಪೇತೇ ಕಿನ್ನರಸ್ವರಮೋಹಿತೇ ॥ ೨೦ ॥

ರೋಮಂಥಮಂಥರಾಪಾಂಗೈಃ ಕ್ವಾಪಿ ಕ್ವಾಪಿ ನಿಷೇವಿತೇ ।
ಹಂಸೈಃ ಕೀರೇಷು ಪಾಂಡಿತ್ಯಂ ಕುರ್ವಾಣೈಃ ಸಂಕುಲೇ ಶುಕೈಃ ॥ ೨೧ ॥

ನಿಹ್ರಾದದಿಗ್ಧನೀರಂಧ್ರಸಮೀರಣವಿಲೋಡಿತೇ ।
ಮಾಧವೀಪುಷ್ಪನಿರ್ಯಾಸಸೀಧುಕ್ಷೀಬಮಧುವ್ರತೇ ॥ ೨೨ ॥

---

ವನದಲ್ಲಿ ನಾಸಿದ್ದನು. ಆ ವನದಲ್ಲಿ ದೇವತಾಸ್ತ್ರೀಯರು ಓಡಿಯಾಡುತ್ತ ಸದ್ದು ಮಾಡುತ್ತ ಹೂ ಗೊಂಚಲನ್ನು ಕುಯ್ಯುತ್ತಿದ್ದರು. ಕೋಗಿಲೆಗಳು ಕೂಗುತ್ತಿದ್ದು ದರಿಂದ ಆ ಧ್ವನಿಯೂ ಅದರ ಎಲ್ಲಾ ಕಡೆಯೂ ತುಂಬಿಕೊಂಡಿದ್ದಿತು.

೧೯. ಗರುಡನೇ ಮುಂತಾದ ಕೋಳಿಯವರೆಗೂ ಇರುವ ಪಕ್ಷಿಗಳ ಸ್ವರ ದಿಂದ ಆ ವನವು ಕೂಡಿದ್ದಿತು. ಬಾವಿಯ ರಾಟೆಗಳು ಸುತ್ತುತ್ತಿರುವುದರಿಂದ ಅದರಿಂದ ಹೊರಡುವ ನೀರಿನ ತುಂತುರುಗಳಿಂದ ಕೂಡಿಕೊಂಡಿದ್ದಿತು.

೨೦–೨೧. ಉದ್ಬುದ್ಧವಾಗಿರುವ ಎಲೆಗಳೇ ತುದಿಯಲ್ಲಿರುವ ಬಾಳೆಯ ಮರಗಳಿಗೆ ಜಾಗವಾಗಿದೆ. ಕಿನ್ನರರ ಸಂಗೀತಕ್ಕೆ ಮನಗೊಟ್ಟು ಸುಖಪಡುತ್ತ ಮೆಲ್ಲಗೆ ಮೆಲುಕನ್ನು ಮಾಡುತ್ತ ಕಣ್ಣನ್ನು ಅರ್ಧ ಬಿಟ್ಟುಕೊಂಡಿರುವ ಕಸ್ತೂರಿ ಮೃಗಗಳಿಂದ ಕೂಡಿಕೊಂಡಿದೆ. ಹಂಸಗಳಿಂದಲೂ ಗಿಳಿಗಳಿಂದಲೂ ಹಾಡಲ್ಪಡು ತ್ತಿರುವ ಧ್ವನಿಯಿಂದಲೂ ಕೂಡಿಕೊಂಡಿದೆ.

೨೨. ಧ್ವನಿಯಿಂದ ಕೂಡಿರುವ ಗಾಳಿಯಿಂದ ಎಲ್ಲಾ ಕಡೆಯಲ್ಲಿಯೂ ಆ ವನವು ಅಲ್ಲಾಡಿಸಲ್ಪಡುತ್ತಿರುತ್ತದೆ. ಜಾಜಿ ಹೂವಿನ ಅಮೃತವನ್ನು ಕುಡಿದು ಕೊಬ್ಬಿರುವ ದುಂಬಿಗಳಿಂದ ಆ ವನವು ಕೂಡಿದೆ.

**ಉನ್ಮೀಲತ್ತ್ರಿವಳೀಪುಷ್ಪಗುಚ್ಛಸೌರಭನಿರ್ಭರೇ ।**
**ಪ್ರೋತ್ಫುಲ್ಲವಕುಲಾಮೋದಮುದಮಂಥರಷಟ್ಪದೇ** ॥ ೨೩ ॥

**ಸೋಮಾದುದ್ಗತಪೀಯೂಷಕ್ಷಾಳಿತಕ್ಷಿತಿಮಂಡಲೇ ।**
**ಅಧ್ಯಾಸ್ಯವೇದಿಕಾಮೇಕಾಮಹಂ ಕ್ಷಣಮವಸ್ಥಿತಃ** ॥ ೨೪ ॥

**ಉದ್ದಂಡಶಾಖಿಸಂಘಟ್ಟಸ್ಫುಟನ್ಮಂಥಾಮುಖೋತ್ಕರೈಃ ।**
**ಪ್ರಕಂಪಿತಾಚಲಚ್ಛಾಯೋ ವವೌ ಚಂಡಸಮೀರಣಃ** ॥ ೨೫ ॥

**ಪಶ್ಚಾದಭೂನ್ಮಹಾಘೋಷೋ ನಿರ್ಘೋಷಿತದರೀತಟಃ ।**
**ಅವಾತರತ್ತತಃ ಕಶ್ಚಿತ್ಪಕ್ಷೀ ಗಗನಗಹ್ವರಾತ್** ॥ ೨೬ ॥

**ಶಾರದಾನೀರದಚ್ಛಾಯಃ ಕಜ್ಜಲಾನಾಮಿವೋಚ್ಚಯಃ ।**
**ತಮಸಾಮಿವ ಸಂಘಾತಃ ಪಕ್ಷಚ್ಛೇದೀವ ಪರ್ವತಃ** ॥ ೨೭ ॥

---

೨೩. ಅರಳುತ್ತಿರುವ ವಾಸನೆಯಾದ ಹೂಗಳ ಗೊಂಚಲುಗಳಿಂದಲೂ ಕೂಡಿದೆ. ಅರಳುತ್ತಿರುವ ನೈದಿಲೆಗಳ ವಾಸನೆಗಳಿಂದ ಕೂಡಿದೆ. ದುಂಬಿಗಳಿಂದ ಕೂಡಿದೆ.

೨೪. ಚಂದ್ರನಿಂದ ಹೊರಹೊರಟ ಅಮೃತದಿಂದ ತೊಳೆಯಲ್ಪಡುತ್ತಿರುವ ಭೂಮಿಯುಳ್ಳದ್ದಾಗಿದೆ. ಅಂತಹ ಕಾನನದಲ್ಲಿ ನಾನು ಒಂದು ವೇದಿಕೆಯಲ್ಲಿ ಕ್ಷಣಕಾಲ ಕುಳಿತಿದ್ದೆನು.

೨೫. ದೊಡ್ಡ ದೊಡ್ಡದಾಗಿರುವ ಮರಗಳು ಗಾಳಿಗೆ ಬಡಿದಾಡುವುದರಿಂದ ಹೊರ ಹೊರಟ ಗಾಳಿಯಿಂದ ಅಲ್ಲಾಡಿದ ಮರಗಳ ನೆರಳೂ ಅಲ್ಲಾಡುತ್ತಿದ್ದುವು.

೨೬. ಆಗ ಒಂದು ಶಬ್ದವಾಯಿತು ಆ ಶಬ್ದದಿಂದ ಗುಹೆಗಳಲ್ಲಿ ಪ್ರತಿ ಧ್ವನಿಯು ಹೊರಟಿತು. ಅನಂತರ ಆಕಾಶದಿಂದ ಒಂದು ಪಕ್ಷಿಯು ಕೆಳಗಿಳಿಯಿತು.

೨೭. ಆ ಪಕ್ಷಿಯು ಶರತ್ಕಾಲದ ಮೋಡದಂತೆಯೂ, ಕಣ್ಣುಕಪ್ಪಿನ ರಾಶಿಯಂತೆಯೂ, ಕತ್ತಲೆಯ ಗುಂಪಿನಂತೆಯೂ, ರೆಕ್ಕೆಗಳನ್ನು ಕಳೆದುಕೊಂಡ ಪರ್ವತದಂತೆಯೂ ಇದ್ದಿತು.

ಅವಷ್ಟಭ್ಯ ಕ್ಷಿತಿಂ ಪದ್ಭ್ಯಾಂ ಪಕ್ಷೀ ಮಾಂ ಪ್ರಣನಾಮ ಸಃ ।
ಆನೀಯ ಪದ್ಮಮಮ್ಲಾನಮಸೌ ಮತ್ಪಾದಯೋರ್ವ್ಯಧಾತ್ ।
ಅಥಾಸೌ ಸ್ಪಷ್ಟಯಾ ವಾಚಾ ಪಕ್ಷೀ ಸ್ತೋತ್ರಮುದೀರಯತ್ ॥ ೨೮ ॥

|| ಪಕ್ಷ್ಯುವಾಚ ||

ಜಯ ದೇವ ಚಿದಾನಂದ ಸುಧಾಸಿಂಧೋ ಜಗತ್ಪತೇ ।
ಸದಾ ಸದ್ಭಾವನಾಸಂಗಕಲ್ಲೋಲಾನಂತವೈಭವ ॥ ೨೯ ॥

ಅದ್ವೈತವಾಸನಾಮತ್ಯಾ ಮಲತ್ರಯವಿವರ್ಜಿತ ।
ಜಿತೇಂದ್ರಿಯಪರಾಧೀನ ಸಮಾಧಿಪ್ರಾಪ್ಯವಿಗ್ರಹ ॥ ೩೦ ॥

ನಿರುಪಾಧೇ ವಿನಿರ್ಮುಕ್ತ ನಿರಾಕಾರ ನಿರಾಮಯ ।
ನಿಸ್ಸೀಮ ನಿರಹಂಕಾರ ನಿರಾವರಣ ನಿರ್ಗುಣ || ೩೧ ||

---

೨೮. ಆ ಪಕ್ಷಿಯು ನೆಲಕ್ಕೆ ಇಳಿದು ಭೂಮಿಯ ಮೇಲೆ ನಿಂತುಕೊಂಡು ನಮಸ್ಕರಿಸಿತು. ಮತ್ತು ಬಾಡದಿರುವ ಒಂದು ಕಮಲವನ್ನು ತಂದು ನನ್ನ ಪಾದಗಳ ಮೇಲೆ ಇಟ್ಟಿತು. ಆಮೇಲೆ ಸ್ಪಷ್ಟವಾದ ಮಾತನ್ನಾಡುತ್ತ ನನ್ನನ್ನು ಇಂತು ಸ್ತುತಿಸಿತು.

೨೯. ಪಕ್ಷಿಯು ಹೇಳಿತು-ದೇವನೇ ! ಚಿದಾನಂದನೇ ! ಅಮೃತಸಿಂದುವೇ ! ಜಗತ್ಪತಿಯೇ ! ಯಾವಾಗಲೂ ಒಳ್ಳೆಯ ಭಾವನೆಯ ಅಲೆಗಳಿಂದಲೇ ಕೂಡಿರುವ ಮಹಿಮೆಯುಳ್ಳವನೇ ! ನಿನಗೆ ಜಯವಾಗಲಿ.

೩೦. ಅದ್ವೈತದ ವಾಸನೆಯ ಬುದ್ಧಿಯಿಂದ, ಆಗಾಮಿ ಸಂಚಿತ ಪ್ರಾರಬ್ಧಗಳೆಂಬ ಮಲಗಳಿಂದ ಬಿಡಲ್ಪಟ್ಟವನೇ ! ಜಿತೇಂದ್ರಿಯರಿಗೆ ಅಧೀನನೇ ! ಸಮಾಧಿಯಿಂದ ತಿಳಿಯಬಹುದಾದವನೇ ! ನಿನಗೆ ಜಯವಾಗಲಿ.

೩೧. ಉಪಾಧಿಯಿಲ್ಲದವನೇ ! ಒಂದಕ್ಕೂ ಸಿಕ್ಕದವನೇ ! ಆಕಾರವಿಲ್ಲದವನೇ ! ರೋಗವಿಲ್ಲದವನೇ ! ಎಲ್ಲೆ ಇಲ್ಲದವನೇ ! ಅಹಂಕಾರವಿಲ್ಲದವನೇ ! ಮರೆಯಿಲ್ಲದವನೇ ! ಗುಣಗಳಿಲ್ಲದವನೇ ! ನಿನಗೆ ಜಯವಾಗಲಿ.

ಶರಣಾಗತಸಂತ್ರಾಣ ಪ್ರವೀಣಚರಣಾಂಬುಜ ।
ಭೀಮಭಾಲಮಹಾಜ್ವಾಲಜ್ವಾಲಾದಗ್ಧಮನೋಭವ ॥ ೩೨ ॥

ಕುಠಾರಭಿನ್ನದೈತ್ಯೇಂದ್ರ ಗಂಡೂಷಿತಮಹಾವಿಷ ।
ತ್ರಿಪುರಪ್ರಮದಾಭಾಲಸಿಂಧೂರೋದ್ಧೂಳಿಮಾರ್ಜನ ॥ ೩೩ ॥

ಕಾತ್ಯಾಯಿನೀಕುಚಾಂಭೋಜವರಕುಂಕುಮಚರ್ಚಿತ ।
ನಮಃ ಪ್ರಮಾಣದೂರಾಯ ನಮಃ ಪ್ರಮಾಣ್ಯರೂಪಿಣೇ ॥ ೩೪ ॥

ನಮಶ್ಚೈತನ್ಯನಾಥಾಯ ನಮಸ್ತ್ರೈಲೋಕ್ಯರೂಪಿಣೆ ।
ವಂದೇ ತವ ಪದಾಂಭೋಜಂ ಯೋಗಿಪ್ರವರಚುಂಬಿತಂ ॥ ೩೫ ॥

ಅಪಾರಭವಪಾಪಾಬ್ಧಿಪಾರಾಪತರಣಾದ್ಭುತಂ ।
ವಾಚಸ್ಪತಿರಪಿ ಸ್ತೋತ್ರೇ ಭವತೋನ ಪ್ರಗಲ್ಭತೇ ॥ ೩೬ ॥

---

೩೨. ಶರಣಾಗತರನ್ನು ಕಾಪಾಡುವುದರಲ್ಲಿ ಶಕ್ತವಾದ ಪಾದಗಳುಳ್ಳವನೇ! ಭಯಂಕರವಾದ ನೇತ್ರಾಗ್ನಿಯ ಜ್ವಾಲೆಯಿಂದ ಮನ್ಮಥನನ್ನು ಸುಟ್ಟವನೇ! ನಿನಗೆ ಜಯವಾಗಲಿ.

೩೩. ಕೊಡಲಿಯಿಂದ ರಾಕ್ಷಸಾಧಿಪನನ್ನು ಕೊಂದವನೇ! ಮಹಾ ವಿಷವನ್ನು ಕುಡಿದವನೇ! ತ್ರಿಪುರದಲ್ಲಿದ್ದ ಹೆಂಗಸರ ಹಣೆಯಲ್ಲಿನ ಕುಂಕುಮ ವನ್ನು ನಾಶಮಾಡಿದವನೇ! ನಿನಗೆ ಜಯವಾಗಲಿ.

೩೪. ಪಾರ್ವತಿಯ ಸ್ತನಗಳಲ್ಲಿನ ಕುಂಕುಮದಿಂದ ಬಳಿಯಲ್ಪಟ್ಟವನೇ! ಪ್ರಮಾಣದಿಂದ ಕಂಡುಹಿಡಿಯಲಾಗದವನೇ! ಪ್ರಮಾಣ ರೂಪನಾದವನೇ! ನಿನಗೆ ನಮಸ್ಕಾರವು.

೩೫. ಚೈತನ್ಯಕ್ಕೆ ಒಡೆಯನಾದ ನಿನಗೆ ನಮಸ್ಕಾರವು ಮೂರು ಲೋಕದ ಸ್ವರೂಪನಾದ ನಿನಗೆ ನಮಸ್ಕಾರವು. ಯೋಗಿಶ್ರೇಷ್ಠರಿಂದ ನಮಸ್ಕರಿಸಲ್ಪಟ್ಟ ನಿನ್ನ ಪಾದಗಳನ್ನು ನಮಸ್ಕರಿಸುತ್ತೇನೆ.

೩೬. ಕೊನೆಯಿಲ್ಲದಿರುವ ಸಂಸಾರವೆಂಬ ಸಮುದ್ರವನ್ನು ದಾಟಿಸುವ ನಿನ್ನ ಆ ಪಾದಗಳನ್ನು ನಮಸ್ಕರಿಸುತ್ತೇನೆ. ನಿನ್ನ ಸ್ತೋತ್ರವನ್ನು ಮಾಡಲು ಆ ಗುರುವಿಗೂ ಸಾಧ್ಯವಿಲ್ಲ.

ಸಹಸ್ರವದನಸ್ಯಾಪಿ ಫಣೀಂದ್ರಸ್ಯ ನ ಚಾತುರೀ ।
ತ್ವದ್ವರ್ಣನೇ ಮಹಾದೇವ ಕೋಽಹಮಲ್ಪಮತಿಃ ಖಗಃ ॥ ೩೭ ॥

॥ ಶ್ರೀ ಶಿವ ಉವಾಚ ॥

ಸ್ತೋತ್ರಮೇತತ್ಸಮಾಕರ್ಣ್ಯ ಕೃತಂ ತೇನ ಪತತ್ರಿಣಾ ।
ತಮವೋಚಮಹಂ ಕೋಽಸಿ ಕುತಸ್ತ್ಯೋಽಸಿ ವಿಹಂಗಮ ॥ ೩೮ ॥

ಹಂಸೇನ ಸದೃಶಃ ಕಾಯೋ ವರ್ಣೋ ಕಾಕೇನ ಸನ್ನಿಭಃ ।
ಪ್ರಯೋಜನಂ ಯದುದ್ದಿಶ್ಯ ಪ್ರಾಪ್ತೋಽಸೀಹ ತದುಚ್ಯತಾಂ ॥ ೩೯ ॥

ಇತಿ ಪಕ್ಷೀ ಮಯಾ ಪೃಷ್ಟಃ ಪ್ರಶ್ರಯಾನತಕಂಧರಃ ।
ಜಗಾದ ಶ್ಲಕ್ಷ್ಣಯಾ ವಾಚಾ ಪಕ್ಷೀ ವಾಕ್ಯವಿದಾಂ ವರಃ ॥ ೪೦ ॥

॥ ಪಕ್ಷ್ಯುವಾಚ ॥

ದೇವೇಶ ಧೂರ್ಜಟೇ ವಿದ್ಧಿ ಮಾಂ ಮರಾಳಂ ಸ್ವಯಂಭುವಃ ।
ಕರ್ಮಣಾ ಯೇನ ಕಾರ್ಷ್ಣ್ಯಂ ಮೇ ಜಾತಮಾಧುನಿಕಂ ವಿಭೋ ॥ ೪೧ ॥

---

೩೭. ನಿನ್ನನ್ನು ವರ್ಣಿಸಲು ಸಾವಿರ ಮುಖವುಳ್ಳ ಆ ಆದಿಶೇಷನಿಗೂ ಜಾಣತನ ಸಾಲದು. ಅಂತಹ ನಿನ್ನನ್ನು ವರ್ಣಿಸಲು ಅಲ್ಪಮತಿಯಾದ ನಾನೆಷ್ಟರವನು?

೩೮. ಶ್ರೀ ಶಿವನು ಹೇಳಿದನು–ಆ ಹಕ್ಕಿಯು ಮಾಡಿದ ಈ ಸ್ತೋತ್ರವನ್ನು ಕೇಳಿ ಎಲೈ ಹಕ್ಕಿಯೇ! ನೀನಾರು? ಎಲ್ಲಿಂದ ಬಂದಿದ್ದೀಯೆ? ಎಂದೆನು.

೩೯. ದೇಹವನ್ನು ನೋಡಿದರೆ ಹಂಸದಂತೆ ಇದ್ದೀಯೆ. ಬಣ್ಣವು ಮಾತ್ರ ಕಾಗೆಯ ಬಣ್ಣಕ್ಕಿದೆ. ಯಾವ ಪ್ರಯೋಜನಕ್ಕೋಸ್ಕರ ಇಲ್ಲಿಗೆ ಬಂದಿದ್ದೀಯೆ? ಹೇಳು.

೪೦. ನಾನು ಈ ರೀತಿಯಾಗಿ ಆ ಹಕ್ಕಿಯನ್ನು ಕೇಳುತ್ತಲೂ ಅದು ವಿನಯದಿಂದ ತಲೆಯನ್ನು ತಗ್ಗಿಸಿಕೊಂಡು ಜಾಣತನದಿಂದ ಮೃದುವಾಗಿ ಇಂತೆಂದಿತು.

೪೧. ಪಕ್ಷಿಯು ಹೇಳಿತು–ಎಲೈ ದೇವೇಶವಾದ ಧೂರ್ಜಟಿಯೆ! ನಾನು ಬ್ರಹ್ಮನ ಹಂಸವು. ನನಗೆ ಯಾವ ಕೆಲಸದಿಂದ ಕಪ್ಪುತನ ಬಂದಿತೆಂಬುದನ್ನು ಹೇಳುತ್ತೇನೆ. ಕೇಳು.

ತದಾಕರ್ಣಯ ಸರ್ವಜ್ಞ ಪೃಷ್ಟೋ ಯದಿ ತದುಚ್ಯತೇ ।
ಮಾನಸಾತ್ಸರಸಃ ಪೃಥ್ವೀಂ ಯಾತಃ ಪ್ರಾಪ್ತೋಽಸ್ಮಿ ಸಂಕಟಂ ॥ ೪೨ ॥

ಸೌರಾಷ್ಟ್ರನಗರಾದಾರಾತ್ಸರಸಿ ಸ್ಫುರದಂಬುಜೇ ।
ಬಾಲೇಂದುಖಂಡಧವಳಾನ್ಮೃಣಾಳಕಬಳಾನಹಂ ॥ ೪೩ ॥

ಆದಾಯ ಲಬ್ಧಸೌಹಿತ್ಯೋ ನಿರಗಾಂ ಗಗನಂ ದ್ರುತಂ ।
ವಿಹಾಯಸಸ್ತತಸ್ತಸ್ಮಾದಕಸ್ಮಾದಪತಂ ಭುವಿ ॥ ೪೪ ॥

ಅಥ ಮೋಹಪರೀತಾತ್ಮಾ ಸರ್ವಥಾ ವಿಕಲೇಂದ್ರಿಯಃ ।
ವೇಪಮಾನವಪುರ್ಮೋಹಾತ್ ಸ್ಪೃಷ್ಟಃ ಶೀತೈಸ್ಸಮೀರಣೈಃ ॥ ೪೫ ॥

ಪ್ರಬುದ್ಧಃ ಪತನೇ ಹೇತುಮಪಶ್ಯನ್ನಾತ್ಮನಸ್ತದಾ ।
ಅಹೋ ಕಿಮೇತದಾಪನ್ನಮದ್ಯ ಪಾತಃ ಕಥಂ ಮಮ ॥ ೪೬ ॥

ಕಾಳಿಮಾ ಯೇನ ಕಾಯೇಽಸ್ಮಿನ್ ಪಕ್ವಕರ್ಪೂರಪಾಂಡುರೇ ।
ಇತ್ಯಹಂ ವಿಸ್ಮಯಾವಿಷ್ಟೋ ಯಾವತ್ಕುರ್ವೇ ವಿಚಾರಣಾಂ ॥ ೪೭ ॥

---

೪೨. ನೀನು ಕೇಳಿದುದರಿಂದ ಅದನ್ನು ಹೇಳುತ್ತೇನೆ. ಕೇಳು. ಮಾನಸಸರೋವರದಿಂದ ಭೂಲೋಕಕ್ಕೆ ಹೊರಟನು ಬರುತ್ತಿರುವಾಗ ಈ ಕಷ್ಟವು ಬಂದಿತು.

೪೩-೪೪ ಸೌರಾಷ್ಟ್ರದ ನಗರದ ಬಳಿಯಿರುವ ಸರೋವರದ ಕಮಲದ ದಂಟುಗಳನ್ನು ತಿಂದು ತೃಪ್ತಿಹೊಂದಿ ಕೆಲವನ್ನು ತೆಗೆದುಕೊಂಡು ಆಕಾಶದಲ್ಲಿ ಹೋಗುತ್ತಿದ್ದೆನು. ಆಗ ಅಕಸ್ಮಾತ್ತಾಗಿ ಕೆಳಗೆ ಬಿದ್ದೆನು.

೪೫-೪೭. ಆಗ ಮೋಹಗೊಂಡವನಾಗಿ ಇಂದ್ರಿಯಗಳು ಸ್ವಾಧೀನವಲ್ಲಿಲ್ಲದಿರುವನಾಗಿ ನಡುಗುತ್ತಾ ಬಿದ್ದಿಷ್ಟೆನು. ಆಗ ತಣ್ಣಗಿರುವ ಗಾಳಿಯು ಮೈಮೇಲೆ ಬೀಸಲು ಎಚ್ಚೆತ್ತವನಾಗಿ ನಾನು ಬೀಳುವುದರಲ್ಲಿ ಕಾರಣವನ್ನು ತಿಳಿಯದವನಾದೆನು. ಆಗ ಅಹೋ ಇದೇನು ಬಂದಿತು ? ಈಗ ನಾನು ಬೀಳಲು ಕಾರಣವೇನು ? ಬೆಳ್ಳಗಿದ್ದ ನನ್ನ ಶರೀರವು ಕಪ್ಪಗಾಗಲು ಕಾರಣವೇನು ? ಹೀಗೆಂದು ಆಶ್ಚರ್ಯಗೊಂಡು ವಿಚಾರಮಾಡುತ್ತಿದ್ದೆನು.

ತಾವದಂಬುರುಹಾದ್ವಾಣೀಮುಶ್ರೌಷಮುಹಮೀದೃಶೀಂ ।
ಉತ್ತಿಷ್ಠ ಹಂಸ ವಕ್ಷ್ಯಾಮಿ ಕಾರಣಂ ಪಾತಕಾರ್ಷ್ಣ್ಯಯೋಃ ॥ ೪೮ ॥

ಅಥೋತ್ಥಾಯ ಸಮಾಗತ್ಯ ಮಯಾ ಮಧ್ಯಸರೋವರೇ ।
ದೃಷ್ಟ್ವಾ ರಾಜೀವಿನೀಂ ರಮ್ಯಾಂ ರಾಜೀವೈಃ ಪಂಚಭಿರ್ಯುತಾಂ ॥ ೪೯ ॥

ಕಾರಣಂ ಪ್ರಷ್ಟುಮಾರೇಭೇ ಕಾರ್ಷ್ಣ್ಯಸ್ಯ ಪತನಸ್ಯ ಚ ।
ಅಥ ತತ್ರ ಘನಶ್ಯಾಮಾನ್ ಸ್ವರ್ಣವರ್ಣಾಂಬರಾವೃತಾನ್ ॥ ೫೦ ॥

ಚತುರ್ಭುಜಾನ್ ಗದಾಶಂಖಚಕ್ರಸಂಕೇರುಹಾಯುಧಾನ್ ।
ಕಿರೀಟಹಾರಕೇಯೂರಕುಂಡಲದ್ಯುತಿಚಿತ್ರಿತಾನ್ ॥ ೫೧ ॥

ಅದ್ರಾಕ್ಷಮಂತರಿಕ್ಷಸ್ಥಾನ್ ಪುರುಷಾನಯುತಾನಿ ಷಟ್ ।
ನತ್ವಾ ಪ್ರದಕ್ಷಿಣೀಕೃತ್ಯ ಪಂಚಪದ್ಮಾಂ ಸರೋಜಿನೀಂ ।
ಆತ್ಮೀಯಂ ಪಾತಮಾರಭ್ಯ ಪೃಷ್ಟಂ ತದಖಿಲಂ ಮಯಾ ॥ ೫೨ ॥

---

೪೮. ಆಗ ಕಮಲದಿಂದ ಒಂದು ಧ್ವನಿಯು ಕೇಳಿಸಿತು ಆ ಧ್ವನಿಯು ಎಲೈ ಹಂಸವೇ ! ನೀನು ಬಿದ್ದುದಕ್ಕೂ ಕಪ್ಪಾದುದಕ್ಕೂ ನಾನು ಕಾರಣವನ್ನು ಹೇಳುತ್ತೇನೆ ಮೇಲಕ್ಕೆ ಏಳು.

೪೯. ಆಗ ಎದ್ದು ಸರೋವರದ ಬಳಿಗೆ ಹೋಗಿ ಅಲ್ಲಿ ನಾಲ್ಕು ರಾಜೀವ ಗಳೊಡನೆ ಕೂಡಿಕೊಂಡಿರುವ ಒಬ್ಬಳು ರಾಜೀವಿನಿಯನ್ನು ಕಂಡೆನು

೫೦. ಆಗ ಅವರನ್ನು ನೋಡಿದೊಡನೆಯೇ ನಾನು ಬಿದ್ದಿರುವಿಕೆಗೂ ಕಪ್ಪಾದುದಕ್ಕೂ ಕಾರಣವನ್ನು ಕೇಳಲು ಮೊದಲು ಮಾಡಿದೆನು.

೫೧-೫೨. ಅಲ್ಲಿ ಮೇಘದಂತೆ ಕಪ್ಪಾದ ಬಣ್ಣಗಳುಳ್ಳ ಚಿನ್ನದ ಬಣ್ಣದ ಬಟ್ಟೆಯನ್ನು ಹೊದ್ದಿರುವ, ನಾಲ್ಕು ಭುಜಗಳುಳ್ಳ, ಅವುಗಳಲ್ಲಿ ಶಂಖ, ಚಕ್ರ, ಗಧಾ ಪದ್ಮಗಳನ್ನು ಹಿಡಿದಿರುವ, ಕಿರೀಟಹಾರ ಭುಜಕೀರ್ತಿಗಳನ್ನು ಹಾಕಿಕೊಂಡಿರುವ ಹದಿನಾರು ಸಾವಿರ ಜನರನ್ನು ಆಕಾಶದಲ್ಲಿ ನೋಡಿದೆನು. ಆಗ ಆ ಐದುಕಮಲದಿಂದ ಕೂಡಿರುವ ಸರೋಜಿನಿಯನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ನಾನು ಬಿದ್ದುದರಿಂದ ಮೊದಲು ಮಾಡಿಕೊಂಡು ನಡೆದ ಕಥೆಯನ್ನೆಲ್ಲಾ ಕೇಳಿದೆನು.

॥ ಪದ್ಮಿನ್ಯುವಾಚ ॥

ಕಲಹಂಸ ಗತೋಽಸಿ ತ್ವಂ ಮಾಂ ವಿಲಂಘ್ಯ ವಿಹಾಯಸಾ ।
ತೇನ ಪಾತಕಪಾಕೇನ ಪತಿತೋಽಸಿ ಮಹೀತಳೇ ॥ ೫೩ ॥

ತೇನೈವ ಕಾಳಿಮಾ ಕಾಯೇ ತಾವಕೀಯೇ ಚ ಲಕ್ಷ್ಯತೇ ।
ಭವಂತಂ ಪತಿತಂ ವೀಕ್ಷ್ಯ ಕೃಪಾಪೂರ್ಣೇನ ಚೇತಸಾ ॥ ೫೪ ॥

ಮಧ್ಯಮೇನಾಮುನಾಬ್ಜೇನ ವದಂತ್ಯಾ ಜಾತಸೌರಭಂ ।
ಆಘ್ರಾಯ ಷಟ್ಪದಾಷ್ಷಷ್ಟಿಸಹಸ್ರಾಣಿ ದಿವಂ ಯಯುಃ ॥ ೫೫ ॥

ಏತೇ ಯೇ ಭವತಾ ದೃಷ್ಟಾ ನೀಲೋತ್ಪಲಸಮುಸ್ಥಿತಾಃ ।
ಸರ್ವೇ ತೇ ಸಪ್ತಮೇತೀತೇ ಜನ್ಮನ್ಯಾರ್ಸ ಮುನೇಸ್ಸುತಾಃ । ॥ ೫೬ ॥

ಅಸ್ಯೈವ ಸರಸಸ್ತೀರೇ ತೇಪುಸ್ತೇ ಪರಮಂ ತಪಃ ।
ಕದಾಚಿತ್ಕಾಮಿನೀ ಕಾಚಿತ್ ಚಂಪಕಸ್ತಬಕಸ್ತನೀ ॥ ೫೭ ॥

---

೫೩ ಪದ್ಮಿನಿಯು ಹೇಳಿದಳು—ಎಲೈ ಕಲಹಂಸನೆ! ನೀನು ನನ್ನನ್ನು ದಾಟಿ ಆಕಾಶದ ಮಾರ್ಗದಿಂದ ಹಾರಿಹೋದೆ. ಆ ಪಾಪದ ಫಲದಿಂದ ಭೂಮಿಯಲ್ಲಿ ಬಿದ್ದೆ.

೫೪-೫೫. ಆದುದರಿಂದಲೆ ನಿನ್ನ ದೇಹದಲ್ಲಿ ಈ ಕಪ್ಪುಬಂದಿರುವುದು. ನೀನು ಬಿದ್ದುದನ್ನು ನೋಡಿ ಈ ಮಧ್ಯದ ಕಮಲವು ಕೃಪೆಯಿಂದ ಕೂಡಿ ಮಾತನಾಡಲು ಅದರಿಂದ ಸುವಾಸನೆಯು ಹೊರಹೊರಟಿತು. ಅದನ್ನು ವಾಸಿಸಿ ಈ ಹದಿನಾರು ಸಾವಿರ ದುಂಬಿಗಳು ಸ್ವರ್ಗವನ್ನು ಹೊಂದಿದುವು.

೫೬-೬೧. ಇಲ್ಲಿ ನೀನು ನೋಡುತ್ತಿರುವ ನೀಲೋತ್ಪಲಗಳು ಇವರೆಲ್ಲರೂ ಈ ಜನ್ಮಕ್ಕೆ ಹಿಂದಿನ ಏಳನೆಯ ಜನ್ಮದಲ್ಲಿ ಒಬ್ಬ ಋಷಿಯ ಮಕ್ಕಳಾಗಿದ್ದರು. ಅವರೆಲ್ಲರೂ ಈ ಸರೋವರದ ದಡದಲ್ಲಿಯೇ ತಪಸ್ಸು ಮಾಡುತ್ತಿದ್ದರು. ಒಂದುಸಾರಿ ಇಲ್ಲಿಗೊಬ್ಬ ಹೆಂಗಸು ಬಂದಳು. ಅವಳ ಸ್ತನಗಳು ಸಂಪಿಗೆಯ ಮೊಗ್ಗುಗಳಂತಿದ್ದುವು. ಕಡೆಗಣ್ಣಿನ ನೋಟದಿಂದ ಯೌವನದ ಹಾವಭಾವಗಳನ್ನು

ಚಲಾಪಾಂಗಕಲಾಕಾಂತತರಂಗಿತರಸಾಲಸಾ ।
ನಾಸಾಮುಕ್ತಾಫಲಜ್ಯೋತ್ಸ್ನಾಚುಂಬಿತಸ್ಮಿತದೀಧಿತಿಃ । ॥ ೫೮ ॥

ವೀಣಾಂ ವಿನ್ಯಸ್ಯ ಕುಚಯೋರ್ವನೇಽಸ್ಮಿನ್ಮಧುರಂ ಜಗೌ ।
ಗಾಯನ್ತ್ಯಾಸ್ಸ್ವನಮಾಕರ್ಣ್ಯಬ್ರಾಹ್ಮಣಾ ಹರಿಣಾ ಇವ ॥ ೫೯ ॥

ತಾಂ ಸಮಾಗತ್ಯ ತೇ ಸರ್ವೇ ಸಮಮೇವ ವ್ಯಲೋಕಯನ್ ।
ಮಯಾ ದೃಷ್ಟಾ ಮಯ್ಯೈವೇಯಮಿತ್ಯೂಚುಸ್ತೇಪರಸ್ಪರಂ ॥ ೬೦ ॥

ಮುಷ್ಟೀಮುಷ್ಟಿ ತತಸ್ತೇಷಾಂ ಭ್ರಾತೃಣಾಮಭವದ್ರಣಃ ।
ಅನ್ಯೋನ್ಯಮುಷ್ಟಿನಿಷ್ಪಿಷ್ಟವಕ್ಷಸಸ್ತ್ಯಕ್ತಜೀವಿತಾಃ ॥ ೬೧ ॥

ತೇ ಭುಕ್ತ್ವಾ ನಿರಯಾನ್ ಘೋರಾನ್ ಬಭೂವುಃ ಶರಭಾ ಭುವಿ ।
ತದಾ ತೇ ಶ್ವಾಪದಾನ್ ಜಘ್ನುಃ ದಗ್ಧಾ ವನ್ಯೇನ ವಹ್ನಿನಾ ॥ ೬೨ ॥

ತತೋಮಾತಂಗತಾಮೇತ್ಯ ಪಥೇ ಪಾಂಥಾನಘಾತಯನ್ ।
ವನೇ ವಿಷೋದಕಂ ಪೀತ್ವಾ ತೇ ಯಯುರ್ಯಮಮಂದಿರಂ ೬೩ ॥

---

ಬೀರುತ್ತಿದ್ದಳು ಅವಳು ನಗುತ್ತಿದ್ದರೆ ಮೂಗಿನ ಮೂಗುತಿಯ ಮುತ್ತಿನಮೇಲೆ ಆ ನಗುವು ಬಿದ್ದು ಪ್ರತಿಫಲಿಸುತ್ತಿದ್ದಿತು. ಅಂತಹ ಯುವತಿಯು ತನ್ನ ಸ್ತನಗಳಿಗೆ ವೀಣೆಯನ್ನು ಒರಗಿಸಿಕೊಂಡು ಇಲ್ಲಿ ಮಧುರವಾಗಿ ಹಾಡಿದಳು. ಹಾಗೆ ಹಾಡುತ್ತಿರುವ ಹಾಡಿನ ಧ್ವನಿಯನ್ನು ಕೇಳಿ ಆ ತಪಸ್ಸು ಮಾಡುತ್ತಿದ್ದ ಋಷಿಕು ಮಾರರು ಓಡಿಬಂದು ಒಟ್ಟಿಗೆ ಅವರೆಲ್ಲರೂ ಆಕೆಯನ್ನು ನೋಡಿದರು ನಾನು ಮುಂದೆ ನೋಡಿದೆನು ನಾನು ಮುಂದೆ ನೋಡಿದೆನು ಎಂಬುದಾಗಿ ಒಬ್ಬರಿಗೊಬ್ಬರು ಹೇಳಲು ಮೊದಲು ಮಾಡಿದರು. ಅನಂತರ ಅವರಿಗೆ ಹೊಡೆದಾಟವು ನಡೆದು ಕೈಯ್ಯಿನ ಮುಷ್ಟಿಗಳಿಂದಲೇ ಹೊಡೆದಾಡಲು ಮೊದಲಿಟ್ಟರು. ಹೀಗೆ ಹೊಡೆದಾಡಿ ಅವರೆಲ್ಲರೂ ಅಪಾಯಸ್ಥಳಕ್ಕೆ ಏಟುಗಳು ಬಿದ್ದುದರಿಂದ ಪ್ರಾಣಗಳನ್ನು ಬಿಟ್ಟರು.

೬೨-೬೩. ಅನಂತರ ಅವರು ಅನೇಕ ನರಕಗಳನ್ನು ಅನುಭವಿಸಿ ಭೂಮಿಯಲ್ಲಿ ಶರಭಗಳಾಗಿ ಹುಟ್ಟಿದರು. ಆಗ ಕಾಡಿನಲ್ಲಿರುವ ದುಷ್ಟ ಮೃಗಗಳನ್ನೆಲ್ಲಾ ಕೊಂದರು ಕಡೆಗೆ ಕಾಳ್ಗಿಚ್ಚಿನಿಂದ ಬೆಂದು ಸತ್ತರು. ಅನಂತರ ಆನೆಗಳಾಗಿ ಹುಟ್ಟಿ ದಾರಿಯಲ್ಲಿ ಹೋಗುವ ಪ್ರಯಾಣಿಕರನ್ನೆಲ್ಲಾ ಕೊಂದರು. ಕೊನೆಗೆ ಆ ಕಾಡಿನಲ್ಲಿದ್ದ ವಿಷದ ನೀರನ್ನು ಕುಡಿದು ಪ್ರಾಣಗಳನ್ನು ಬಿಟ್ಟರು.

**ಖರೋಷ್ಟ್ರವೃಕಮಾರ್ಜಾರಜನ್ಮಾನ್ಯಾಸಾದ್ಯ ಚ ಕ್ರಮಾತ್ ।**
**ತತೋ ಮಧುವ್ರತಾ ಜಾತಾ ವರ್ತಂತೇತ್ರ ಸರೋವರೇ ॥ ೬೪ ॥**

**ಅದ್ಯ ಮೇ ಗಂಧಮಾಘ್ರಾಯ ಪ್ರಾಪುಸ್ತೇ ವೈಷ್ಣವಂ ಪದಂ ।**
**ಶೃಣು ಪಕ್ಷೀಂದ್ರ ವಕ್ಷ್ಯಾಮಿ ಯೇನ ಮುಯ್ಯಸ್ತಿ ವೈಭವಂ ॥ ೬೫ ॥**

**ಏತಸ್ಮಾಜ್ಜನ್ಮನಃ ಪೂರ್ವಂ ತೃತೀಯೇ ಜನ್ಮನಿ ಶ್ಚಿದ್ ।**
**ಸರೋಜವದನಾ ನಾಮ ದ್ವಿಜಾತೇಃ ಕನ್ಯಕಾಭವಂ ॥ ೬೬ ॥**

**ಪಾತಿವ್ರತ್ಯೈಕನಿರತಾ ಗುರುಶುಶ್ರೂಷಣೇ ರತಾ**
**ಕದಾಚಿತ್ಸಾರಿಕಾಮೇಕಾಂ ಪಾಠಯಂತ್ಯವಿಲಂಬಿತಂ ॥ ೬೭ ॥**

**ಸಾರಿಕಾ ಭವ ಪಾಪೇ ತ್ವಂ ಪತ್ಯಾ ಶಪ್ತಾಸ್ಮಿ ಕುಪ್ಯತಾ ।**
**ಪ್ರೇತ್ಯ ಸಾರಿತ್ವಮಾಸಾದ್ಯ ಪಾತಿವ್ರತ್ಯಪ್ರಸಾದತಃ ॥ ೬೮ ॥**

---

೬೪ ಕತ್ತೆ, ಒಂಟೆ, ತೋಳ, ಬೆಕ್ಕುಗಳ ಜನ್ಮಗಳನ್ನು ಹೊಂದಿ ಅನುಭವಿಸಿ ಈಗ ದುಂಬಿಗಳಾಗಿ ಈ ಸರೋವರದಲ್ಲಿದ್ದರು

೬೫. ಈಗ ಅವರೆಲ್ಲರೂ ನನ್ನ ವಾಸನೆಯನ್ನು ವಾಸಿಸಿ ವಿಷ್ಣುಪದವಾದ ವೈಕುಂಠಕ್ಕೆ ಹೋದರು. ಎಲೈ ಪಕ್ಷಿರಾಜನೇ! ನನಗೆ ಈ ಮಹಿಮೆಯು ಬರಲು ಕಾರಣವೇನು ? ಎಂಬುದನ್ನು ಹೇಳುತ್ತೇನೆ. ಕೇಳು.

೬೬. ಈ ಜನ್ಮಕ್ಕಿಂತ ಹಿಂದಿನ ಮೂರನೆಯ ಜನ್ಮದಲ್ಲಿ ಒಬ್ಬ ಬ್ರಾಹ್ಮಣನ ಮಗಳಾಗಿದ್ದೆನು. ಆಗ ನನ್ನ ಹೆಸರು ಸರೋಜವದನಳೆಂದಿದ್ದಿತು.

೬೭. ಆಗ ಪತಿವ್ರತೆಯಾಗಿದ್ದುಕೊಂಡು ಗುರುಗಳನ್ನು ಶುಶ್ರೂಷೆ ಮಾಡುತ್ತಲಿದ್ದೆನು. ಹೀಗಿರುತ್ತಿರಲು ಒಂದುಸಾರಿ ಒಂದು ಸಾರಿಕೆಗೆ ಮಾತುಕಲಿಸುತ್ತಿದ್ದನು.

೬೮-೭೧. ಅದನ್ನು ನೋಡಿ ನನ್ನ ಗಂಡನು ನೀನು ಅದರಲ್ಲಿಯೇ ನಿರತಳಾಗಿರುವುದರಿಂದ ಸಾರಿಕೆಯಾಗಿ ಆಗು ಎಂದು ಶಪಿಸಿದನು. ನಾನು ಸತ್ತಮೇಲೆ ಶಾಪದಿಂದ ಸಾರಿಕೆಯಾಗಿ ಹುಟ್ಟಿದೆನು. ಪಾತಿವ್ರತ್ಯ

ಮುನೀನಾಮೇವ ಸದನೇ ಕನ್ಯಾ ಕಾಚಿತ್ಪ್ರಪೋಷ ಮಾಂ ।
ಗೀತಾನಾಂ ದಶಮಾಧ್ಯಾಯಂ ವಿಭೂತಿರಿತಿ ವಿಶ್ರುತಂ ॥ ೬೯ ॥

ಪ್ರಾತಃ ಪಠತಿ ವಿಪ್ರೋಸಾವಶ್ರೌಷಂ ತಮಘಾಪಹಂ ।
ಕಾಲೇನ ಸಾರಿಕಾದೇಹಮಹಂ ಹಿತ್ವಾ ವಿಹಂಗಮ ॥ ೭೦ ॥

ದಶಮಾಧ್ಯಾಯಮಾಹಾತ್ಮ್ಯಾದಪ್ಸರಾಶ್ಚಾಭವಂ ದಿವಿ ।
ಪದ್ಮಾವತೀರೇ ವಿಖ್ಯಾತಾ ಪದ್ಮಾಯಾ ದಯಿತಾ ಸಖೀ ॥ ೭೧ ॥

ಕದಾಚನ ಮಯಾ ಯಾನ್ತ್ಯಾ ವಿಮಾನೇನ ವಿಹಾಯಸಾ ।
ಏತತ್ಸರೋವರಂ ರಮ್ಯಂ ವಿಲೋಕ್ಯ ವಿಮಲಾಂಬುಜಂ ॥ ೭೨ ॥

ಅವತೀರ್ಯ ಜಲಕ್ರೀಡಾ ಯಾವದಾರಭ್ಯತೇ ಮಯಾ ।
ದುರ್ವಾಸಾಸ್ತಾವದಾಯಾತೋ ವಿವಸ್ತ್ರಾ ತೇನ ವೀಕ್ಷಿತಾ ॥ ೭೩ ॥

---

ಪ್ರಭಾವದಿಂದ ನಾನು ಮುನಿಗಳ ಮನೆಯಲ್ಲಿಯೇ ಹುಟ್ಟಿದೆನು ಅಲ್ಲಿ ಮುನಿಪುತ್ರಿಯೇ ನನ್ನನ್ನು ಕಾಪಾಡಿ ಬೆಳೆಸಿದಳು. ಗೀತೆಯ ಹತ್ತನೆಯ ಅಧ್ಯಾಯವು ಸಂಪತ್ಪ್ರದವೆಂದು ಪ್ರಸಿದ್ಧಿಯಾಗಿದೆ. ಅದರ ಹೆಸರು ವಿಭೂತಿ ಅಧ್ಯಾಯವೆಂದು. ಆ ಮನೆಯ ಬ್ರಾಹ್ಮಣನು ಬೆಳಗ್ಗೆ ಪಾಪಹಾರಕವಾದ ಅದನ್ನು ಓದುತ್ತಿದ್ದನು ಅದನ್ನು ನಾನೂ ಕೇಳುತ್ತಿದ್ದೆನು. ಕೆಲವು ಕಾಲದಮೇಲೆ ಆ ಸಾರಿಕೆಯಾಗಿದ್ದ ನಾನು ಸತ್ತೆನು. ಅನಂತರ ಆ ದಶಮಾಧ್ಯಾಯವನ್ನು ಕೇಳಿದ್ದುದರ ಮಹಿಮೆಯಿಂದ ಸ್ವರ್ಗದಲ್ಲಿ ಅಪ್ಸರಸ್ತ್ರೀಯಾಗಿ ಹುಟ್ಟಿದೆನು ನನಗೆ ಪದ್ಮಾವತಿಯೆಂಬ ಹೆಸರಿದ್ದಿತು. ನಾನು ಲಕ್ಷ್ಮಿಗೆ ಪ್ರೀತಿಪಾತ್ರಳಾದ ಸಖಿಯಾದೆನು.

೭೨-೭೩. ಒಂದುಸಾರಿ ವಿಮಾನದಲ್ಲಿ ಸಂಚಾರಮಾಡುತ್ತ ಮನೋಹರವಾದ ಕಮಲಗಳುಳ್ಳ ಈ ಸರೋವರವನ್ನು ನೋಡಿದೆನು. ಇದು ಬಹು ರಮ್ಯವಾಗಿದ್ದುದರಿಂದ ಇಲ್ಲಿ ಜಲಕ್ರೀಡೆಯಾಡಲು ಬಟ್ಟೆಯನ್ನು ತೆಗೆದು ನೀರಿಗೆ ಇಳಿಯುವಷ್ಟರಲ್ಲಿ ದುರ್ವಾಸ ಋಷಿಯು ಇಲ್ಲಿಗೆ ಬರಲು ಬೆತ್ತಲೆಯಾಗಿದ್ದ ನನ್ನನ್ನು ನೋಡಿದನು.

ತದ್ಭಯಾತ್ಪದ್ಮಿನೀರೂಪಂ ಧೃತವೋತಸ್ಮಯಾ ಸ್ವಯಂ ।
ಪದ್ಭ್ಯಾಂ ಪದ್ಮದ್ವಯಂ ಚೈವ ದ್ವಯಂ ಹಸ್ತದ್ವಯೇನ ಚ || ೭೪ ||

ಮುಖೇನ ಪಂಚಮಾಂಭೋಜಮಿತಿ ಪಂಚಾಂಬುಜಾ ತ್ವಹಂ ।
ದೃಷ್ಟ್ವಾ ತೇನ ಮುನೀಂದ್ರೇಣ ಕೋಪಜ್ವಲಿತಚಕ್ಷುಷಾ || ೭೫ ||

ಅನೇನೈವ ಸ್ವರೂಪೇಣ ತಿಷ್ಠ ಪಾಪೇ ಶತಂ ಸಮಾಃ ।
ಇತಿ ಶಾಪಂ ಸಮುತ್ಸೃಜ್ಯ ತೇನ ಚಾಂತರ್ದಧೇ ಕ್ಷಣಾತ್ || ೭೬ ||

ವಿಭೂತ್ಯಧ್ಯಾಯಮಾಹಾತ್ಮ್ಯಪ್ರಾಣೋ ಮೋ ನ ವಿಲೀಯತೇ ।
ಮದ್ವಿಲಂಘನಮಾತ್ರೇಣ ಪತಿತೋಽಸಿ ಮಹೀತಲೇ || ೭೭ ||

ಅದ್ಯ ಶಾಪನಿವೃತ್ತಿರ್ಮೇ ತಿಷ್ಠ ತಸ್ತ್ವೇ ಖಗೋತ್ತಮ ।
ನಿಶಾಮಯ ಮಯಾ ಗೀಯಮಾನಮಧ್ಯಾಯಮುತ್ತಮಂ ।
ಯಸ್ಯಾಕರ್ಣನಮಾತ್ರೇಣ ತ್ವಮದ್ಯೈವ ವಿಮೋಕ್ಷ್ಯಸೇ || ೭೮ ||

---

೭೪-೭೬. ಆ ಋಷಿಯ ಹೆದರಿಕೆಯಿಂದ ನಾನು ಪದ್ಮಿನಿಯ ರೂಪವನ್ನು ಹೊಂದಿದೆನು. ಕಾಲುಗಳೆರಡೂ ಎರಡು ಕಮಲಗಳಾದುವು. ಕೈಗಳೆರಡೂ ಎರಡು ಕಮಲಗಳಾದವು. ಮುಖವು ಐದನೆಯ ಕಮಲವಾಯಿತು. ಈ ರೀತಿಯಾಗಿ ಕಮಲಿನಿಯಾದ ಐದು ಕಮಲಗಳ ರೂಪವಾದೆನು. ಆ ಋಷಿಯು ನನ್ನನ್ನು ನೋಡಿ ಕೋಪಗೊಂಡು ಎಲೈ ಪಾಪಿಯೇ! ಈ ರೀತಿಯಾಗಿಯೇ ನೀನು ನೂರು ವರ್ಷಗಳವರೆಗೂ ಇರು ಎಂಬುದಾಗಿ ಶಾಪವನ್ನು ಕೊಟ್ಟು ಹೊರಟುಹೋದನು.

೭೭. ಆ ವಿಭೂತಿಯೆಂಬ ದಶಮಾಧ್ಯಾಯದ ಮಹಿಮೆಯಿಂದ ನನ್ನ ಮಾತು ನಾಶವಾಗಲಿಲ್ಲ ಆ ನನ್ನನ್ನು ದಾಟಿ ನೀನು ಹೋದುದರಿಂದ ಭೂಮಿಯಲ್ಲಿ ಬಿದ್ದುಹೋದೆ.

೭೮. ಹೀಗಿರುತ್ತಿದ್ದ ನನ್ನ ಶಾಪವು ಇಂದಿಗೆ ಕೊನೆಗಂಡಿತು. ನೀನು ಇಲ್ಲಿಯೇ ಇರು ನಾನು ಆ ಗೀತೆಯ ದಶಮಾಧ್ಯಾಯವನ್ನು ಹೇಳುತ್ತೇನೆ. ಅದು ಉತ್ತಮವಾದುದು. ಅದನ್ನು ಕೇಳಿದ ಕೂಡಲೆ ನಿನಗೆ ಮೋಕ್ಷವು ಬರುತ್ತದೆ.

॥ ಪಕ್ಷ್ಯುವಾಚ ॥

ಇತ್ಯಸೌ ದಶಮಾಧ್ಯಾಯಂ ಪಪಾಠ ಶ್ಲಕ್ಷ್ಣಯಾ ಗಿರಾ ।
ತನ್ಮಾಕರ್ಣ್ಯ ತಯಾ ದತ್ತಮಾದಾಯ ಚ ಸರೋರುಹಂ ॥
ಮಯಾ ಸಮರ್ಪಿತಂ ತುಭ್ಯಂ ಪದ್ಮಿನ್ಯಾ ಪರಮುತ್ತಮಂ ॥ ೭೯ ॥

॥ ಶಿವ ಉವಾಚ ॥

ಇತ್ಯುಕ್ತ್ವಾ ಸ ಜಹೌ ದೇಹಂ ತದದ್ಭುತಮಿವಾಭವತ್ ॥ ೮೦ ॥

॥ ಭೃಂಗಿರಿಟಿರುವಾಚ ॥

ಪುರಾತನಭವೇ ಕೋಽಯಂ ಬ್ರಹ್ಮಹಂಸೋಽಭವತ್ಕಥಂ ।
ತವಾಗ್ರತಃ ಕುತೋ ಹೇತೋರುತ್ಸಸರ್ಜ ಕಳೇಬರಂ ॥ ೮೧ ॥

॥ ಶ್ರೀ ಶಿವ ಉವಾಚ ॥

ಇತಿ ಭೃಂಗಿರಿಟೇರ್ವಾಕ್ಯಮಾಕರ್ಣ್ಯಾಹಂ ತದಾಬ್ರವಂ ।
ದ್ವಿಜವೇಶ್ಮನಿ ಪೂರ್ವಸ್ಮಿನ್ ಜನ್ಮನ್ಯಯಮಜಾಯತ ॥ ೮೨ ॥

---

೭೯. ಪಕ್ಷಿಯು ಹೇಳಿತು-ಆಗ ಆ ಅಪ್ಸರಸೆಯು ಆ ದಶಮಾಧ್ಯಾಯವನ್ನು ಚೆನ್ನಾಗಿ ಓದಿದಳು. ಅದನ್ನು ಕೇಳಿದೆನು. ಅವಳೇ ಈ ಕಮಲವನ್ನು ಕೊಟ್ಟಳು. ಅವಳು ಕೊಟ್ಟ ಈ ಉತ್ತಮವಾದ ಕಮಲವನ್ನು ನಿನಗೆ ಸಮರ್ಪಿಸಿದ್ದೇನೆ.

೮೦. ಶಿವನು ಹೇಳಿದನು-ಹೀಗೆಂದು ಹೇಳಿ ಆ ಪಕ್ಷಿಯು ಪ್ರಾಣವನ್ನು ಬಿಟ್ಟಿತು ಅದು ನೋಡಲು ಆಶ್ಚರ್ಯವಾಗಿದ್ದಿತು.

೮೧. ಭೃಂಗಿರಿಟಿಯು ಹೇಳಿದನು-ಎಲೈ ಸ್ವಾಮಿಯೆ ! ಪೂರ್ವಜನ್ಮದಲ್ಲಿ ಇದು ಏನಾಗಿದ್ದಿತು ? ಬ್ರಹ್ಮನ ಹಂಸವಾಗಿ ಹೇಗೆ ಆಯಿತು? ನಿನ್ನೆದುರಿಗೆ ಅದು ಪ್ರಾಣಬಿಡಲು ಕಾರಣವೇನು ?

೮೨-೮೩. ಶ್ರೀ ಶಿವನು ಹೇಳಿದನು-ಭೃಂಗಿರಿಟಿಯು ಇಂತೆನ್ನಲು ಅದನ್ನು ನಾನು ಕೇಳಿ ಇಂತೆಂದನು. ಇದು ಪೂರ್ವಜನ್ಮದಲ್ಲಿ ಒಬ್ಬ ಬ್ರಾಹ್ಮಣನ

ಸುತಪಾ ಇತಿ ವಿಖ್ಯಾತೋ ಬ್ರಹ್ಮಚಾರೀ ಜಿತೇಂದ್ರಿಯಃ ।
ವಸನ್ ಗುರುಕುಲೇ ಕುರ್ವನ್ ವೇದಾಧ್ಯಯನಮನ್ವಹಂ ॥ ೮೩ ॥

ಗುರುಶುಶ್ರೂಷಣಂ ಸಮ್ಯಗ್ವಿದಧಾತಿ ಸ ಭಕ್ತಿತಃ ।
ಶಯಾನಸ್ಯ ಗುರೋಶ್ಶಯ್ಯಾಂ ನಿದ್ರಿತಸ್ಯ ಪದಾಸ್ಪೃಶತ್ ॥ ೮೪ ॥

ತೇನ ಪಾಪೇನ ತಿರ್ಯಕ್ತ್ವಮಯಂ ಸ್ವರ್ಗೇಽಪಿ ಲಬ್ಧವಾನ್ ।
ಪದ್ಮಯೋನಿಮರಾಳಾನಾಂ ಮಧ್ಯೇ ಜಾತಸ್ತತೋ ದ್ವಿಜಃ ॥ ೮೫ ॥

ಅಸ್ಮಿನ್ ಜನ್ಮನ್ಯಮುಷ್ಯೇಹ ಪುರಾಸ್ಮಲ್ಲೋಕನಾವಧಿ ।
ಗೀತಾನಾಂ ದಶಮಾಧ್ಯಾಯಂ ನಳಿನ್ಯಾ ಕಥಿತಂ ತತಃ ॥ ೮೬ ॥

ಆಕರ್ಣ್ಯ ವಿಹಗೋ ಲೇಭೇ ಬ್ರಹ್ಮಜ್ಞಾನಮನುತ್ತಮಂ ।
ಸೋಽಯಂ ವಿಪ್ರಕುಲೇ ಜಾತೋ ದಶಮಾಧ್ಯಾಯವೈಭವಾತ್ ॥ ೮೭ ॥

ಜನ್ಮಾಭ್ಯಾಸವಶಾದಸ್ಯ ಶಿಶೋರಪಿ ಮುಖಾಂಬುಜಾತ್ ।
ಗೀತಾನಾಂ ದಶಮಾಧ್ಯಾಯಃ ಸಮುಲ್ಲಸತಿ ಸರ್ವದಾ ॥ ೮೮ ॥

---

ಮನೆಯಲ್ಲಿ ಹುಟ್ಟಿದ್ದಿತು. ಆಗ ಇವರ ಹೆಸರು ಸುತಪಾ ಎಂಬುದಾಗಿ ಪ್ರಸಿದ್ಧವಾಗಿದ್ದಿತು. ಬ್ರಹ್ಮಚಾರಿಯಾಗಿ ಜಿತೇಂದ್ರಿಯನಾಗಿದ್ದನು. ಗುರುವಿನ ಮನೆಯಲ್ಲಿರುತ್ತ ನಿತ್ಯವೂ ವೇದಾಧ್ಯಯನ ಮಾಡುತ್ತಲಿದ್ದನು.

೮೪. ಅವನು ಗುರು ಶುಶ್ರೂಷೆಯನ್ನು ಭಕ್ತಿಯಿಂದ ಚೆನ್ನಾಗಿ ಮಾಡುತ್ತಿದ್ದನು. ಒಂದು ಸಾರಿ ಗುರುವು ಹಾಸಿಗೆಯ ಮೇಲೆ ಮಲಗಿರಲು ನಿದ್ದೆಯ ಕಣ್ಣಿನಿಂದ ತಿಳಿಯದೆ ಆ ಗುರುವಿನ ಹಾಸಿಗೆಯನ್ನು ಇವನುಕಾಲಿನಿಂದ ತುಳಿದನು.

೮೫. ಆ ಪಾಪದಿಂದ ಅವನು ಸ್ವರ್ಗದಲ್ಲಿಯೂ ಕೂಡ ಕೀಳು ಜಾತಿಯಾದ ಬ್ರಹ್ಮನ ಹಂಸಗಳಲ್ಲಿ ಹುಟ್ಟಿದನು.

೮೬-೮೭. ಈ ಜನ್ಮದಲ್ಲಿ ಈತನು ನನ್ನನ್ನು ನೋಡುವವರೆಗೂ ಆ ಜನ್ಮವಿದ್ದಿತು. ಗೀತೆಯ ದಶಮಾಧ್ಯಾಯವನ್ನು ಆ ನಳಿನಿಯು ಆ ಹಂಸಕ್ಕೆ ಹೇಳಲು ಅದನ್ನು ಕೇಳಿದ ಮಹಿಮೆಯಿಂದ ಬ್ರಹ್ಮಜ್ಞಾನವನ್ನು ಹೊಂದಿ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿರುವನು.

೮೮. ಹಿಂದಿನ ಜನ್ಮದ ಅಭ್ಯಾಸದಿಂದ ಮಗುವಾದರೂ ಇವನ ಮುಖದಿಂದ ಗೀತೆಯ ದಶಮಾಧ್ಯಾಯವು ಯಾವಾಗಲೂ ಹೊರಡುತ್ತಲೇ ಇರುವುದು.

ತವದರ್ಥಪರಿಣಾಮೇನ ಸರ್ವಭೂತೇಷ್ವವಸ್ಥಿತಂ ।
ಶಂಖಚಕ್ರಧರಂ ದೇವಮಯಂ ಪಶ್ಯತಿ ಸರ್ವದಾ ॥ ೮೯ ॥

ಯಸ್ಮಿನ್ಯಸ್ಮಿನ್ಸದೈವಾಸ್ಯ ದೃಷ್ಟಿಸ್ನಿಗ್ಧಾ ಶರೀರಿಣೇ ।
ಸ ಸ ಮುಕ್ತೋ ಭವೇತ್ಸರ್ವಃ ಸುರಾಪೋ ಬ್ರಹ್ಮಹಾಥವಾ ॥ ೯೦ ॥

ತದ್ವಿಜ್ಞಾಯ ಮಯಾ ವಿಪ್ರಃ ಪರಮಾತ್ಮಸ್ವರೂಪಿಣಾ ।
ಇದಂ ನಗರಮಾನೀತೋ ಮುಕ್ತಿಕ್ಷೇತ್ರಂ ಸ್ವಭಾವತಃ ॥ ೯೧ ॥

ಅತ್ರತ್ಯಾನಾಂ ಮನುಷ್ಯಾಣಾಂ ಮುಕ್ತಿಃ ಕರತಳೇ ಸ್ಥಿತಾ ।
ತೇನಾಸ್ಯ ದೃಷ್ಟಿಪಾತೇನ ವಿಶೇಷೋನ್ಯೋ ನ ಜಾಯತೇ ॥ ೯೨ ॥

ನ ದದಾಮಿ ಬಹಿರ್ಗನ್ತುಮಹಮಸ್ಯ ಪುರಃಕೃತಂ ।
ದಶಮಾಧ್ಯಾಯಮಾಹಾತ್ಮ್ಯಾತ್ ತತ್ವಜ್ಞಾನಂ ಸುದುರ್ಲಭಂ ॥ ೯೩ ॥

---

೮೯. ಆ ಗೀತೆಯ ಅಭ್ಯಾಸಮಹಿಮೆಯಿಂದ ಅವನು ಎಲ್ಲರಲ್ಲಿಯೂ ಇರುತ್ತಿರುವ ಶಂಖಚಕ್ರಗಧಾದರನಾದ ಶ್ರೀವಿಷ್ಣುವನ್ನು ಯಾವಾಗಲೂ ನೋಡುತ್ತಿರುವನು.

೯೦. ಇವನು ಯಾವ ಯಾವ ಪ್ರಾಣಿಯನ್ನು ಸ್ನೇಹದಿಂದ ನೋಡುತ್ತಾನೆಯೋ ಅವರು ಸುರಾಪಾನಮಾಡಿರಲಿ ಬ್ರಹ್ಮಹತ್ಯೆ ಮಾದಿರಲಿ ಎಲ್ಲರೂ ಮುಕ್ತಿಯನ್ನು ಹೊಂದುತ್ತಾರೆ.

೯೧. ಪರಮಾತ್ಮಸ್ವರೂಪಿಯಾದ ನಾನು ಅದನ್ನು ತಿಳಿದು ಆ ಬ್ರಾಹ್ಮಣನನ್ನು ಸ್ವಭಾವವಾಗಿಯೇ ಮುಕ್ತಿ ಕ್ಷೇತ್ರವಾದ ಈ ಕಾಶಿಗೆ ತಂದಿದ್ದೇನೆ.

೯೨. ಈ ಊರಿನಲ್ಲಿರುವವರಿಗೆ ಮುಕ್ತಿಯು ಬಹು ಸುಲಭವಾಗಿ ಅಂಗೈಯಲ್ಲಿಯೇ ಇರುವುದು. ಆದ್ದರಿಂದ ಇವನ ದೃಷ್ಟಿಯು ಬಿದ್ದುದದರಿಂದ ಯಾವ ಹೆಚ್ಚು ಕಡಿಮೆಯೂ ಆಗುವುದೇ ಇಲ್ಲ.

೯೩-೯೪. ಆದ್ದರಿಂದ ಇವನನ್ನು ಹೊರಕ್ಕೆ ಹೊರಡುವುದಕ್ಕೆ ನಾನು ಬಿಡುವುದೇ ಇಲ್ಲ. ದಶಮಾಧ್ಯಾಯದ ಮಹಿಮೆಯಿಂದ ತತ್ವಜ್ಞಾನವು

ಲಬ್ಧಮೇತೇನ ಮುನಿನಾ ಜೀವನ್ಮುಕ್ತಿರಿಯಂ ತಥಾ ।
ತೇನಾಸ್ಯ ಚಲತೋ ಹಸ್ತಂ ದದಾಮಿ ಪಥಿ ಗಚ್ಛತಃ ॥ ೯೪ ॥

ದಶಮಾಧ್ಯಾಯಮಹಿಮಾ ಸೋಽಯಂ ಭೃಂಗಿರಿಟೇ ಮಹರ್ಾ ।
ಇತಿ ಭೃಂಗಿರಿಟೇರಗ್ರೇ ಕಥಿತಂ ಯತ್ಕಥಾನಕಂ ॥ ೯೫ ॥

ನರೋ ವಾಪ್ಯಥವಾ ನಾರೀ ಯೋಽಪಿ ಕೋಽಪಿ ಚ ವಾ ಪುನಃ ।
ಅಸ್ಯ ಶ್ರವಣಮಾತ್ರೇಣ ಸರ್ವಾಶ್ರಮಫಲಂ ಲಭೇತ್ ॥ ೯೬ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ದಶಮಾಧ್ಯಾಯ ಮಾಹಾತ್ಮ್ಯಂ ನಾಮ ಅಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

ಸುಲಭವಾಗಿ ಸಿಕ್ಕುತ್ತದೆ. ಅದನ್ನು ಈ ಮುನಿಯು ಹೊಂದಿದ್ದಾನೆ. ಇವನು ಜೀವನ್ಮುಕ್ತನು. ಆದ್ದರಿಂದಲೇ ಇವನು ಹೋಗುತ್ತಿದ್ದರೆ ನಾನು ಹಸ್ತಲಾಘವನ್ನು ಕೊಡುತ್ತೇನೆ.

೯೫-೯೬ ಎಲೈ ಭೃಂಗಿರಿಟಿಯೇ! ಇದೇ ದಶಮಾಧ್ಯಾಯದ ಮಹಿಮೆಯು. ಅತಿ ರಮ್ಯವಾದುದು. ಭೃಂಗಿರಿಟಿಯ ಎದುರಿಗೆ ಹೇಳಿದ ಕಥೆಯನ್ನು ನಿನ್ನೆದುರಿಗೂ ಹೇಳಿದ್ದೇನೆ. ಇದು ಎಲ್ಲ ಪಾಪಗಳನ್ನೂ ನಾಶಮಾಡುತ್ತದೆ. ಹೆಂಗಸರಾಗಲಿ ಗಂಡಸರಾಗಲಿ ಯಾರೇ ಆಗಲಿ ಈ ಕಥೆಯನ್ನು ಕೇಳಿದುದರಿಂದ ಎಲ್ಲಾ ಆಶ್ರಮಗಳ ಫಲವನ್ನೂ ಹೊಂದುತ್ತಾರೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹತ್ತನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಾಶೀತ್ಯಧಿಕಶತತಮೋಽಧ್ಯಾಯಃ ||



|| ದೇವ್ಯುವಾಚ ||

ಇತಿ ಹಾಸೋಽಯಮೀಶಾನ ಶ್ರೇಯಸಾಂ ಸಾಧನಂ ಪರಂ |
ಆಕರ್ಣ್ಯ ಕರುಣಾಪೂರ್ಣ ಮಮ ಕಾಂಕ್ಷಾ ಪ್ರವರ್ತತೇ || ೧ ||

ಏಕಾದಶಸ್ಯ ಮಾಹಾತ್ಮ್ಯಮಧ್ಯಾಯಸ್ಯ ಕಥಾಶ್ರಯಂ |
ವ್ಯಾವರ್ಣಯ ವಿರೂಪಾಕ್ಷ ವಕ್ತ್ರ್ಯಾಣಾಂ ಪ್ರಥಮಂ ಪ್ರಭೋ || ೨ ||

|| ಈಶ್ವರ ಉವಾಚ ||

ಆಕರ್ಣಯ ಕಥಾಂ ಕಾಂತೇ ಗೀತಾವರ್ಣನಸಂಶ್ರಯಾಂ |
ವಿಶ್ವರೂಪಾಭಿಧಾನಸ್ಯ ಮಾಹಾತ್ಮ್ಯಮಪಿ ಪಾವನಂ || ೩ ||

---

## ನೂರ ಎಂಭತ್ತೊಂದನೆಯ ಅಧ್ಯಾಯವು



೧. ದೇವಿಯು ಹೇಳಿದಳು-ಎಲೈ ಈಶ್ವರನೆ! ಈ ಕಥೆಯು ಬಹುವಾದ ಶ್ರೇಯಸ್ಸನ್ನುಂಟುಮಾಡುತ್ತದೆ. ಇದನ್ನು ಕೇಳಿದುದರಿಂದ ಇನ್ನೂ ಹೆಚ್ಚಿನ ಆಸೆಯು ಮನಸ್ಸಿನಲ್ಲಿ ಹುಟ್ಟಿದೆ.

೨. ಗೀತೆಯ ಹನ್ನೊಂದನೆಯ ಅಧ್ಯಾಯದ ಮಹಿಮೆಯನ್ನೂ ಅದರ ಕಥೆಯನ್ನೂ ಮೊದಲು ಹೇಳು. ಕೇಳಬೇಕೆಂಬ ಆಸೆಯಿದೆ.

೩. ಈಶ್ವರನು ಹೇಳಿದನು-ಎಲೈ ಕಾಂತೆಯೆ! ಗೀತೆಯ ವರ್ಣನೆಯನ್ನು ಆಶ್ರಯಿಸಿಕೊಂಡಿರುವ ವಿಶ್ವರೂಪವೆಂಬ ಹೆಸರುಳ್ಳ ಆ ವಿಷ್ಣುವಿನ ಪಾವನದಾದ ಚರಿತ್ರೆಯನ್ನು ಕೇಳು.

ಅಧ್ಯಾಯಸ್ಯ ವಿಶಾಲಾಕ್ಷಿ ವಕ್ತುಂ ತಾವನ್ನ ಶಕ್ಯತೇ ।
ಸಹಸ್ರಾಣಿ ಕಥಾಸ್ಸಂತಿ ತತ್ರೈಕಾ ಕಥ್ಯತೇ ಕಥಾ    ॥ ೪ ॥

ಪ್ರಣೀತಾಯಾಸ್ತಟೇ ನದ್ಯಾ ಮೇಘಂಕರಮಿತಿ ಶ್ರುತಂ ।
ನಗರಂ ಗರಿಮಾಧಾರಂ ತುಂಗಪ್ರಾಕಾರಗೋಪುರಂ    ॥ ೫ ॥

ವಿಶಾಲಾಶ್ರಮಶಾಲಾಸು ಸ್ವರ್ಣಸ್ತಂಭವಿಭೂಷಿತಂ ।
ಶ್ರೀಮದ್ಭಿಃ ಸುಖಿಭಿಃ ಶಾಂತೈಃ ಸದಾಚಾರೈರ್ಜಿತೇಂದ್ರಿಯೈಃ    ॥ ೬ ॥

ಅಧಿಷ್ಠಿತಂ ಜನೈಶ್ಚಾರುಶೃಂಗಾಟಕಮನೋಹರಂ ।
ಕೀರ್ತಿಸ್ತಂಭಸ್ಫುರತ್ಸ್ವರ್ಣಸುಪರ್ಣಶತಶೋಭಿತಂ    ॥ ೭ ॥

ಪತಾಕಾಕಿಂಕಿಣೀಕ್ವಾಣಕಾದಂಬಕಪಿಕಸ್ವರಂ ।
ವೇದಾಧ್ಯಯನನಿರ್ಘೋಷವಾಚಾಳಿತದಿಗಂತರಂ    ॥ ೮ ॥

---

೪. ಈ ಅಧ್ಯಾಯದ ಕಥೆಗಳು ಬಹಳವಾಗಿವೆ. ಅವೆಲ್ಲವನ್ನೂ ಹೇಳುವುದಕ್ಕೆ ಆಗುವುದಿಲ್ಲ. ಅವುಗಳಲ್ಲಿ ಒಂದು ಕಥೆಯನ್ನು ಹೇಳುತ್ತೇನೆ. ಕೇಳು.

೫-೭. ಪ್ರಣೀತೆಯೆಂಬ ನದಿಯೊಂದಿರುವುದು. ಅದರ ದಡದಲ್ಲಿ ಮೇಘಂಕರ ವೆಂಬುದೊಂದು ಪಟ್ಟಣವಿರುವುದು. ಅದು ಉತ್ಕೃಷ್ಟವಾದ ವಸ್ತುಗಳಿಗೆ ಆಧಾರವಾದುದು. ಉತ್ತಮವಾದ ಮನೆಗಳಿರುವುವು. ಅಲ್ಲಿ ಅನೇಕವಾದ ದೊಡ್ಡ ಅಂಗಡಿಗಳೂ ಇರುವುವು. ಚಿನ್ನದ ಕಂಬಗಳು ಆ ಮನೆಗಳಲ್ಲಿ ಇರುವುವು. ಅಲ್ಲಿರತಕ್ಕವರು ಶ್ರೀಮಂತರಾಗಿಯೂ ಸುಖಿಗಳಾಗಿಯೂ ಇದ್ದಾರೆ. ಅವರು ಶಾಂತರು, ಸದಾಚಾರವುಳ್ಳವರು, ಜಿತೇಂದ್ರಿಯರು ಆ ಊರಿನಲ್ಲಿರುವ ಮಾರ್ಗಗಳೂ, ಚೌಕಗಳೂ, ಮನೋಹರವಾಗಿವೆ. ಕೀರ್ತಿಪತಾಕೆಗಳಲ್ಲಿ ಚಿನ್ನದ ಗರುಡಗಳ ಬಾವಟವನ್ನು ಹಾಕಿ ಪ್ರಕಾಶಿಸುವಂತೆ ಮಾಡಿದ್ದಾರೆ.

೮-೯. ಆ ಪತಾಕೆಗಳಲ್ಲಿ ಕಟ್ಟಿರುವ ಸಣ್ಣ ಗೆಜ್ಜೆಗಳ ಧ್ವನಿಯಿಂದ ಹರ್ಷಿತವಾಗಿ ಅಲ್ಲಿರುವ ಹಂಸಗಳೂ, ಕೋಗಿಲೆಗಳೂ, ಕೂಗುತ್ತವೆ. ಅಲ್ಲಿರುವ ದ್ವಿಜರು ವೇದಾಧ್ಯಯನ ಮಾಡುತ್ತಿರುವ ಧ್ವನಿಯಿಂದ ದಿಕ್ಕುಗಳೆಲ್ಲವೂ

ತೂರ್ಯಸಂಘೋಷಸಂಕೀರ್ಣವಿಶಾಲವ್ಯೋಮಮಂಡಲಂ ।
ಪತಾಕಾಪಲ್ಲವೋದ್ಭೂತವಾತನಿರ್ಜಿತವಿಗ್ರಹಂ ॥ ೯ ॥

ರಾಜಮಾರ್ಗವರದ್ವಾರನಾರೀಮಂಜೀರಶಿಂಜಿತೈಃ ।
ವಲ್ಲಕೀವೇಣುಕೈರ್ಗೀತೈಃ ಭಾತಿ ವಾಜೀಂದ್ರಹೇಷಿತೈಃ ॥ ೧೦ ॥

ಪ್ರೇಕ್ಷಮಾಣಾಮಿವಾಭೀಕ್ಷ್ಣಂ ದಿಕ್ಪಾಲಾನಾಂ ಪುರೈಸ್ಸಮಂ ।
ಆಸ್ತೇ ಜಗತ್ಪತಿರ್ಯತ್ರ ಶಾರ್ಙ್ಗಪಾಣಿರ್ವಿರಾಜಿತಃ ॥ ೧೧ ॥

ಮೂರ್ತಿಮತ್ಪರಮಂ ಬ್ರಹ್ಮ ಜಗಲ್ಲೋಚನಜೀವಿತಂ ।
ಲಕ್ಷ್ಮೀನಯನರಾಜೀವಪೂಜಿತಾಕಾರಗೌರವಃ ॥ ೧೨ ॥

ತ್ರಿವಿಕ್ರಮವಪುರ್ಮೇಘಶ್ಯಾಮಲಃ ಕೋಮಲಾಕೃತಿಃ ।
ಶ್ರೀವತ್ಸವಕ್ಷಾ ರಾಜೀವವನಮಾಲಾವಿಭೂಷಿತಃ ॥ ೧೩ ॥

---

ಧ್ವನಿತವಾಗುತ್ತಿವೆ. ಅಲ್ಲಿನ ವಾದ್ಯಗಳ ಧ್ವನಿಯಿಂದ ಅಂತರಿಕ್ಷವೆಲ್ಲವೂ ಧ್ವನಿತವಾಗುತ್ತಿವೆ ಪತಾಕೆಗಳು ಬೀಸುವುದರಿಂದ ಅವುಗಳಿಂದ ಹೊರಟ ಗಾಳಿಯೇ ಯುದ್ಧವು ಒದಗದಂತೆ ಮಾಡುತ್ತಿದೆ.

೧೦. ರಾಜಮಾರ್ಗದಲ್ಲಿರುವ ಹೆಂಗಸರ ಕಾಲುಕಡಗದ ಧ್ವನಿಯಿಂದಲೂ ಅವರ ವೀಣೆಯ, ಕೊಳಲಿನ ಧ್ವನಿಯಿಂದಲೂ ಹಾಡಿಕೆಯಿಂದಲೂ, ಉತ್ತಮವಾದ ಕುದುರೆಗಳ ಧ್ವನಿಯಿಂದಲೂ ಆ ಊರು ಕೂಡಿಕೊಂಡಿದೆ.

೧೧. ಆ ಪಟ್ಟಣವು ದಿಕ್ಪಾಲಕರ ಪಟ್ಟಣದಂತೆಯೇ ಕಾಣುತ್ತಿರುವುದು. ಅಲ್ಲಿ ಶಾರ್ಙ್ಗಪಾಣಿಯಾದ ವಿಷ್ಣುವು ಸುಖದಿಂದ ವಾಸಿಸುತ್ತಿದ್ದಾನೆ.

೧೨. ಇದು ಆ ಪರಬ್ರಹ್ಮನ ಮೂರ್ತಿಮತ್ತಾದ ಬ್ರಹ್ಮಸ್ವರೂಪವು. ಪ್ರಪಂಚದ ಕಣ್ಣುಗಳಿಗೆ ಜೀವಿತಪ್ರಾಯವು. ಲಕ್ಷ್ಮಿಯ ಕಣ್ಣುಗಳೆಂಬ ಕಮಲಗಳಿಂದ ಪೂಜಿತವಾದ ಗೌರವವುಳ್ಳ ಪದಾರ್ಥವು.

೧೩. ಅವನು ತ್ರಿವಿಕ್ರಮಾವತಾರ ಮಾಡಿದ ದೇಹವುಳ್ಳವನು. ಮೇಘದಂತೆ ನೀಲ ಬಣ್ಣವುಳ್ಳವನಾಗಿದ್ದಾನೆ. ಕೋಮಲವಾದ ಆಕಾರವುಳ್ಳವನು ಶ್ರೀವತ್ಸವೆಂಬ ಮಚ್ಚೆಯೇ ಎದೆಯಲ್ಲಿ ಉಳ್ಳವನು ಕಮಲದ ಮಾಲೆಯನ್ನು ಕಾಲಿನಿಂದ ಹಿಡಿದು ತಲೆಯವರೆವಿಗೂ ಹಾಕಿಕೊಂಡಿರುವವನು.

ಅನೇಕಭೂಷಣೋಪೇತಃ ಸರತ್ನ ಇವ ವಾರಿಧಿಃ ।
ಚಲತ್ಸೌದಾಮಿನೀದಾಮಸಾಂದ್ರಮೇಘಸಮದ್ಯುತಿಃ ॥ ೧೪ ॥

ತಸ್ಯಾಸ್ತೇ ಮುಕುಟೇ ಸಾಕ್ಷಾಚ್ಛಾಂರ್ಗಪಾಣಿಃ ಪರಃ ಪುಮಾನ್ ।
ತಂ ದೃಷ್ಟ್ವಾ ಮುಚ್ಯತೇ ಜನ್ತುಃ ಜನ್ಮಸಂಸಾರಬಂಧನಾತ್ ॥ ೧೫ ॥

ಯಸ್ಮಿನ್ಪುರೇ ಮಹಾತೀರ್ಥಂ ವಿದ್ಯತೇ ಮೇಖಲಾಭಿಧಂ ।
ಯತ್ರ ಸ್ನಾತ್ವಾ ನರೈರ್ನಿತ್ಯಂ ಪ್ರಾಪ್ಯತೇ ಪರಮಂ ಪದಂ ॥ ೧೬ ॥

ತತ್ರ ವೀಕ್ಷ್ಯ ಜಗನ್ನಾಥಂ ನರಸಿಂಹಂ ಕೃಪಾರ್ಣವಂ ।
ಸಪ್ತಜನ್ಮಾರ್ಜಿತಾದ್ಘೋರಾತ್ ಮುಚ್ಯತೇ ದುಷ್ಕೃತಾನ್ನರಃ ॥ ೧೭ ॥

ಮೇಖಲಾಯಾಂ ಗಣಾಧೀಶಂ ವಿಲೋಕಯತಿ ಯೋ ನರಃ ।
ಸ ನಿಸ್ತರತಿ ವಿಘ್ನಾನಿ ದುಸ್ತರಾಣ್ಯಪಿ ಸರ್ವದಾ ॥ ೧೮ ॥

---

೧೪. ಅನೇಕವಾದ ಒಡವೆಗಳಿಂದ ಕೂಡಿಕೊಂಡು ರತ್ನದಿಂದ ಕೂಡಿರುವ ಸಮುದ್ರದಂತೆ ಶೋಭಿಸುತ್ತಿರುವನು ಈ ಒಡವೆಗಳಿರುವುದರಿಂದ ಅವುಗಳ ಕಾಂತಿಯಿಂದ ಮಿಂಚುಗಳು ಹೊಳೆಯುತ್ತಿರುವ ಮೇಘದಂತೆ ಪ್ರಕಾಶಿಸುತ್ತಾ ಇರುವನು.

೧೫. ಆ ಊರಿನ ಮುಂಭಾಗದಲ್ಲಿ ಪರಮಪುರುಷನೂ ಶಾಂರ್ಗಪಾಣಿಯೂ ಆದ ಇಂತಹ ವಿಷ್ಣುವು ಇದ್ದಾನೆ ಆ ಸ್ವಾಮಿಯನ್ನು ನೋಡಿದರೆ ಪ್ರಾಣಿಯು ಜನ್ಮ ಮರಣರೂಪವಾದ ಸಂಸಾರದಿಂದ ಬಿಡುಗಡೆಹೊಂದುತ್ತಾನೆ.

೧೬. ಆ ಊರಿನಲ್ಲಿ ಮೇಖಲೆಯೆಂಬ ತೀರ್ಥವಿರುವುದು. ಅದು ಮಹಾ ತೀರ್ಥವು. ಅಲ್ಲಿ ಸ್ನಾನಮಾಡಿದರೆ ಶಾಶ್ವತವಾದ ಪರಮಪದವು ದೊರೆಯುತ್ತದೆ.

೧೭. ಅಲ್ಲಿರತಕ್ಕ ಜಗನ್ನಾಥನಾದ ನರಸಿಂಹನನ್ನು ದರ್ಶನಮಾಡಿದರೆ ಏಳು ಜನ್ಮದಿಂದ ಮಾಡಿದ ಘೋರವಾದ ಪಾಪವನ್ನು ಕಳೆದುಕೊಳ್ಳುತ್ತಾನೆ.

೧೮. ಆ ಪಟ್ಟಣದ ಸಮೀಪದಲ್ಲಿರುವ ಗಣಪತಿಯನ್ನು ದರ್ಶನಮಾಡಿದರೆ ಅವನು ಬಹು ಕಷ್ಟವಾದ ವಿಘ್ನಗಳನ್ನು ಕಳೆದುಕೊಳ್ಳುತ್ತಾನೆ.

ಬ್ರಹ್ಮಚರ್ಯಪರೋ ದಾನ್ತೋ ನಿರ್ಮಮೋ ನಿರಹಂಕೃತಿಃ ।
ತಸ್ಮಿನ್ ಮೇಘಂಕರೇ ಕಶ್ಚಿದಭೂದ್ಬ್ರಾಹ್ಮಣಸತ್ತಮಃ ॥ ೧೯ ॥

ಸುನಂದ ಇತಿ ವಿಖ್ಯಾತೋ ವೇದಶಾಸ್ತ್ರವಿಶಾರದಃ ।
ವಶೀಕೃತೇಂದ್ರಿಯಗ್ರಾಮೋ ವಾಸುದೇವ ಪರಾಯಣಃ ॥ ೨೦ ॥

ದೇವಸ್ಯ ಶಾಂಗಿ೯ಣಃ ಪಾರ್ಶ್ವೇ ಗೀತಾಧ್ಯಾಯಮಿಮಂ ಪ್ರಿಯೇ ।
ಏಕಾದಶಂ ಪಠತ್ಯೇಷಃ ವಿಶ್ವರೂಪಪ್ರದರ್ಶನಂ ॥ ೨೧ ॥

ಅಧ್ಯಾಯಸ್ಯ ಪ್ರಭಾವೇನ ಬ್ರಹ್ಮಜ್ಞಾನಮವಾಪ ಸಃ ।
ಪರಮಾನಂದಸಂದೋಹಶ್ಲಾಘ್ಯಸಂವಿತ್ಸಮಾಧಿನಾ ॥ ೨೨ ॥

ಪ್ರತ್ಯಙ್ಮುಖೇಂದ್ರಿಯತಯಾ ನಿಶ್ಚಲಾಂ ಸ್ಥಿತಿಮೀಯುಷಾ ।
ಸತತಂ ಸ್ಥೀಯತೇ ಯೇನ ಜೀವನ್ಮುಕ್ತೇನ ಯೋಗಿನಾ ॥ ೨೩ ॥

ಏಕದಾ ಸ ಮಹಾಯೋಗೀ ಸಿಂಹರಾಶಿಸ್ಥಿತೇ ಗುರೌ ।
ಗೋದಾವರೀತೀರ್ಥಯಾತ್ರಾಂ ವಿಧಾತುಮುಪಚಕ್ರಮೇ ॥ ೨೪ ॥

---

೧೯-೨೦. ಆ ಮೇಘಂಕರವೆಂಬ ಊರಿನಲ್ಲಿ ಮಮತೆ, ಅಹಂಕಾರಗಳನ್ನು ಬಿಟ್ಟ ಸುನಂದನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ವೇದಶಾಸ್ತ್ರ ವಿಶಾರದನು. ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವನು. ಯಾವಾಗಲೂ ವಾಸುದೇವನಲ್ಲಿಯೇ ಪ್ರೀತಿಯುಳ್ಳವನಾಗಿರುವನು

೨೧-೨೩. ಆ ಬ್ರಾಹ್ಮಣನು ಸ್ವಾಮಿಯಾದ ವಿಷ್ಣುವಿನ ಹತ್ತಿರದಲ್ಲಿ ಈ ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಓದುತ್ತಿದ್ದನು. ಅದರಲ್ಲಿ ಸ್ವಾಮಿಯ ವಿಶ್ವರೂಪದ ವಿಷಯವು ವಿವರಿಸಲ್ಪಟ್ಟಿದೆ. ಆ ಅಧ್ಯಾಯದ ಪ್ರಭಾವದಿಂದ ಅವನು ಬ್ರಹ್ಮಜ್ಞಾನವನ್ನು ಹೊಂದಿದನು. ಅವನು ಆಗ ಪರಮಾನಂದದಿಂದ ಉತ್ತಮವಾದ ಜ್ಞಾನದ ಸಮಾಧಿಯಿಂದ ಬಹಿರ್ಮುಖನಾಗಿ ನಿಶ್ಚಲವಾದ ಸ್ಥಿತಿಯನ್ನು ಹೊಂದಿ ಜೀವನ್ಮುಕ್ತನಾದ ಯೋಗಿಯಾಗಿ ಸುಖಿಸುತ್ತಿರುವನು.

೨೪. ಆ ಯೋಗಿಯು ಒಂದು ಸಾರಿ ಗುರುವು ಸಿಂಹರಾಶಿಗೆ ಬಂದಿದ್ದಾಗ ಗೋದಾವರಿಯ ತೀರ್ಥದಲ್ಲಿ ಸ್ನಾನಮಾಡಿ ಬರಲು ಯಾತ್ರೆಗೆ ಹೊರಟನು.

ಪ್ರಥಮೇಹ್ನಿ ಸಮಾಗತ್ಯ ವಿರಜಂ ತೀರ್ಥಮುತ್ತಮಂ ।
ನಾಭಿಮಾರಭ್ಯ ತೀರ್ಥೇಷು ಸ ಸಮುಭ್ಯರ್ಚ್ಯ ದೇವತಾಃ ॥ ೨೫ ॥

ಮಜ್ಜನ್ಮಜ್ಜಜ್ಜಗದ್ಧಾತ್ರೀಂ ಕಮಲಾಂ ಚ ವ್ಯಲೋಕಯತ್ ।
ತಾಂ ಸಂಪೂಜ್ಯ ಮಹಾಮಾಯಾಂ ಸರ್ವಕಾಮಫಲಪ್ರದಾಂ ॥ ೨೬ ॥

ತಾರಾತೀರ್ಥೇ ತತಃ ಸ್ನಾತ್ವಾ ಕಪಿಲಾಸಂಗಮೇ ತತಃ ।
ಅಷ್ಟತೀರ್ಥಮಸೌ ಚಕ್ರೇ ವಿಧಾಯ ಪಿತೃತರ್ಪಣಂ ॥ ೨೭ ॥

ಕುಮಾರೀಂ ಸ ಶಿವಾಂ ನತ್ವಾ ಕಪಿಲಾದ್ವಾರಮಾಯಯೌ ।
ತತ್ರ ನಿರ್ಮಜ್ಜ್ಯ ನಿರ್ಧೂತಪ್ರಾಗ್ಜನ್ಮಾಂತರದುಷ್ಕೃತಃ ॥ ೨೮ ॥

ಸಂಪೂಜ್ಯ ನತ್ವಾ ಸ್ತುತ್ವಾ ಚ ದೇವಂ ವೈ ಮಧುಸೂದನಂ ।
ಉಷಿತ್ವಾ ತತ್ರ ತಾಂ ರಾತ್ರಿಮಗಾತ್ಪ್ರಾತಸ್ಸಹ ದ್ವಿಜೈಃ ॥ ೨೯ ॥

---

೨೫-೨೬. ಮೊದಲನೆಯ ದಿವಸ ವಿರಜೆಯೆಂಬ ಉತ್ತಮವಾದ ತೀರ್ಥಕ್ಕೆ ಬಂದನು. ಅಲ್ಲಿ ಹೊಕ್ಕಳಿನವರೆಗೂ ನೀರು ಬರುವಷ್ಟು ಆಳವಾದ ನೀರಿಗಿಳಿದು ದೇವತೆಗಳಿಗೆಲ್ಲಾ ತರ್ಪಣಾದಿಗಳನ್ನು ಕೊಟ್ಟನು. ಆಮೇಲೆ ಸ್ನಾನಮಾಡು ತ್ತಿರಲು ಜಗನ್ಮಾತೆಯಾದ ಲಕ್ಷ್ಮಿಯು ಅಲ್ಲಿ ಸ್ನಾನಮಾಡುತ್ತಿರುವುದನ್ನು ನೋಡಿ ಮಾಯಾಸ್ವರೂಪಳೂ, ಇಷ್ಟಾರ್ಥವನ್ನು ಕೊಡತಕ್ಕವಳಾದವಳೂ ಆದ ಆಕೆಯನ್ನು ಪೂಜಿಸಿದನು.

೨೭-೨೮. ಅಲ್ಲಿಂದ ಮುಂದೆ ಹೋಗಿ ತಾರಾತೀರ್ಥದಲ್ಲಿ ಸ್ನಾನಮಾಡಿದನು. ಅನಂತರ ಹೊರಟು ಕಪಿಲೆಯ ಸಂಗಮದಲ್ಲಿ ಸ್ನಾನಮಾಡಿದನು. ಅಲ್ಲಿಂದ ಮುಂದೆ ಹೋಗಿ ಅಷ್ಟತೀರ್ಥದಲ್ಲಿ ಸ್ನಾನಮಾಡಿದನು. ಅಲ್ಲಿ ಪಿತೃ ತರ್ಪಣ ಮುಂತಾದುವನ್ನು ಮಾಡಿಕೊಂಡು ಪಾರ್ವತಿ ಪರಮೇಶ್ವರನ ದರ್ಶನಮಾಡಿಕೊಂಡು ಅನಂತರ ಕಪಿಲಾದ್ವಾರಕ್ಕೆ ಹೋದನು. ಅಲ್ಲಿ ಸ್ನಾನಮಾಡಿಕೊಂಡು ಹಿಂದಿನ ಜನ್ಮದ ಪಾಪಗಳನ್ನೆಲ್ಲಾ ಕಳೆದುಕೊಂಡನು.

೨೯. ಅಲ್ಲಿ ಆ ಸ್ವಾಮಿಯನ್ನು ಪೂಜಿಸಿ, ಸ್ತುತಿಸಿ, ಅಲ್ಲಿರುವ ವಿಷ್ಣುವನ್ನು ಪೂಜಿಸಿ ಆ ರಾತ್ರಿಯೆಲ್ಲಾ ಅಲ್ಲಿಯೇ ಇದ್ದು ಬ್ರಾಹ್ಮಣರೊಡನೆ ಮುಂದಕ್ಕೆ ಹೊರಟನು.

ನರಸಿಂಹವನೇ ತತ್ರ ತೀರ್ಥೇ ರಾಮಸ್ಯ ದೀರ್ಘಿಕಾ ।
ಪ್ರಹ್ಲಾದಪೂಜಿತಸ್ಸಾಕ್ಷಾದಾಸ್ತೇ ಯತ್ರ ನೃಕೇಸರೀ ॥ ೩೦ ॥

ತಂ ದೃಷ್ಟ್ವಾ ದೇವದೇವೇಶಂ ಪೂಜಯಿತ್ವಾ ತು ಭಕ್ತಿತಃ ।
ತತ್ರ ತಂ ದಿವಸಂ ನೀತ್ವಾ ಸ ಯಯಾವಂಬಿಕಾಪುರೀಂ ॥ ೩೧ ॥

ಅನುಗ್ರಹಣೇ ಭಕ್ತಾನಾಮಂಬಿಕಾ ತತ್ರ ತಿಷ್ಠತೀ ।
ಪೂರಯಂತೀ ಮನುಷ್ಯಾಣಾಂ ವಾಂಛಿತಾನ್ಯಖಿಲಾನ್ಯಪಿ ॥ ೩೨ ॥

ಪೂಜಯಿತ್ವಾಂಬಿಕಾಂ ಭಕ್ತ್ಯಾ ಪುಷ್ಪಗಂಧಾನುಲೇಪನೈಃ ।
ಉಪಹಾರೈಶ್ಚ ವಿವಿಧೈಃ ಸ್ತೋತ್ರೈಃ ಪ್ರಣಮನೈರಪಿ ॥ ೩೩ ॥

ವಿಪ್ರಸ್ತಸ್ಮಾತ್ಪುರಾತ್ಪ್ರಾಪ್ತಃ ಕರಸ್ಥಾನಾಭಿದಂ ಪುರಂ ।
ಯತ್ರಾಸ್ತೇ ಪರಮಾ ಶಕ್ತಿಃ ಮಹಾಲಕ್ಷ್ಮೀರ್ಮಹಾದ್ಯುತಿಃ ॥ ೩೪ ॥

---

೩೦-೩೧. ಅಲ್ಲಿಂದ ನರಸಿಂಹವನಕ್ಕೆ ಹೋದನು. ಅಲ್ಲಿ ರಾಮತೀರ್ಥವೆಂಬ ಕೊಳವೊಂದಿದೆ. ಅಲ್ಲಿ ಪ್ರಹ್ಲಾದನಿಂದ ಪೂಜಿತನಾದ ನರಸಿಂಹಸ್ವಾಮಿ ಇದ್ದಾನೆ. ಆ ಸ್ವಾಮಿಯನ್ನು ದರ್ಶನಮಾಡಿ ಪೂಜೆಮಾಡಿ ಅಲ್ಲಿ ಒಂದು ದಿವಸ ಇದ್ದು ಅಲ್ಲಿಂದ ಮುಂದಕ್ಕೆ ಅಂಬಿಕಾಪುರಿಗೆ ಹೋದನು.

೩೨-೩೩. ಭಕ್ತರಿಗೆ ಅನುಗ್ರಹಮಾಡಲು ಅಂಬಿಕೆಯು ಅಲ್ಲಿರುವಳು. ಅಲ್ಲಿದ್ದುಕೊಂಡು ಜನರ ಇಷ್ಟಾರ್ಥಗಳನ್ನು ಪೂರ್ತಿಮಾಡುತ್ತಲಿರುವಳು. ಅಲ್ಲಿ ಆ ಅಂಬಿಕೆಯನ್ನು ಅಷ್ಟಗಂಧಗಳಿಂದ ಪೂಜಿಸಿದನು. ಮತ್ತು ಅನೇಕವಾದ ನೈವೇದ್ಯಗಳಿಂದ ತೃಪ್ತಿಪಡಿಸಿ ನಮಸ್ಕರಿಸಿ ಸ್ತೋತ್ರಮಾಡಿದನು

೩೪. ಅಲ್ಲಿಂದ ಹೊರಟು ಆ ಬ್ರಾಹ್ಮಣನು ಕರಸ್ಥಾನವೆಂಬ ಊರಿಗೆ ಹೋದನು. ಮಹಾಶಕ್ತಿಯೂ ಮಹಾ ಕಾಂತಿವಂತಳೂ ಆದ ಲಕ್ಷ್ಮಿಯು ಅಲ್ಲಿರುವಳು.

ತಾಮವೇಕ್ಷ್ಯ ಸುಧಾಭಾನುಭಾಸ್ಕರದ್ಯುತಿಮಂಡಲಾಂ ।
ಸಂಸಾರತಾಪವಿಚ್ಛೇದಪದ್ಮಪೀಯೂಷವಾಹಿನೀಂ ॥ ೩೫ ॥

ಯೋಗಿರಾಜಹೃದಂಭೋಜರಾಜಹಂಸನಿವೇಷಿತಾಂ ।
ಅನಾಹತಮಹಾನಾದಮಯೀಮದ್ವಯರೂಪಿಣೀಂ ॥ ೩೬ ॥

ಮಹಾಲಕ್ಷ್ಮೀಂ ಭಗವತೀಂ ವಾಂಛಿತಾರ್ಥಪ್ರದಾಯಿನೀಂ ।
ಆರಾಧ್ಯ ಭಕ್ತಿಭಾವೇನ ಚೇತಸಾ ಸ ಮುನೀಶ್ವರಃ ॥ ೩೭ ॥

ವಿವಾಹಮಂಡಪಂ ಪ್ರಾಪ ಪುರಂ ಮಿತ್ರೈಸ್ಸಮನ್ವಿತಃ ।
ಪುರೇ ತತ್ರ ಪ್ರತಿಗೃಹಂ ವಾಸಸ್ಥಾನಮಯಾಚತ ॥ ೩೮ ॥

ನ ಲೇಭೇ ವಸತಿಂ ಸ್ಥಾತುಂ ಗೇಹೇ ಕಸ್ಮಿನ್ನಪಿ ದ್ವಿಜಃ ।
ದರ್ಶಿತಂ ಗ್ರಾಮಪಾಲೇನ ವಿಶಾಲಂ ವಾಸಮಂದಿರಂ ॥ ೩೯ ॥

---

೩೫. ಅಮೃತಕಿರಣನಾದ ಚಂದ್ರನಂತೆ ಮನೋಹರಳಾಗಿಯೂ, ಸೂರ್ಯನಂತೆ ಕಾಂತಿಯುಳ್ಳವಳಾಗಿಯೂ ಇರುವ ಸಂಸಾರ ತಾಪವನ್ನು ನಾಶಮಾಡುವ, ಪದ್ಮದ ಮಕರಂದವನ್ನು ಸುರಿಸುತ್ತಿರುವ ಲಕ್ಷ್ಮಿಯನ್ನು ನೋಡಿದನು.

೩೬. ಉತ್ತಮರಾದ ಯೋಗಿಗಳ ಹೃದಯವೆಂಬ ರಾಜ ಹಂಸದಿಂದ ಸೇವಿಸಲ್ಪಡುತ್ತಿರುವ ಅನಾಹತವೆಂಬಲ್ಲಿ ನಾದಮಾಡುತ್ತಿರುವ ಅದ್ವಯ ರೂಪಿಣಿಯಾದ ಮಹಾಲಕ್ಷ್ಮಿಯನ್ನು ನೋಡಿದನು.

೩೭. ಇಷ್ಟಾರ್ಥಗಳನ್ನು ಕೊಡುವ ಆ ಮಹಾಲಕ್ಷ್ಮಿಯನ್ನು ಭಕ್ತಿಯಿಂದ ಪೂಜಿಸಿದನು.

೩೮. ಅವನು ಆ ಊರಿಗೆ ಹೋಗಿ ಆ ಲಕ್ಷ್ಮಿಯ ವಿವಾಹಮಂಟಪವನ್ನು ಹೊಂದಿ ಆ ಊರಿನ ಮನೆ ಮನೆಗೂ ಹೋಗಿ ಇರುವುದಕ್ಕೆ ಜಾಗವನ್ನು ಕೇಳಿದನು.

೩೯. ಆ ಊರಿನಲ್ಲಿ ಒಂದು ಮನೆಯಲ್ಲಿಯೂ ಇರುವುದಕ್ಕೆ ಜಾಗವು ಸಿಕ್ಕಲೇ ಇಲ್ಲ. ಆಗ ಆ ಊರಿನ ಯಜಮಾನನು ಒಂದು ದೊಡ್ಡದಾದ ಮನೆಯನ್ನು ತೋರಿಸಿದನು.

ಪ್ರವಿಶ್ಯ ವಸತಿಂ ಚಕ್ರೇ ಬ್ರಾಹ್ಮಣಸ್ಸಂಗಿಭಿಸ್ಸಹ ।
ತತಃ ಪ್ರಭಾತೇ ವಿಮಲೇ ಸುನಂದೋಽಸೌ ದ್ವಿಜೋತ್ತಮಃ ॥ ೪೦ ॥

ಬಹಿರಾಲೋಕಯಾಂಚಕ್ರೇ ವಾಸಗೇಹಾನ್ನಿಜಂ ವಪುಃ ।
ಅಧ್ವನ್ಯಾನಪಿ ಲಾನ್ಯತ್ರ ಯಾತಾನ್ಕ್ವಾಪಿ ಯದೃಚ್ಛಯಾ ॥ ೪೧ ॥

ಗಮ್ಯಮಾನಃ ಸಮಾಯಾನ್ತಂ ಗ್ರಾಮಪಾಲೋ ದದರ್ಶ ಸಃ ।
ತಂ ಬಭಾಷೇ ಗ್ರಾಮಪಾಲಃ ಆಯುಷ್ಮಾನಸಿ ಸರ್ವಶಃ ॥ ೪೨ ॥

ಭಾಗಧೇಯವತಾಂ ಪುಂಸಾಂ ಪುಣ್ಯಃ ಪುಣ್ಯವತಾಮಸಿ ।
ಪ್ರಭಾವೋ ವಿದ್ಯತೇ ವತ್ಸ ಕೋಽಪಿ ಲೋಕೋತ್ತರಸ್ತ್ವಯಿ ॥ ೪೩ ॥

ಕ್ವ ಪ್ರಯಾತಾಸ್ಸಹಾಯಾಸ್ತೇ ಕಥಂ ತತ್ಸದನಾದ್ಬಹಿಃ ।
ತತ್ಪಶ್ಯ ಮುನಿಶಾರ್ದೂಲ ಕಥಯಾಮಿ ತವಾಗ್ರತಃ ॥ ೪೪ ॥

---

೪೦-೪೧. ಆಗ ಆ ಬ್ರಾಹ್ಮಣನು ತನ್ನ ಜೊತೆಯವರೊಡನೆ ಅಲ್ಲಿ ನಿಂತನು. ಬೆಳಗ್ಗೆ ಏಳುತ್ತಲೂ ಆ ಸುನಂದನು ತನ್ನ ವಾಸದ ಮನೆಯಿಂದ ಹೊರಗೆ ತನ ದೇಹವು ಬಿದ್ದಿರುವುದನ್ನು ನೋಡಿದನು. ತನ್ನ ಕಡೆಯವರು ಹೊರಗಡೆಯಲ್ಲಿ ಎಲ್ಲಿಗೋ ತಮಗೆ ಇಷ್ಟಬಂದಂತೆ ಹೋಗಿರುವರೆಂದು ತಿಳಿದನು.

೪೨. ಹೋಗುತ್ತ ಬರುತ್ತಲಿರುವ ಅನೇಕ ಜನರನ್ನು ಆ ಗ್ರಾಮಪಾಲನು ನೋಡಿದನು. ಆಗ ಆ ಗ್ರಾಮಪಾಲನು ಆ ಸುನಂದನನ್ನೂ ನೋಡಿ ಅಯ್ಯಾ! ನೀನು ಆಯುಷ್ಮಂತನಾಗಿ ಕುಶಲಿಯಾಗಿದ್ದೀಯಾ ? ಎಂದನು.

೪೩. ಅಯ್ಯಾ ನೀನು ಅದೃಷ್ಟವಂತರಲ್ಲಿ ಅದೃಷ್ಟವಂತನೂ, ಪುಣ್ಯವಂತರಲ್ಲಿ ಪುಣ್ಯವಂತನೂ ಆಗಿದ್ದೀಯೆ. ನಿನ್ನಲ್ಲಿ ಯಾವುದೋ ಒಂದು ಉತ್ತಮವಾದ ಪ್ರಭಾವವಿರುತ್ತದೆ.

೪೪. ನಿನ್ನ ಜೊತೆಯಲ್ಲಿ ಬಂದಿದ್ದವರೆಲ್ಲರೂ ನಿನ್ನ ಈ ಮನೆಯಿಂದ ಹೊರಗೆಲ್ಲಿ ಹೋದರು ? ಈ ವಿಷಯವನ್ನು ಹೇಳಿದ್ದೇನೆ. ಅವರನ್ನು ಹೋಗಿ ನೋಡು.

ಕಿಂ ತು ನಾನ್ಯಂ ತ್ವಯಾ ತುಲ್ಯಂ ಪಶ್ಯಾಮೀಹ ತಪಸ್ವಿನಂ ।
ಕಿಂ ಜಾನಾಸಿ ಮಹಾಮಂತ್ರಂ ಕಾಂ ವಿದ್ಯಾಮವಲಂಬಸೇ ॥ ೪೫ ॥

ಕಸ್ಯ ದೇವಸ್ಯ ಕಾರುಣ್ಯಾಚ್ಛಕ್ತಿರ್ಲೋಕೋತ್ತರಾ ತ್ವಯಿ ।
ತತ್ಕಾರುಣ್ಯವಶಾತ್ತಿಷ್ಠ ಗ್ರಾಮೇಽಸ್ಮಿನ್ ಬ್ರಾಹ್ಮಣೋತ್ತಮ ॥ ೪೬ ॥

ಶುಶ್ರೂಷಾಮಖಿಲಾಮೇವ ಭಗವಂಸ್ತೇ ಕರೋಮ್ಯಹಂ ।
ಇತಿ ತಂ ವಾಸಯಾಮಾಸ ತಸ್ಮಿನ್ ಗ್ರಾಮೇ ಮುನೀಶ್ವರಂ ॥ ೪೭ ॥

ಪರಿಚರ್ಯಾಂ ಚ ತಸ್ಯಾಸೌ ಭಕ್ತ್ಯಾ ಚಕ್ರೇ ದಿವಾನಿಶಂ ।
ದಿವಸೇಷು ಪ್ರಯಾತೇಷು ಸಪ್ತಾಷ್ಟಸು ಸಮೇಯಿವಾನ್ ॥ ೪೮ ॥

ಪ್ರಾತರಾಗತ್ಯ ತಸ್ಯಾಗ್ರೇ ರುರೋದ ಭೃಶದುಃಖಿತಃ ।
ಅದ್ಯ ಮೇ ಭಾಗ್ಯಹೀನಸ್ಯ ಗುಣವಾನ್ ಭಕ್ತಿಮಾನ್ ಸುತಃ ॥ ೪೯ ॥

---

೪೫. ಆದರೆ ನಿನ್ನಂತಹ ತಪಸ್ವಿಯನ್ನು ಅವರೊಬ್ಬರಲ್ಲಿ ಯಾವನನ್ನೂ ನೋಡಲಿಲ್ಲ. ನಿನಗೇನಾದರೂ ಮಹಾಮಂತ್ರವು ಗೊತ್ತಿದೆಯೇ? ಅದಿಲ್ಲದಿದ್ದರೆ ಮತ್ಯಾವ ವಿದ್ಯೆಯನ್ನಾದರೂ ಬಲ್ಲೆಯಾ ?

೪೬. ಯಾವ ದೇವರ ಕೃಪೆಯಿಂದ ನಿನ್ನಲ್ಲಿ ಈ ಶಕ್ತಿ ಬಂದಿದೆ ? ಆ ಸ್ವಾಮಿಯ ಕೃಪೆಯಿಂದಲೇ ಈ ಊರಿನಲ್ಲಿ ನೀನು ಇರು.

೪೭. ಎಲೈ ಬ್ರಾಹ್ಮಣೋತ್ತಮನೇ ! ನಿನಗೆ ಬೇಕಾದ ಎಲ್ಲಾ ಶುಶ್ರೂಷೆಗಳನ್ನೂ ನಾನೇ ಮಾಡುತ್ತೇನೆ. ಎಂದು ಹೇಳಿ ಆ ಊರಿನಲ್ಲಿ ಆತನು ವಾಸ ಮಾಡುವಂತೆ ಮಾಡಿದನು.

೪೮. ಆತನು ಹಗಲೂ ರಾತ್ರಿಯೂ ಆ ಬ್ರಾಹ್ಮಣನಿಗೆ ಸೇವೆಮಾಡುತ್ತಿದ್ದನು. ಈ ರೀತಿಯಾಗಿ ಏಳೆಂಟು ದಿನಗಳು ಕಳೆದುವು.

೪೯–೫೦. ಹೀಗಿರಲು ಒಂಬತ್ತನೇ ದಿವಸ ಆ ಗ್ರಾಮರಕ್ಷಕನು ಬೆಳಗ್ಗೆ ಬಹು ದುಃಖದಿಂದ ಆ ಬ್ರಾಹ್ಮಣನಲ್ಲಿಗೆ ಬಂದು ಅತ್ತನು. ಎಲೈ ಬ್ರಾಹ್ಮಣನೆ ! ನನಗೆ ಗುಣವಂತನೂ, ಭಕ್ತಿವಂತನೂ ಆದ ಮಗನಿದ್ದನು. ನನ್ನ ದೌರ್ಭಾಗ್ಯದಿಂದ

ಜಾಜ್ವಲ್ಯಮಾನದಂಷ್ಟ್ರೇಣ ಭಕ್ಷಿತೋ ನಿಶಿ ರಕ್ಷಸಾ ।
ಇತ್ಯೇನಂ ರಕ್ಷಕೇಣೋಕ್ತಸ್ತಂ ಪಪ್ರಚ್ಛ ಸ ಸಂಯಮೀ ।
ಕ್ವಾಸ್ತೇ ಸ ರಾಕ್ಷಸಃ ಪುತ್ರೋ ಭಕ್ಷಿತಸ್ತೇ ಕಥಂ ವದ ॥ ೫೦ ॥

॥ ಗ್ರಾಮಪಾಲ ಉವಾಚ ॥

ವರ್ತತೇ ನಗರೇ ಘೋರಃ ಪುರುಷಾದೋ ನಿಶಾಚರಃ ।
ಸ ಖಾದತಿ ನರಾನೇತ್ಯ ನಿತ್ಯಂ ನಗರಗೋಚರಾನ್ ॥ ೫೧ ॥

ಸ ಸರ್ವೈರ್ನಾಗರೈರತ್ರ ಪ್ರಾರ್ಥಿತಃ ಪುರುಷೈಃ ಪುರಾ ।
ರಕ್ಷ ರಾಕ್ಷಸ ನಃ ಸರ್ವಾನ್ ಗ್ರಾಸಂ ತೇ ಕಲ್ಪಯಾಮಹೇ ॥ ೫೨ ॥

ಪಥಿಕಾ ನಿಶಿ ನಿದ್ರಾಂತಿ ಯೇ ಚ ತಾನ್ ಭುಂಕ್ಷ್ವ ರಾಕ್ಷಸ ।
ಏತಸ್ಮಿನ್ ಸದನೇ ಪಾಂಥಾನ್ ಗ್ರಾಮಪಾಲಪ್ರವೇಶಿತಾನ್ ॥ ೫೩ ॥

ಆಹಾರಂ ಕಲ್ಪಯಾಂಚಕ್ರುಃ ಆತ್ಮೀಯಪ್ರಾಣಗುಪ್ತಯೇ ।
ಭವಾನ್ ಸುಪ್ತೋ ಗೃಹೇಽಮುಷ್ಮಿನ್ ಅಧ್ವನ್ಯೈಸ್ಸಂಯುತಃ ಪರಃ ॥ ೫೪ ॥

---

ಅವನನ್ನು ನೆನ್ನೆಯ ದಿನ ರಾತ್ರಿ ಕ್ರೂರವಾದ ಕೋರೆದಾಡೆಗಳುಳ್ಳ ರಾಕ್ಷಸನ ತಿಂದು ಬಿಟ್ಟನು. ಈ ರಕ್ಷಕನು ಹೀಗೆಂದು ಹೇಳಲು ಆ ಸಂಯಮಿಯು ನಿನ್ನ ಮಗನನ್ನು ತಿಂದ ಆ ರಾಕ್ಷಸನು ಎಲ್ಲಿರುವನು ? ಎಂದು ಕೇಳಿದನು.

೫೧. ಗ್ರಾಮಪಾಲನು ಹೇಳಿದನು- ಆ ಪಟ್ಟಣದಲ್ಲಿ ಕ್ರೂರನಾದ ಮನುಷ್ಯರನ್ನು ತಿನ್ನುವ ರಾಕ್ಷಸನಿದ್ದಾನೆ. ಅವನು ಪಟ್ಟಣಕ್ಕೆ ಬಂದು, ಪಟ್ಟಣದಲ್ಲಿ ಕಣ್ಣಿಗೆ ಕಂಡವರು ಯಾರನ್ನಾದರೂ ತಿಂದುಬಿಡುತ್ತಿದ್ದನು.

೫೨. ಆಗ ಆ ಊರಿನವರೆಲ್ಲರೂ ಸೇರಿಕೊಂಡು ಎಲೈ ರಾಕ್ಷಸನೇ ! ನಮ್ಮೆಲ್ಲರನ್ನೂ ಕಾಪಾಡು. ನಿನಗೆ ಬೇಕಾದ ಆಹಾರವನ್ನು ಕೊಡುತ್ತೇವೆ. ಎಂಬುದಾಗಿ ಕೇಳಿಕೊಂಡರು.

೫೩-೫೪. ಎಲೈ ರಾಕ್ಷಸನೇ! ಈ ಮನೆಗೆ ಈ ಗ್ರಾಮದ ಯಜಮಾನನು ಹೊರಗಿನವರನ್ನು ತಂದು ಸೇರಿಸುತ್ತಾನೆ. ಆ ಪ್ರಯಾಣಿಕರು ರಾತ್ರಿ ನಿದ್ದೆ ಮಾಡುತ್ತಿರುವಾಗ ಅವರನ್ನು ನೀನು ತಿಂದುಬಿಡು. ಎಂಬುದಾಗಿ ಹೇಳಿ ತಮ್ಮಗಳನ್ನು ಕಾಪಾಡಿಕೊಳ್ಳಲು ಆ ರಾಕ್ಷಸನಿಗೆ ಆಹಾರವನ್ನು ಗೊತ್ತುಮಾಡಿರುವರು.

ತೇ ಗ್ರಸ್ತಾಃ ಕಿಲ ಚಾನೇನ ತ್ವಂ ಮುಕ್ತೋಽಸಿ ದ್ವಿಜೋತ್ತಮ ।
ಪ್ರಭಾವಂ ಭವತೋ ವೇತ್ತಿ ಭವಾನೇವ ದ್ವಿಜೋತ್ತಮ ॥ ೫೫ ॥

ಮದೀಯತನಯಸ್ಯಾದ್ಯ ಮಿತ್ರಮೇಕಮುಪಾಗತಂ ।
ಅಜಾನತಾ ಮಯಾ ಸೋಽಪಿ ತನಯಸ್ಯ ಪ್ರಿಯಸ್ಸಖಾ ॥ ೫೬ ॥

ಅನ್ಯೈಃ ಪಾಂಥಜನೈಸ್ಸಾರ್ಧಂ ತಸ್ಮಿನ್ಗೇಹೇ ಪ್ರವೇಶಿತಃ ।
ಶ್ರುತ್ವಾ ತತ್ರ ಪ್ರವಿಷ್ಟಂ ತಂ ನಿಶೀಥೇ ತನಯೋ ಮಮ ॥ ೫೭ ॥

ತಮಾನೇತುಂ ಗತಸ್ಸೋಽಪಿ ಭಕ್ಷಿತಸ್ತೇನ ರಕ್ಷಸಾ ।
ದುಃಖಿತೇನ ಮಯಾ ಪ್ರೋಕ್ತಃ ಪ್ರಾತಸ್ಸ ಪಿಶಿತಾಶನಃ ॥ ೫೮ ॥

ಮಮಾಪಿ ಪುತ್ರೋ ದುಷ್ಟಾತ್ಮನ್ ಭವತಾ ನಿಶಿ ಭಕ್ಷಿತಃ ।
ಭವಜ್ಜಠರನಿರ್ಮಗ್ನಃ ಸುತೋಽಸೌ ಯೇನ ಜೀವತಿ ।
ಅಸ್ತಿ ಚೈವಮುಪಾಯಶ್ಚೇದ್ಬ್ರೂಹಿ ಮೇ ತ್ವಂ ನಿಶಾಚರ ॥ ೫೯ ॥

---

ನೀನು ಪ್ರಯಾಣಿಕರೊಂದಿಗೆ ಇಲ್ಲಿ ಮಲಗಿಕೊಂಡೆ. ಅವರೆಲ್ಲರನ್ನೂ ಆ ರಾಕ್ಷಸನು ತಿಂದುಬಿಟ್ಟನು. ನಿನ್ನನ್ನು ಮಾತ್ರ ತಿನ್ನಲಾಗಲಿಲ್ಲ. ನಿನ್ನ ಪ್ರಭಾವವು ನಿನಗೆ ಗೊತ್ತಿದೆ.

೫೬–೫೯. ಈಗ ನನ್ನ ಮಗನ ಸ್ನೇಹಿತನೊಬ್ಬನು ಇಲ್ಲಿಗೆ ಬಂದನು. ಅವನು ನನ್ನ ಮಗನ ಪ್ರಿಯ ಸ್ನೇಹಿತನು. ನನಗೆ ಅದು ತಿಳಿಯದು. ನಾನು ಅವನನ್ನು ಉಳಿದ ಪ್ರಯಾಣಿಕರೊಂದಿಗೆ ಆ ಮನೆಗೆ ಕಳುಹಿಸಿದೆನು ನನ್ನ ಮಗನಿಗೆ ಆಮೇಲೆ ರಾತ್ರಿ ತನ್ನ ಸ್ನೇಹಿತನೂ ಆ ಮನೆಯೊಳಕ್ಕೆ ಹೋದನೆಂದು ತಿಳಿಯಿತು. ಅವನನ್ನು ಕರೆತರಲು ಅರ್ಧರಾತ್ರಿಯಲ್ಲಿ ನನ್ನ ಮಗನು ಆ ಮನೆಗೆ ಹೋದನು. ಆಗ ಆ ರಾಕ್ಷಸನು ಅವನನ್ನು ತಿಂದುಹಾಕಿಬಿಟ್ಟನು. ಆಗ ನಾನು ದುಃಖಪಡುತ್ತಾ ಆ ರಾಕ್ಷಸನ ಬಳಿಗೆ ಬೆಳಗ್ಗೆ ಹೋಗಿ ಎಲೈ ದುಷ್ಟನೇ! ನನ್ನ ಮಗನನ್ನು ಕೂಡ ನೀನು ರಾತ್ರಿಯಲ್ಲಿ ತಿಂದು ಬಿಟ್ಟಿದ್ದೀಯೆ. ಆ ನನ್ನ ಮಗನು ನಿನ್ನ ಹೊಟ್ಟೆಯಲ್ಲಿ ಸೇರಿಕೊಂಡಿದ್ದಾನೆ. ಅವನು ಹೇಗೆ ಜೀವಿಸಿಯಾನು ? ಅದಕ್ಕೆ ಏನಾದರೂ ಉಪಾಯವಿದ್ದರೆ ಅದನ್ನು ಕೃಪೆಮಾಡಿ ನನಗೆ ತಿಳಿಸು.

|| ರಾಕ್ಷಸ ಉವಾಚ ||

ಅಂತಃ ಪ್ರವಿಷ್ಟಂ ತ್ವತ್ಪುತ್ರಮಜ್ಞಾತ್ವಾಹಮಭಕ್ಷಯಂ ।
ಅಜ್ಞಾನಾದ್ಭಕ್ಷಿತೈಃ ಪಾಂಥೈಃ ಸಹಿತೋಽಸೌ ಸುತಸ್ತವ || ೬೦ ||

ಯಥಾ ಜೀವತಿ ಮೇ ಕುಕ್ಷೌ ಯಥಾ ಭವತಿ ರಕ್ಷಿತಃ ।
ತಥಾ ವಿಹಿತಮಸ್ತ್ಯಸ್ತಿ ದೇವೇನ ಪರಮೇಷ್ಠಿನಾ || ೬೧ ||

ಗೀತೈಕಾದಶಮಧ್ಯಾಯಂ ಯಃ ಪಠತ್ಯನಿಶಂ ದ್ವಿಜಃ ।
ತತ್ಪ್ರಭಾವೇನ ಮೇ ಮುಕ್ತಿರ್ಮೃತಾನಾಂ ಪುನರುದ್ಭವಃ || ೬೨ ||

॥ ಗ್ರಾಮಪಾಲ ಉವಾಚ ॥

ಕಥಮೇಕಾದಶಾಧ್ಯಾಯಸಾಮರ್ಥ್ಯಾದಿದಮದ್ಭುತಂ ।
ಇತಿ ಸ್ಪಷ್ಟೋ ಮಯಾ ವಿಪ್ರ ಸ ಬಭಾಷೇ ನಿಶಾಚರಃ || ೬೩ ||

---

೬೦. ರಾಕ್ಷಸನು ಹೇಳಿದನು- ನಿನ್ನ ಮಗನೂ ಕೂಡ ಎಲ್ಲರ ಜೊತೆಯಲ್ಲಿಯೂ ಆ ಮನೆಯ ಒಳಗೆ ಇದ್ದನು. ಅವನನ್ನು ತಿಳಿಯದೆ ನಾನು ತಿಂದುಬಿಟ್ಟೆನು. ಅವನು ನಿನ್ನ ಮಗನೆಂದು ತಿಳಿಯದೆ ಇದ್ದುದರಿಂದ ಆ ಪ್ರಯಾಣಿಕರೊಡನೆ ಅವನನ್ನೂ ತಿಂದುಬಿಟ್ಟೆನು.

೬೧. ನಾನು ತಿಂದವನು ನನ್ನ ಹೊಟ್ಟೆಯಲ್ಲಿ ಹೇಗೆ ಜೀವಿಸಿರಬೇಕೋ ಹಾಗ ದೇವನಾದ ಬ್ರಹ್ಮನು ಒಂದು ಯುಕ್ತಿಯನ್ನು ನಿರ್ಮಿಸಿರುವನು.

೬೨. ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಯಾವನು ಓದುತ್ತಾನೆಯೋ ಅಂಥಹ ಬ್ರಾಹ್ಮಣನ ಪ್ರಭಾವದಿಂದ ನನಗೆ ಮುಕ್ತಿಯೂ ನಿನ್ನ ಮಗನಿಗೆ ಮತ್ತೆ ಜೀವವೂ ಬರುತ್ತದೆ.

೬೩. ಗ್ರಾಮಪಾಲನು ಹೇಳಿದನು-ಏಕಾದಶಾಧ್ಯಾಯವನ್ನು ಪಾರಾಯಣ ಮಾಡುವುದರಿಂದ ಈ ಅದ್ಭುತವಾದ ಕೆಲಸವು ಹೇಗೆ ನಡೆಯುತ್ತದೆ? ಎಂದು ಕೇಳಲು ಆಗ ಆ ರಾಕ್ಷಸನು ನನಗೆ ಹೇಳಿದನು.

॥ ರಾಕ್ಷಸ ಉವಾಚ ॥

ಪುರಾ ಗೃಧ್ರೇಣ ಕೇನಾಪಿ ನಭೋಮಾರ್ಗೇಣ ಗಚ್ಛತಾ ।
ಅಸ್ಥಿಕಾಂಡಂ ಸ್ವಕಾತ್ತುಂಡಾತ್ಪಾತಿತಂ ಕ್ವಾಪಿ ವಾರಿಣಿ ॥ ೬೪ ॥

ಕಂ ಜಲಾಶಯಮಾಗತ್ಯ ಕೋಽಪಿ ಜ್ಞಾನೀಶ್ವರಸ್ತದಾ ।
ಮಹಾತೀರ್ಥಮಿತಿ ಜ್ಞಾತ್ವಾ ವಿದಧೇ ಪಿತೃತರ್ಪಣಂ ।
ತಮೂಚಿರೇ ಜನಾಸ್ಸರ್ವೇ ತೀರ್ಥಮೇತತ್ಕಥಂ ವದ ॥ ೬೫ ॥

॥ ಮುನಿರುವಾಚ ॥

ಜಪತ್ಯೇಕಾದಶಾಧ್ಯಾಯಂ ತ್ರಿಸಂಧ್ಯಂ ನಿಯತೇಂದ್ರಿಯಃ ।
ವಿತ್ತವಾನಿತಿ ವಿಪ್ರೋಽಸೌ ಚೋರೈಃ ವ್ಯಾಪಾದಿತಃ ಪಥಿ ॥ ೬೬ ॥

ತಸ್ಯಾಸ್ಥಿ ಶಕಲಂ ಗೃಧ್ರವದನಾತ್ಪತಿತಂ ಜಲೇ ।
ತೇನ ತೀರ್ಥಮಿದಂ ದಿವ್ಯಂ ಜಾತಂ ಪಾತಕನಾಶನಂ ॥ ೬೭ ॥

---

೬೪-೬೫. ರಾಕ್ಷಸನು ಹೇಳಿದನು–ಪೂರ್ವದಲ್ಲಿ ಒಂದು ಹದ್ದು ಒಂದು ಚೂರು ಮೂಳೆಯನ್ನು ಆಕಾಶಮಾರ್ಗದಲ್ಲಿ ಹೊತ್ತುಕೊಂಡು ಹೋಗುತ್ತಾ ಇದ್ದಾಗ ಅದು ಕೊಕ್ಕಿನಿಂದ ಬಿದ್ದು ಎಲ್ಲಿಯೋ ಒಂದು ನೀರಿನೊಳಗೆ ಬಿದ್ದಿತು. ಆಗ ಒಬ್ಬ ಜ್ಞಾನಿಯು ಆ ನೀರಿನ ಬಳಿ ಹೋಗಿ ಇದು ಮಹಾ ತೀರ್ಥವೆಂದು ತಿಳಿದು ಪಿತೃತರ್ಪಣವನ್ನು ಮಾಡಿದನು. ಆಗ ಜನಗಳು ಅದನ್ನು ನೋಡಿ ಎಲೈ ಜ್ಞಾನಿಯೇ ! ಇದು ಹೇಗೆ ತೀರ್ಥವಾಯಿತು ? ಹೇಳು ಎಂದು ಕೇಳಿದರು.

೬೬. ಮುನಿಯು ಹೇಳಿದನು-ಒಬ್ಬ ಬ್ರಾಹ್ಮಣನು ನಿಯಮದಿಂದ ಜಿತೇಂದ್ರಿಯನಾಗಿ ಗೀತೆಯ ಏಕಾದಶಾಧ್ಯಾಯವನ್ನು ಜಪಿಸುತ್ತಿದ್ದನು. ಇವನು ಒಂದುಬಾರಿ ದಾರಿಯಲ್ಲಿ ಹೋಗುತ್ತಿದ್ದಾಗ ಇವನ ಬಳಿ ಹಣವಿದೆಯೆಂದು ತಿಳಿದು ಕಳ್ಳರು ಕೊಂದುಹಾಕಿದರು.

೬೭. ಅವನ ಮಾಂಸವನ್ನು ತಿನ್ನುವ ಆಶೆಯಿಂದ ಹೋಗಿದ್ದ ಹದ್ದಿಗೆ ಒಂದು ಚೂರು ಮೂಳೆಯು ಸಿಕ್ಕಲು ಅದನ್ನು ತೆಗೆದುಕೊಂಡು ಅಂತರಿಕ್ಷದಲ್ಲಿ ಹೋಗುತ್ತಿದ್ದಾಗ ಅದು ನೀರಿನಲ್ಲಿ ಬಿದ್ದಿತು. ಆದರಿಂದ ಈ ನೀರು ತೀರ್ಥವಾಯಿತು. ಅನೇಕ ಪಾಪಗಳನ್ನು ನಾಶಮಾಡುತ್ತದೆ.

|| ರಾಕ್ಷಸ ಉವಾಚ ||

ತತಸ್ತೇ ಮಾನವಾಸ್ಸರ್ವೇ ಸಸ್ನುಸ್ತತ್ರ ಜಲಾಶಯೇ |
ನಿಷ್ಕಲ್ಮಷತಯಾ ಚೈವಂ ಪ್ರಾಪುಸ್ತೇ ಪರಮಂ ಪದಂ || ೬೮ ||

ಏಕಾದಶಸ್ಯ ಸಾಮರ್ಥ್ಯಾದಧ್ಯಾಯಸ್ಯ ಭವಿಷ್ಯತಿ |
ಮಮಾಪಿ ಮುಕ್ತಿಃ ಪಾಂಥಾನಾಂ ಪುನರುತ್ಥಾನಮುದ್ಭುತಂ || ೬೯ ||

ಯೋ ಮಯಾ ಕಶ್ಚಿ ದುತ್ಕೀರ್ಣೋ ಬ್ರಾಹ್ಮಣೋತ್ರೈವ ತಿಷ್ಠತಿ |
ಸ ಜಪ ಏಕಾದಶಾಧ್ಯಾಯಂ ಜಪತಿ ಸ್ಮ ನಿರಂತರಂ || ೭೦ ||

ಸ ತೇನಾಧ್ಯಾಯ ಮಂತ್ರೇಣ ಸಪ್ತವಾರಾಭಿಮಂತ್ರಿತಂ |
ವಿಧಾಯ ವಾರಿ ವಿಪ್ರೇಂದ್ರಃ ಕ್ಷಿಪೇದ್ಯದಿ ಮಮೋಪರಿ |
ತತೋ ಮೇ ಶಾಪನಿರ್ಮುಕ್ತಿರ್ಭವಿಷ್ಯತಿ ನ ಸಂಶಯಃ || ೭೧ ||

|| ಗ್ರಾಮಪಾಲ ಉವಾಚ ||

ಇತಿ ತೇನಾಸ್ಮಿ ಸಂದಿಷ್ಟಃ ಸಮಾಯಾತಸ್ತ್ವದಂತಿಕಂ || ೭೨ ||

---

೬೮. ರಾಕ್ಷಸನು ಹೇಳಿದನು-ಆಗ ಜನರೆಲ್ಲರೂ ಆ ನೀರಿನಲ್ಲಿ ಸ್ನಾನ ಮಾಡಿದರು. ಆಗ ಪಾಪಗಳನ್ನು ಕಳೆದುಕೊಂಡು ಅವರೆಲ್ಲರೂ ಮುಕ್ತಿಯನ್ನು ಹೊಂದಿದರು.

೬೯. ಆದ್ದರಿಂದ ಆ ಏಕಾದಶ ಅಧ್ಯಾಯದ ಮಹಿಮೆಯಿಂದ ನನಗೆ ಮುಕ್ತಿ ಬರುತ್ತದೆ. ನಾನು ತಿಂದಿರುವ ಪ್ರಯಾಣಿಕರು ಜೀವಿಸಿ ಮತ್ತೆ ಮೇಲಕ್ಕೇಳುತ್ತಾರೆ.

೭೦. ನಾನು ಆ ಮನೆಯಲ್ಲಿ ಒಬ್ಬನನ್ನು ತಿನ್ನಲಾರದೆ ಉಗಿದಿದ್ದೇನೆ. ಆ ಬ್ರಾಹ್ಮಣನು ಈ ಮನೆಯಲ್ಲಿದ್ದಾನೆ. ಅವನು ಯಾವಾಗಲೂ ಏಕಾದಶಾಧ್ಯಾಯವನ್ನು ಜಪಿಸುತ್ತಿರುವನು.

೭೧. ಅವನು ಏಕಾದಶಾಧ್ಯಾಯವನ್ನು ಏಳುಬಾರಿ ಹೇಳಿ ನೀರನ್ನು ಮಂತ್ರಿಸಿ ನನ್ನಮೇಲೆ ಪ್ರೋಕ್ಷಿಸಿದರೆ ನನಗೆ ಶಾಪವು ಹೋಗುತ್ತದೆ. ಸಂಶಯವಿಲ್ಲ.

೭೨. ಗ್ರಾಮಪಾಲನು ಹೇಳಿದನು-ಆ ರಾಕ್ಷಸನು ಹೀಗೆ ಹೇಳಿದುದರಿಂದ ಅದನ್ನು ಕೇಳಿ ನನ್ನ ಬಳಿಗೆ ಬಂದಿದ್ದೇನೆ.

|| ವಿಪ್ರ ಉವಾಚ ||

ರಾಕ್ಷಸಃ ಕೇನ ಪಾಪೇನ ಜಾತೋಽಸೌ ವದ ರಕ್ಷಕ |
ಯಃ ಕ್ಷಪಾಯಾಂ ಗೃಹೇ ತಸ್ಮಿನ್ನರಾನ್ ಖಾದತಿ ನಿದ್ರಿತಾನ್ || ೭೩ ||

|| ಗ್ರಾಮಪಾಲ ಉವಾಚ ||

ಅಸ್ಮಿನ್ ಗ್ರಾಮೇ ಪುರಾ ಕಶ್ಚಿದಾಸೀ ದ್ವಿಪ್ರಃ ಕೃಷೀವಲಃ |
ಏಕದಾ ಶಾಲಿ ಕೇದಾರ ರಕ್ಷಣೇ ವ್ಯಾಕುಲೋ ದ್ವಿಜಃ || ೭೪ ||

ನಾತಿದೂರೇ ಮಹಾಗೃಧ್ರಃ ಪಾಂಥಮೇಕಮಭಕ್ಷಯತ್ |
ತಂ ವಿಮೋಚಯಿತುಂ ದೂರಾದ್ದ ಯಾಂಚಕ್ರೇಽಪಿ ತಾಪಸಃ || ೭೫ ||

ಭುಕ್ತ್ವಾ ಪಾಂಥಂ ಖಗ ಸ್ತಾವನ್ನಿರಗಾದಂಬರಾಧ್ವನಾ |
ತತಸ್ಸ ತಾಪಸಃ ಕೋಪಾತ್ತಂ ಬಭಾಷೇ ಕೃಷೀವಲಂ || ೭೬ ||

---

೭೩. ಬ್ರಾಹ್ಮಣನು ಹೇಳಿದನು-ಎಲೈ ರಕ್ಷಕನೆ ! ಈತನು ಯಾವ ಪಾಪದಿಂದ ರಾಕ್ಷಸನಾಗಿ ಹುಟ್ಟಿರುವನು ? ಅವನು ರಾತ್ರಿಯಲ್ಲಿ ಆ ಮನೆಯಲ್ಲಿ ನಿದ್ದೆಮಾಡುತ್ತಿರುವವರನ್ನು ತಿನ್ನುತ್ತಾ ಇರುವವನಲ್ಲ !

೭೪-೭೫ ಗ್ರಾಮಪಾಲನು ಹೇಳಿದನು-ಈ ಊರಿನಲ್ಲಿ ಹಿಂದೆ ಒಬ್ಬ ಬ್ರಾಹ್ಮಣನಿದ್ದನು. ಅವನು ವ್ಯವಸಾಯ ಮಾಡಿಕೊಂಡು ಜೀವಿಸುತ್ತಿದ್ದನು. ಅವನು ಒಂದು ಸಾರಿ ಭತ್ತದ ಗದ್ದೆಯನ್ನು ರಕ್ಷಿಸಿಕೊಂಡು ಇದ್ದನು. ಆಗ ಹತ್ತಿರದಲ್ಲಿಯೇ ಹೋಗುತ್ತಿದ್ದ ಒಬ್ಬ ಪ್ರಯಾಣಿಕನನ್ನು ಒಂದು ಹದ್ದು ತಿನ್ನಲು ಯತ್ನಿಸುತ್ತಿದ್ದಿತು. ಅವನಲ್ಲಿ ದಯೆಹುಟ್ಟಿ ಬಿಡಿಸಲು ಅಲ್ಲಿ ಒಬ್ಬ ತಾಪಸನು ದೂರದಿಂದಲೇ ಪ್ರಯತ್ನಪಟ್ಟನು.

೭೬. ಆದರೂ ಆ ಹದ್ದು ಪ್ರಯಾಣಿಕನನ್ನು ತಿಂದು ಆಕಾಶದಲ್ಲಿ ಹಾರಿಹೋಯಿತು. ಆಗ ಆ ತಾಪಸನು ಕೋಪಗೊಂಡು ಆ ವ್ಯವಸಾಯ ಗಾರನಾದ ಬ್ರಾಹ್ಮಣನನ್ನು ಕುರಿತು ಇಂತೆಂದನು.

|| ತಾಪಸ ಉವಾಚ ||

ಧಿಕ್ತ್ವಾಂ ಪಾಲಿಕ ದುಷ್ಟಾತ್ಮನ್ ಕಠೋರಮತಿನಿರ್ಘೃಣಂ |
ಕುಕ್ಷಿಂಭರಂ ಪರತ್ರಾಣವಿಮುಖಂ ಹತಜೀವಿತಂ || ೭೭ ||

ಚೌರೈಶ್ಚ ದಂಷ್ಟ್ರಿಭಿಸ್ಸರ್ಪೈರರಿವಹ್ನಿ ವಿಷಾಂಬುಭಿಃ |
ಗೃಧ್ರರಾಕ್ಷಸ ಭೂತೈಶ್ಚ ವೇತಾಳಾದಿಭಿರಾಹತಾನ್ || ೭೮ ||

ಜನಾನುಪೇಕ್ಷತೇ ಶಕ್ತಃ ಸ ತದ್ವಧಫಲಂ ಲಭೇತ್ |
ಸ ಮೋಚಯತಿ ಯೋ ವಿಪ್ರಂ ಪ್ರಭುಶ್ಚೌರಾದಿಭಿರ್ಧೃತಂ || ೭೯ ||

ಸ ಯಾತಿ ನರಕಂ ಘೋರಂ ಸ ಪುನರ್ಜಾಯತೇ ವೃಕಃ |
ನಿಹನ್ಯಮಾನಂ ವಿಪಿನೇ ಗೃಧ್ರ ವ್ಯಾಘ್ರೇಣ ವೀಕ್ಷಿತಂ || ೮೦ ||

---

೭೭. ತಾಪಸನು ಹೇಳಿದನು–ಎಲೈ ವ್ಯವಸಾಯಗಾರನಾದ ದುಷ್ಟನೇ ! ನೀನು ಕಠಿಣನು. ದಯೆಯಿಲ್ಲದವನು. ನಿನಗೆ ಧಿಕ್ಕಾರವಿರಲಿ ನೀನು ಹೊಟ್ಟೆ ಹೊರೆದುಕೊಳ್ಳುವುದರಲ್ಲಿ ಮಾತ್ರ ನಿರತನು. ಮತ್ತೊಬ್ಬರನ್ನು ಕಾಪಾಡುವುದರಲ್ಲಿ ಮನಸ್ಸಿಲ್ಲದವನು. ಇಂತಹ ನಿನ್ನ ಜೀವನವು ಅಯೋಗ್ಯವಾದುದು.

೭೮-೭೯. ಕಳ್ಳರು ಕೆಟ್ಟಮೃಗಗಳು, ಸರ್ಪಗಳು, ಬೆಂಕಿ. ವಿಷ. ನೀರು, ಹದ್ದು. ರಾಕ್ಷಸ, ಭೂತ, ಭೇತಾಳ, ಇವೇ ಮುಂತಾದುವುಗಳಿಂದ ತೊಂದರೆ ಪಡುತ್ತಿರುವ ಜನಗಳನ್ನು ಬಿಡಿಸಲು ಶಕ್ತನಾಗಿದ್ದರೂ ಯಾವನು ಅವರನ್ನು ಉಪೇಕ್ಷಿಸುತ್ತಾನೆಯೋ ಅವನು ತೊಂದರೆಪಡುತ್ತಿದ್ದವನನ್ನು ಕೊಂದ ಪಾಪವನ್ನು ಹೊಂದುತ್ತಾನೆ. ಕಳ್ಳರೇ ಮುಂತಾದವರುಗಳಿಂದ ತೊಂದರೆಪಡುತ್ತಿರುವವರನ್ನು ಯಾವ ಯಜಮಾನನು ಬಿಡಿಸುವುದಿಲ್ಲವೋ ಅವನು ಘೋರವಾದ ನರಕವನ್ನು ಹೊಂದುತ್ತಾನೆ ನರಕವನ್ನು ಅನುಭವಿಸಿ ಬಂದನಂತರ ತೋಳನಾಗಿ ಹುಟ್ಟುತ್ತಾನೆ.

೮೦-೮೧. ಕಾಡಿನಲ್ಲಿ ಹದ್ದು ಹುಲಿಗಳಿಂದ ತೊಂದರೆಪಡುತ್ತಿರುವವರನ್ನು ನೋಡಿ ಯಾವನು ಬಿಡು ಬಿಡು ಎಂಬುದಾಗಿ ಹೇಳುತ್ತಾನೆಯೋ ಅವನು ಉತ್ತಮವಾದ ಗತಿಯನ್ನು ಹೊಂದುತ್ತಾನೆ. ಗೋವುಗಳಿಗೋಸ್ಕರ ಹುಲಿಗಳಿಂದ

ಮುಂಚ ಮುಂಚೇತಿ ಯೋ ವಕ್ತಿ ಸ ಯಾತಿ ಪರಮಾಂ ಗತಿಂ ।
ಗವಾಮರ್ಥೇ ಹತಾ ವ್ಯಾಘ್ರೈರ್ಭಿಲ್ಲೈರ್ದುಷ್ಟೈಶ್ಚ ರಾಜಭಿಃ ॥ ೮೧ ॥

ತೇಽಪಿ ಯಾಂತಿ ಪದಂ ವಿಷ್ಣೋಃ ದುರ್ಲಭಂ ಯೋಗಿನಾಮಪಿ ।
ಅಶ್ವಮೇಧ ಸಹಸ್ರಾಣಿ ವಾಜಪೇಯಶತಾನಿ ಚ ॥ ೮೨ ॥

ಶರಣಾಗತ ಸಂತ್ರಾಣಕಲಾಂ ನಾರ್ಹಂತಿ ಷೋಡಶೀಂ ।
ದೀನಸ್ಯೋಪೇಕ್ಷಣಂ ಕೃತ್ವಾ ಭೀತಸ್ಯ ಚ ಶರೀರಿಣಃ ॥ ೮೩ ॥

ಪುಣ್ಯವಾನಪಿ ಕಾಲೇನ ಕುಂಭೀಪಾಕೇ ಸ ಪಚ್ಯತೇ ।
ಪಶ್ಯನ್ನಪಿ ಭವಾನ್ ಪಾಂಥಂ ದುಷ್ಟ ಗೃಧ್ರೇಣ ಭಕ್ಷಿತಂ ॥ ೮೪ ॥

ನಿವಾರಣಸಮರ್ಥೋಽಪಿ ನ ಚಕ್ರೇ ಯನ್ನಿವಾರಣಂ ।
ನಿಷ್ಕೃಪೋಽಸಿ ಯತಸ್ತಸ್ಮಾದ್ಭವಿಷ್ಯಸಿ ನಿಶಾಚರಃ ॥ ೮೫ ॥

---

ಲಾಗಲಿ, ಬೇಡರಿಂದರಾಗಲಿ, ದುಷ್ಟರಿಂದಾಗಲಿ, ರಾಜರಿಂದಾಗಲಿ, ಯಾರು ಕೊಲ್ಲಲ್ಪಡುತ್ತಾರೆಯೋ ಅವರು ಯೋಗಿಗಳಿಗೂ ಹೊಂದಲಸಾಧ್ಯವಾದ ವೈಕುಂಠವನ್ನು ಹೊಂದುತ್ತಾರೆ

೮೨-೮೩. ಸಾವಿರ ಅಶ್ವಮೇಧಗಳಾಗಲಿ ನೂರು ವಾಜಪೇಯಗಳಾಗಲಿ, ಶರಣಾಗತರನ್ನು ರಕ್ಷಿಸಿದ ಪುಣ್ಯಕ್ಕೆ ಹದಿನಾರನೆಯ ಒಂದು ಭಾಗವನ್ನು ಹೋಲಲಾರವು. ದೀನವಾಗಿ ಹೆದರಿರುವ ಪ್ರಾಣಿಯನ್ನು ರಕ್ಷಿಸದೆ ಉಪೇಕ್ಷಿಸಿದರೆ ಅವನು ಪುಣ್ಯವಂತನಾಗಿದ್ದರೂ ಕೆಲವು ಕಾಲದಮೇಲೆ ಕುಂಭೀಪಾಕದಲ್ಲಿ ತೊಂದರೆಪಡಿಸಲ್ಪಡುತ್ತಾನೆ.

೮೪-೮೫. ಈ ದುಷ್ಟವಾದ ಹದ್ದಿನಿಂದ ಕೊಲ್ಲಲ್ಪಟ್ಟು ತಿನ್ನಲ್ಪಡುತ್ತಿರುವ ಪ್ರಯಾಣಿಕನನ್ನು ನೀನು ನೋಡಿಯೂ ಕೂಡ ತಡೆಗಟ್ಟುವುದರಲ್ಲಿ ಸಮರ್ಥನಾಗಿದ್ದರೂ ತಡೆಯದೆ ಇದ್ದುದರಿಂದ ದಯಾಶೂನ್ಯನಾಗಿದ್ದೀಯೆ. ಆದ್ದರಿಂದ ನೀನು ರಾಕ್ಷಸನಾಗಿ ಹುಟ್ಟುತ್ತೀಯೆ.

॥ ಗ್ರಾಮಪಾಲ ಉವಾಚ ॥

ಇಮಂ ಶಾಪಂ ಮುನೇಶ್ಶ್ರುತ್ವಾ ಕಂಪಮಾನ ಕಳೇಬರಃ ।
ಪ್ರಣಮ್ಯ ಹಾಲಿಕೋ ವಿಪ್ರಂ ಬಭಾಷೇ ಕರುಣಂ ವಚಃ ॥ ೮೬ ॥

॥ ಹಾಲಿಕ ಉವಾಚ ॥

ಅತ್ರಾಹಂ ಕ್ಷೇತ್ರ ರಕ್ಷಾಯಾಂ ಚಿರಂ ಕ್ಷಿಪ್ತೇನ ಚಕ್ಷುಷಾ ।
ನ ವೇದ್ಮಿ ನಿಕಟಂ ಗೃಧ್ರಹನ್ಯಮಾನಮಿಮಂ ನರಂ ।
ತೇನ ಮೇಽನುಗ್ರಹಂ ಕರ್ತುಂ ಕೃಪಣಸ್ಯ ತ್ವಮರ್ಹಸಿ ॥ ೮೭ ॥

॥ ವಿಪ್ರ ಉವಾಚ ॥

ಯೋ ವೇತ್ತ್ಯೇಕಾದಶಾಧ್ಯಾಯಂ ಜಪತ್ಯನುದಿನಂ ಚ ಯಃ ।
ತೇನಾಭಿಮಂತ್ರಿತಂ ವಾರಿ ಯದಾ ಶಿರಸಿ ತಾವಕೇ ।
ಪತಿಷ್ಯತಿ ತದಾ ಶಾಪಾತ್ತ್ವ ಮುಕ್ತಿರ್ಭವಿಷ್ಯತಿ ॥ ೮೮ ॥

---

೮೬. ಗ್ರಾಮಪಾಲನು ಹೇಳಿದನು–ಮುನಿಯ ಈ ಶಾಪವನ್ನು ಕೇಳಿ ಆ ವ್ಯವಸಾಯಗಾರನು ನಡುಗುತ್ತ ತಾಪಸನಿಗೆ ನಮಸ್ಕರಿಸಿ ದುಃಖದಿಂದ ಇಂತೆಂದನು.

೮೭. ವ್ಯವಸಾಯಗಾರನು ಹೇಳಿದನು-ಎಲೈ ತಪಸ್ವಿಯೇ! ನಾನು ಇಲ್ಲಿ ಭೂಮಿಯ ಸಸ್ಯವನ್ನು ನೋಡಿಕೊಳ್ಳುವುದರಲ್ಲಿ ಮನಸ್ಸಿಟ್ಟು ಕಣ್ಣುಗಳು ಇತ್ತಕಡೆಗೆ ಇದ್ದುದರಿಂದ ಹದ್ದು ಆ ಮನುಷ್ಯನನ್ನು ಕೊಂದುದನ್ನು ನೋಡಲೇ ಇಲ್ಲ. ಆದ್ದರಿಂದ ದೀನತೆಯಿಂದ ಕೇಳಿಕೊಳ್ಳುತ್ತೇನೆ. ದಯವಿಟ್ಟು ನನ್ನಲ್ಲಿ ಅನುಗ್ರಹವನ್ನು ಮಾಡು.

೮೮. ಬ್ರಾಹ್ಮಣನು ಹೇಳಿದನು-ಯಾವನು ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ತಿಳಿದು ಅದನ್ನು ದಿನವೂ ಜಪಿಸುತ್ತಿರುವನೋ ಅವನು ಮಂತ್ರಿಸಿದ ನೀರು ನಿನ್ನ ತಲೆಯಮೇಲೆ ಬಿದ್ದಾಗ ಈ ಶಾಪದಿಂದ ನಿನಗೆ ಮುಕ್ತಿಯು ಬರುತ್ತದೆ.

|| ಗ್ರಾಮಪಾಲ ಉವಾಚ ||

ಇತ್ಯುಕ್ತ್ವಾ ತಾಪಸೋ ಯಾತೋ ಹಾಲಿಕೋ ರಾಕ್ಷಸೋಽಭವತ್ ।
ಇತಿ ತದ್ರಾಕ್ಷಸವಚೋ ನಿಶಮ್ಯಾಶು ಪ್ರಭಾವತಃ || ೭೯ ||

ಉಭಯಂ ಕಾರ್ಯಮೇವಾದ್ಯ ಸಂಸಿದ್ಧಂ ಕುರು ತಾಪಸ
ತದಾಗಚ್ಛ ದ್ವಿಜಶ್ರೇಷ್ಠ ತೇನಾಧ್ಯಾಯೇನ ಮಂತ್ರಯ ।
ತೀರ್ಥೋದಕಂ ಸ್ವಹಸ್ತೇನ ತಸ್ಯ ಮೂರ್ಧನಿ ನಿಕ್ಷಿಪ || ೮೦ ||

|| ಶ್ರೀ ಮಹಾದೇವ ಉವಾಚ ||

ಇತಿ ತತ್ಪ್ರಾರ್ಥಿತಂ ಸರ್ವಂ ಶ್ರುತ್ವಾ ಕರುಣಯಾಪ್ಲುತಃ ।
ತಥೇತಿ ಸಹ ಪಾಲೇನ ಮುನೀ ರಕ್ಷೋಽನ್ತಿಕಂ ಯಯೌ || ೮೧ ||

ಏಕಾದಶೇನ ತೇನಾಂಬು ವಿಶ್ವರೂಪೇಣ ಮಂತ್ರಿತಂ ।
ನಿಕ್ಷಿಪ್ತಂ ತಸ್ಯ ಶಿರಸಿ ತೇನ ವಿಪ್ರೇಣ ಯೋಗಿನಾ || ೮೨ ||

ಗೀತಾಧ್ಯಾಯಪ್ರಭಾವೇನ ಶಾಪಮೋಕ್ಷಂ ಅವಾಪ ಸಃ ।
ವಿಹಾಯ ರಾಕ್ಷಸಂ ದೇಹಂ ಚತುರ್ಬಾಹು ಸ್ತತೋಽಭವತ್ || ೮೩ ||

---

೭೯-೮೦. ಗ್ರಾಮಪಾಲನು ಹೇಳಿದನು- ಹೀಗೆಂದು ಹೇಳಿ ಆ ತಾಪಸನು ಹೊರಟುಹೋದನು ಇತ್ತ ಆ ವ್ಯವಸಾಯಗಾರನು ರಾಕ್ಷಸನಾದನು. ಈ ರೀತಿಯಾದ ಎರಡು ವಿಷಯಗಳನ್ನು ತಿಳಿದು ನಿನ್ನ ಪ್ರಭಾವದಿಂದ ಬೇಗ ಈಗ ಹೇಗೆ ಅನುಕೂಲವಾಗಬೇಕೋ ಹಾಗೆಮಾಡು. ಎಲೈ ಬ್ರಾಹ್ಮಣನೇ ! ಆ ಅಧ್ಯಾಯವನ್ನು ಹೇಳಿ ಮಂತ್ರಿಸಿದ ತೀರ್ಥದ ನೀರನ್ನು ತಲೆಯಮೇಲೆ ಚೆಲ್ಲು.

೮೧-೮೨. ಶ್ರೀ ಮಹಾದೇವನು ಹೇಳಿದನು-ಹೀಗೆ ಅವನ ಪ್ರಾರ್ಥನೆಯೆಲ್ಲವನ್ನೂ ಕೇಳಿ ಕರುಣೆಯಿಂದ ಕೂಡಿದವನಾಗಿ ಹಾಗೇ ಆಗಲೆಂದು ಆ ನಗರ ರಕ್ಷಕನೊಡನೆ ರಾಕ್ಷಸನ ಬಳಿಗೆ ಹೋದನು. ಹನ್ನೊಂದನೆಯ ಅಧ್ಯಾಯವನ್ನು ಹೇಳಿ ಆ ವಿಶ್ವರೂಪದ ಮಂತ್ರದಿಂದ ಮಂತ್ರಿಸಿ ನೀರನ್ನು ಆ ರಾಕ್ಷಸನ ತಲೆಯಮೇಲೆ ಆ ಬ್ರಾಹ್ಮಣನು ಹಾಕಿದನು.

೮೩. ಗೀತಾಧ್ಯಾಯದ ಮಹಿಮೆಯಿಂದ ಆ ರಾಕ್ಷಸನಿಗೆ ಶಾಪಮೋಕ್ಷವಾಯಿತು. ಆಗ ರಾಕ್ಷಸ ದೇಹವನ್ನು ಬಿಟ್ಟು ನಾಲ್ಕು ತೋಳುಗಳನ್ನು ಹೊಂದಿದನು.

ಏಗೀರ್ಣಾ ಯೇ ಜನಾಸ್ತೇನ ಪಾಂಥಾ ಆರ್ಸ ಸಹಸ್ರಶಃ ।
ಚತುರ್ಭುಜಾ ಬಭೂವುಸ್ತೇ ಶಂಖ ಚಕ್ರ ಗದಾಧರಾಃ ।
ತೇ ವಿಮಾನಾನ್ಯಾರುರುಹುಃ ತಾವದೂಚೇಸ ರಾಕ್ಷಸಂ || ೯೪ ||

॥ ಗ್ರಾಮಪಾಲ ಉವಾಚ ||

ಮಗೀಯಸ್ತನಯಃ ಕಸ್ತಂ ದರ್ಶಯಸ್ವ ನಿಶಾಚರ || ೯೫ ||

॥ ಶ್ರೀ ಮಹಾದೇವ ಉವಾಚ ||

ಇತ್ಯುಕ್ತೇ ಗ್ರಾಮಪಾಲೇನ ದಿವ್ಯಧೀರಾಹ ರಾಕ್ಷಸಃ || ೯೬ ॥

॥ ರಾಕ್ಷಸ ಉವಾಚ ॥

ಏವಂ ಚತುರ್ಭುಜಂ ವಿದ್ಧಿ ತಮಾಲಶ್ಯಾಮಲದ್ಯುತಿಂ ।
ಮಾಣಿಕ್ಯಮುಕುಟಂ ದಿವ್ಯಮಣಿಕುಂಡಲಮಂಡಿತಂ || ೯೭ ॥

---

೯೪. ಅವನು ಎಷ್ಟು ಸಾವಿರ ಪ್ರಯಾಣಿಕರನ್ನು ನುಂಗಿದ್ದನೋ ಅವರೆಲ್ಲರೂ ಕೂಡ ನಾಲ್ಕು ತೋಳುಗಳುಳ್ಳವರಾಗಿ ಶಂಖ ಚಕ್ರ ಗದೆಗಳನ್ನು ಧರಿಸಿ ವಿಮಾನವನ್ನು ಹತ್ತಿಕೊಂಡು ಹೋದರು. ಆಗ ಗ್ರಾಮಪಾಲನು ರಾಕ್ಷಸನನ್ನು ಕುರಿತು ಇಂತೆಂದನು.

೯೫. ಗ್ರಾಮಪಾಲನು ಹೇಳಿದನು-ಎಲೈ ನಿಶಾಚರನೇ ! ನನ್ನ ಮಗನು ಯಾರು ? ಅವನನ್ನು ತೋರಿಸು.

೯೬. ಶ್ರೀ ಮಹಾದೇವನು ಹೇಳಿದನು-ನಗರ ರಕ್ಷಕನು ಹೀಗೆನ್ನಲು ಉತ್ತಮಜ್ಞಾನವುಳ್ಳ ಆ ರಾಕ್ಷಸನು ಇಂತೆಂದನು.

೯೭. ರಾಕ್ಷಸನು ಹೇಳಿದನು-ನಾಲ್ಕು ಭುಜಗಳುಳ್ಳ, ನೀಲಬಣ್ಣವುಳ್ಳ, ಮಾಣಿಕ್ಯದ ಕಿರೀಟವನ್ನು ಹಾಕಿಕೊಂಡಿರುವ ಉತ್ತಮವಾದ ಕುಂಡಲಗಳನ್ನು ಧರಿಸಿರುವ ಈತನು ನಿನ್ನ ಮಗನೆಂದು ತಿಳಿ.

ಹಾರಹಾರಿ ಮಹಾಸ್ಕಂಧಂ ಸ್ವರ್ಣಕೇಯೂರ ಭೂಷಿತಂ ।
ರಾಜೀವಲೋಚನಂ ಸ್ನಿಗ್ಧಂ ಹಸ್ತೇಕೃತಸರೋರುಹಂ ।
ದಿವ್ಯಂ ವಿಮಾನಮಾರೂಢಂ ದೇವತ್ವಂ ಪ್ರಾಪ್ತಮಾತ್ಮಜಂ ॥ ೯೮ ॥

॥ ಶ್ರೀ ಮಹಾದೇವ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಸುತಂ ದೃಷ್ಟ್ವಾ ಚ ತಾದೃಶಂ ।
ಸ್ವಗೇಹಂ ನೇತುಮಾರೇಭೇ ತಂ ಜಹಾಸ ಸುತಸ್ತತಃ ॥ ೯೯ ॥

॥ ಸುತ ಉವಾಚ ॥

ಕತಿವಾರಾಣಿ ಜಾತೋಸಿ ತ್ವಂ ಪುತ್ರೋ ಮಮ ರಕ್ಷಕ ।
ಪೂರ್ವಂ ಪುತ್ರಸ್ತ್ವದೀಯೋಸ್ಮಿ ಹ್ಯಧುನಾ ವಿಬುಧೋಸ್ಮ್ಯಹಂ ॥ ೧೦೦ ॥

ಯಾಸ್ಯಾಮಿ ವೈಷ್ಣವಂ ಧಾಮ ಬ್ರಾಹ್ಮಣಸ್ಯ ಪ್ರಸಾದತಃ ।
ನಿಶಾಚರೋಪಿ ಪ್ರಾಪ್ತೋಯಂ ಪಶ್ಯ ದೇಹಂ ಚತುರ್ಭುಜಂ ॥ ೧೦೧ ॥

---

೯೮. ಹಾರದಿಂದ ಕೂಡಿರುವ ಕತ್ತುಳ್ಳ ಚಿನ್ನದ ಭುಜಕೀರ್ತಿಗಳನ್ನು ಹಾಕಿಕೊಂಡಿರುವ ಕಮಲದಂತೆ ಕಣ್ಣುಳ್ಳ ಕೈಯ್ಯಲ್ಲಿ ಮನೋಹರವಾದ ಕಮಲವನ್ನು ಹಿಡಿದಿರುವ ದೇವತ್ವವನ್ನು ಹೊಂದಿದ ದಿವ್ಯವಿಮಾನವನ್ನು ಹತ್ತಿಕೊಂಡಿರುವ ಈತನೇ ನಿನ್ನ ಮಗನೆಂದು ತಿಳಿ.

೯೯. ಶ್ರೀ ಮಹಾದೇವನು ಹೇಳಿದನು-ರಾಕ್ಷಸನ ಆ ಮಾತನ್ನು ಕೇಳಿ ಆ ರೀತಿ ಅವತಾರವನ್ನು ಹೊಂದಿರುವ ಮಗನನ್ನು ನೋಡಿ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಲು ಉದ್ಯುಕ್ತನಾದನು. ಅದನ್ನು ನೋಡಿ ಮಗನು ನಕ್ಕನು.

೧೦೦. ಮಗನು ಹೇಳಿದನು-ಎಲೈ ನಗರ ರಕ್ಷಕನೇ ! ನೀನು ನನಗೆ ಎಷ್ಟುಬಾರಿ ಆ ಮಗನಾಗಿ ಹುಟ್ಟಿದ್ದೀಯೆ ! ನಾನು ನಿನಗೆ ಮಗನಾಗಿ ಹಿಂದೆ ಹುಟ್ಟಿದ್ದೆನು. ಈಗ ದೇವತೆಯಾಗಿದ್ದೇನೆ.

೧೦೧. ಆ ಬ್ರಾಹ್ಮಣನ ಅನುಗ್ರಹದಿಂದ ವೈಷ್ಣವ ಪರಮಪದವನ್ನು ಹೊಂದುತ್ತೇನೆ. ಈ ರಾಕ್ಷಸನೂ ಕೂಡ ದೇವತೆಯಾಗಿದ್ದಾನೆ. ಇವನು ನಾಲ್ಕು ತೋಳುಗಳನ್ನು ಹೊಂದಿರುವುದನ್ನು ನೋಡು.

ಏಕಾದಶಸ್ಯ ಮಾಹಾತ್ಮ್ಯಾದ್ಯಾತಿ ಸ್ವರ್ಗಂ ಸಮಂ ಜನೈಃ |
ವಿಪ್ರಾದಸ್ಮಾತ್ತ್ವಮಧ್ಯಾಯಮಧೀಷ್ವ ತ್ವಂ ಜಪಾನಿಶಂ ‖ ೧೦೨ ‖

ಭವಿಷ್ಯತಿ ನ ಸಂದೇಹಸ್ತವಾಪಿ ಗತಿರೀದೃಶೀ |
ತಾತ ತಸ್ಮಾತ್ಸತಾಂ ಸಂಗೋ ದುರ್ಲಭಸ್ಸರ್ವಥಾ ಜನೈಃ ‖ ೧೦೩ ‖

ಸೋಽಪ್ಯದ್ಯ ತೇ ಸಮುತ್ಪನ್ನೋ ಹ್ಯಾತ್ಮನಸ್ಸಾಯಯೋಽಪ್ಸಿತಂ |
ಕಿಂ ಧನೈರ್ಭೋಗದಾನೈರ್ವಾ ಕಿಂ ಯಜ್ಞೈಸ್ತಪಸಾ ನು ಕಿಂ ‖ ೧೦೪ ‖

ಕಿಂಪೂರ್ತೈಃ ವಾ ಪರಂ ಶ್ರೇಯೋ ವಿಶ್ವರೂಪಸ್ಯ ಪಾಠತಃ |
ಯತ್ಪೂರ್ಣಾನನ್ದಸಂದೋಹಕೃಷ್ಣಬ್ರಹ್ಮಾಸ್ಯನಿರ್ಗತಂ ‖ ೧೦೫ ‖

ಕುರುಕ್ಷೇತ್ರೇಽರ್ಜುನೇ ಮಿತ್ರೇ ತತ್ಕೈವಲ್ಯರಸಾಯನಂ |
ನೃಣಾಂ ಚ ಭವಭೀತಾನಾಮಾಧಿವ್ಯಾಧಿವಿನಾಶನಂ |
ಅನೇಕಜನ್ಮದುಃಖಘ್ನಂ ನಾನ್ಯತ್ಪಶ್ಯಾಮಿ ತತ್ ಸ್ಮರ ‖ ೧೦೬ ‖

---

೧೦೨. ಈ ಹನ್ನೊಂದನೆಯ ಅಧ್ಯಾಯದ ಮಹಿಮೆಯಿಂದ ಈ ಜನಗಳೊಡನೆ ಸ್ವರ್ಗವನ್ನು ರಾಕ್ಷಸನು ಹೊಂದಿರುವನು. ನೀನು ಈ ಬ್ರಾಹ್ಮಣನಿಂದ ಹನ್ನೊಂದನೆಯ ಅಧ್ಯಾಯವನ್ನು ಹೇಳಿಸಿಕೊಂಡು ನಿತ್ಯವೂ ಜಪಿಸು.

೧೦೩. ನಿನಗೂ ಈ ರೀತಿಯಾದ ಗತಿಯು ಸಿಕ್ಕುತ್ತದೆ ಸಂದೇಹವಿಲ್ಲ. ಎಲೈ ತಂದೆಯೇ ! ಇದಕ್ಕೋಸ್ಕರಲೇ ಜನರು ಸತ್ಪುರುಷರ ಸಹವಾಸವನ್ನು ಮಾಡಬೇಕು.

೧೦೪-೧೦೫ ಆ ನಿನ್ನ ಶ್ರೇಯಸ್ಸು ಈಗ ನಿನಗೆ ಒದಗಿದೆ. ನೀನು ನೋಡಿಕೋ, ಹಣದಿಂದಲಾಗಲಿ, ಭೋಗದಿಂದಾಗಲೀ, ದಾನದಿಂದಾಗಲೀ, ಯಜ್ಞ, ತಪಸ್ಸುಗಳಿಂದಾಗಲೀ, ಕೆರೆ ಮುಂತಾದುವನ್ನು ಕಟ್ಟಿಸುವುದರಿಂದಾಗಲಿ ಪ್ರಯೋಜನವಿಲ್ಲ. ಹನ್ನೊಂದನೆಯ ಅಧ್ಯಾಯುವನ್ನು ಓದಿದರೆ ಉತ್ತಮವಾದ ಶ್ರೇಯಸ್ಸು ಬರುತ್ತದೆ. ಅದನ್ನು ಓದು. ಕುರುಕ್ಷೇತ್ರದಲ್ಲಿ ಮಿತ್ರನಾದ ಅರ್ಜುನನಿಗೆ ಪೂರ್ಣಾನಂದ ಸ್ವರೂಪನಾದ ಕೃಷ್ಣ ಬ್ರಹ್ಮನ ಮುಖದಿಂದ ಯಾವುದು ಹೇಳಲ್ಪಟ್ಟಿತೋ ಅದೇ ಮೋಕ್ಷಕ್ಕೆ ರಸಾಯನ ಸ್ವರೂಪವಾದುದು

೧೦೬. ಸಂಸಾರದಿಂದ ಹೆದರಿರುವ ರೋಗ ಮನೋವ್ಯಥೆಗಳಿಂದ ತೊಂದರೆಪಡುತ್ತಿರುವವರಿಗೆ ಅನೇಕ ಜನ್ಮ ದುಃಖಗಳನ್ನು ನಾಶಮಾಡುವುದು ಮತ್ತೊಂದಿಲ್ಲ. ಆದ್ದರಿಂದ ಹನ್ನೊಂದನೆಯ ಅಧ್ಯಾಯವನ್ನು ಜಪಿಸು.

॥ ಶ್ರೀ ಶಿವ ಉವಾಚ ॥

ಇತ್ಯುಕ್ತ್ವಾ ಸಹ ತೈಸ್ಸರ್ವೈರ್ಯಯೌ ವಿಷ್ಣೋಃ ಪರಂ ಪದಂ ।
ತಮಧ್ಯಾಯಂ ತತೋ ವಿಪ್ರಾದ್ಗ್ರಾಮಪಾಲಃ ಪಪಾಠ ಸಃ ॥ ೧೦೭ ॥

ತಾವುಭೌ ತಸ್ಯ ಮಾಹಾತ್ಮ್ಯಾಜ್ಜಗ್ಮತುಃ ವೈಷ್ಣವಂ ಪದಂ ।
ಇತ್ಯೇಕಾದಶಮಾಹಾತ್ಮ್ಯಕಥಾ ತುಭ್ಯಂ ನಿರೂಪಿತಾ
ಯಸ್ಯಾಃ ಶ್ರವಣಮಾತ್ರೇಣ ಮಹಾಪಾತಕನಾಶನಂ ॥ ೧೦೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಏಕಾದಶಾಧ್ಯಾಯ ಮಾಹಾತ್ಮ್ಯಂ ನಾಮ ಏಕಾಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೧೦೮. ಶ್ರೀ ಶಿವನು ಹೇಳಿದನು-ಹೀಗೆಂದು ಹೇಳಿ ಆ ಮಗನು ಅವರೆಲ್ಲ ರೊಡನೆಯೂ ವೈಕುಂಠವನ್ನು ಹೊಂದಿದನು. ಅನಂತರ ಆ ನಗರ ರಕ್ಷಕನೂ ಆ ಬ್ರಾಹ್ಮಣನಿಂದ ಆ ಅಧ್ಯಾಯವನ್ನು ಕಲಿತನು.

೧೦೯. ಅವರಿಬ್ಬರೂ ಆ ಅಧ್ಯಾಯದ ಮಹಿಮೆಯಿಂದ ವೈಕುಂಠವನ್ನು ಹೊಂದಿದರು. ಈ ರೀತಿಯಾಗಿ ಹನ್ನೊಂದನೆಯ ಅಧ್ಯಾಯದ ಮಹಿಮೆಯನ್ನು ನಿನಗೆ ಹೇಳಿದೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹನ್ನೊಂದನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಮಹಾದೇವ ಉವಾಚ ॥

**ಅಸ್ತಿ ಕೊಲ್ಲಾಪುರಂ ನಾಮ ನಗರಂ ದಕ್ಷಿಣಾಪಥೇ ।**
**ಸುಖಾನಾಂ ಸದನಂ ಸಿದ್ಧಸಾಧೂನಾಂ ಸಿದ್ಧಿಸಂಭವಂ ॥ ೧ ॥**

**ಪರಾಶಕ್ತೇಃ ಪರಂ ಪೀಠಂ ಸರ್ವದೇವನಿಷೇವಿತಂ ।**
**ಪುರಾಣೇಷು ಪ್ರಸಿದ್ಧಂ ಯದ್ಭುಕ್ತಿಮುಕ್ತಿಫಲಪ್ರದಂ ॥ ೨ ॥**

**ಕೋಟಿಶಸ್ತತ್ರ ತೀರ್ಥಾನಿ ಶಿವಲಿಂಗಾನಿ ಕೋಟಿಶಃ ।**
**ಆಸ್ತೇ ರುದ್ರಗಯಾ ಯತ್ರ ವಿಶಾಲಂ ಲೋಕವಿಶ್ರುತಂ ॥ ೩ ॥**

---

## ನೂರ ಎಂಭತ್ತೆರಡನೆಯ ಅಧ್ಯಾಯವು



೧. ಶ್ರೀ ಮಹಾದೇವನು ಹೇಳಿದನು-ದಕ್ಷಿಣದೇಶದಲ್ಲಿ ಕೊಲ್ಹಾಪುರವೆಂಬ ಒಂದು ಊರಿರುವುದು. ಅದು ಸುಖಗಳಿಗೆ ಕಾರಣವಾದ ಜಾಗವು. ಸಿದ್ಧರಿಗೂ, ಸಾಧುಗಳಿಗೂ ಸಿದ್ಧಿಯನ್ನು ಕೊಡುವ ಜಾಗವೂ ಆಗಿರುತ್ತದೆ.

೨. ಪರಶಕ್ತಿಯಾದ ದೇವಿಗೆ ಉತ್ತಮ ಪೀಠವು. ಎಲ್ಲಾ ದೇವತೆಗಳೂ ಅಲ್ಲಿ ಸೇವಿಸುತ್ತಿದ್ದಾರೆ. ಪುರಾಣಗಳಲ್ಲೆಲ್ಲಾ ಪ್ರಸಿದ್ಧವಾದ ಜಾಗವು ಭುಕ್ತಿ ಮುಕ್ತಿಗಳನ್ನು ಕೊಡತಕ್ಕ ಜಾಗವು.

೩. ಅಲ್ಲಿ ತೀರ್ಥಗಳು ಕೋಟಿಗಟ್ಟಲೆಯಲ್ಲಿಯೂ ಶಿವಲಿಂಗಗಳೂ ಕೋಟಿಗಟ್ಟಲೆಯಲ್ಲಿಯೂ ಇವೆ. ಅಲ್ಲಿ ಲೋಕಪ್ರಸಿದ್ಧವಾದ ರುದ್ರಗಯೆಯೂ ಇರುವುದು.

ತುಂಗಾಚಲಮಹಾವಪ್ರಗೋಪುರೋಲ್ಲಾಸಿತೋರಣಂ ।
ಪ್ರಾಸಾದಶಿಖರೇ ಯತ್ರ ತುಂಗಂ ಚ ಕನಧ್ವಜಂ ॥ ೪ ॥

ಸೋಮಕಾನ್ತಮಹಾಸೌಧವಲಭೀ ಪಂಕ್ತಿಶೋಭಿತಂ ।
ಜಾಲರಂಧ್ರೋದ್ಗಿರದ್ಧೂಪಧೂಮಾಮೋದಿತದಿಕ್ತಟಂ ॥ ೫ ॥

ಚಲತ್ಪತಾಕವಿಸ್ತೀರ್ಣಚ್ಛಾಯದೇವಾಲಯಾನ್ವಿತಂ ।
ಚತುರೈಸ್ಸುಂದರೈಸ್ಸ್ನಿಗ್ಧೈಶ್ಶ್ರೀಮದ್ಭಿಶ್ಶುಚಿಮಾನಸೈಃ ॥ ೬ ॥

ಅಧಿಷ್ಠಿತಂ ಸದಾಚಾರೈಃ ಪುರುಷೈಃ ಭೂರಿಭೂಷಣೈಃ ।
ಕುರಂಗನಯನಾಶ್ಚಂದ್ರವದನಾಃ ಕುಟಿಲಾಲಕಾಃ ॥ ೭ ॥

ಉತ್ಫುಲ್ಲಚಂಪಕಚ್ಛಾಯಪೀನತುಂಗಪಯೋಧರಾಃ ।
ಕೃಶಮಧ್ಯಾ ನಿಮ್ನನಾಭಿವಳಿತ್ರಯವಿರಾಜಿತಾಃ ॥ ೮ ॥

---

೪. ದೊಡ್ಡಬೆಟ್ಟದ ತಪ್ಪಲು ಪ್ರದೇಶಗಳಂತೆ ಗೋಪುರಗಳಿಂದ ಕೂಡಿದ ಹೆಬ್ಬಾಗಿಲು ಅಲ್ಲಿ ಇದೆ ಆ ಊರಿನ ಉಪ್ಪರಿಗೆಯಮೇಲೆ ಚಿನ್ನದ ಧ್ವಜಪಟಗಳನ್ನು ಎಲ್ಲರೂ ಹಾರಿಸಿರುವರು.

೫. ಆ ಊರಿನಲ್ಲಿರುವ ಮನೆಯ ಮಹಡಿಗಳಲ್ಲಿರುವ ಲೋವೆಗಳಿಗೆ ಚಂದ್ರಕಾಂತಶಿಲೆಗಳನ್ನು ಹಾಕಿ ಕಟ್ಟಿರುವರು. ಮತ್ತು ಆ ಮನೆಗಳಲ್ಲಿ ಹಾಕಿದ ಧೂಪದ ಹೊಗೆಗಳು ಕಿಟಕಿಯಿಂದ ಹೊರೆಗೆ ಬಂದು ಗಾಳಿಯಿಂದ ಒಯ್ಯಲ್ಪಟ್ಟು ಎಲ್ಲಾ ಕಡೆಗಳಿಗೂ ವಾಸನೆಯನ್ನು ಹರಡುತ್ತವೆ.

೬-೧೦. ದೇವಾಲಯಗಳ ಮೇಲೆ ಇರುವ ಪತಾಕೆಗಳು ದೇವಸ್ಥಾನದ ನೆರಳಿನ ಜೊತೆಗೆ ಸೇರಿಕೊಂಡು ಅಲ್ಲಾಡುತ್ತ ಆ ನೆರಳು ಹೆಚ್ಚುವಂತೆ ಮಾಡುತ್ತವೆ. ಅಂತಹ ಪತಾಕೆಗಳು ಅಲ್ಲಿರುತ್ತವೆ ಜಾಣರೂ, ಸುಂದರರೂ, ಮನೋಹರರೂ, ಶ್ರೀಮಂತರೂ, ಶುಚಿಗಳೂ, ಒಳ್ಳೆಯ ಮನಸ್ಸುಳ್ಳವರೂ, ಆಚಾರವಂತರೂ, ಅನೇಕವಾದ ಆಭರಣಗಳನ್ನು ಹಾಕಿಕೊಂಡು ಇರುವವರೂ ಆದ ಪುರುಷರಿಂದ ಆ ಊರು ಕೂಡಿಕೊಂಡಿದೆ. ಅಲ್ಲಿರತಕ್ಕ ಹೆಂಗಸರು ಚಂದ್ರನಂತೆ ಮುಖವುಳ್ಳವರು. ತಲೆಯ ಕೂದಲುಗಳು ಗುಂಗುರು ಗುಂಗುರಾಗಿವೆ. ಅವರ ಸ್ತನಗಳು ಅರಳಿರುವ ಸಂಪಿಗೆಯ ಹೂವಿನಂತಿವೆ. ಸೊಂಟವು ಕೃಶವಾಗಿದೆ. ಹೊಕ್ಕಳು ಆಳವಾಗಿದೆ. ಹೊಟ್ಟೆಯಮೇಲೆ ತ್ರಿವಳಿಗಳು ಪ್ರಕಾಶಿಸುತ್ತವೆ. ಜಘನವು ಅಗಲವಾಗಿದೆ.

ವಿಶಾಲಜಘನಾಶ್ಚಾರುಜಂಘಾಯುಗ್ಮಾ ಪಶಾಂಘ್ರಯಃ ।
ವಾಚಾಲಮೇಖಲಾದಾಮನಿಕ್ವಣನ್ಮಣಿನೂಪುರಾಃ ॥ ೯ ॥

ರಣತ್ಕಂಕಣಹಸ್ತಾಬ್ಜಸ್ಫುರತ್ಕರಜರಶ್ಮಯಃ ।
ವಸಂತಿ ಪ್ರಮದಾ ಯತ್ರ ಮಾದಯಂತ್ಯೋ ಮುನೀನಪಿ ॥ ೧೦ ॥

ಸಮಸ್ತವಸ್ತುಸಂಯುಕ್ತಂ ಸರ್ವಭೋಗಸಮನ್ವಿತಂ ।
ಮಂಗಳೈಸ್ಸಕಲೈರ್ಯುಕ್ತಂ ಮಹಾಲಕ್ಷ್ಮೀಸಮನ್ವಿತಂ ॥ ೧೧ ॥

ತತ್ರಾಗಚ್ಛತ್ಸ್ವಮಾನ್ಕಶ್ಚಿದ್ಯುವಾ ಗೌರಸ್ಸುಲೋಚನಃ ।
ಕಂಬುಕಂಠಃ ಪೃಥುಸ್ಕಂಧೋ ಮಹಾವಕ್ಷಾ ಮಹಾಭುಜಃ ॥ ೧೨ ॥

ಸಮಸ್ತಲಕ್ಷಣೋಪೇತೋ ಗೌರಸ್ಸರ್ವಾಂಗ ಸುಂದರಃ ।
ಪ್ರವಿಶ್ಯ ನಗರಂ ಪಶ್ಯನ್ ಶೋಭಾಂ ಸೌಧೇಷು ಸರ್ವತಃ ॥ ೧೩ ॥

---

ತೊಡೆಯು ಮನೋಹರವಾಗಿದೆ. ಡಾಬುಗಳಲ್ಲಿ ಹಾಕಿರುವ ಗೆಜ್ಜೆಗಳೂ, ಕಾಲುಕಡಗಗಳೂ, ಧ್ವನಿಮಾಡುತ್ತಿರುತ್ತವೆ. ಕೈಯ್ಯಲ್ಲಿ ಸದ್ದು ಮಾಡುತ್ತಿರುವ ಬಳೆಗಳು ಕೈಗೆ ಕಾಂತಿಯನ್ನು ಹೆಚ್ಚಿಸುತ್ತವೆ. ಎಂತಹ ಮುನಿಗಳಿಗೂ ಕೂಡ ಮೋಹವನ್ನುಂಟುಮಾಡುವ ಯುವತಿಯರು ಆ ಪಟ್ಟಣದಲ್ಲಿ ವಾಸವಾಗಿದ್ದಾರೆ.

೧೧. ಈ ರೀತಿಯಾಗಿ ಆ ಊರು ಎಲ್ಲಾ ಪದಾರ್ಥಗಳಿಂದಲೂ, ಎಲ್ಲಾ ಭೋಗಗಳಿಂದಲೂ ಕೂಡಿಕೊಂಡಿರುವುದಲ್ಲದೆ ಮಹಾಲಕ್ಷ್ಮಿಯಿಂದಲೂ ಕೂಡಿದೆ.

೧೨-೧೩. ಯುವಕನೂ, ಕೆಂಪು ಬಣ್ಣವುಳ್ಳವನೂ, ಚೆನ್ನಾಗಿರುವ ಕಣ್ಣುಗಳುಳ್ಳವನೂ, ಶಂಖದಂತೆ ಕತ್ತುಳ್ಳವನೂ, ದೊಡ್ಡದಾದ ಹೆಗ್ಗತ್ತುಳ್ಳವನೂ, ದೊಡ್ಡದೂ, ಅಗಲವೂ ಆದ ಎದೆಯುಳ್ಳವನೂ, ದಪ್ಪವಾದ ಭುಜವುಳ್ಳವನೂ ಆದ ಒಟ್ಟಿನಲ್ಲಿ ಎಲ್ಲ ಲಕ್ಷಣಗಳಿಂದ ಕೂಡಿದ ಸುಂದರ ಮನುಷ್ಯನು ಅಲ್ಲಿಗೆ ಬಂದನು. ಆತನು ಆ ಊರಿಗೆ ಪ್ರವೇಶಿಸಿ ಅಲ್ಲಿರುವ ಮಹಡಿ ಮನೆಗಳನ್ನು ನೋಡುತ್ತ ಬಹು ಸಂತೋಷಗೊಂಡವನಾಗಿ ಅಲ್ಲಿ ನೆಲಸಿರುವ

ಉತ್ಕಂಠಿತಮನಾ ದ್ರಷ್ಟುಂ ಮಹಾಲಕ್ಷ್ಮೀಂ ಸುರೇಶ್ವರೀಂ ।
ಮಣಿಕಂಠೇ ಕೃತಸ್ನಾನಃ ಸಂಪನ್ನಪಿತೃತರ್ಪಣಃ ।
ಮಹಾಲಕ್ಷ್ಮೀಂ ಮಹಾಮಾಯಾಂ ನತ್ವಾ ತುಷ್ಟಾವ ಭಕ್ತಿತಃ ॥ ೧೪ ॥

॥ ರಾಜಪುತ್ರ ಉವಾಚ ॥

ಜಯತ್ಯಪಾರಕಾರುಣ್ಯಾ ಕಾಮದಾ ಜಗದಂಬಿಕಾ ।
ಕುರ್ವಾಣಾ ಜಗತೋ ಜನ್ಮ ಪಾಲನಂ ಕ್ಷಪಣಂ ದೃಶಾ ॥ ೧೫ ॥

ಯಯಾ ಶಕ್ತ್ಯಾ ಯಥಾ ದಿಷ್ಟಃ ಪರಮೇಷ್ಠೀ ಸೃಜತ್ಯಸೌ ।
ಅವಷ್ಟಭ್ಯ ಯಯಾ ಶಕ್ತ್ಯಾ ಪಾಲಯತ್ಯಚ್ಯುತೋ ಜಗತ್ ॥ ೧೬ ॥

ಯಯಾ ಶಕ್ತ್ಯಾ ಕೃತಾವೇಶಃ ಸಂಹರತ್ಯಖಿಲಂ ಹರಃ ।
ತಾಂ ಭಜೇ ಪರಮಾಂ ಶಕ್ತಿಂ ಸರ್ಗಸ್ಥಿತಿಲಯೋರ್ಜಿತಾಂ ॥ ೧೭ ॥

---

ಮಹಾಲಕ್ಷ್ಮಿಯನ್ನು ನೋಡಲು ಆಸೆಯುಳ್ಳವನಾದನು. ಅಲ್ಲಿರುವ ಮಣಿಕುಂಡ ತೀರ್ಥದಲ್ಲಿ ಸ್ನಾನಮಾಡಿ ಪಿತೃತರ್ಪಣ ಮುಂತಾದುವುಗಳನ್ನು ಮಾಡಿಕೊಂಡು ಮಹಾಲಕ್ಷ್ಮಿಯ ದರ್ಶನವನ್ನು ಮಾಡಿ ನಮಸ್ಕರಿಸಿ ಭಕ್ತಿಯಿಂದ ಸ್ತುತಿಸಲು ಮೊದಲು ಮಾಡಿದನು.

೧೫. ರಾಜಪುತ್ರನು ಹೇಳಿದನು-ಜಗತ್ತಿನ ಉತ್ಪತ್ತಿಪಾಲನ ನಾಶನಗಳನ್ನು ಮಾಡುತ್ತ ಬಹುವಾದ ಕೃಪೆಯುಳ್ಳ ಕೇಳಿದುದನ್ನು ಕೊಡುವ ಜಗದಂಬಿಕೆಯು ಉತ್ಕೃಷ್ಟದಿಂದ ಇರುತ್ತಾಳೆ.

೧೬-೧೭. ಯಾವ ಶಕ್ತಿಯಿಂದ ಅಪ್ಪಣೆಮಾಡಲ್ಪಟ್ಟು ಬ್ರಹ್ಮನು ಈ ಜಗತ್ತನ್ನು ಸೃಷ್ಟಿಸುವನೋ ಯಾವ ಶಕ್ತಿಯನ್ನೇ ಅವಲಂಬಿಸಿಕೊಂಡು ವಿಷ್ಣುವು ಈ ಜಗತ್ತನ್ನು ಕಾಪಾಡುತ್ತಾನೆಯೋ ಯಾವ ಶಕ್ತಿಯನ್ನೇ ಅವಲಂಬಿಸಿಕೊಂಡು ಹರನು ಜಗತ್ತನ್ನು ಸಂಹರಿಸುವನೋ ಅಂತಹ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಗಳಾದ ಪರಮೋತ್ಕೃಷ್ಟಳಾದ ಶಕ್ತಿಯನ್ನು ಭಜಿಸುತ್ತೇನೆ.

ಯೋಗಿಧ್ಯೇಯಾಂಘ್ರಿ ಕಮಲೇ ಕಮಲೇ ಕಮಲಾಲಯೇ ।
ಸ್ವಭಾವಾನ್ನಿಖಿಲಾನ್ನಸ್ತ್ವಂ ಗೃಹ್ಣಾಸೀಂದ್ರಿಯಗೋಚರಾ ॥ ೧೮ ॥

ತ್ವಮೇವ ಕಲ್ಪನಾಜಾಲಂ ತತ್ಕಲ್ಪಂ ಕುರುಷೇ ಮನಃ ।
ಇಚ್ಛಾಜ್ಞಾನಕ್ರಿಯಾರೂಪಾ ಪರಸಂವಿತ್ಸ್ವರೂಪಿಣೀ ॥ ೧೯ ॥

ನಿಷ್ಕಲಾ ನಿರ್ಮಲಾ ನಿತ್ಯಾ ನಿರಾಕಾರಾ ನಿರಂಜನಾ ।
ನಿರಂತರಾ ನಿರಾತಂಕಾ ನಿರಾಲಂಬಾ ನಿರಾಮಯಾ ॥ ೨೦ ॥

ತವೈವಂ ಮಹಿಮಾನಂ ಹಿ ಕೇ ವರ್ಣಯಿತುಮೀಶತೇ ।
ವಂದೇ ನಿರ್ಭಿನ್ನಷಟ್ಚಕ್ರಾಂ ದ್ವಾದಶಾಸ್ತ್ರವಿಹಾರಿಣೀಂ ॥ ೨೧ ॥

ಅನಾಹತಧ್ವನಿಮಯೀಂ ಬಿಂದುನಾದಕಳಾತ್ಮಿಕಾಂ ।
ಯತಸ್ತ್ವಂ ಪೂರ್ಣಶೀತಾಂಶುಗಳತ್ಪೀಯೂಷವಾಹಿನೀ ॥ ೨೨ ॥

---

೧೮. ಯೋಗಿಗಳಿಂದ ಧ್ಯಾನಿಸಲ್ಪಡುತ್ತಿರುವ ಪಾದಪದ್ಮವುಳ್ಳ ಲಕ್ಷ್ಮಿಯೆ! ನಿನಗೆ ಜಯವಾಗಲಿ. ನೀನು ಸ್ವಭಾವವಾಗಿಯೇ ಇಂದ್ರಿಯ ಗೋಚರರಾದ ನಮ್ಮೆಲ್ಲರನ್ನೂ ವಶಮಾಡಿಕೊಳ್ಳುತ್ತೀಯೆ.

೧೯. ನೀನು ಕಲ್ಪನೆಗಳ ಪರಂಪರೆಯು. ನಮ್ಮ ಮನಸ್ಸಿಗೆ ಅಂತಹ ಕಲ್ಪನೆಯನ್ನುಂಟುಮಾಡುತ್ತೀಯೆ. ನೀನು ಇಚ್ಛೆ, ಜ್ಞಾನ, ಕ್ರಿಯಾರೂಪ ಳಾದವಳು. ಉತ್ತಮ ಜ್ಞಾನಸ್ವರೂಪಳು.

೨೦. ನೀನು ಭಿನ್ನವಾಗದ ಪರಿಪೂರ್ಣಳು. ನಿರ್ಮಲ ಸ್ವರೂಪಳು. ಆಕಾರವೇ ನಿನಗಿಲ್ಲ. ನಿನ್ನನ್ನು ಪ್ರಕಾಶಿಸುವ ವಸ್ತುವೇ ಇಲ್ಲ. ಎಲ್ಲಾ ಕಡೆ ಯಲ್ಲಿಯೂ ನೀನು ಇದ್ದೀಯೆ. ಮನಸ್ಸಿಗೆ ತೊಡಕಿಲ್ಲದವಳು. ಯಾವುದನ್ನೂ ಆಶ್ರಯಿಸಿಕೊಂಡಿಲ್ಲ. ಮತ್ತು ರೋಗರಹಿತಳು.

೨೧-೨೨. ಎಲೈ ಲಕ್ಷ್ಮಿಯೇ! ನಿನ್ನ ಮಹಿಮೆಯನ್ನು ಯಾರು ತಾನೇ ವರ್ಣಿಸಲು ಸಾಧ್ಯವಾದೀತು? ದೇಹದಲ್ಲಿರುವ ಷಟ್ಚಕ್ರವೆಂಬ ಸ್ಥಳವನ್ನು ಭೇದಿಸಿಕೊಂಡು ದ್ವಾದಶಾರಗಳಲ್ಲಿ ವಿಹರಿಸುವ ನಿನಗೆ ಜಯವಾಗಲಿ. ಅನಾಹತ ವೆಂಬ ಧ್ವನಿರೂಪಳಾದ, ಬಿಂದುರೂಪಳೂ, ನಾದರೂಪಳೂ, ಕಳಾಸ್ವರೂಪಳೂ ಆದ ಎಲೈ ತಾಯಿಯೇ! ನಿನಗೆ ಜಯವಾಗಲಿ. ಪೂರ್ಣಚಂದ್ರನಲ್ಲಿ ಹೊರಡು ತ್ತಿರುವ ಅಮೃತವನ್ನು ಹೊಂದಿರುವ ನಿನಗೆ ಜಯವಾಗಲಿ.

ಪುಷ್ಣಾಸಿ ವತ್ಸಲೇ ಬಾಲಾನ್ ಸನಕಾದೀನ್ ದಿಗಂಬರಾನ್ ।
ಅನುಸ್ಯೂತಾ ಶಿವಾ ಸಾ ವೈ ಜಾಗ್ರತ್ಸ್ವಪ್ನ ಸುಷುಪ್ತಿಷು ॥ ೨೩ ॥

ತುರೀಯಾಯಾಂ ವರ್ತಮಾನಾ ದಯಾಸೂನೃತಸಂಧಿಷು ।
ದದಾಸಿ ಪ್ರಾಣಿನಾಂ ಸರ್ವಾಃ ಸತತಂ ಬ್ರಹ್ಮಸಂಪದಃ ॥ ೨೪ ॥

ಸಂಹೃತ್ಯ ತತ್ವಸಂಘಾತಂ ತುರೀಯಾತೀತಯಾ ತ್ವಯಾ ।
ಯೋಗಿನಾಂ ಬಿಂಬತಾದಾತ್ಮ್ಯಂ ದೀಯತೇ ನಿರ್ವಿಕಲ್ಪಯಾ ॥ ೨೫ ॥

ಪರಾಂ ನಮಾಮಿ ಪಶ್ಯಂತೀಂ ಮಧ್ಯಮಾಂ ವೈಖರೀಮಪಿ ।
ರೂಪಾಣಿ ದೇವಿ ಗೃಹ್ಣಾಸಿ ಜಗತ್ ಸಂತ್ರಾಣಹೇತವೇ ॥ ೨೬ ॥

ತ್ವಂ ಬ್ರಾಹ್ಮೀ ವೈಷ್ಣವೀ ತ್ವಂ ಚ ಮಾಹೇಶೀ ಚ ತ್ವಮಂಬಿಕೇ ।
ವಾರಾಹೀ ತ್ವಂ ಮಹಾಲಕ್ಷ್ಮೀಃ ನಾರಸಿಂಹೀ ತ್ವಮೈಂದ್ರಿಕಾ ॥ ೨೭ ॥

---

೨೩. ಎಲೈ ತಾಯಿಯೇ ! ನೀನು ಮಕ್ಕಳಾದ, ದಿಗಂಬರರಾದ ಸನಕಾದಿಗಳನ್ನು ಬೆಳೆಸುತ್ತೀಯೆ ! ಜಾಗ್ರದವಸ್ಥೆ, ಸುಷುಪ್ತ್ಯವಸ್ಥೆ, ಸ್ವಪ್ನಾವಸ್ಥೆ ಮೂರರಲ್ಲಿಯೂ ಅನುಸರಿಸಿಕೊಂಡು ಬಂದ ಮಂಗಳರೂಪಳು.

೨೪. ಮೋಕ್ಷಸ್ವರೂಪಳಾಗಿದ್ದೀಯೆ. ದಯೆ ಸೂನೃತಗಳ ಸಂಧಿಯಲ್ಲಿದ್ದು-ಕೊಂಡು ಪ್ರಾಣಿಗಳಿಗೆ ಬ್ರಹ್ಮಸಂಪತ್ತನ್ನು ಕೊಡುತ್ತೀಯೆ.

೨೫. ತತ್ವಗಳೆಲ್ಲವನ್ನೂ ಒಂದು ಮಾಡಿ ಆ ನಾಲ್ಕನೆಯ ಅವಸ್ಥೆಯನ್ನು ಮೀರಿ ಯೋಗಿಗಗಳಿಗೆ ನಿರ್ವಿಕಲ್ಪಸ್ವರೂಪದಿಂದ ಬಿಂಬದ ತಾದಾತ್ಮ್ಯವನ್ನು ಕೊಡುತ್ತೀಯೆ.

೨೬. ಪರವೈಖರಿಯನ್ನೂ, ಮಧ್ಯವೈಖರಿಯನ್ನೂ ನೋಡುತ್ತಿರುವ ನಿನಗೆ ನಮಸ್ಕಾರವು. ಎಲೈ ದೇವಿಯೇ ! ಜಗತ್ತಿನ ಕಾಪಾಡುವಿಕೆಗೋಸ್ಕರ ನೀನು ಅನೇಕ ರೂಪಗಳನ್ನು ಹೊಂದುತ್ತೀಯೆ.

೨೭. ನೀನೇ ಬ್ರಹ್ಮಶಕ್ತಿಯು, ನೀನೇ ವಿಷ್ಣುಶಕ್ತಿಯು, ನೀನೇ ಮಹೇಶ್ವರ ಶಕ್ತಿಯು, ವಾರಾಹಿ, ಮಹಾಲಕ್ಷ್ಮಿ, ನಾರಸಿಂಹೀ, ಇಂದ್ರಿಕೆ ಎಲ್ಲರೂ ನೀನೇ ಆಗಿದ್ದೀಯು.

ತ್ವಂ ಕೌಮಾರೀ ಚಂಡಿಕಾ ತ್ವಂ ಲಕ್ಷ್ಮೀಸ್ತ್ವಂ ವಿಶ್ವಪಾವನೀ ।
ಸಾವಿತ್ರೀ ತ್ವಂ ಜಗನ್ಮಾತಾ ಶಶಿನೀ ತ್ವಂ ಚ ರೋಹಿಣೀ ॥ ೨೮ ॥

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ತ್ವಂ ಸುಧಾ ಪರಮೇಶ್ವರಿ ।
ಚಂಡಮುಂಡಭುಜಾದಂಡಖಂಡದೋರ್ದಂಡಮಂಡಿತೇ ॥ ೨೯ ॥

ರಕ್ತಬೀಜಗಳದ್ರಕ್ತಪಾನಘೂರ್ಣಿತಲೋಚನೇ ।
ಉನ್ಮತ್ತಮಹಿಷಗ್ರೀವೋನ್ಮೂಲನಪ್ರೌಢದೋರ್ಯುಗೇ ॥ ೩೦ ॥

ಶುಂಭಾಸುರಮಹಾದೈತ್ಯ ದಾರಣಾಯಾತ್ತವಿಗ್ರಹೇ ।
ಅನಂತವಿಕ್ರಮೇ ತುಭ್ಯಂ ನಮಸ್ತ್ರೈಲೋಕ್ಯಮಾತೃಕೇ ।
ಭಕ್ತಕಲ್ಪಲತೇಮಹ್ಯಂ ಪ್ರಸೀದ ಪರಮೇಶ್ವರಿ ॥ ೩೧ ॥

॥ ಶ್ರೀ ಶಿವ ಉವಾಚ ॥

ಇತಿ ತೇನ ಸ್ತುತಾ ದೇವೀ ಮಹಾಲಕ್ಷ್ಮೀಸ್ತತಸ್ಸ್ವಯಂ ।
ನಿಜರೂಪಂ ಸಮಾಸ್ಥಾಯ ಪುರುಷಂ ಪ್ರತ್ಯುವಾಚ ತಂ ॥ ೩೨ ॥

---

೨೮-೨೯. ಕೌಮಾರಿ, ಚಂಡಿಕೆ, ಲಕ್ಷ್ಮೀ, ವಿಶ್ವಪಾವನಿ, ಸಾವಿತ್ರಿ, ಜಗನ್ಮಾತೆ, ಶಶಿನಿ, ರೋಹಿಣಿ, ಸ್ವಾಹಾ, ಸ್ವಧೆ, ಸುಧೆ, ಪರಮೇಶ್ವರಿ ಎಲ್ಲರೂ ನೀನೇ ಆಗಿದ್ದೀಯೆ. ಚಂಡಾಸುರನ ತಲೆ, ಭುಜಗಳು ಇವನ್ನು ಕತ್ತರಿಸಿದ ತೋಳುಗಳುಳ್ಳವಳು ನೀನಾಗಿದ್ದೀಯೆ.

೩೦. ರಕ್ತಬೀಜಾಸುರನ ದೇಹದಿಂದ ಹರಿಯುತ್ತಿರುವ ರಕ್ತವನ್ನು ಕುಡಿದು ತಿರಗುತ್ತಿರುವ ಕಣ್ಣುಗಳುಳ್ಳವಳೇ! ನಿನಗೆ ನಮಸ್ಕಾರವು ಕೊಬ್ಬಿದ ಮಹಿಷಾಸುರನನ್ನು ನಾಶಮಾಡಿದ, ತೋಳುಗಳುಳ್ಳವಳೇ ! ನಿನಗೆ ನಮಸ್ಕಾರವು.

೩೧. ಶುಂಭಾಸುರನೆಂಬ ಮಹಾದೈತ್ಯನನ್ನು ನಾಶಮಾಡುವುದಕ್ಕೆ ದೇಹವನ್ನು ಧರಿಸಿರುವವಳೇ ! ಬಹುವಾದ ಪರಾಕ್ರಮವುಳ್ಳವಳೇ ! ಮೂರು ಲೋಕಕ್ಕೂ ತಾಯಿಯಾದವಳೇ! ನಿನಗೆ ನಮಸ್ಕಾರವು. ಭಕ್ತರಿಗೆ ಕಲ್ಪವೃಕ್ಷದಂತಿರುವವಳೇ ! ನಿನಗೆ ನಮಸ್ಕಾರವು. ನೀನು ನನಗೆ ಪ್ರಸನ್ನಳಾಗು.

೩೨. ಶ್ರೀ ಶಿವನು ಹೇಳಿದನು- ಹೀಗೆ ಅವನು ಸ್ತೋತ್ರಮಾಡಲು ಮಹಾಲಕ್ಷ್ಮಿಯು ಪ್ರಸನ್ನಳಾಗಿ ನಿಜರೂಪವನ್ನು ಹೊಂದಿ ಆತನನ್ನು ಕುರಿತು ಇಂತೆಂದಳು.

|| ಮಹಾಲಕ್ಷ್ಮೀರುವಾಚ ||

ರಾಜಪುತ್ರ ಪ್ರಸನ್ನಾಹಂ ವೃಣೀಷ್ವ ವರಮುತ್ತಮಂ || ೩೩ ||

|| ರಾಜಪುತ್ರ ಉವಾಚ ||

ಪಿತಾ ಮೇ ಧರಣೀಪಾಲೋ ವಾಜಿಮೇಧಂ ಮಹಾಕ್ರತುಂ |
ಕುರ್ವಾಣೋ ದೈವಯೋಗೇನ ರೋಗಾಕ್ರಾನ್ತೋ ದಿವಂ ಯಯೌ || ೩೪ ||

ತದ್ವಪುಸ್ತಪ್ತತೈಲೇನ ಶೋಷಯಿತ್ವಾ ಮಯಾ ತತಃ |
ಸ್ಥಾಪಿತಸ್ತತ್ರ ಯಾಗೇಽಸೌ ಯಥಾಪೂರ್ವಮವರ್ತತ || ೩೫ ||

ಅಥ ಕ್ರಾನ್ತಮಹೀಚಕ್ರೋ ಯೂಪಯೋಗತುರಂಗಮಃ |
ನಿಶೀಥೇ ಬಂಧನಂ ಛಿತ್ವಾ ನೀತಃ ಕೇನಾಪಿ ಕುತ್ರ ಚಿತ್ || ೩೬ ||

ಅದೃಷ್ಟ್ವಾ ತಂ ಗತಂ ಕ್ವಾಪಿ ನಿವೃತ್ತೇಷು ಜನೇಷ್ವಹಂ |
ಆಮಂತ್ರ್ಯ ಋತ್ವಿಜಸ್ಸರ್ವಾನ್ ಶರಣಂ ತ್ವಾಮುಪಾಗತಃ || ೩೭ ||

---

೩೩. ಮಹಾಲಕ್ಷ್ಮಿಯು ಹೇಳಿದಳು- ಎಲೈ ರಾಜಪುತ್ರನೇ ! ನಾನು ನಿನಗೆ ಪ್ರಸನ್ನಳಾಗಿದ್ದೇನೆ. ಉತ್ತಮವಾದ ವರಗಳನ್ನು ಕೇಳಿಕೋ.

೩೪. ರಾಜಪುತ್ರನು ಹೇಳಿದನು-ರಾಜನಾದ ನನ್ನ ತಂದೆಯು ಅಶ್ವಮೇಧ ಮಹಾಯಾಗವನ್ನು ಮಾಡುತ್ತಿರುವಾಗಲೇ ಅದೃಷ್ಟವಶದಿಂದ ರೋಗವು ಬಂದು ಮೃತನಾದನು.

೩೫. ಆ ನನ್ನ ತಂದೆಯ ಮೃತಶರೀರವನ್ನು ಕಾದ ಎಣ್ಣೆಯಲ್ಲಿ ಹುರಿದು ಆ ಯಾಗದಲ್ಲಿ ಇಟ್ಟೆನು. ಮೊದಲಿನಂತೆಯೇ ಇದ್ದನು.

೩೬. ಇತ್ತ ಆತನ ಯಾಗದ ಕುದುರೆಯು ಭೂಮಿಯನ್ನೆಲ್ಲಾ ಸುತ್ತಿಕೊಂಡು ಬಂದಿತು. ಅದನ್ನು ಕಟ್ಟಿಹಾಕಿರಲು ಅರ್ಧರಾತ್ರಿಯಲ್ಲಿ ಯಾರೋ ಆ ಕಟ್ಟನ್ನು ಕತ್ತರಿಸಿ ಎಲ್ಲಿಗೋ ತೆಗೆದುಕೊಂಡು ಹೋದರು.

೩೭. ಅದನ್ನು ಹುಡುಕಲು ನನ್ನ ಕಡೆಯ ಭಟರು ಹೊರಟು ಅದು ಎಲ್ಲಿಯೂ ಸಿಕ್ಕದಿರಲು ಹಿಂದಿರುಗಿ ಬಂದರು ಆಗ ಆ ಯಾಗದಲ್ಲಿದ್ದ ಋತ್ವಿಕ್ಕುಗಳೆಲ್ಲರನ್ನೂ ಕೇಳಿಕೊಂಡು ನಿನ್ನನ್ನು ಶರಣುಹೊಗಲು ಬಂದಿದ್ದೇನೆ.

ಪ್ರಸನ್ನಾ ಯದಿ ದೇವಿ ತ್ವಂ ತಸ್ಮೇ ಯಾಗತುರಂಗಮಃ ।
ದೃಷ್ಟೋ ಭವತು ಯಾಗೋಽಸೌ ಸಂಪೂರ್ಣೋ ಜಾಯತೇ ಯಥಾ ॥೩೮॥

ಆನೃಣ್ಯಂ ಮಮ ತಾತಸ್ಯ ತೇನ ರಾಜ್ಞೋ ಭವಿಷ್ಯತಿ ।
ತಥಾ ಕುರು ಜಗದ್ಧಾತ್ರಿ ಶರಣಾಗತವತ್ಸಲೇ ॥ ೩೯ ॥

॥ ಶ್ರೀ ದೇವ್ಯುವಾಚ ॥

ಮಮ ದ್ವಾರೇ ದ್ವಿಜಃ ಸಿದ್ಧಸಮಾಧಿರಿತಿ ವಿಶ್ರುತಃ ।
ಮಮಾಜ್ಞಯಾ ಸ ತೇ ಸರ್ವಂ ಕಾರ್ಯಂ ನಿಷ್ಪಾದಯಿಷ್ಯತಿ ॥ ೪೦ ॥

॥ ಶ್ರೀ ಶಿವ ಉವಾಚ ॥

ಇತ್ಯುಕ್ತಶ್ಶ್ರೀಮಹಾಲಕ್ಷ್ಮ್ಯಾ ತತೋ ರಾಜಕುಮಾರಕಃ ।
ಆಜಗಾಮ ಮುನಿಸ್ಸಿದ್ಧಸಮಾಧಿರ್ಯತ್ರ ತಿಷ್ಠತಿ ॥ ೪೧ ॥

---

೩೮. ಎಲೈ ದೇವಿಯೇ ! ನೀನು ನನಗೆ ಪ್ರಸನ್ನಳಾಗಿದ್ದರೆ ನನ್ನ ಯಾಗದ ಕುದುರೆಯು ಕಣ್ಣಿಗೆ ಕಾಣಲಿ. ಯಾಗವು ಸಂಪೂರ್ಣವಾಗಿ ನಡೆಯಲಿ.

೩೯. ಹಾಗೆ ಮಾಡಿದರೆ ನಾನು ರಾಜನಾದ ನನ್ನ ತಂದೆಯ ಋಣವನ್ನು ತೀರಿಸಿದಂತಾಗುತ್ತದೆ. ಎಲೈ ಶರಣಾಗತವತ್ಸಲೆಯೆ ! ನೀನು ಆ ರೀತಿಯಾಗಿ ಮಾಡು.

೪೦. ಶ್ರೀ ದೇವಿಯು ಹೇಳಿದಳು-ನನ್ನ ದೇವಸ್ಥಾನದ ಬಾಗಿಲಿನಲ್ಲಿ ಸಿದ್ಧ ಸಮಾಧಿಯೆಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನಿದ್ದಾನೆ. ಅವನು ನನ್ನ ಅಪ್ಪಣೆಯಿಂದ ನಿನ್ನ ಕೆಲಸವೆಲ್ಲವನ್ನೂ ಮಾಡಿಕೊಡುತ್ತಾನೆ.

೪೧. ಶ್ರೀ ಶಿವನು ಹೇಳಿದನು-ಮಹಾಲಕ್ಷ್ಮಿಯು ಹೀಗೆನ್ನಲು ಆ ರಾಜಕುಮಾರನು ಆ ಸಿದ್ಧ ಸಮಾಧಿಯೆಂಬ ದ್ವಿಜನಿರುವಲ್ಲಿಗೆ ಬಂದನು.

ಪ್ರಣಮ್ಯ ತಸ್ಯ ಪಾದಾಬ್ಜಂ ಕೃತಾಂಜಲಿರವಸ್ಥಿತಃ ।
ತಮುವಾಚ ತತೋ ವಿಪ್ರಃ ಪ್ರಹಿತೋಽಸಿ ತ್ವಮಂಬಯಾ
ತ್ವದೀಪ್ಸಿತಮಿದಂ ಸರ್ವಂ ಸಾಧಯಾಮಿ ವಿಲೋಕಯ ॥ ೪೨ ॥

॥ ಶ್ರೀ ಶಿವ ಉವಾಚ ॥

ಇತ್ಯುಕ್ತ್ವಾ ತ್ರಿದಶಾನ್ ಸರ್ವಾನ್ ಆಚಕರ್ಷ ಸ ಮಾಂತ್ರಿಕಃ ।
ಐಕ್ಷತ ಕ್ಷಿತಿಪಾಲಸ್ಯ ತನಯೋಽಸೌ ತದಾ ಸುರಾನ್ ॥ ೪೩ ॥

ಕೃತಾಂಜಲಿಪುಟಾನ್ ದೇವಾನ್ ವೇಪಮಾನಕಳೇಬರಾನ್ ।
ಅಥ ತಾನಮರಾನ್ ಸರ್ವಾನ್ ಸಂಬಭಾಷೇ ದ್ವಿಜೋತ್ತಮಃ ॥ ೪೪ ॥

॥ ಸಿದ್ಧಸಮಾಧಿರುವಾಚ ॥

ಅಮುಷ್ಯ ರಾಜಪುತ್ರಸ್ಯ ವಾಜೀ ಯಜ್ಞಾಯ ಕಲ್ಪಿತಃ ।
ನೀತೋಽಸ್ತಿ ದೇವರಾಜೇನ ಕ್ಷಪಾಯಾಮಪಹೃತ್ಯ ಯಃ ।
ಗೀರ್ವಾಣಾಸ್ತೂರ್ಣಮರ್ವಾಣಂ ಸಮಾನಯತ ಮಾ ಚಿರಂ ॥ ೪೫

---

೪೨. ಆ ಸಿದ್ಧನ ಪಾದಕಮಲಗಳಿಗೆ ನಮಸ್ಕರಿಸಿ ಕೈಮುಗಿದುಕೊಂಡು ನಿಂತುಕೊಂಡನು. ಆಗ ಆ ಸಿದ್ಧನು ಎಲೈ ರಾಜಕುಮಾರನೆ! ನಿನ್ನನ್ನು ಅಂಬೆಯು ಕಳುಹಿಸಿರುವಳು. ನಿನಗೆ ಬೇಕಾದುದೆಲ್ಲವನ್ನೂ ಮಾಡಿಕೊಡುತ್ತೇನೆ. ನೋಡು.

೪೩. ಶ್ರೀ ಶಿವನು ಹೇಳಿದನು-ಹೀಗೆಂದು ಹೇಳಿ ದೇವತೆಗಳೆಲ್ಲರನ್ನೂ ತನ್ನ ಮಂತ್ರಬಲದಿಂದ ಬರಮಾಡಿದನು. ಆಗ ಆ ರಾಜಪುತ್ರನು ಆ ದೇವತೆಗಳೆಲ್ಲರನ್ನೂ ನೋಡಿದನು.

೪೪. ಆಗ ಆ ದೇವತೆಗಳೆಲ್ಲರೂ ಕೈಮುಗಿದುಕೊಂಡು ನಡುಗುತ್ತ ಆ ಸಿದ್ಧನ ಎದುರಿಗೆ ನಿಂತುಕೊಂಡರು. ಆಗ ಆ ಬ್ರಾಹ್ಮಣನು ಅವರನ್ನು ಕುರಿತು ಇಂತೆಂದನು.

೪೫. ಸಿದ್ಧ ಸಮಾಧಿಯು ಹೇಳಿದನು-ಈ ರಾಜಪುತ್ರನ ಯಜ್ಞಕ್ಕೋಸ್ಕರ ಮಂತ್ರಿಸಿದ್ದ ಕುದುರೆಯನ್ನು ದೇವರಾಜನಾದ ಇಂದ್ರನು ರಾತ್ರಿಯಲ್ಲಿ ಕದ್ದು ತೆಗೆದುಕೊಂಡು ಹೋಗಿದ್ದಾನೆ. ಎಲೈ ದೇವತೆಗಳಿರಾ! ಆ ಕುದುರೆಯನ್ನು ಬೇಗ ತಂದುಕೊಡಿರಿ. ಸಾವಕಾಶಮಾಡಬೇಡಿರಿ.

॥ ಶ್ರೀ ಶಿವ ಉವಾಚ ॥

ಅಥ ತಸ್ಯ ಮುನೇರ್ವಾಕ್ಯಾದ್ದೇವೈರ್ಯಜ್ಞತುರಂಗಮಃ ।
ಸಮರ್ಪಿತಸ್ತತಸ್ತೇನ ತೇಸುಜ್ಞಾತಾ ದಿವೌಕಸಃ ॥ ೪೬ ॥

ಆಕೃಷ್ಟಾನಮರಾ ದೃಷ್ಟ್ವಾ ಗತಂ ಲಬ್ಧ್ವಾ ತುರಂಗಮಂ ।
ಮಹೀಪತಿಸುತೋ ನತ್ವಾ ತಂ ಮುನಿಂ ವಾಕ್ಯಮಬ್ರವೀತ್ ॥ ೪೭ ॥

॥ ರಾಜಪುತ್ರ ಉವಾಚ ॥

ಆಶ್ಚರ್ಯಮಿದಮೇತತ್ತೇ ಸಾಮರ್ಥ್ಯಮೃಷಿಸತ್ತಮ ।
ಕೃತಮೇತತ್ತ್ವಯಾ ವಿಪ್ರ ತ್ರಿದಶಾಕರ್ಷಣಂ ಕ್ಷಣಾತ್ ॥ ೪೮ ॥

ಹೃತಾದಾಕೃಷ್ಯ ದತ್ತೋ ಮೇ ಯಜ್ಞೀಯೋಯಂ ತುರಂಗಮಃ ।
ನ ಕಿಂಚಿದಪರಂ ಯಾವದ್ದುಷ್ಕರಂ ಯತ್ಸುರೈರಪಿ ॥ ೪೯ ॥

---

೪೬. ಶ್ರೀ ಶಿವನು ಹೇಳಿದನು-ಆ ಮುನಿಯ ಮಾತಿನಂತೆ ದೇವತೆಗಳು ಆ ಯಾಗದ ಕುದುರೆಯನ್ನು ತಂದು ಒಪ್ಪಿಸಿದರು. ಅಂತೆಯೇ ಅವನ ಅಪ್ಪಣೆಯನ್ನು ಪಡೆದು ಹೊರಟುಹೋದರು.

೪೭. ಆ ಸಿದ್ಧನು ಮಂತ್ರದಿಂದ ಎಳೆದುಕೊಂಡು ಬಂದ ದೇವತೆಗಳನ್ನೂ, ಹೋದ ಕುದುರೆಯು ಸಿಕ್ಕಿದುದನ್ನೂ ನೋಡಿ ಆ ರಾಜಪುತ್ರನು ಆ ಸಿದ್ಧನಿಗೆ ನಮಸ್ಕರಿಸಿ ಆ ಮುನಿಯನ್ನು ಕುರಿತು ಇಂತೆಂದನು.

೪೮. ರಾಜಪುತ್ರನು ಹೇಳಿದನು—ಎಲೈ ಋಷಿಯೇ! ನಿನ್ನ ಈ ಕೆಲಸವು ಬಹು ಆಶ್ಚರ್ಯಕರವಾದುದು. ನೀನು ಕ್ಷಣಮಾತ್ರದಲ್ಲಿ ದೇವತೆಗಳನ್ನು ಈ ಮಂತ್ರದಿಂದ ಬರುವಂತೆ ಮಾಡಿದೆಯಲ್ಲ!

೪೯. ನನ್ನ ಯಜ್ಞದ ಕುದುರೆಯನ್ನು ಬಲಾತ್ಕಾರದಿಂದ ತರಿಸಿಕೊಟ್ಟಿದ್ದೀಯೆ. ದೇವತೆಗಳಿಗೆ ಕಷ್ಟವಾದ ಕೆಲಸವೂ ಕೂಡ ನಿನಗೆ ಸ್ವಲ್ಪವೂ ಕಷ್ಟವಾಗುವುದೇ ಇಲ್ಲ.

ಪ್ರಭವಿಷ್ಯತಿ ತತ್ಕರ್ತುಂ ಭವಾನೇವ ನ ಚಾಪರಃ ।
ಶೃಣು ವಿಪ್ರ ಮಹೀಪಾಲಃ ಪಿತಾಸೀನ್ಮೇ ಬೃಹದ್ರಥಃ || ೫೦ ||

ಆರಬ್ಧಹಯಮೇಧೋಽಸೌ ದೈವೇನ ನಿಧನಂ ಗತಃ ।
ಅದ್ಯಾಪಿ ತಸ್ಯ ದೇಹೋಽಸ್ತಿ ತಪ್ತತೈಲೇನ ಶೋಷಿತಃ ।
ತಸ್ಯ ಸಂಜೀವನಂ ಭೂಯಃ ಕರ್ತುಮರ್ಹಸಿ ಸತ್ತಮ || ೫೦ ||

|| ಶ್ರೀ ಶಿವ ಉವಾಚ ||

ಇತ್ಯಾಕರ್ಣ್ಯ ಸ್ಮಿತಂ ಕೃತ್ವಾ ಸ ಜಗಾದ ಮಹಾಮುನಿಃ ।
ಯಾಮಸ್ತತ್ರ ಪಿತಾ ಯತ್ರ ತಾವಕೋ ಯಾಗಮಂಡಪೇ || ೫೨ ||

ಅಥಾಗತ್ಯ ಸಮಂ ತೇನ ತತ್ರ ಸಿದ್ಧಸಮಾಧಿನಾ ।
ಪಯೋಽಭಿಮಂತ್ರ್ಯ ನಿದಧೇ ತಸ್ಯ ಪ್ರೇತಸ್ಯ ಮೂರ್ಧನಿ || ೫೩ ||

ತತಃ ಪ್ರಾಪ ನೃಪಃ ಸಂಜ್ಞಾಮುತ್ತಸ್ಥೌ ವೈ ದದರ್ಶ ಚ ।
ಸ ತಂ ಪಪ್ರಚ್ಛ ವಿಪ್ರೇಂದ್ರಂ ಕೋಽಸಿ ಧರ್ಮೇತಿ ಭೂಪತಿಃ || ೫೪ ||

---

೫೦. ಅವೆಲ್ಲವನ್ನೂ ಮಾಡಲು ನೀನೇ ಶಕ್ತನು. ಮತ್ತಾರೂ ಮಾಡಲು ಸಾಧ್ಯವಿಲ್ಲವು.

೫೧. ಎಲೈ ದ್ವಿಜನೇ ! ಬೃಹದ್ರಥನೆಂಬ ರಾಜನು ನನ್ನ ತಂದೆಯು. ಅವನು ಅಶ್ವಮೇಧಯಾಗವನ್ನು ಮಾಡಲು ಮೊದಲುಮಾಡಿ ದುರದೃಷ್ಟದಿಂದ ಸತ್ತುಹೋದನು. ಅವನ ಶರೀರವನ್ನು ಕಾಸಿದ ಎಣ್ಣೆಯಲ್ಲಿ ಹುರಿದು ಈಗಲೂ ಇಟ್ಟಿದ್ದೇನೆ. ಅವನು ಮತ್ತೆ ಬದುಕುವಂತೆ ಕೃಪೆಮಾಡಬೇಕು.

೫೨. ಶ್ರೀ ಶಿವನು ಹೇಳಿದನು-ಆ ಮುನಿಯು ಈ ಮಾತನ್ನು ಕೇಳಿ ನಕ್ಕು ನಿನ್ನ ತಂದೆಯನ್ನಿಟ್ಟಿರುವ ನಿನ್ನ ಯಾಗಮಂಟಪಕ್ಕೆ ಹೋಗೋಣ ಎಂದನು.

೫೩. ಅನಂತರ ಆ ಸಿದ್ಧಸಮಾಧಿಯು ಅವನೊಡನೆ ಬಂದನು. ಒಂದು ನೀರನ್ನು ಅಭಿಮಂತ್ರಿಸಿ ಆ ಪ್ರೇತದ ತಲೆಯ ಮೇಲೆ ಅದನ್ನು ಚೆಲ್ಲಿದನು.

೫೪. ಆ ರಾಜನು ಜ್ಞಾನವನ್ನು ಹೊಂದಿ ಮೇಲಕ್ಕೆದ್ದು ನೋಡಿದನು. ಆ ರಾಜನು ಆ ಬ್ರಾಹ್ಮಣನನ್ನು ಕುರಿತು ಎಲೈ ಧರ್ಮಿಷ್ಠನೇ! ನೀನಾರು? ಎಂದು ಕೇಳಿದನು.

ತತೋ ರಾಜಸುತಸ್ಸರ್ವಂ ಭೂಪಾಲಾಯ ನ್ಯವೇದಯತ್ ।
ಸ ನತ್ವಾ ಬ್ರಾಹ್ಮಣಂ ರಾಜಾ ತಂ ಪುನರ್ದತ್ತಜೀವಿತಂ ॥ ೫೫.॥

ಬಭಾಷೇಕೇನ ಪುಣ್ಯೇನ ತ್ವಯಿ ಶಕ್ತಿರಲೌಕಿಕೀ ।
ಯಯಾ ಮೇ ಜೀವಿತಂ ದತ್ತಮಾಕೃಷ್ಟಾಶ್ಚ ದಿವೌಕಸಃ ।
ಯಾಗಶ್ಚೋದ್ಧರಿತೋ ವಿಪ್ರ ಯೇನ ಮೇ ತನ್ನಿರೂಪಯ ॥ ೫೬ ॥

॥ ಶ್ರೀ ಶಿವ ಉವಾಚ ॥

ಇತ್ಯುಕ್ತಸ್ತೇನ ವಿಪ್ರೋಽಸೌ ಜಗಾದ ಶ್ಲಕ್ಷ್ಣಯಾ ಗಿರಾ ॥ ೫೭ ॥

॥ ಸಿದ್ಧಸಮಾಧಿರುವಾಚ ॥

ಗೀತಾನಾಂ ದ್ವಾದಶಾಧ್ಯಾಯಂ ಜಪಾಮ್ಯಹಮತಂದ್ರಿತಃ ।
ತೇನ ಶಕ್ತಿರಿಯಂ ರಾಜನ್ ಯಯಾ ಪ್ರಾಪ್ತೋಽಸಿ ಜೀವಿತಂ ॥ ೫೮ ॥

---

೫೫. ಆಗ ಆ ರಾಜಕುಮಾರನು ತಂದೆಗೆ ಎಲ್ಲವನ್ನೂ ಹೇಳಿದನು. ಆ ರಾಜನು ತನಗೆ ಜೀವವನ್ನು ಕೊಟ್ಟ ಆ ಬ್ರಾಹ್ಮಣನಿಗೆ ನಮಸ್ಕರಿಸಿದನು.

೫೬. ಎಲೈ ದ್ವಿಜೋತ್ತಮನೇ! ಯಾವ ಪುಣ್ಯದಿಂದ ನಿನ್ನಲ್ಲಿ ಈ ಅಲೌಕಿಕವಾದ ಶಕ್ತಿಯು ಇದೆ? ನನಗೆ ಮತ್ತೆ ಜೀವವನ್ನು ಕೊಟ್ಟೆ! ಮತ್ತು ದೇವತೆಗಳನ್ನೂ ಕೂಡ ಆಕರ್ಷಣೆಮಾಡಿದೆ! ಯಾಗವನ್ನೂ ಪೂರ್ತಿಮಾಡಿದೆ! ಆ ಶಕ್ತಿಯು ಯಾವುದೆಂಬುದನ್ನು ತಿಳಿಸು.

೫೭. ಶ್ರೀ ಶಿವನು ಹೇಳಿದನು—ಆ ರಾಜನು ಹಾಗೆಂದು ಕೇಳಲು ಸಿದ್ಧನು ಸಧಾನವಾಗಿ ಇಂತೆಂದನು.

೫೮. ಸಿದ್ಧಸಮಾಧಿಯು ಹೇಳಿದನು-ಎಲೈ ರಾಜನೇ! ಗೀತೆಯ ಹನ್ನೆರಡನೆಯ ಅಧ್ಯಾಯವನ್ನು ಸ್ವಲ್ಪವೂ ಆಲಸ್ಯಪಡದೆ ಜಪಿಸುತ್ತೇನೆ. ಅದರಿಂದ ನನಗೆ ಈ ಶಕ್ತಿಯು ಬಂದಿದೆ. ಅದರಿಂದಲೇ ನಿನ್ನನ್ನು ಬದುಕಿಸಿದ್ದೇನೆ.

॥ ಶ್ರೀ ಶಿವ ಉವಾಚ ॥

ಏತದಾಕರ್ಣ್ಯ ರಾಜಾಸೌ ದ್ವಾದಶಾಧ್ಯಾಯಮುತ್ತಮಂ ।
ಪಪಾಠ ತಸ್ಮಾದ್ವಿಪ್ರರ್ಷೇಃ ಸಕಾಶಾದ್ಬ್ರಾಹ್ಮಣಾನ್ವಿತಃ ॥ ೫೯ ॥

ತಸ್ಯಾಧ್ಯಾಯಸ್ಯ ಮಾಹಾತ್ಮ್ಯಾತ್ತೇ ಸರ್ವೇ ಸದ್ಗತಿಂ ಯಯುಃ ।
ಅನ್ಯೇ ಪಠಿತ್ವಾ ಜಿವಾಶ್ಚ ಮುಕ್ತಿಮಾಪುರಹೋ ಪರಾಂ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ದ್ವಾದಶಾಧ್ಯಾಯ ಮಾಹಾತ್ಮ್ಯಂ ನಾಮ ದ್ವ್ಯಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೫೯. ಶ್ರೀ ಶಿವನು ಹೇಳಿದನು-ರಾಜನು ಇದನ್ನು ಕೇಳಿ ಉತ್ತಮವಾದ ಆ ಹನ್ನೆರಡನೆಯ ಅಧ್ಯಾಯವನ್ನು ಆ ಸಿದ್ಧನಿಂದ ಆ ಬ್ರಾಹ್ಮಣರೊಡನೆ ಕೂಡಿ ಹೇಳಿಸಿಕೊಂಡನು.

೬೦. ಆ ಅಧ್ಯಾಯದ ಮಹಿಮೆಯಿಂದ ಅವರೆಲ್ಲರೂ ಮುಕ್ತಿಯನ್ನು ಹೊಂದಿದರು. ಇದನ್ನು ಓದಿದ ಇತರ ಪ್ರಾಣಿಗಳೂ ಉತ್ತಮವಾದ ಮುಕ್ತಿಯನ್ನು ಹೊಂದಿದರು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹನ್ನೆರಡನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

—X—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ತ್ರಶೀತ್ಯಧಿಕಶತತಮೋಽಧ್ಯಾಯಃ ||



|| ಶ್ರೀ ದೇವ್ಯುವಾಚ ||

ದ್ವಾದಶಾಧ್ಯಾಯಮಾಹಾತ್ಮ್ಯಂ ಭವತಾ ಕಥಿತಂ ಮಮ ।
ಬ್ರೂಹಿ ತ್ರಯೋದಶಾಧ್ಯಾಯಮಾಹಾತ್ಮ್ಯಮತಿಸುಂದರಂ || ೧ ||

|| ಈಶ್ವರ ಉವಾಚ ||

ಶೃಣು ತ್ರಯೋದಶಾಧ್ಯಾಯಮಹಿಮಾಂಭೋನಿಧಿಂ ಶಿವೇ ।
ಯದಾಕರ್ಣನಮಾತ್ರೇಣ ಪರಾಂ ಮುದಮವಾಪ್ಸ್ಯಸಿ || ೨ ||

ಅಸ್ತಿ ದಕ್ಷಿಣದಿಗ್ಭಾಗೇ ತುಂಗಭದ್ರಾ ಮಹಾನದೀ ।
ತತ್ತಟೇ ನಗರಂ ರಮ್ಯಂ ನಾಮ್ನಾ ಹರಿಹರಂ ಪುರಂ || ೩ ||

---

## ನೂರ ಎಂಭತ್ತಮೂರನೆಯ ಅಧ್ಯಾಯವು



೧. ಶ್ರೀ ದೇವಿಯು ಹೇಳಿದಳು- ಎಲೈ ಶಿವನೇ! ಹನ್ನೆರಡನೆಯ ಅಧ್ಯಾಯದ ಮಹಿಮೆಯನ್ನು ನೀನು ಹೇಳಿದೆ. ಹದಿಮೂರನೆಯ ಅಧ್ಯಾಯದ ಮಹಿಮೆಯನ್ನು ಹೇಳು.

೨. ಈಶ್ವರನು ಹೇಳಿದನು-ಎಲೈ ಶಿವೆಯೆ! ಆ ಹದಿಮೂರನೆಯ ಅಧ್ಯಾಯದ ಮಹಿಮೆಯನ್ನು ಹೇಳುವೆನು. ಅದನ್ನು ಕೇಳಿದರೆ ನಿನಗೆ ಬಹುವಾದ ಸಂತೋಷ ಉಂಟಾಗುತ್ತದೆ.

೩. ದಕ್ಷಿಣದಿಕ್ಕಿನಲ್ಲಿ ತುಂಗಭದ್ರೆಯೆಂಬ ಮಹಾನದಿಯೊಂದಿದೆ. ಆದರ ದಡದಲ್ಲಿ ಹರಿಹರವೆಂಬ ಒಂದು ಪಟ್ಟಣವಿರುವುದು.

ಯತ್ರಾಸ್ತೇ ಭಗವಾನ್ ದೇವಿ ದೇವೋ ಹರಿಹರಸ್ಸ್ವಯಂ ।
ಯಸ್ಯ ದರ್ಶನಮಾತ್ರೇಣ ಪರಂ ಕಲ್ಯಾಣಮಾಪ್ಯತೇ ॥ ೪ ॥

ತಸ್ಮಿನ್ ಪುರೇ ದ್ವಿಜನ್ಮಾಸೀದ್ಧರಿದೀಕ್ಷಿತಸಂಜ್ಞಿತಃ ।
ತಪಸ್ಸ್ವಾಧ್ಯಾಯನಿರತಃ ಶ್ರೋತ್ರಿಯೋ ವೇದಪಾರಗಃ ॥ ೫ ॥

ದುರಾಚಾರೇತಿ ತಸ್ಯಾಸೀದ್ಭಾರ್ಯಾ ನಾಮ್ನಾ ಚ ಕರ್ಮಣಾ ।
ನ ಸುಷ್ವಾಪ ಸಮಂ ಪತ್ಯಾ ದುರಾಲಾಪಾ ಕದಾಚನ ॥ ೬ ॥

ಕ್ಷಣಮಪ್ಯಾತ್ಮಸದನೇ ನ ಚಾಸ್ತೇ ಸ್ವೈರಚಾರಿಣೀ ।
ಕಂಠದಘ್ನಂ ದ್ವಿಜದ್ವಾರೇ ಧಯಂತೀ ವಾರುಣೀರಸಂ ॥ ೭ ॥

ಪತಿಸಂಬಂಧಿನಸ್ಸರ್ವಾನ್ ತರ್ಜಯಂತೀ ಪುನಃ ಪುನಃ ।
ವಿಟ್ಟೇಸ್ಸಹ ಸದೋನ್ಮತ್ತಾ ರಮಮಾಣಾ ನಿರಂತರಂ ॥ ೮ ॥

---

೪. ಎಲೈ ದೇವಿಯೇ! ಅಲ್ಲಿ ಸ್ವಾಮಿಯಾದ ಹರಿಹರೇಶ್ವರನು ಇರುವನು. ಆ ಸ್ವಾಮಿಯನ್ನು ದರ್ಶನಮಾಡಿದರೆ ಬಹುವಾದ ಮಂಗಳವುಂಟಾಗುತ್ತದೆ.

೫. ಆ ಊರಿನಲ್ಲಿ ಹರಿದೀಕ್ಷಿತನೆಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಅವನು ತಪಸ್ಸು, ಅಧ್ಯಯನಗಳಲ್ಲಿ ಆಸಕ್ತನಾಗಿದ್ದನು. ಅಲ್ಲದೆ ವೇದಪಾರಂಗತನಾಗಿ ಶ್ರೋತ್ರಿಯನಾಗಿದ್ದನು.

೬. ಅವನಿಗೆ ದುರಾಚಾರೆಯೆಂಬ ಹೆಂಡತಿಯಿದ್ದಳು. ಅವಳು ಮಾಡುತ್ತಿದ್ದ ಕೆಲಸಕ್ಕೆ ಸರಿಯಾದ ಹೆಸರನ್ನು ಇಟ್ಟಿದ್ದರು. ಯಾವಾಗಲೂ ಗಂಡನೊಡನೆ ಮಲಗಿದವಳೇ ಅಲ್ಲ. ಕೆಟ್ಟ ಆಚಾರವನ್ನೇ ಮಾಡುತ್ತಿದ್ದಳು.

೭. ಅವಳು ಸ್ವೇಚ್ಛಾಚಾರಿಣಿಯಾಗಿ ಕ್ಷಣಕಾಲವಾದರೂ ಮನೆಯಲ್ಲಿರುತ್ತಿರಲಿಲ್ಲ. ಕತ್ತಿನವರೆವಿಗೂ ಹೆಂಡವನ್ನು ಕುಡಿದು ಆ ಮನೆಯ ಬಾಗಿಲಿನಲ್ಲಿ ಕುಳಿತಿದ್ದಳು.

೮. ಹಾಗೆ ಬಾಗಿಲಿನಲ್ಲಿ ಕುಳಿತುಕೊಂಡು ಗಂಡನ ಕಡೆಯವರನ್ನೆಲ್ಲಾ ಯಾವಾಗಲೂ ಬಯ್ಯುತ್ತಿದ್ದಳು. ಮತ್ತು ಯಾವಾಗಲೂ ಕೊಬ್ಬಿದವಳಾಗಿ ವಿಟರೊಡನೆ ರಮಿಸುತ್ತಿದ್ದಳು.

ಕದಾಚಿದ್ವ್ಯಾಕುಲಂ ದೃಷ್ಟ್ವಾ ಪುರಂ ಪೌರೈರಿತಸ್ತತಃ ।
ಸಂಕೇತಗೇಹಮಕರೋತ್ ಕಾಂತಾರೇ ನಿರ್ಜನೇ ಸ್ವಯಂ ॥ ೯ ॥

ಅಥ ತತ್ರೈವ ಸಾ ಧೂರ್ತಾ ರಮಮಾಣಾ ವಿಟೈಸ್ಸಹ ।
ನಿನಾಯ ಸಾ ಬಹೂನ್ಕಾಲಾನ್ನಿಜಯೌವನಗರ್ವಿತಾ ॥ ೧೦ ॥

ಅಥ ತಸ್ಮಿನ್ ಪುರೇ ನಿತ್ಯಂ ನಿವಸನ್ತ್ಯಾ ನಿರಂಕುಶಂ ।
ವಸಂತಕಾಲಸ್ಸಮಭೂತ್ ಪರತ್ರಿತ್ರಭುವಸ್ಸಖಾ ॥ ೧೧ ॥

ಆಮೂಲಪಲ್ಲವಾಕೀರ್ಣಸಹಕಾರವಿಕಾರಿಣಾಂ ।
ಪಿಕಾನಾಂ ಪಂಚಮಾಲಾಪೈಃ ಪುನಸ್ಸಂಜೀವಿತಸ್ಮರಃ ॥ ೧೨ ॥

ಸ್ಫುರಚ್ಚಂಪಕಸೌರಭ್ಯಹಾರಕೈರ್ಮಲಯಾನಿಲೈಃ ।
ಮಂದಂ ಮಂದಂ ಪ್ರಸರ್ಪದ್ಭಿರಾಂದೋಳಿತವನದ್ರುಮಃ ॥ ೧೩ ॥

---

೯. ಊರಿನಲ್ಲಿ ಜನಗಳು ಯಾವಾಗಲೂ ಓಡಿಯಾಡುತ್ತಿರುವುದನ್ನು ನೋಡಿ ತನಗೆ ವಿಟರೊಡನೆ ರಮಿಸಲು ತೊಂದರೆಯಾದುದರಿಂದ ಕಾಡಿನಲ್ಲಿ ಒಂದು ಸಂಕೇತ ಜಾಗವನ್ನು ಮಾಡಿಕೊಂಡಳು.

೧೦. ಆ ಅಯೋಗ್ಯಳು ಅಲ್ಲಿಯೇ ವಿಟರೊಡನೆ ರಮಿಸುತ್ತ ತನ್ನ ಯೌವನದಿಂದ ಗರ್ವಿತಳಾಗಿ ಅಲ್ಲಿಯೇ ಬಹು ಕಾಲಗಳನ್ನು ಕಳೆದಳು.

೧೧. ಈ ರೀತಿಯಾಗಿ ಸ್ವಲ್ಪವೂ ಅಡ್ಡಿ ಇಲ್ಲದೆ ಆ ಊರಿನಲ್ಲಿ ವಾಸ ಮಾಡುತ್ತಿರಲು ಮನ್ಮಥನಿಗೆ ಉತ್ತಮ ಸ್ನೇಹಿತನಾದ ವಸಂತ ಋತುವು ಬಂದಿತು.

೧೨. ಬುಡದಿಂದ ಹಿಡಿದು ತುದಿಯವರೆವಿಗೂ ಚಿಗುರಿರುವ ಸಿಹಿ ಮಾವಿನ ಮರಗಳಿದ್ದುವು. ಆ ಚಿಗುರುಗಳನ್ನು ತಿಂದು, ವಿಶೇಷವಾಗಿ ಮದಿಸಿರುವ ಕೋಗಿಲೆಗಳ ಧ್ವನಿಯಿಂದ ಸತ್ತುಹೋಗಿದ್ದ ಮನ್ಮಥನು ಮತ್ತೆ ಜೀವಿತನಾದನು.

೧೩. ಅರಳಿರುವ ಸಂಪಿಗೆಯ ಸುವಾಸನೆಯನ್ನು ಹೊತ್ತುಕೊಂಡು ಬರುವ ಮಲಯ ಪರ್ವತದ ಗಾಳಿಯು ಮೆಲ್ಲಮೆಲ್ಲನೆ ಬೀಸುತ್ತ ಕಾಡಿನ ಮರಗಳನ್ನು ಅಲ್ಲಾಡಿಸುತ್ತಿದ್ದಿತು.

ಉತ್ಫುಲ್ಲಮಲ್ಲಿಕಾಮೋದಮುದಿರಾಸಾರಣಾವತಾಂ ।
ಅಲೀನಾಂ ಕಲಹುಂಕಾರೈಃ ಸಮಂತಾದ್ರಾವಶೋಭಿತಃ ॥ ೧೪ ॥

ಪ್ರಸನ್ನಚಾರುಭಿಸ್ಸ್ವೈರೈಃ ಸರೋವರಸುಗಂಧಿಭಿಃ ।
ಮೀಲನ್ಮರಾಳನಿವಹೈಃ ಸರೋಭಿಃ ಪ್ರಕಟೀಕೃತಃ ॥ ೧೫ ॥

ಘನಚ್ಛಾಯಾಸುಖಾಸೀನಹರಿಣಾರ್ಭಕಧಾರಿಭಿಃ ।
ನೀರಂಧ್ರಪಲ್ಲವೈರ್ನಾನಾಶಾಖಿಭಿಃ ಶೋಭಿತಾವನಿಃ ॥ ೧೬ ॥

ತಸ್ಮಿನ್ ವಸಂತಸಮಯೇ ಮುದಿತಾ ಸಾಭಿಸಾರಿಕಾ
ಅಪಶ್ಯಜ್ಜಗದಾನಂದದಾಯಿನೀಂ ಚಂದ್ರಿಕಾಂ ನಿಶಿ ॥ ೧೭ ॥

ಚಂಚಚ್ಚಕೋರಚಂಚೂಗ್ರಪೀತಪೀಯೂಷಶೀಕರಾಂ ।
ದ್ರವದಿಂದುಶಿಲಾನಿರ್ಯತ್ಸುಧಾಸಿರ್ಝರನಿರ್ಝರಾಂ ॥ ೧೮ ॥

---

೧೪. ಅರಳಿರುವ ಮಲ್ಲಿಗೆಯ ವಾಸನೆಗೆ ಬಂದಿರುವ ದುಂಬಿಗಳ ಮಧುರವಾದ ಧ್ವನಿಯಿಂದ ಎಲ್ಲಾ ಕಡೆಯಲ್ಲಿಯೂ ಇಂಪಾಗಿರುವ ಗಾನವಿದ್ದಿತು.

೧೫. ಬಹುವಾಗಿ ತಿಳಿಯಾಗಿರುವ ನೀರುಳ್ಳ, ಒಳ್ಳೆಯ ವಾಸನೆಯ ಹೂವುಗಳಿಂದ ಮನೋಹರವಾಗಿರುವ ಪ್ರಕಾಶಮಾನವಾದ ವಸಂತವು ಬಂದಿತು.

೧೬. ನಿಬಿಡವಾಗಿರುವ ನೆರಳಿನಲ್ಲಿ ಸುಖವಾಗಿ ಮಲಗಿರುವ ಜಿಂಕೆಯ ಮರಿಗಳಿಂದಲೂ, ಒತ್ತಾಗಿ ಚಿಗುರುಗಳನ್ನು ಬಿಟ್ಟಿರುವ ಬಗೆಬಗೆಯಾದ ಮರಗಳಿಂದ ಪ್ರಕಾಶಮಾನವಾದ ಭೂಮಿಯಿಂದಲೂ, ಆ ವಸಂತನು ಪ್ರಕಾಶಿಸಿದನು.

೧೭. ಆ ರೀತಿಯಾದ ವಸಂತದ ಸಮಯದಲ್ಲಿ ಆ ವ್ಯಭಿಚಾರಿಣಿಯು ಸಂತೋಷಪಟ್ಟುಕೊಂಡಿದ್ದು ಜಗತ್ತಿಗೇ ಆನಂದವನ್ನುಂಟುಮಾಡುತ್ತಿರುವ ಚಂದ್ರಿಕೆಯನ್ನು ರಾತ್ರಿಯಲ್ಲಿ ನೋಡಿದಳು.

೧೮. ಆ ಚಂದ್ರಿಕೆಯು ಚಕೋರ ಪಕ್ಷಿಯು ಕೊಕ್ಕಿನಿಂದ ಕುಡಿದ ಅಮೃತದ ತುಂತುರು ಉಳ್ಳದ್ದಾಗಿದ್ದಿತು. ಚಂದ್ರಕಾಂತಶಿಲೆಯು ಪ್ರವಿಸುತ್ತಿರುವುದರಿಂದ ಅದರಿಂದ ಹೊರಡುವ ಅಮೃತದ ಪ್ರವಾಹದಿಂದಲೂ ಕೂಡಿದ್ದಿತು.

ವಿಕಾಸಿಕುಸುಮಕ್ರೋಡಸಾಂದ್ರೀಭೂತಕರೋತ್ಕರಾಂ ।
ಉಲ್ಲಾಸಿತಪಯೋರಾಶೀಕಲ್ಲೋಲಾಲಿಂಗಿತಾಂಬರಾಂ ॥ ೧೯ ॥

ಮನೋಭವಮಹಾಸಿಂಹಕುಲಟಾಕುಲಕರ್ತರೀಂ ।
ಘನಾಂಧಕಾರಸಂದೋಹವಿದಾರಣಪಟೀಯಸೀಂ ॥ ೨೦ ॥

ಶ್ವೇತೀಕೃತಸತೀಕಾರಪರಾರ್ಧ್ಯಹಿಮಗರ್ಭಿಣೀಂ ।
ಮ್ಲಾನಪಂಕಜಸಂಕೋಚಾಂ ಯೂನಾಮಾನಂದದಾಯಿನೀಂ ॥ ೨೧ ॥

ಚಕ್ರವಾಕವಧೂವಕ್ತ್ರಾಕರುಣಾಕ್ರೋಶಸಾಕ್ಷಿಣೀಂ ।
ಮುಕ್ತಾಶ್ರೇಣೀವಶುದ್ಧಾಂಶುಪ್ರಭಾಸಿತದಿಗಂತರಾಂ ॥ ೨೨ ॥

ಅಥ ತಸ್ಯಾಂ ಪ್ರಭೂತಾಯಾಂ ಪೂರಯನ್ತ್ಯಾಂ ದಿಶೋ ದಶ ।
ಕಾಮಾಂಧಾಃ ಕಾಮಿನೋ ಜಾತಾಃ ಪಥಿ ಸೌಧವಿಹಾರಿಣಃ ॥ ೨೩ ॥

---

೧೯. ಅರಳುತ್ತಿರುವ ಹೂವಿನ ಮಧ್ಯದಲ್ಲಿ ಚಂದ್ರಿಕೆಯು ಬೀಳುವುದರಿಂದ ಒತ್ತಾದ ಕಿರಣಗಳುಳ್ಳದಾಗಿದ್ದಿತು. ಚಂದ್ರನನ್ನು ನೋಡಿ ಸಮುದ್ರವು ಉಕ್ಕಿರುವುದರಿಂದ ಅಲೆಗಳು ಹೊರಟು ಅಂತರಿಕ್ಷದಲ್ಲೆಲ್ಲಾ ಹಾರಾಡುತ್ತಿರುವಂತೆ ಇರುವ ಆ ಚಂದ್ರಿಕೆಯು ರಂಜಿಸುತ್ತಿದ್ದಿತು.

೨೦. ಮನೋಭವನೆಂಬ ಮಹಾಸಿಂಹವನ್ನು ಹೊಂದಿರುವ ಕುಲಟೆಗೆ (ಹಾದರಗಿತ್ತಿಗೆ) ಕತ್ತರಿರೂಪವಾಗಿಯೂ, ದೊಡ್ಡವಾದ ಕತ್ತಲೆಯ ಗುಂಪನ್ನು ನಾಶಮಾಡುವುದರಲ್ಲಿ ಶಕ್ತರಾಗಿರುವ ಆ ಚಂದ್ರಿಕೆಯನ್ನು ನೋಡಿದಳು.

೨೧. ಪತಿವ್ರತೆಯೆಂಬ ವಿಷಯವು ನಾಶವಾಗುವಂತೆ ಅದನ್ನು ಪರರ ಪಾಲಾಗುವಂತೆ ಮಾಡುತ್ತ ಇರುವ ಬಾಡಿರುವ ಕಮಲಕ್ಕೆ ಲಜ್ಜೆಯನ್ನುಂಟುಮಾಡುತ್ತಿರುವ ಯುವಕರಿಗೆ, ಆನಂದವನ್ನು ಕೊಡುವ ಆ ಬೆಳದಿಂಗಳನ್ನು ನೋಡಿದಳು.

೨೨. ಹೆಣ್ಣು ಚಕ್ರವಾಕವು ಗಂಡನ್ನು ಅಗಲುವಿಕೆಯಿಂದ, ದುಃಖದಿಂದ ಕೂಗುತ್ತಿರುವಿಕೆಗೆ ಸಾಕ್ಷಿಯಾದ, ಮುತ್ತಿನ ಪಂಕ್ತಿಗಳಂತೆ ಬೆಳ್ಳಗಿರುವ ಕಾಂತಿಯಿಂದ ನಾಲ್ಕು ದಿಕ್ಕುಗಳನ್ನೂ ಬೆಳಗುತ್ತಿರುವ ಚಂದ್ರಿಕೆಯನ್ನು ನೋಡಿದಳು.

೨೩. ಹೀಗೆ ಹತ್ತು ದಿಕ್ಕುಗಳನ್ನು ತುಂಬುತ್ತಿರುವ ಬಹಳವಾದ ಬೆಳದಿಂಗಳಿನಲ್ಲಿ ಕಾಮಿಗಳು ಕಾಮಾಂಧರಾಗಿ ಉಪ್ಪರಿಗೆಗಳ ಮೇಲೆ ವಿಹರಿಸುತ್ತಿದ್ದರು.

**ಅಪಶ್ಯಂತೀ ವಿಟಂ ರಾತ್ರೌ ನಿರ್ಭಿದ್ಯ ಭವನಾರ್ಗಳಂ ।**
**ಯಯೌ ಸಂಕೇತಭವನಂ ನಿರ್ಗತ್ಯ ನಗರಾದ್ಬಹಿಃ ॥ ೨೪ ॥**

**ತತ್ರ ಪ್ರಿಯತಮಂ ಕಂಚಿತ್ಕಾಮಮೋಹಿತಮಾನಸಾ ।**
**ಅನ್ವೇಷಯಂತೀ ನಾಪ್ರಾಕ್ಷೀತ್ಕುಂಜೇ ಕುಂಜೇ ತರೌ ತರೌ ॥ ೨೫ ॥**

**ಆಕರ್ಣಯಂತೀ ಕಾನ್ತಸ್ಯ ಮಂದಾಲಾಪಾನ್ ಪದೇ ಪದೇ ।**
**ಅಭಿಯಾತಿ ತತಃ ಕ್ರೀಡಂತ್ಯತ್ರ ಸಂಚಾರಿನಿಸ್ವನಾ ॥ ೨೬ ॥**

**ಚಕ್ರವಾಕರವಾನ್ ಶ್ರುತ್ವಾ ಕಾಂತಾಲಾಪಭ್ರಮಾಪದಾ ।**
**ಸರೋವರಾಣಿ ಸರ್ವಾಣಿ ಪರ್ಯಟನ್ತೀ ಮುಹುರ್ಮುಹುಃ ॥ ೨೭ ॥**

**ಕಾನ್ತಭ್ರಾನ್ತ್ಯಾ ತರುತಲೇ ಪ್ರಸುಪ್ತಾನ್ ಹರಿಣೋತ್ಕರಾನ್ ।**
**ಪ್ರಬೋಧಯಂತೀ ಸೋಽಹಂ ಸಮಾಗತಾಸ್ಮೀತಿ ಭಾಷಿಣೀ ॥ ೨೮ ॥**

---

೨೪. ಆ ದಿನ ಅಂತಹ ರಾತ್ರಿಯಲ್ಲಿ ವಿಟಪುರುಷನನ್ನು ಕಾಣದೆ ಮನೆಯ ಅಗುಳಿಯನ್ನು ತೆಗೆದು ಹೊರಹೊರಟು ಊರಿನಿಂದಲೂ ಹೊರಗೆ ಹೋಗಿ ಸಂಕೇತದ ಮನೆಗೆ ಹೋದಳು.

೨೫. ಕಾಮದಿಂದ ಕೂಡಿದ ಮನಸ್ಸುಳ್ಳ ಆಕೆಯು ಅಲ್ಲಿ ಯಾವನಾದರೂ ಪ್ರಿಯನು ಸಿಕ್ಕುವನೆಂದು ಪೊದರು ಪೊದರುಗಳಲ್ಲಿಯೂ, ಎಲ್ಲಾ ಮರಗಳ ಕೆಳಗೂ ನೋಡಿದಳು. ಆದರೂ ಒಬ್ಬನನ್ನೂ ಕಾಣಲೇ ಇಲ್ಲ.

೨೬. ಪ್ರಿಯತಮನು ಎಲ್ಲಿಯಾದರೂ ಮೆಲ್ಲಗೆ ಮಾತನಾಡುತ್ತಿರುವನೋ ಎಂಬುದಾಗಿ ಅದನ್ನು ಹೆಜ್ಜೆ ಹೆಜ್ಜೆಗೂ ಆಲಿಸುತ್ತಾ ಅಲ್ಲಲ್ಲೇ ಹೊರಡುವ ಶಬ್ದಗಳನ್ನು ಕೇಳುತ್ತ ಹೋಗುತ್ತಿದ್ದಳು.

೨೭. ಚಕ್ರವಾಕದ ಧ್ವನಿಯನ್ನು ಕೇಳಿ ಪ್ರಿಯನಾದ ವಿಟನ ಮಾತುಗಳೆಂದು ಭ್ರಮಿಸುತ್ತಿದ್ದಳು ಮತ್ತು ಅಲ್ಲಲ್ಲಿ ಇರುವ ಎಲ್ಲಾ ಸರೋವರಗಳ ಬಳಿಯಲ್ಲಿ ಸುತ್ತುತ್ತ ನೋಡುತ್ತಿದ್ದಳು.

೨೮. ಮರದ ನೆರಳಿನಲ್ಲಿ ಮಲಗಿರುವ ಜಿಂಕೆಗಳನ್ನು ವಿಟನೆಂದು ತಿಳಿಯುತ್ತ ನಾನು ಬಂದಿದ್ದೇನೆಂದು ಕೂಗಿ ಅವುಗಳನ್ನು ಎಚ್ಚರಿಸುತ್ತ ಅವು ಮಾತನಾಡದುದರಿಂದ ನೋಡಿ ಅವು ಹರಿಣಿಗಳೆಂದು ತಿಳಿದು ನಿಟ್ಟುಸಿರು ಬಿಡುತ್ತ ಹೋಗುತ್ತಿದ್ದಳು.

ಆಲಿಂಗತೀ ವನಸ್ಥಾಣುಂ ಜೀವಿತೇಶ್ವರಶಂಕಯಾ ।
ತದಾನನಭ್ರಮಾದ್ಭ್ರಾಯಶ್ಚುಂಬಂತೀ ವಿಕಚಾಂಬುಜಂ ॥ ೨೯ ॥

ತತ್ರ ತತ್ರ ಕೃತವ್ಯರ್ಥಶ್ರಮಾಽದೃಷ್ಟಪ್ರಿಯಾ ಸ್ವಯಂ ।
ವಿಲಲಾಪ ವನೇ ತಸ್ಮಿನ್ ಮೂರ್ಛಂತೀ ವಿವಿಧೋಕ್ತಿಭಿಃ ॥ ೩೦ ॥

॥ ದುರಾಚಾರೋವಾಚ ॥

ಹಾ ಕಾನ್ತ ಹಾ ಗುಣಾಕ್ರಾಂತ ಹಾಚೈತನ್ಯಸ್ಯನಾಯಕಂ ।
ಹಾ ಮನೋಹರಸೌಭಾಗ್ಯ ಭಾಗ್ಯಲಾವಣ್ಯಶೇವಧೇ ॥ ೩೧ ॥

ಹಾ ಪೂರ್ಣಚಂದ್ರವದನ ಹಾ ಸರೋಜಾಯತೇಕ್ಷಣಾ ।
ಹಾ ಕಾನ್ತ ಸತ್ವಸಾಹಿತ್ಯ ವಿಶ್ರಾಮಾರ್ಥಸುರದ್ರುಮ ॥ ೩೨ ॥

---

೨೯. ಆ ವನದಲ್ಲಿರುವ ಮೋಟುಮರಗಳನ್ನು ವಿಟನೆಂಬ ಶಂಕೆಯಿಂದ ಆಲಿಂಗನೆ ಮಾಡಿಕೊಳ್ಳುತ್ತ ವಿಟನ ಮುಖವೆಂದು ಭ್ರಾನ್ತಿಯಿಂದ ಅರಳಿರುವ ಕಮಲಗಳನ್ನು ಮುತ್ತಿಕ್ಕುತ್ತಿದ್ದಳು.

೩೦. ಈ ರೀತಿಯಾಗಿ ಎಲ್ಲಾಕಡೆಯಲ್ಲಿಯೂ ಶ್ರಮಪಟ್ಟು ನೋಡಿ ಪ್ರಿಯನನ್ನು ಕಾಣದೆ ಆ ಕಾಡಿನಲ್ಲಿ ನಾನಾಬಗೆಯಾಗಿ ಕೂಗುತ್ತ ಅಳುತ್ತಿದ್ದಳು.

೩೧. ದುರಾಚಾರಿಣಿಯು ಹೇಳಿದಳು–ಹಾ ಕಾನ್ತನೇ! ಹಾ ಗುಣಗಳಿಂದ ಕೂಡಿದವನೇ ! ಹಾ ನನ್ನ ಜೀವಕ್ಕೆ ಒಡೆಯನೇ ! ಮನೋಹರನೇ ! ಸೌಭಾಗ್ಯವೆಂಬ ಭಾಗ್ಯದ ಲಾವಣ್ಯಕ್ಕೆ ನಿಧಿಯಂತಿರುವವನೆ! ಎಲ್ಲಿದ್ದೀಯೆ ?

೩೨. ಹಾ ಪೂರ್ಣಚಂದ್ರನಂತೆ ಮುಖವುಳ್ಳವನೇ ! ಹಾ ಕಮಲದಂತೆ ದೀರ್ಘವಾದ ಕಣ್ಣುಗಳುಳ್ಳವನೇ ! ಅಯ್ಯೊ ಕಾನ್ತನೇ ! ಬಲವೆಂಬ ಸಾಮಗ್ರಿಯುಳ್ಳವನೇ ! ಆಯಾಸದ ಪರಿಹಾರಕ್ಕೆ ಕಲ್ಪವೃಕ್ಷದಂತಿರುವವನೇ ! ಎಲ್ಲಿದ್ದೀಯೆ ?

ಅಹೋ ಕಾಂತ ನವಾಕೀರ್ಣ ಕರ್ಣಕುಂಡಲದೀಧಿತಿಃ ।
ನಯನಾನಂದಿನಿನಿಷ್ಯಂದೀ ಕುತ್ರ ತೇ ಮುಖಚಂದ್ರಮಾಃ ॥ ೩೩ ॥

ಯದಿ ಕೋಪೇನ ಕುತ್ರಾಪಿ ಗುಪ್ತವೇಷೋತ್ರ ತಿಷ್ಠಸಿ ।
ಪ್ರಸಾದಾಯಾಮಿ ತ್ವಾಂ ಕಾಂತ ದತ್ವಾ ಪ್ರಾಣಾ ಪ್ರಿಯಾನಪಿ ॥ ೩೪ ॥

॥ ಶ್ರೀ ಶಿವಉವಾಚ ॥

ಇಚ್ಛ್ಯುಚ್ಚೈಸ್ಸರ್ವತೋ ದಿಕ್ಷು ವಿಲಪಂತ್ಯಾ ವಿಯೋಗತಃ ।
ತಸ್ಯಾಃ ಶ್ರುತ್ವಾ ವಚಃ ಕೋಪಿ ಸುಪ್ತೋತ್ರೇ ವ್ಯಾಘ್ರಃ ಪ್ರಬುದ್ಧವಾನ್ ॥೩೫॥

ಕುರ್ವನ್ ಘುರುಘುರುಧ್ವಾನಂ ಪಶ್ಯನ್ ಪ್ರತಿದಿಶಂ ರುಷಾ ।
ಆಸ್ಫಾಲಯನ್ ರವೈರ್ಭೂಮಿಂ ಗರ್ಜನ್ನಾಕಾಶಗಹ್ವರೇ ॥ ೩೬ ॥

---

೩೩. ಅಹೋ ಹೊಸದಾಗಿ ಹಾಕಿಕೊಂಡಿರುವ ಕಿವಿಯ ಕುಂಡಲಗಳ ಕಾಂತಿಯಿಂದ ಶೋಭಿಸುತ್ತಿರುವವನೇ! ಕಣ್ಣುಗಳಿಗೆ ಆನಂದವನ್ನು ಉಂಟುಮಾಡುವವನೇ! ಎಲ್ಲಿದ್ದೀಯೆ? ನಿನ್ನ ಚಂದ್ರನಂತಿರುವ ಮುಖವು ಎಲ್ಲಿದೆ? ಕಾಣಲಿಲ್ಲವಲ್ಲ!

೩೪. ಇಲ್ಲಿ ಎಲ್ಲಿಯಾದರೂ ಕೋಪದಿಂದ ನೀನು ಮರೆಯಾಗಿರುವ ಪಕ್ಷದಲ್ಲಿ ನನ್ನ ಪ್ರೀತಿಪಾತ್ರವಾದ ಪ್ರಾಣಗಳನ್ನಾದರೂ ಕೊಟ್ಟು ನಿನ್ನನ್ನು ಸಂತೋಷಪಡಿಸುತ್ತೇನೆ.

೩೫. ಶ್ರೀ ಶಿವನು ಹೇಳಿದನು–ಈ ರೀತಿಯಾಗಿ ವಿಯೋಗದಿಂದ ಎಲ್ಲಾ ಕಡೆಯಲ್ಲಿಯೂ ಕೂಗಿಕೊಂಡು ಅಳುತ್ತಿರುವ ಆಕೆಯ ಅಳುವಿನ ಶಬ್ದವನ್ನು ಕೇಳಿ ಮಲಗಿದ್ದ ಒಂದು ಹುಲಿಯು ಎಚ್ಚರಗೊಂಡಿತು.

೩೬. ಘುರುಘುರು ಎಂದು ಶಬ್ದವನ್ನು ಮಾಡುತ್ತ ಕೋಪದಿಂದ ಸುತ್ತಲೂ ನೋಡುತ್ತ ಶಬ್ದ ಬರುವಂತೆ ಭೂಮಿಯನ್ನು ಬಡಿಯುತ್ತ ಆಕಾಶವನ್ನು ಗರ್ಜನೆಯಿಂದ ತುಂಬುತ್ತ ಹೊರಟಿತು.

ಪೃಷ್ಠನಿರ್ಮಗ್ನಲಾಂಗೂಲಂ ಪ್ಲುತಮುತ್ಥಾಯ ಚಾಕರೋತ್ |
ಗತೋ ವ್ಯಾಘ್ರಸ್ಸಮುತ್ಪತ್ಯ ಯತ್ರಾಸ್ತೇ ಸಾಭಿಸಾರಿಕಾ ॥ ೩೭ ॥

ಅಥ ಸಾಪಿ ತಮಾಯಾತಮಾಲೋಕ್ಯ ಪತಿಶಂಕಯಾ |
ನಿರ್ಜಗಾಮ ಪುರಸ್ಥಾತುಂ ಪ್ರೇಮನಿರ್ಭರಮಾನಸಾ ॥ ೩೮ ॥

ತತಸ್ತಸ್ಯ ನಖಕ್ರೀಡಾಕ್ರೂರತಾಂಧೀಕೃತಾ ಸತೀ |
ಜಹೌ ಪ್ರಿಯವಪುಶ್ಶಂಕಾಂ ಶ್ರುತ್ವಾ ಗರ್ಜಿತಮೂರ್ಜಿತಂ ॥ ೩೯ ॥

ವ್ಯಾಘ್ರೋಪಿ ಪಾತಯಾಮಾಸ ತತೋ ನಖಶಿಲೀಮುಖೈಃ |
ತಮುವಾಚಾಥ ಕ್ರೋಶನ್ತೀ ವೀತಸೌಹೃದಯಾ ಗಿರಾ ॥
ತಥಾವಿಧಾಪಿ ಸಾ ನಾರೀ ಭ್ರಾನ್ತಿಮುತ್ಸೃಜ್ಯ ಸತ್ವರಂ ॥ ೪೦ ॥

॥ ದುರಾಚಾರೋವಾಚ ॥

ವ್ಯಾಘ್ರ ತ್ವಂ ತು ಕುತೋ ಹೇತೋರ್ಮಾಂ ನಿಹನ್ತುಮಿಹಾಗತಃ |
ಇದಂ ಸರ್ವಂ ಮಮಾಖ್ಯಾಹಿ ಪಶ್ಚಾತ್ತ್ವಂ ಹನ್ತುಮರ್ಹಸಿ ॥ ೪೧ ॥

---

೩೭. ಆ ಹುಲಿಯು ಕಾಲಿನ ಸಂದಿಯಲ್ಲಿದ್ದ ಬಾಲವನ್ನು ಜಾಗ್ರತೆಯಾಗಿ ಮೇಲಕ್ಕೆತ್ತಿಕೊಂಡು ನೆಗೆಯುತ್ತ ಆ ಹಾದರಗಿತ್ತಿಯು ಇದ್ದ ಸ್ಥಳಕ್ಕೆ ಹೋಯಿತು.

೩೮. ಆ ಹಾದರಗಿತ್ತಿಯೂ ಕೂಡ ಆ ಹುಲಿಯನ್ನು ನೋಡಿ ಗಂಡನೆಂಬ (ವಿಟನೆಂಬ) ಶಂಕೆಯಿಂದ ಬಹುವಾದ ಪ್ರೇಮದಿಂದ ಅದರ ಎದುರಿಗೆ ಹೋದಳು.

೩೯. ಆಗ ಆ ಹುಲಿಯು ಉಗುರಿನಿಂದ ಸೀಳಲು ಆ ಕ್ರೂರತೆಯನ್ನು ನೋಡಿ ಬುದ್ಧಿಗೆಟ್ಟವಳಾಗಿ ಅದರ ಗರ್ಜಿತವನ್ನು ಕೇಳಿ ಗಂಡನೆಂಬ ಭ್ರಾನ್ತಿಯನ್ನು ಬಿಟ್ಟು ಬಿಟ್ಟಳು.

೪೦. ಅನಂತರ ಹುಲಿಯೂ ಕೂಡ ಕ್ರೂರವಾದ ಉಗುರುಗಳಿಂದ ಸೀಳಿ ಕೆಡವಿತು. ಆಗ ಆಕೆಯು ಅಳುತ್ತಾ ನಿಷ್ಠುರವಾದ ಮಾತಿನಿಂದ ವಿಟನೆಂಬ ಭ್ರಾಂತಿಯನ್ನು ಬಿಟ್ಟು ಇಂತೆಂದಳು.

೪೧. ದುರಾಚಾರಿಣಿಯು ಹೇಳಿದಳು-ಎಲೈ ವ್ಯಾಘ್ರನೇ! ನನ್ನನ್ನು ಕೊಲ್ಲಲು ನೀನೇಕೆ ಇಲ್ಲಿಗೆ ಬಂದೆ? ಇದೆಲ್ಲವನ್ನೂ ನನಗೆ ಹೇಳು. ಅನಂತರ ನೀನು ನನ್ನನ್ನು ಕೊಲ್ಲುತ್ತೀಯಂತೆ.

॥ ಶ್ರೀ ಶಿವ ಉವಾಚ ॥

ಇತಿ ತಸ್ಯಾ ವಚಶ್ಶ್ರುತ್ವಾ ಶಾರ್ದೂಲಶ್ಚಂಡವಿಕ್ರಮಃ ।
ಕ್ಷಣಂ ವಿಹಾಯ ತದ್ಗ್ರಾಸಮುವಾಚ ಪ್ರಹಸನ್ನಿವ ॥ ೪೨ ॥

॥ ವ್ಯಾಘ್ರ ಉವಾಚ ॥

ಮಲಾಪಹಾನದೀ ನಾಮ್ನಾ ದೇಶೇ ತಿಷ್ಠತಿ ದಕ್ಷಿಣೇ ।
ನಗರೀ ಮುನಿಪರ್ಣೇತಿ ತಸ್ಯಾ ರೋಧಸಿ ವರ್ತತೇ ॥ ೪೩ ॥

ತತ್ರಾಸ್ತೇ ಭಗವಾನ್ ಸಾಕ್ಷಾತ್ ಪಂಚಲಿಂಗೋ ಮಹೇಶ್ವರಃ ।
ತಸ್ಯಾಂ ಪುರ್ಯಾಮಹಂ ವಿಪ್ರಪುತ್ರೋ ಭೂತ್ವಾ ಸ್ಥಿತಸ್ತತಃ ॥ ೪೪ ॥

ಅಯಾಜ್ಯಾನ್ಯಾಜಯನ್ನಶ್ನನ್ನೇಕೋತಿಷ್ಠಂ ನದೀತಟೇ ।
ವೇದಪಾಠಫಲಂ ಶಶ್ವದ್ವಿಕ್ರೀಣನ್ ಧನಕಾಂಕ್ಷಯಾ ॥ ೪೫ ॥

ಭಿಕ್ಷುಕಾನಪರಾನ್ ಲೋಭಾತ್ತಿರಸ್ಕುರ್ವನ್ದುರುಕ್ತಿಭಿಃ ।
ಅದೇಯಂ ದ್ರವಿಣಂ ಗೃಹ್ಣನ್ ಅದತ್ತಮನಿಶಂ ದಿನಂ ॥ ೪೬ ॥

---

೪೨. ಶ್ರೀ ಶಿವನು ಹೇಳಿದನು-ಚಂಡಪರಾಕ್ರಮಿಯಾದ ಆ ಹುಲಿಯು ಆಕೆಯ ಮಾತನ್ನು ಕೇಳಿ ಸ್ವಲ್ಪಹೊತ್ತು ತಿಂಡಿಯನ್ನು ಬಿಟ್ಟು ನಗುತ್ತಾ ಹೇಳಿತು

೪೩. ವ್ಯಾಘ್ರವು ಹೇಳಿತು-ದಕ್ಷಿಣದೇಶದಲ್ಲಿ ಮಲಾಪಹಾರಿಣಿ ಎಂಬ ನದಿಯು ಇದೆ. ಅದರ ದಡದಲ್ಲಿ ಮುನಿಪರ್ಣೆ ಎಂಬ ಪಟ್ಟಣವಿದೆ.

೪೪. ಅಲ್ಲಿ ಪಂಚಲಿಂಗೇಶ್ವರವೆಂಬ ಒಂದು ಲಿಂಗವಿದೆ. ಆ ಊರಿನಲ್ಲಿ ನಾನು ಒಬ್ಬ ಬ್ರಾಹ್ಮಣನ ಮಗನಾಗಿ ಹುಟ್ಟಿದ್ದೆನು.

೪೫. ಅಲ್ಲಿ ನಾನು ಹಣದ ಆಸೆಯಿಂದ ವೇದಬಾಹ್ಯರಿಗೆ ವೇದೋಕ್ತವಾದ ಕರ್ಮಗಳನ್ನು ಮಾಡಿಸುತ್ತ ವೇದಪಾಠವನ್ನು ವಿಕ್ರಯಿಸುತ್ತ ಇದ್ದೆನು.

೪೬. ನನ್ನ ಲೋಭಿತನದಿಂದ ಭಿಕ್ಷುಕರನ್ನು ಬಯ್ಯುತ್ತ ತಿರಸ್ಕರಿಸುತ್ತಲಿದ್ದೆನು. ನನಗೆ ಹಣವನ್ನು ಕೊಡತಕ್ಕದ್ದು ಇಲ್ಲದೆ ಇದ್ದರೂ ಅವರನ್ನು ಬಲಾತ್ಕರಿಸಿ ತೆಗೆದುಕೊಳ್ಳುತ್ತಿದ್ದೆನು. ದಾನ ತೆಗೆದುಕೊಳ್ಳುವುದಕ್ಕೆ ಅಯೋಗ್ಯವಾಗಿದ್ದರೂ ಆ ದಾನವನ್ನು ತೆಗೆದುಕೊಳ್ಳುತ್ತಿದ್ದೆನು

ಛಲಯರ್ನ್ ಸಕಲಾನ್ ಲೋಕಾನ್ ಋಣಗ್ರಹಣಕೌತುಕಾತ್ ।
ತತಃ ಕತಿಪಯೇ ಕಾಲೇ ಜರಠತ್ವಮುಪೇಯಿವಾನ್ ॥ ೪೭ ॥

ವಲೀಪಲಿತವಾನಂಧಃ ಪ್ರಪತನ್ ಪ್ರಸ್ಖಲದ್ಗತಿಃ ।
ಪತದ್ದಂತೋಽಭವಂ ಭೂಯಃ ಪ್ರತಿಗ್ರಹಪರಾಯಣಃ ॥ ೪೮ ॥

ಹಸ್ತೇ ಗೃಹೀತದರ್ಭೋಽಹಮಗಮಂ ತೀರ್ಥಸನ್ನಿಧಿಂ ।
ಪ್ರತಿಗ್ರಹಣಲೋಭೇನ ಭ್ರಮನ್ ಪರ್ವಸು ಪರ್ವಸು ॥ ೪೯ ॥

ತತೋಽಹಂ ಶಿಥಿಲಾಂಗಸ್ಸನ್ ಕಾಂಶ್ಚಿದ್ಧೂರ್ತವರಾನ್ ದ್ವಿಜಾನ್ ।
ಗತವಾನ್ ಯಾಚಿತುಂ ಭೋಕ್ತುಂ ದಷ್ಟೋ ಮಧ್ಯೇ ಪದೇ ಶುನಾ ॥ ೫೦ ॥

ಅಪತಂ ಮೂರ್ಛಿತೋ ಭೂತ್ವಾ ತತಃ ಕ್ಷಿತಿತಲೇ ಕ್ಷಣಾತ್ ।
ತತೋಽಹಂ ವಿಗತಪ್ರಾಣೋ ವ್ಯಾಘ್ರಯೋನಿಮುಪಾಗತಃ ॥ ೫೧ ॥

---

೪೭. ಸಾಲ ತೆಗೆದುಕೊಳ್ಳಲು ಬರುತ್ತಿದ್ದ ಸಾಲಗಾರರನ್ನು ವಂಚಿಸುತ್ತ ಇರುತ್ತಿದ್ದೆನು. ಹೀಗಿರುತ್ತ ಕೆಲವು ಕಾಲವು ಕಳೆಯಲು ವಯಸ್ಸಾಗಿ ಮುದುಕನಾದೆನು.

೪೮. ಮುಖದಲ್ಲಿಯೂ, ಮೈಯ್ಯಲ್ಲಿಯೂ ಸುಕ್ಕುಗಳು ಬಂದುವು. ನಡೆಯುತ್ತಿದ್ದರೆ ತತ್ತರಿಸುವಂತಾಗುತ್ತಿದ್ದಿತು. ಹಲ್ಲುಗಳೆಲ್ಲಾ ಬಿದ್ದುಹೋದುವು. ಆದರೂ ದಾನ ತೆಗೆದುಕೊಳ್ಳುವುದರಲ್ಲಿ ಆಸಕ್ತಿಯು ಹೆಚ್ಚಿತು.

೪೯. ಹೀಗಿರಲು ದಾನ ತೆಗೆದುಕೊಳ್ಳುವ ಆಸೆಯಿಂದ ಕೈಯ್ಯಲ್ಲಿ ದರ್ಭೆಯನ್ನು ತೆಗೆದುಕೊಂಡು ಪರ್ವಕಾಲಗಳಲ್ಲೆಲ್ಲಾ ತೀರ್ಥದ ಬಳಿಯಲ್ಲಿ ಓಡಾಡುತ್ತಿದ್ದೆನು.

೫೦. ಆಗ ಕೈಕಾಲುಗಳು ಸ್ವಾಧೀನವಿಲ್ಲದಿದ್ದರೂ ಒಂದುಬಾರಿ ಮನೆ ಮಾಡಿಕೊಂಡಿರುವ ಕೆಲವರು ಧೂರ್ತರಾದ ಬ್ರಾಹ್ಮಣರ ಬಳಿಗೆ ದುಡ್ಡನ್ನು ಯಾಚಿಸುವುದಕ್ಕೂ ಅಲ್ಲೇ ಊಟಮಾಡಿಕೊಂಡು ಬರುವುದಕ್ಕೂ ಹೋದೆನು. ಆಗ ದಾರಿಯ ಮಧ್ಯದಲ್ಲಿ ಒಂದು ನಾಯಿಯು ಬಂದು ಕಾಲನ್ನು ಕಚ್ಚಿತು.

೫೧. ಒಡನೆಯೇ ಮೂರ್ಛೆಗೊಂಡು ನೆಲದಮೇಲೆ ಬಿದ್ದೆನು. ಕೆಲವು ಹೊತ್ತಿನಮೇಲೆ ಪ್ರಾಣವು ಹೋಯಿತು. ಅನಂತರ ಹುಲಿಯ ಜನ್ಮದಲ್ಲಿ ಹುಟ್ಟಿದೆನು.

ಅತ್ರ ತಿಷ್ಠಾಮಿ ಕಾನ್ತಾರೇ ಪೂರ್ವಪಾಪಮನುಸ್ಮರನ್ ।
ನ ಭಕ್ಷಯಾಮಿ ಧರ್ಮಿಷ್ಠಾನ್ ಯತೀನ್ ಸಾಧುಜನಾನ್ ಸತೀಃ ॥ ೫೨ ॥

ಕಿಂತು ಪಾಪಾನ್ ದುರಾಚಾರಾನ್ ಅಸತೀರ್ಭಕ್ಷಯಾಮ್ಯಹಂ ।
ಅತೋಽಸತೀ ತ್ವಂ ತತ್ಪ್ರೇಸ ಮಮಾಲಂ ಕಬಳಾಯಸೇ ॥ ೫೩ ॥

॥ ಶ್ರೀ ಶಿವ ಉವಾಚ ॥

ಇತ್ಯುಕ್ತ್ವಾ ಸ್ವನಖೈಃ ಕ್ರೂರೈಃ ತಾಂ ವಿಭಜ್ಯಾಂಗಖಂಡಶಃ ।
ಅಥ ಸಾ ಭಕ್ಷಿತಾ ತೇನ ಪಾಪದೇಹಮುಪಾಶ್ರಿತಾಂ ॥ ೫೪ ॥

ಯಮಸ್ಯ ಕಿಂಕರಾ ನಿನ್ಯುಃ ಸದ್ಯಸ್ಸಂಯಮಿನೀಂ ಪುರೀಂ ।
ಯಮಾದೇಶೇನ ತತ್ರಾಪಿ ಮಜ್ಜಯಾ ಮಾಸುರಾಶು ತಾಂ ॥ ೫೫ ॥

ವಿಣ್ಮೂತ್ರರಕ್ತಪೂರ್ಣೇಷು ಘೋರಕುಂಡೇಷ್ವನೇಕಧಾ ।
ಕಲ್ಪ ಕೋಟಿಷು ಜಾತಾಸು ತಸ್ಮಾದಾದಾಯ ತಾಂ ಮುಹುಃ ॥ ೫೬ ॥

---

೫೨. ಈಗ ಹಿಂದಿನ ಜನ್ಮದ ಪಾಪವನ್ನು ಜ್ಞಾಪಿಸಿಕೊಳ್ಳುತ್ತಾ ಈ ಕಾಡಿನಲ್ಲಿಯೇ ಇಷ್ಟೇನೆ. ನಾನು ಹುಲಿಯಾಗಿದ್ದರೂ ಧರ್ಮಿಷ್ಠರನ್ನಾಗಲಿ, ಯತಿಗಳನ್ನಾಗಲೀ, ಸಾಧುಜನರನ್ನಾಗಲೀ, ಪತಿವ್ರತೆಯರನ್ನಾಗಲೀ ತಿನ್ನುವುದಿಲ್ಲ.

೫೩. ಆದರೆ ಪಾಪಿಗಳನ್ನೂ ದುಷ್ಟರನ್ನೂ ಅಯೋಗ್ಯ ಹೆಂಗಸರನ್ನೂ ತಿನ್ನುತ್ತೇನೆ. ನೀನಾದರೋ ಪತಿವ್ರತೆಯಲ್ಲದವಳು. ನನ್ನ ಆಹಾರಕ್ಕೆ ಯೋಗ್ಯಳಾಗಿದ್ದೀಯೆ.

೫೪-೬೦. ಶ್ರೀ ಶಿವನು ಹೇಳಿದನು-ಹೀಗೆಂದು ಹೇಳಿ ಕ್ರೂರವಾದ ತನ್ನ ಉಗುರುಗಳಿಂದ ಆಕೆಯನ್ನು ಚೂರುಚೂರಾಗಿ ಸೀಳಿ ತಿಂದುಬಿಟ್ಟಿತು. ಪಾಪಿನಿಯಾದ ಆಕೆಯನ್ನು ಯಮನ ಕಿಂಕರರು ಸಂಯಮಿನಿಯೆಂಬ ಆ ಯಮನ ಪಟ್ಟಣಕ್ಕೆ ಕರೆದುಕೊಂಡು ಹೋದರು. ಅಲ್ಲಿ ಯಮನ ಅಪ್ಪಣೆಯಂತೆ ಅವನ ಆಳುಗಳು ಅವಳನ್ನು ಮಲಮೂತ್ರಗಳು, ರಕ್ತ ಕೀವುಗಳು, ತುಂಬಿರುವ ಘೋರವಾದ ಬಾವಿಗಳಲ್ಲಿ ಮುಳುಗಿಸಿದರು. ಕೋಟಿ ಕಲ್ಪಗಳವರೆವಿಗೆ ಆಕೆಯು

ರೌರವೇ ಸ್ಥಾಪಯಾಮಾಸುರ್ಮನ್ವಂತರಶತಾವಧಿ ।
ತತೋಽಪ್ಯಾಕೃಷ್ಯ ತಾಂ ದೀನಾಂ ರುದತೀಂ ಸರ್ವತೋಮುಖೀಂ ॥ ೫೭ ॥

ಮುಕ್ತಕೇಶಾಂ ಭೀಮಗಾತ್ರಾಂ ಚಿಕ್ಷಿಪುರ್ದಹನಾನನೇ ।
ಏವಮಾದ್ಯಪರಾಂ ಘೋರಾಂ ಭುಕ್ತ್ವಾ ನರಕಯಾತನಾಂ ॥ ೫೮ ॥

ಇಹ ಜಾತಾ ಮಹಾಪಾಪಾತ್ಪುನಃ ಶ್ವಪಚಯೋನಿಷು ।
ತತಶ್ಶ್ವಪಚಗೇಹೇಽಪಿ ವರ್ಧಮಾನಾ ದಿನೇ ದಿನೇ ॥ ೫೯ ॥

ಪೂರ್ವಜನ್ಮವಶೇನೈವ ತಥೈವಾಸೀ ದ್ಯಥಾ ಪುರಾ ।
ಕುಷ್ಠರೋಗಕ್ಷಯವತೀ ನೇತ್ರಪೀಡಾಪರಾಯಣಾ ॥ ೬೦ ॥

ತತಃ ಕತಿಪಯೇ ಕಾಲೇ ಪುನಸ್ಸ್ವಭವನಂ ಯಯೌ ।
ಯತ್ರಾಸ್ತೇ ಜಂಭಕಾ ದೇವೀ ಶಿವಸ್ಯಾಂತಃ ಪುರೇಶ್ವರೀ ॥ ೬೧ ॥

ತತ್ರಾಪಶ್ಯ ದ್ದ್ವಿಜನ್ಮಾನಂ ವಾಸುದೇವಾಭಿದಂ ಶುಚಿಂ ।
ಗೀತಾತ್ರಯೋದಶಾಧ್ಯಾಯಮುದ್ಗಿರಂತ ಮನಾರತಂ । ॥ ೬೨ ॥

---

ಅದನ್ನು ಅನುಭವಿಸಿದಮೇಲೆ ಮತ್ತೆ ನೂರು ಮನ್ವಂತರಗಳವರೆವಿಗೆ ರೌರವ ನರಕದಲ್ಲಿ ಹಾಕಿದರು. ಅಲ್ಲಿಂದ ಅವಳನ್ನು ಹೊರಕ್ಕೆ ಎಳೆದು ಸುತ್ತಲೂ ನೋಡುತ್ತ ಅಳುತ್ತಾ ತಲೆ ಕೆದರಿಕೊಂಡು ನೋಡಲು ಭಯಂಕರಳಾಗಿದ್ದರೂ ಆಕೆಯನ್ನು ಬೆಂಕಿಯಲ್ಲಿ ಹಾಕಿದರು. ಇವೇ ಮುಂತಾದ ಕ್ರೂರವಾದ ನರಕ ಯಾತನೆಯನ್ನು ಅನುಭವಿಸಿ ಹಿಂದಿನ ಪಾಪದ ದೆಸೆಯಿಂದ ಇಲ್ಲಿ ಚಂಡಾಲ ಜಾತಿಯಲ್ಲಿ ಹುಟ್ಟಿದಳು. ಆ ಚಾಂಡಾಲರ ಮನೆಯಲ್ಲಿಯೇ ದಿನದಿನವೂ ಬೆಳೆಯುತ್ತ ಮತ್ತೆ ಹಿಂದಿನ ಜನ್ಮದ ವಾಸನೆಯಿಂದ ವ್ಯಭಿಚಾರಿಣಿಯೇ ಆದಳು. ಮತ್ತು ಅವಳಿಗೆ ಕುಷ್ಠರೋಗವೂ ಕ್ಷಯರೋಗವೂ, ಕಣ್ಣಿನ ರೋಗವೂ ಬಂದು ಪೀಡಿಸುತ್ತಿದ್ದುವು. ಆದ್ದರಿಂದ ಅಲ್ಲಿ ಇಲ್ಲಿ ಸುತ್ತುತ್ತಿದ್ದಳು.

೬೧. ಅನಂತರ ಕೆಲವು ಕಾಲದಮೇಲೆ ಬ್ರಾಹ್ಮಣ ಜನ್ಮದ ಹರಿಹರ ಪುರದ ತನ್ನ ಮನೆಗೆ ಹೋದಳು. ಅಲ್ಲಿ ಶಿವನ ಅಂತಃಪುರಾಧಿ ದೇವತೆಯಾದ ಜಂಭಕಾದೇವಿಯಿರುವಲ್ಲಿಗೆ ಹೋದಳು.

೬೨. ಅಲ್ಲಿ ವಾಸುದೇವನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನು ಅಲ್ಲಿ ಗೀತೆಯ ಹದಿಮೂರನೆಯ ಅಧ್ಯಾಯವನ್ನು ಓದುತ್ತಾ ಸುಖವಾಗಿದ್ದನು.

**ತತಸ್ತಚ್ಛ್ರವಣಾದೇವ ಮುಕ್ತಾ ಶ್ವಪಚವಿಗ್ರಹಾತ್ ।**
**ದಿವ್ಯದೇಹಂ ಸಮಾಸಾದ್ಯ ಜಗಾಮ ತ್ರಿದಶಾಲಯಂ ॥ ೬೩ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ತ್ರಯೋದಶಾಧ್ಯಾಯ ಮಾಹಾತ್ಮ್ಯಂ ನಾಮ ತ್ರ್ಯಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೬೩. ಅನಂತರ ಅಲ್ಲಿ ಆ ಗೀತೆಯನ್ನು ಕೇಳಿದೊಡನೆಯೇ ಚಂಡಾಲ ದೇಹವು ಹೋಯಿತು. ಉತ್ತಮವಾದ ದೇಹವನ್ನು ಹೊಂದಿ ದೇವಲೋಕಕ್ಕೆ ಹೋದಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹದಿಮೂರನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರಶೀತ್ಯಧಿಕಶತತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಭವಾನಿ ಭವ ಮುಕ್ತಯೇ ।**
**ಗೀತಾಚತುರ್ದಶಾಧ್ಯಾಯ ಮವಧಾರಯ ಸಾದರಂ ॥ ೧ ॥**

**ಮೇದಿನ್ಯಾಂ ಯತ್ಕಿಲ ಸ್ಥೂಲ ಮಸ್ತಿ ಕಾಶ್ಮೀರಮಾಡಲಂ ।**
**ರಾಜಧಾನೀ ಸರಸ್ವತ್ಯಾ ಭಗವತ್ಯಾ ಮನೋಹರಾ ॥ ೨ ॥**

**ಯಾಮಧಿಷ್ಠಾಯ ವಾಗ್ದೇವೀಂ ಬ್ರಹ್ಮಲೋಕಂ ಪ್ರಗಚ್ಛತಿ ।**
**ಹಂಸೈಸ್ಸಮುಹ್ಯಮಾನಾಂ ತು ಸಾವಿತ್ರೀ ಪ್ರಹಿತೈಸ್ತ್ರಿಭಿಃ ॥ ೩ ॥**

---

## ನೂರ ಎಂಭತ್ತನಾಲ್ಕನೆಯ ಅಧ್ಯಾಯವು



೧. ಈಶ್ವರನು ಹೇಳಿದನು- ಎಲೈ ಭವಾನಿಯೇ! ಸಂಸಾರದಲ್ಲಿ ಮೋಕ್ಷವನ್ನುಂಟುಮಾಡುವ ಮತ್ತೊಂದನ್ನು ಹೇಳುತ್ತೇನೆ. ಅಂತಹ ಗೀತೆಯ ಹದಿನಾಲ್ಕನೆಯ ಅಧ್ಯಾಯುವನ್ನು ವಿಶ್ವಾಸದಿಂದ ಕೇಳು.

೨. ಭೂಮಿಯಲ್ಲಿ ದೊಡ್ಡದಾಗಿರುವ ಕಾಶ್ಮೀರಮಂಡಲ ಒಂದಿರುವುದು. ಅದು ಸರಸ್ವತಿಗೆ ರಾಜಧಾನಿಯು. ಮನೋಹರವಾದುದು.

೩-೪. ಸರಸ್ವತಿಯು ಕಾಶ್ಮೀರ ದೇಶದಲ್ಲಿದ್ದುಕೊಂಡಿರುತ್ತಿರುವಳು. ಸಾವಿತ್ರಿಯು ಮೂರು ಹಂಸಗಳನ್ನು ಕಳುಹಿಸಿಕೊಟ್ಟು ಅವುಗಳಿಂದ ಆಕೆಯ ಪಾದಗಳನ್ನು

ಸರಸ್ವತೀ ಪದಾಂಭೋಜ ಸೇವಾಮಾಶ್ರಿತ್ಯ ಕುಂಕುಮೈಃ ।
ಯತ್ರ ಗೌರವಯಂ ತ್ಯಾಶಾ ಹಂಸಾಃ ಪಕ್ಷಪುಟೋದ್ಭವೈಃ ॥ ೪ ॥

ನಿರಂತರ ತಯಾ ಯತ್ರ ನೃಣಾಂ ಸಂಸ್ಕೃತಭಾಷಿಣಾಂ ।
ದೇವ ವರ್ಣಮಯೀ ಭಾಷಾ ನಿಮೇಷೇಣೋಪಲಭ್ಯತೇ ॥ ೫ ॥

ಪ್ರಾತರ್ಗೃಹಾಂಗಣೋದ್ಭೂತೈರ್ಯತ್ರ ಕುಂಕುಮಪಾಂಸುಲೈಃ ।
ಸರ್ವತೋರುಣಿತಚ್ಛಾಯಂ ಶಶಾಂಕರವಿಮಂಡಲಂ ॥ ೬ ॥

ತತ್ರಾಸೀತ್ತೇಜಸಾಂ ರಾಶಿಃ ಶೌರ್ಯವರ್ಮಾ ನರೇಶ್ವರಃ ।
ಉದ್ಯದುಜ್ಜ್ವಲ ಬಾಣೌಘ ಖಂಡಿತಾ ರಾತಿ ಮಂಡಲಃ ॥ ೭ ॥

ಅಭೂಚ್ಚ ಸಿಂಹಳದ್ವೀಪೇ ರಾಜಾ ಸಿಂಹ ಪರಾಕ್ರಮಃ ।
ನಾಮ್ನಾ ವಿಕ್ರಮವೇತಾಳಃ ಕಲಾನಾಮುಪಿಶೇವಧಿಃ ॥ ೮ ॥

---

ಕುಂಕುಮಗಳಿಂದ ಪೂಜಿಸುವಳು. ಅವುಗಳು ಮತ್ತೆ ಬ್ರಹ್ಮಲೋಕಕ್ಕೆ ಹೋಗುವಾಗ ದಿಕ್ಕುಗಳನ್ನು ಬೆಳಗುತ್ತಾ ಹೋಗುತ್ತವೆ.

೫. ಅಲ್ಲಿ ಮನುಷ್ಯರು ಯಾವಾಗಲೂ ಸಂಸ್ಕೃತವನ್ನೇ ಅಭ್ಯಾಸಮಾಡುತ್ತಿರುವುದರಿಂದ ಅಲ್ಲಿಗೆ ಹೋದವರಿಗೂ ಆ ಸಂಸ್ಕೃತ ಭಾಷೆಯು ಒಂದು ನಿಮಿಷದಲ್ಲಿಯೇ ಬಂದುಬಿಡುತ್ತದೆ.

೬. ಆ ದೇಶದ ಮನೆಗಳ ಅಂಗಳಗಳಲ್ಲಿ ಬೆಳಗ್ಗೆ ಮೇಲಕ್ಕೇಳುವ ಕುಂಕುಮ ಕೇಸರಿಯ ಧೂಳುಗಳಿಂದ ಆಕಾಶದಲ್ಲಿರುವ ಸೂರ್ಯಚಂದ್ರ ಬಿಂಬಗಳು ಎಲ್ಲೆಡೆಯಲ್ಲಿಯೂ ಕೆಂಪಾಗಿ ಕಾಣುತ್ತವೆ.

೭. ಆ ಕಾಶ್ಮೀರ ಪಟ್ಟಣದಲ್ಲಿ ಒಳ್ಳೆಯ ತೇಜಸ್ವಿಯಾದ ಒಬ್ಬ ರಾಜನಿರುವನು. ಬಾಣಗಳಿಂದ ನಾಶಮಾಡಿದ ಶತ್ರುಗಳ ಗುಂಪುಳ್ಳವನು. ಶೌರ್ಯವರ್ಮನೆಂದು ಅವನ ಹೆಸರು.

೮. ಆಗ ಸಿಂಹಳದ್ವೀಪದಲ್ಲಿ ಬಹು ಪರಾಕ್ರಮಶಾಲಿಯಾದ ವಿಕ್ರಮವೇತಾಳನೆಂಬ ರಾಜನಿದ್ದನು. ಅವನು ಅನೇಕ ವಿದ್ಯೆಗಳನ್ನು ಬಲ್ಲವನು.

ಉಭೌ ಪಾರಸ್ಪರೀಂ ಮೈತ್ರೀಂ ವರ್ಧಯಾಂಚಕ್ರತುಃ ಕ್ರಮಾತ್ ।
ತತ್ತದ್ದೇಶ ಸಮುತ್ಪನ್ನೈರಪೂರ್ವೈಃ ಪ್ರಚುರೋತ್ಕರೈಃ ॥ ೯ ॥

ಏಕದಾ ಪ್ರಹಿತಂ ಪ್ರೇಮ್ಣಾ ಪ್ರಭೂತಂ ಶೌರ್ಯವರ್ಮಣಾ ।
ರಾಜಾ ವಿಕ್ರಮ ವೇತಾಳೋ ವಿಲೋಕ್ಯ ಶುನಕೀದ್ವಯ ॥ ೧೦ ॥

ಮತ್ತಮಾತಂಗತುರಂಗಂ ಮಣಿಭೂಷಣ ಚಾಮರಂ ।
ಪ್ರೇಷಯಾಮಾಸ ಮಿತ್ರಾಯ ಪ್ರಭೂತಂಶೌರ್ಯ ವರ್ಮಣೆ ॥ ೧೧ ॥

ಏಕದಾ ಶಿಬಿಕಾರೂಢಂ ಚಾರುಚಾಮರವೀಜಿತಂ ।
ಸುವರ್ಣಶೃಂಖಲಾರೂಢಂ ವಾದ್ಯಡಿಂಡಿಮಡಂಬರಂ ॥ ೧೨ ॥

ಶುನೀಯುಗಳಮಾದಾಯ ಮೃಗಯಾಕೌತುಕೋತ್ಸುಕಃ ।
ರಾಜಾ ಜಗಾಮ ಬಾಹ್ಯಾಳೀಂ ಸಮಂ ರಾಜಕುಮಾರಕೈಃ ॥ ೧೩ ॥

---

೯. ಇವರು ಮಿತ್ರತ್ವವನ್ನು ಹೊಂದಿ ಕಾಲಾನುಗುಣವಾಗಿ ತಮ್ಮ ಮೈತ್ರಿಯನ್ನು ಹೆಚ್ಚಿಸಿಕೊಂಡು ಬಂದರು. ಅವರು ಅವರವರ ದೇಶಗಳಲ್ಲಿ ಹುಟ್ಟಿರುವ ಅಪರೂಪವಾದ ಪದಾರ್ಥಗಳನ್ನು ಒಬ್ಬರಿಗೊಬ್ಬರು ಕಳುಹಿಸಿಕೊಡುತ್ತಿದ್ದರು.

೧೦-೧೧. ಒಂದು ಸಾರಿ ಕಾಶ್ಮೀರ ರಾಜನಾದ ಶೌರ್ಯವರ್ಮನು ಮಿತ್ರನಾದ ವೇತಾಳೇಶ್ವರನಿಗೆ ಅನೇಕ ಪದಾರ್ಥಗಳನ್ನು ಕಳುಹಿಸಿಕೊಟ್ಟನು. ಅವುಗಳಲ್ಲಿ ಎರಡು ನಾಯಿಗಳೂ ಇದ್ದುವು. ಆ ವಿಕ್ರಮವೇತಾಳನು ಅವನ್ನು ನೋಡಿ ತಾನು ಕೆಲವು ಭೂಷಿತವಾದ ಮದಿಸಿದ ಆನೆಗಳನ್ನೂ ಕುದುರೆಗಳನ್ನೂ ಕಳುಹಿಸಿಕೊಟ್ಟನು.

೧೨-೧೩. ಒಂದು ಸಾರಿ ಆ ರಾಜನು ಎರಡು ನಾಯಿಗಳನ್ನೂ ಚಾಮರಗಳಿಂದ ಬೀಸುತ್ತಾ ಚಿನ್ನದ ಸರಪಣಿಗಳಿಂದ ಕಟ್ಟಿ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ವಾದ್ಯಗಳನ್ನು ಬಾರಿಸಿಕೊಂಡು ಬೇಟೆಗೋಸ್ಕರ ರಾಜಕುಮಾರನೊಡನೆ ಊರ ಹೊರಭಾಗಕ್ಕೆ ಹೋದನು.

ಪಣಬಂಧ ವಿಧಾನೇನ ಸಮುಪೇತಂ ಶಶಾಮಿಷಂ ।
ತತ್ರ ರಾಜ ಕುಮಾರಾಣಾಂ ಮಹಾನ್ ಕೋಲಾಹಲೋ ಭವತ್ ॥ ೧೪ ॥

ತತಸ್ಸಮಾನವಯಸಾ ಕೇನ ಚಿದ್ರಾಜಸೂನುನಾ ।
ಬಹುಮೂಲ್ಯಂ ಪಣಂ ಕೃತ್ವಾ ರಾಜಾ ಚಿ ಕ್ರೀಡ ಕೌತುಕೀ ॥ ೧೫ ॥

ತತೋಽವತಾರ್ಯ ಡೋಲಾಯಾ ಬಿರುದಾವಳಿ ಗರ್ವಿತಂ ।
ಧಾವತಶ್ಶಶಕಸ್ಯೋಚ್ಚೈಃ ಪೃಷ್ಠೇ ಮುಂಚ ನ್ನೃಪಶ್ಶುನೀಂ ॥ ೧೬ ॥

ಮು ಮೋಚ ರಾಜ ಪುತ್ರೋಽಪಿ ಪ್ರೇಮಪಾತ್ರಂ ಮಹಾಭುಜಃ ।
ವಿರರಾಮ ಶುನೀಮುಚ್ಚೈಃ ಸಂಕೀರ್ತ್ಯ ಬಿರುದಾವಳೀಂ ॥ ೧೭ ॥

ಅಲಕ್ಷ್ಯಮಾಣ ವೇಗೇಸ್ಮಿನ್ ಶುನೀಯುಗಳಕೇ ಭೃಶಂ ।
ಧಾವತ್ಯುತ್ಥಿತಮೋ ಪಾಸೀತ್ಪಶ್ಯತಾಂ ಸರ್ವ ಭೂಭೃತಾಂ ॥ ೧೮ ॥

---

೧೪. ಆಗ ಜೂಜಿನ ರೀತಿಯಿಂದ ಹಟ ಕಟ್ಟಿಕೊಂಡು ಒಂದು ಒಳ್ಳೆಯ ಮೊಲವನ್ನು ತಂದನು. ಆಗ ರಾಜಕುಮಾರರ ಕೋಲಾಹಲವು ಬಹುವಾಗಿ ಉಂಟಾಯಿತು.

೧೫. ಆಗ ಆ ರಾಜನು ತನಗೆ ಸಮನಾದ ವಯಸ್ಸುಳ್ಳ ಒಬ್ಬ ರಾಜಪುತ್ರ ನೊಡನೆ ಬಹಳ ಹಣವನ್ನು ಪಣವನ್ನಾಗಿಟ್ಟು ಆಸೆಯಿಂದ ಜೂಜು ಕಟ್ಟಿದನು.

೧೬. ಆಗ ಆ ಪಲ್ಲಕ್ಕಿಯಿಂದ ಇಳಿಸಿ ಹೊಗಳಿಸಿಕೊಳ್ಳುತ್ತಿದ್ದ ಆ ನಾಯಿ ಗಳಲ್ಲಿ ಒಂದನ್ನು ಮೊಲವನ್ನು ಓಡಿಸಿ ಓಡಿಹೋಗುತ್ತಿರುವ ಮೊಲದ ಹಿಂದೆ ರಾಜನು ಬಿಟ್ಟನು.

೧೭. ರಾಜಪುತ್ರನೂ ಕೂಡ ರಾಜನಿಗೆ ಪ್ರೀತಿಪಾತ್ರವಾದ ಮತ್ತೊಂದು ನಾಯನ್ನು ಹೊಗಳಿ ಮೊಲವನ್ನು ಹಿಡಿಯಲು ಬಿಟ್ಟನು.

೧೮. ಆಗ ಆ ಎರಡು ನಾಯಿಗಳೂ ಆ ಮೊಲದ ಹಿಂದೆ ಕಣ್ಣಿಗೆ ಕಾಣದ ಹಾಗೆ ವೇಗದಿಂದ ಓಡುತ್ತಿದ್ದುವು ಅದನ್ನು ಆ ರಾಜಪುತ್ರರೆಲ್ಲರೂ ನೋಡು ತ್ತಿದ್ದರು.

ಸಪಾತ ಗರ್ತೇ ಮಹತಿ ಶಶಕೋಽತಿಶ್ರಮಾದಸೌ ।
ಪತಿತೋಽಪಿ ಶುನೀವಶ್ಯೋ ನಾಭೂಚ್ಚ ಶಶಕಶಾವಕಃ ॥ ೧೯ ॥

ತತಶ್ಚನೈಸ್ಸಮುತ್ಥಾಯ ಧಾವನ್ನಾಕ್ರಮ್ಯ ರೋಷತಃ ।
ಜಗೃಹೆ ರಾಜಶೂನ್ಯಾಸೌ ಶಶಕಃ ಫೇನ ಮುದ್ವಮನ್ ॥ ೨೦ ॥

ತತಃ ಕಥಂಚಿದುತ್ಪ್ಲುತ್ಯ ಗಚ್ಛನ್ ವಿಸ್ಖಲಯನ್ ಶಶಃ ।
ರಾಜಪುತ್ರಶುನಕ್ಯಾಽಸೌ ಗೃಹೀತಃ ಕಂಧರಾತಟೇ ॥ ೨೧ ॥

ಜಿತಮಸ್ಮಾಭಿರತ್ಯರ್ಥಮಿತಿ ಸಂಜಲ್ಪತಾಂ ನೃಣಾಂ ।
ಕೋಲಾಹಲೇ ಶಂಕಿತಾಯಾಃ ಶುನ್ಯಾ ನಿರ್ಗತವಾನ್ ಮುಖಾತ್ ॥ ೨೨ ॥

ತತೋ ದಂಷ್ಟ್ರಾವ್ರಣಶ್ರೇಣೀಕ್ಷರದಸ್ರುಧಿರಧಾರಕಃ ।
ಕ್ವಾಪಿ ಮರ್ಮರಭೂಭಾಗೆ ನಿಲೀಯ ಸ್ಥಿತವಾನ್ ಶಶಃ ॥ ೨೩ ॥

---

೧೯. ಆಗ ಆ ಮೊಲವು ಶ್ರಮಪಟ್ಟು ಒಂದು ದೊಡ್ಡ ಹಳ್ಳಕ್ಕೆ ಬಿದ್ದಿತು. ಹಾಗೆ ಬಿದ್ದರೂ ಕೂಡ ಆ ಮೊಲದ ಮರಿಯು ನಾಯಿಗೆ ಸಿಕ್ಕಲೇ ಇಲ್ಲ.

೨೦. ಆಮೇಲೆ ಮೆತ್ತಗೆ ಎದ್ದು ಬಲದಿಂದ ಓಡುತ್ತಿದ್ದಿತು. ಮತ್ತು ಶ್ರಮದಿಂದ ಆ ಮೊಲವು ನೊರೆಯನ್ನು ಕಕ್ಕುತ್ತಿದ್ದಿತು. ಕೊನೆಗೆ ರಾಜನು ಬಿಟ್ಟ ನಾಯಿಯು ಆ ಮೊಲವನ್ನು ಸಮೀಪಿಸಿ ಹಿಡಿಯಿತು.

೨೧. ಆಮೇಲೆ ಆ ಮೊಲವು ಮೆಲ್ಲಗೆ ತಪ್ಪಿಸಿಕೊಂಡು ಸಿಕ್ಕದಂತೆ ಓಡುತ್ತಿದ್ದಿತು. ಅನಂತರ ರಾಜಪುತ್ರನು ಬಿಟ್ಟ ನಾಯಿಯು ಆ ಮೊಲದ ಕತ್ತನ್ನು ಹಿಡಿದುಕೊಂಡಿತು.

೨೨. ಒಂದು ನಾಯಿಯು ಹಿಡಿದುದರಿಂದಲೂ ಮತ್ತೊಂದು ನಾಯಿಯು ಕತ್ತನ್ನು ಕಚ್ಚಿದುದರಿಂದಲೂ ನಾವು ಗೆದ್ದೆವು. ನಾವು ಗೆದ್ದವು. ಎಂಬುದಾಗಿ ಕೂಗಿಯಾಡುತ್ತಾ ಎಲ್ಲರೂ ಸಂದೇಹದಿಂದಿರಲು ಆಗ ಕಚ್ಚಿಕೊಂಡಿದ್ದ ರಾಜಪುತ್ರನ ನಾಯಿಯ ಬಾಯಿಂದಲೂ ತಪ್ಪಿಸಿಕೊಂಡು ಆ ಮೊಲವು ಹೊರಟುಹೋಯಿತು.

೨೩. ಆ ನಾಯಿಯು ಹಲ್ಲುಗಳಿಳಿಯುವಂತೆ ಕಚ್ಚಿದ್ದುದರಿಂದ ಆ ಗಾಯದಿಂದ ರಕ್ತವನ್ನು ಸೋರಿಸುತ್ತಾ ಆ ಮೊಲವು ಎಲ್ಲೋ ಒಂದು ಮರೆಯಾದ ಜಾಗದಲ್ಲಿ ಹೋಗಿ ಅವಿತುಕೊಂಡಿತು.

ಜಿಘ್ರುನ್ತ್ಯಾ ರಾಜಶುನ್ಯಾಸೌ ಭೂಭಾಗಂ ಘಸರೋಷಯಾ
ದೃಷ್ಟಮಾತ್ರಃ ಪರಿತ್ರಸ್ತೋ ಹಸ್ತಮಾತ್ರಂ ತತೋಗಮತ್ ॥ ೨೪ ॥

ಯತ್ರ ಕರ್ಪೂರಕದಳೀಕ್ರೋಡವ್ಯಾಘರ್ಷಶೀತಳಃ ।
ಚೋಳೀಕಪೋಲ ಫಲಕಾಂಶ್ಚುಂಬಾತಿಸಮೀರಣಃ ॥ ೨೫ ॥

ಉದ್ಭಿನ್ನ ಕೇತಕೀಕೋಶ ರಜೋಮುಕುಲಿತೇಕ್ಷಣಃ ।
ವಿಸ್ರಬ್ಧಾ ಹರಿಣಾ ಯತ್ರ ಚ್ಛಾಯಾಯಾಂ ತಾಂ ಪಠಿತಃ ಸ್ಥಿತಾಃ ॥ ೨೬ ॥

ನಾರಿಕೇಳಫಲೈರ್ಯತ್ರ ಸ್ವಯಂ ನಿಪತಿತೈರಧಃ ।
ಅಪಿ ಚೂತಫಲೈಃ ಪಕ್ವೈಃ ಸ್ತೃಪ್ತಾಃ ಶಾಖಾಮೃಗಾ ಅಪಿ ॥ ೨೭ ॥

ಅಪಿ ಕೇಸರಿಣೋ ಯತ್ರ ಖೇಲಂತಿ ಕರಭೈಸ್ಸಮಂ ।
ಫಣಿನಃ ಕಂಕಬರ್ಹೇಷು ನಿರ್ವಿಶಂಕಂ ವಿಶಂತಿ ಚ ॥ ೨೮ ॥

---

೨೪. ಆ ನಾಯಿಯು ರೋಷದಿಂದ ಕೋಪಹೊಂದಿ ಆ ಮೊಲವು ಹೋದ ಜಾಗವನ್ನು ಹಿಂಬಾಲಿಸಿ ಹೋಯಿತು. ಈ ನಾಯಿಯನ್ನು ಕಂಡೊಡನೆಯೇ ಆ ಮೊಲವು ಹೆದರಿ ಅಲ್ಲಿಂದ ಮುಂದಕ್ಕೆ ಒಂದು ತೋಳಿನಷ್ಟು ದೂರ ಹೋಯಿತು.

೨೫. ಆ ಜಾಗವು ಕರ್ಪೂರ ಬಾಳೆಯ ಮಧ್ಯದಲ್ಲಿ ಸುವಾಸನೆಯುಳ್ಳದ್ದಾಗಿಯೂ ಶೀತವಾಗಿಯೂ ಇದ್ದಿತು. ಇಂತಹ ಗಾಳಿಯು ಚೋಳದೇಶದ ಹೆಂಗಸರ ಕಪೋಲಗಳನ್ನು ಚುಂಬಿಸುತ್ತಿದ್ದಿತು

೨೬. ಆ ವನದಲ್ಲಿದ್ದ ತಾಳೆಯ ಹೂಗಳು ಅರಳಿ ಅವುಗಳಿಂದ ಹೊರಟ ಧೂಳು ಕಣ್ಣಿಗೆ ಬೀಳುವುದೆಂದು ಹೆದರಿಕೊಂಡು ಕಿರುಗಣ್ಣು ಬಿಟ್ಟುಕೊಂಡು ಜಿಂಕೆಗಳು ಅಲ್ಲಿರುವ ನೆರಳಿನಲ್ಲಿ ಸುತ್ತಲೂ ಮಲಗಿರುವುವು.

೨೭. ಅಲ್ಲಿರುವ ತೆಂಗಿನ ಮರಗಳಿಂದ ಕಾಯಿಗಳು ಬಲಿತು ಹಣ್ಣಾಗಿ ತಾವೇ ಬಿದ್ದು ಇರುತ್ತಿದ್ದುವು. ಅಲ್ಲಿ ಅನೇಕವಾಗಿ ಮಾವಿನ ಹಣ್ಣುಗಳು ಇದ್ದುವು. ಇವುಗಳನ್ನು ತಿಂದು ಕಪಿಗಳೂ ಕೂಡ ತೃಪ್ತಿ ಹೊಂದಿರುತ್ತಿದ್ದುವು.

೨೮ ಆ ಜಾಗದಲ್ಲಿ ಸಿಂಹಗಳೂ ಕೂಡ ಆನೆಗಳೊಡನೆ ಆಟವಾಡುತ್ತಿದ್ದುವು. ಸರ್ಪಗಳು ನವಿಲುಗರಿಗಳೊಳಕ್ಕೆ ಆತಂಕಗೊಳ್ಳದೆ ನುಗ್ಗುತ್ತಿದ್ದುವು.

ಯತ್ರಾಶ್ರಮಾಂತರೇ ವಿಪ್ರೋ ವತ್ಸನಾಮಾ ಜಿತೇಂದ್ರಿಯಃ ।
ಶಾಸ್ತ್ರಶ್ಚತುರ್ದಶಾಧ್ಯಾಯಂ ಜಪನ್ನಾಸ್ತೇ ನಿರಂತರಂ ॥ ೨೯ ॥

ತತ್ರ ತಚ್ಛಿಷ್ಯ ಪಾದಾಬ್ಜ ಪ್ರಕ್ಷಾಳನ ಜಲೈಃ ಕೃತೇ ।
ಕರ್ದಮೇ ನ್ಯಪತದ್ಗತ್ವಾ ಜೀವಶೇಷೋ ಮುಹುಃ ಶ್ವಸನ್ ॥ ೩೦ ॥

ತತಃ ಕರ್ದಮ ಸಂಸ್ಪರ್ಶಮಾತ್ರ ನಿಸ್ತೀರ್ಣಸಂಸೃತಿಃ ।
ದಿವ್ಯಂ ವಿಮಾನ ಮಾರುಹ್ಯ ನಿರ್ಯಯೌ ಶಶಕೋ ದಿವಂ ॥ ೩೧ ॥

ತತಶ್ಶುನ್ಯಪಿ ಲಿಪ್ತಾಂಗೀ ಸ್ತೋಕೈಃ ಕರ್ದಮ ಬಿಂದುಭಿಃ ।
ಕ್ಷುತ್ಪಿಪಾಸಾರ್ತಿರಹಿತಾ ಶುನೀ ರೂಪಂ ವಿಹಾಯ ಸಾ ॥ ೩೨ ॥

ತತೋ ದಿವ್ಯಾಂಗನಾರಮ್ಯಂ ಗಂಧರ್ವೈರುಪಶೋಭಿತಂ ।
ದಿವ್ಯಂ ವಿಮಾನಮಾರುಹ್ಯ ಶುನ್ಯಪಿ ತ್ರಿದಿವಂ ಯಯೌ ॥ ೩೩ ॥

ತತೋ ಜಹಾಸ ಮೇಧಾವೀ ಶಿಷ್ಯೋ ನಾಮ್ನಾ ಸ್ವಕಂಧರಃ ।
ವಿಚಾರ್ಯ ವಿಸ್ಮಿತಃ ಪೂರ್ವಜನ್ಮವೈರಸ್ಯಕಾರಣಂ । ॥ ೩೪ ॥

---

೨೯ ಆ ಆಶ್ರಮದ ಮಧ್ಯದಲ್ಲಿ ವತ್ಸನೆಂಬ ಬ್ರಾಹ್ಮಣನು ಜಿತೇಂದ್ರಿಯನಾಗಿ ಶಾಂತನಾಗಿ ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಯಾವಾಗಲೂ ಜಪಿಸುತ್ತಿದ್ದನು.

೩೦. ಆ ಆಶ್ರಮದಲ್ಲಿ ಆ ವತ್ಸನ ಶಿಷ್ಯನು ಕಾಲನ್ನು ತೊಳೆದುಕೊಂಡ ನೀರು ಅಲ್ಲಿ ಬಿದ್ದು ಕೆಸರಾಗಿದ್ದಿತು. ಆ ಮೊಲವು ಓಡಿಹೋಗಿ ನಿಟ್ಟುಸಿರು ಬಿಡುತ್ತ ಆ ಕೆಸರಿನಲ್ಲಿ ಬಿದ್ದಿತು.

೩೧. ಮೊಲವು ಆ ಕೆಸರು ತಗುಲಿದ ಕೂಡಲೇ ಪಾಪವನ್ನು ಹಾಳುಮಾಡಿಕೊಂಡು ಸತ್ತು ದಿವ್ಯವಾದ ವಿಮಾನದಲ್ಲಿ ಕುಳಿತು ಸ್ವರ್ಗವನ್ನು ಹೊಂದಿತು.

೩೨-೩೩. ಆಮೇಲೆ ಆ ನಾಯಿಗೂ ಸ್ವಲ್ಪ ಕೆಸರು ಹಾರಿ ಅಂಟಿಕೊಂಡಿತು ಆಗ ಅದು ಹಸಿವು ಬಾಯಾರಿಕೆಗಳನ್ನು ಕಳೆದುಕೊಂಡು ಆ ನಾಯಿಯ ರೂಪವನ್ನು ಬಿಟ್ಟು ವಿಮಾನದಲ್ಲಿ ಕುಳಿತು ಸ್ವರ್ಗವನ್ನು ಹೊಂದಿತು.

೩೪. ಆಗ ಬುದ್ಧಿವಂತನಾದ ಸ್ವಕಂಧರನೆಂಬ ಆ ಶಿಷ್ಯನು ಇವೆಲ್ಲವನ್ನೂ ಯೋಚಿಸಿ ನೋಡಿ ಆ ಪೂರ್ವಜನ್ಮದ ವೈರದ ಕಾರಣವನ್ನು ತಿಳಿದು ನಕ್ಕನು.

ರಾಜಾಪಿ ಪರ್ಯಪೃಚ್ಛತ್ತಂ ತತ್ಸ್ಮಯಸ್ಮೇರಲೋಚನಃ ।
ಪ್ರಣಮ್ಯ ಪರಯಾ ಭಕ್ತ್ಯಾ ವಿನಯೈಕತಪೋನಿಧಿಃ ॥ ೩೫ ॥

॥ ರಾಜೋವಾಚ ॥

ಕಥಂ ಕಥಯ ನೋ ವಿಪ್ರ ಹೀನಯೋನಿನಿಷೇವಿತೌ ।
ಅಜ್ಞಾ ಯೌ ಜಗ್ಮತುಃ ಸ್ವರ್ಗೇ ಶುನೀಶಶಕಶಾವಕೌ ॥ ೩೬ ॥

॥ ಶಿಷ್ಯ ಉವಾಚ ॥

ವತ್ಸನಾಮಾ ದ್ವಿಜನ್ಮಾಸ್ತೇ ವನೇಽಸ್ಮಿನ್ನಿಯತೇಂದ್ರಿಯಃ ।
ಚತುರ್ದಶಂ ತು ಹ್ಯಧ್ಯಾಯಂ ಗೀತಾನಾಂ ಸರ್ವದಾ ಜಪೇತ್ ॥ ೩೭ ॥

ಶಿಷ್ಯೋಽಹಂ ತಸ್ಯ ಭೂಪಾಲ ಬ್ರಹ್ಮವಿದ್ಯಾವಿಶಾರದಃ ।
ಚತುರ್ದಶಂ ತು ಅಧ್ಯಾಯಂ ಜಪಾಮಿ ಪ್ರತ್ಯಹಂ ನೃಪ ॥ ೩೮ ॥

ಮದೀಯಚರಣಾಂಭೋಜಪ್ರಕ್ಷಾಳನಜಲೇ ಲುಠನ್ ।
ಶಶಸ್ತ್ರಿದಿವಮಾಪನ್ನಃ ಶುನಕ್ಯಾ ಸಹ ಭೂಪತೇ ॥ ೩೯ ॥

---

೩೫. ರಾಜನು ಅವನ್ನು ನೋಡಿ ಆಶ್ಚರ್ಯಪಡುತ್ತಾ ಆ ಸ್ವಕಂಧರನಿಗೆ ಭಕ್ತಿಯಿಂದ ನಮಸ್ಕರಿಸಿ ವಿನಯದಿಂದ ಇಂತೆಂದನು.

೩೬. ರಾಜನು ಹೇಳಿದನು- ಎಲೈ ಬ್ರಾಹ್ಮಣನೇ! ನೀಚ ಜನ್ಮದಲ್ಲಿದ್ದ ಈ ನಾಯಿ ಮೊಲಗಳು ಹೇಗೆ ಸ್ವರ್ಗವನ್ನು ಹೊಂದಿದುವು?

೩೭. ಶಿಷ್ಯನು ಹೇಳಿದನು- ಈ ವನದಲ್ಲಿ ಜಿತೇಂದ್ರಿಯನಾದ ವತ್ಸನೆಂಬ ಬ್ರಾಹ್ಮಣನಿರುವನು. ಅವನು ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಯಾವಾಗಲೂ ಜಪಿಸುತ್ತಿರುವನು.

೩೮. ಎಲೈ ದೊರೆಯೆ! ನಾನು ಆತನ ಶಿಷ್ಯನು. ಬ್ರಹ್ಮವಿದ್ಯೆಯನ್ನು ಚೆನ್ನಾಗಿ ಓದಿದ್ದೇನೆ. ನಾನೂ ಕೂಡ ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಯಾವಾಗಲೂ ಜಪಿಸುತ್ತಿರುವೆನು.

೩೯. ನಿನ್ನ ಕಾಲು ತೊಳೆದ ನೀರಿನಲ್ಲಿ ಆ ಮೊಲವೂ ನಾಯಿಯೂ ಸಂಪರ್ಕವನ್ನು ಹೊಂದಿ ಸ್ವರ್ಗವನ್ನು ಹೊಂದಿದುವು.

॥ ರಾಜೋವಾಚ ॥

ಹೇತುನಾ ಕೇನ ಕಥಯ ಹಸಿತಂ ಚ ದ್ವಿಜೋತ್ತಮ ।
ಅತಃ ಕಿಮಪಿ ಸಾಕೂತಂ ಮನ್ಯಮಾನೇನ ಸಾದರಂ ॥ ೪೦ ॥

॥ ಶಿಷ್ಯ ಉವಾಚ ॥

ಮಹಾರಾಷ್ಟ್ರೇ ತು ನಗರಂ ನಾಮ್ನಾ ಪ್ರತ್ಯುದಕಂ ಮಹತ್ ।
ತತ್ರಾಸೀದ್ಬ್ರಾಹ್ಮಣೋ ನಾಮ್ನಾ ಕೇಶವಃ ಕಿತವಾಗ್ರಣೀಃ ॥ ೪೧ ॥

ವಿಲೋಭನಾಭವತ್ತಸ್ಯ ಜಾಯಾ ಸ್ವೈರ ವಿಹಾರಿಣೀ ।
ತೇನ ಸಾಹನ್ಯತ ಕ್ರೋಧಾದ್ವೈರಂ ಸಂಚಿಂತ್ಯ ಜನ್ಮನಃ ॥ ೪೨ ॥

ತತಃ ಸ್ತ್ರೀವಧಪಾಪೇನ ಶಶಕೋ ಜಾಯತೇ ದ್ವಿಜಃ ।
ಕಿಲ್ಬಿಷಾಚ್ಛುನಕೀ ಸಾಪಿ ಜಾತಾ ವೈ ಜನ್ಮಜನ್ಮನಃ ॥ ೪೩ ॥

---

೪೦. ರಾಜನು ಹೇಳಿದನು-ಎಲೈ ಬ್ರಾಹ್ಮಣನೇ! ನೀನು ಆಗ ಯಾವುದೋ ಅಭಿಪ್ರಾಯವನ್ನಿಟ್ಟುಕೊಂಡು ನಕ್ಕೆಯಲ್ಲ! ಅದಕ್ಕೆ ಕಾರಣವೇನು? ತಿಳಿಸು.

೪೧. ಶಿಷ್ಯನು ಹೇಳಿದನು-ಮಹಾರಾಷ್ಟ್ರದಲ್ಲಿ ಪ್ರತ್ಯುದಕವೆಂಬ ಒಂದು ದೊಡ್ಡ ಗ್ರಾಮವಿದೆ. ಅಲ್ಲಿ ಬ್ರಾಹ್ಮಣ ಕೃತ್ಯಗಳನ್ನು ಮಾಡದೆ ಹೆಸರಿಗೆ ಮಾತ್ರ ಬ್ರಾಹ್ಮಣನೆನಿಸಿಕೊಂಡಿರುವ ಕೇಶವನೆಂಬ ಹೆಸರುಳ್ಳ ಸಟ್ವನೊಬ್ಬನು ಇರುವನು.

೪೨. ಅವನ ಹೆಂಡತಿಯು ಇಚ್ಛೆಬಂದಂತೆ ವಿಹರಿಸುತ್ತಿದ್ದಳು. ಇವರಿಂದ ಒಬ್ಬರಿಗೊಬ್ಬರು ವೈಮನಸ ವನ್ನು ಹೊಂದಿದರು. ಈ ರೀತಿಯಾಗಿ ದ್ವೇಷದಿಂದ ಅವನು ಅವಳನ್ನು ಕೊಂದನು.

೪೩. ಆ ಹೆಂಗಸನ್ನು ಕೊಂದ ಪಾಪದಿಂದ ಆ ಬ್ರಾಹ್ಮಣನು ಮೊಲವಾಗಿ ಹುಟ್ಟಿದನು. ಆ ಹೆಂಗಸು ಮಾಡಿದ ಪಾಪದಿಂದ ತಾನು ನಾಯಿಯಾಗಿ ಹುಟ್ಟಿದಳು. ಹೀಗೆ ಜನ್ಮಜನ್ಮಕ್ಕೂ ಹುಟ್ಟುತ್ತಾ ಬಂದರು.

**ಪೂರ್ವೇಣ ಜನ್ಮನಾ ವೈರಮಭ್ಯಸ್ತಂ ವಿಸ್ಮೃತಂ ನ ಹಿ ।**
**ಆಸೇದಿವದ್ಭ್ಯಾಂ ಬಹುಧಾ ಯೋಽನ್ಯನ್ತರಮಪಿ ಕ್ವಚಿತ್ ॥ ೪೪ ॥**

**॥ ಶ್ರೀ ಶಿವ ಉವಾಚ ॥**

**ಇತ್ಯಾಕಲಯ್ಯ ಸಕಲಂ ಭೂಪಾಲಶ್ಶ್ರದ್ಧಯಾನ್ವಿತಃ ।**
**ಗೀತಾ ಚತುರ್ದಶಾಧ್ಯಾಯಪಾಠಾದಾಪ ಪರಾಂ ಗತಿಂ ॥ ೪೫ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಚತುರ್ದಶಾಧ್ಯಾಯ ಮಾಹಾತ್ಮ್ಯಂ ನಾಮ ಚತುರಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ**

---

೪೪. ಪೂರ್ವಜನ್ಮದಿಂದ ಅಭ್ಯಾಸಮಾಡಿದ ವೈರವನ್ನು ಅವೆರಡೂ ಮರೆಯಲಿಲ್ಲ. ಆ ವೈರವೇ ಅನುಸರಿಸಿ ಬೇರೆ ಜನ್ಮದಲ್ಲಿಯೂ ಬಂದಿತು.

೪೫. ಶ್ರೀ ಶಿವನು ಹೇಳಿದನು—ಇದೆಲ್ಲವನ್ನೂ ರಾಜನು ಕೇಳಿ ಶ್ರದ್ಧೆಯುಳ್ಳವನಾಗಿ ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಅಭ್ಯಾಸಮಾಡಿ ಉತ್ತಮಗತಿಯನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹದಿನಾಲ್ಕನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಪಂಚಾಶೀತ್ಯಧಿಕಶತತಮೋಽಧ್ಯಾಯಃ ||



|| ಈಶ್ವರ ಉವಾಚ ||

ಪ್ರವಕ್ಷ್ಯಾಮಿ ವಿಶಾಲಾಕ್ಷಿ ತುಹಿನಾಚಲಕನ್ಯಕೇ ।
ಗೀತಾಪಂಚದಶಾಧ್ಯಾಯಮಾಹಾತ್ಮ್ಯಮವಧಾರಯ || ೧ ||

ಕೃಪಾಣನರಸಿಂಹೋಽಭೂನ್ನಾಮ್ನಾ ಗೌಡೇಷು ಭೂಪತಿಃ ।
ಯಸ್ಯಾಸಿಧಾರಯಾ ಸಂಖ್ಯೇ ದೇವಸಂಘಾಶ್ಚ ಧಿಕ್ಕೃತಾಃ || ೨ ||

ಯದೀಯಮತ್ತಮಾತಂಗದಾನಧಾರಾಜಲೈರಿಲಾ ।
ನಿದಾಘೇಽಪಿ ಚ ಸೇಹೇ ತಾಂ ರವಿಸಂತಾಪವೇದನಾಂ || ೩ ||

---

## ನೂರ ಎಂಭತ್ತೈದನೆಯ ಅಧ್ಯಾಯವು



೧. ಈಶ್ವರನು ಹೇಳಿದನು-ಎಲೈ ಹಿಮವತ್ಪುತ್ರಿಯೇ! ಗೀತೆಯ ಹದಿನೈದನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಕೇಳು.

೨ ಗೌಡದೇಶದಲ್ಲಿ ಕೃಪಾಣನರಸಿಂಹನೆಂಬ ಒಬ್ಬ ರಾಜನಿದ್ದನು. ಅವನ ಕತ್ತಿಯ ಏಟಿಗೆ ದೇವತೆಗಳೂ ಹೆದರುತ್ತಿದ್ದರು.

೩. ಅವನ ಮದ್ದಾನೆಗಳ ಮದೋದಕದಿಂದ ಭೂಮಿಯು ಬಿಸಿಲು ಕಾಲದಲ್ಲಿಯೂ ಕೂಡ ಸೂರ್ಯನ ಸಂತಾಪವನ್ನು ಹಾಳುಮಾಡಿಕೊಳ್ಳುತ್ತಿದ್ದಿತು.

ಸಂಕ್ರಂದನಾತ್ಪರಿತ್ರಸ್ತಾ ಯದೀಯಂ ಶರಣಂ ಗತಾಃ ।
ರೇಜಿರೇ ಕರಿಣೋ ಮತ್ತಾಶ್ಚಲಂತಃ ಪರ್ವತಾ ಇವ ॥ ೪ ॥

ಮತ್ತಮಾತಂಗಚೀತ್ಕಾರಪ್ರತಿಸ್ವನಮಿವಾದರಾತ್ ।
ಯಸ್ಯ ಗೋಪಾಯಿತುಂ ಶೈಲಾ ವ್ಯಾಹರಂತಿ ಕೃಪಾವತಃ ॥ ೫ ॥

ಯದೀಯಧಾವತ್ತುರಗಖುರಸಂಘಾತ ಜರ್ಜರಂ ।
ನಾಭೂಚ್ಚಿತ್ರಂ ಕಥಂಕಾರಂ ಗತಖಂಡಂ ಧರಾತಳಂ ॥ ೬ ॥

ಯಸ್ಮಿನ್ ಖಡ್ಗಹತಾಮಿತ್ರೇ ಸಮುದ್ಧರತಿ ಮೇದಿನೀಂ ।
ಪುನರುಜ್ಜಲ್ಪಯಾಂಚಕ್ರೇ ಮಹಾಭಾಷ್ಯಂ ಫಣೀಶ್ವರಃ ॥ ೭ ॥

ತಸ್ಯಾಸೀತ್ಸೈನ್ಯಪೋ ಧೀಮಾನ್ ಶಸ್ತ್ರಶಾಸ್ತ್ರಕಳಾನಿಧಿಃ ।
ನಾಮ್ನಾ ಶರಭಭೇರುಂಡಃ ಪ್ರಚಂಡಭುಜಮಂಡಲಃ ॥ ೮ ॥

---

೪. ಇಂದ್ರನಿಂದ ಹೆದರಿದವರೆಲ್ಲರೂ ಆ ರಾಜನ ಮರೆಯನ್ನು ಹೊಂದುತ್ತಿದ್ದರು. ಅವನ ಮದ್ದಾನೆಗಳು ಓಡಿಯಾಡುತ್ತಿರುವ ಪರ್ವತಗಳಂತೆ ಇದ್ದುವು.

೫. ಮದಿಸಿದ ಆನೆಗಳ ಕೂಗು ಪರ್ವತದಲ್ಲಿ ಪ್ರತಿಧ್ವನಿತವಾದರೆ ಚೀತ್ಕಾರವನ್ನು ಮಾಡಬೇಡರಿ ನಾನು ನಿಮ್ಮನ್ನು ಕಾಪಾಡುತ್ತೇನೆ. ಎಂದು ಆ ರಾಜನ ಪರ್ವತಗಳು ಅಭಯವನ್ನು ಕೊಡುತ್ತಿರುವುವೋ ಎಂಬಂತಿದ್ದಿತು.

೬ ಆ ರಾಜನ ಕುದರೆಗಳು ಓಡಿಯಾಡುವಾಗ ಅವುಗಳ ಗೊರಸುಗಳ ಹೊಡತದಿಂದ ಭೂಮಿಯು ಚೂರು ಚೂರಾಯಿತೆಂಬುದೇನೂ ಚಿತ್ರವಾಗಲಿಲ್ಲ.

೭. ಅವನು ತನ್ನ ಖಡ್ಗದಿಂದ ಶತ್ರುಗಳನ್ನು ಕೊಂದು ಭೂಮಿಯನ್ನು ಎತ್ತಿಕೊಂಡಿರಲು (ಉದ್ಧರಿಸಲು) ಆಗ ಆ ದಿಶೇಷನು ತನ್ನ ಕಷ್ಟವು ಕಡಿಮೆಯಾದುದರಿಂದ ಮತ್ತೆ ವ್ಯಾಕರಣಭಾಷ್ಯವನ್ನು ಓದಲು ಮೊದಲಿಟ್ಟನು.

೮. ಅವನಿಗೆ ಸೈನ್ಯಾಧಿಪತಿಯು ಒಬ್ಬನಿದ್ದನು. ಅವನ ಹೆಸರು ಶರಭಭೇರುಂಡನು. ಎಲ್ಲಾ ಶಕ್ತಿಶಾಸ್ತ್ರಾಭ್ಯಾಸಗಳನ್ನೂ ಮಾಡಿದ್ದನು. ಅವನ ಭುಜಮಂಡಲವು ಶಕ್ತವಾಗಿದ್ದಿತು. ಅವನು ಬಹು ಬುದ್ಧಿವಂತನು.

ಭಾಂಡಾಗಾರೇಣ ತುರಗೈರ್ಭಟೈರ್ವೀರರಸೋದ್ಭವೈಃ ।
ಸಮಾನ ಏವ ಭೂಭರ್ತುರ್ದುರ್ಗೈರತ್ಯಂತದುರ್ಗಮೈಃ ॥ ೯ ॥

ಸ ಕದಾಚಿತ್ಸ್ವಯಂ ರಾಜ್ಯಂ ಕರ್ತುಂ ಪಾಪೋ ದಧೇ ಮನಃ ।
ನಿಹತ್ಯ ವಸುಧಾಪಾಲಂ ಬಲಾತ್ಸೈಕಂ ಕುಮಾರಕೈಃ ॥ ೧೦ ॥

ಕರ್ತುಂ ವ್ಯವಸ್ಯ ದಿವಸೈಃ ಸ್ವಲ್ಪೈರಿತ್ಥಂ ಚಿಕೀರ್ಷಯಾ ।
ಸಾಹಸಿಕಜನೈರ್ಮಂತ್ರಂ ಮಂತ್ರಯಿತ್ವಾ ಹೃದಿ ಪ್ರಭುಃ ॥ ೧೧ ॥

ವಿಷೂಚಿಕಾಮಯಾದಾಶು ಪರಾಸುಃ ಸಮಜಾಯತ ।
ಕಾಲೇನಾಲ್ಪೀಯಸಾ ಪ್ರೇತ್ಯ ಪಾಪಾತ್ಮಾ ತೇನ ಕರ್ಮಣಾ ॥ ೧೨ ॥

ತೇಜಸ್ವೀ ತುರಗೋ ಜಾತಃ ಸಿಂಧುದೇಶೇ ಕೃಶೋದರಃ ।
ಮೂಲ್ಯೇನ ಬಹುನಾ ಕ್ರೀತ್ವಾ ಹಯತತ್ತ್ವವಿದಾ ತತಃ ॥ ೧೩ ॥

---

೯. ಅವನ ಬಂಡಾರವು ತುಂಬಿದ್ದಿತು. ಕುದುರೆಗಳೂ, ಭಟರೂ, ಬಹುವಾಗಿದ್ದು ಗಟ್ಟಿಗರಾಗಿದ್ದರು. ಶೌರ್ಯವು ತುಂಬಿದ್ದಿತು. ಅವರೆಲ್ಲರೂ ರಾಜನಿಗೆ ಸಮವಾದ ಪರಾಕ್ರಮಿಗಳು. ಆ ರಾಜನಿಗೆ ಪರರಿಂದ ಭೇಧಿಸಲಾಗದ ಕೋಟೆಯೂ ಇದ್ದಿತು.

೧೦. ಆ ಸೇನಾಪತಿಗೆ ರಾಜನನ್ನೂ ಅವನ ಮಕ್ಕಳನ್ನೂ ಬಲಾತ್ಕಾರದಿಂದ ಕೊಂದು ತಾನು ರಾಜ್ಯಭಾರಮಾಡಬೇಕೆಂಬ ಪಾಪಬುದ್ಧಿಯು ಹುಟ್ಟಿತು.

೧೧. ಈ ರೀತಿಯಾಗಿ ರಾಜನಿಗೆ ಕೆಟ್ಟದ್ದು ಮಾಡಬೇಕೆಂದು ಯೋಚಿಸಿ ಸ್ವಲ್ಪದಿನದಲ್ಲಿಯೇ ಅದನ್ನು ನೆರವೇರಿಸಲು ಉದ್ದೇಶಪಟ್ಟುಕೊಂಡು ತನ್ನಂತೆಯೇ ಗಟ್ಟಿಗರಾದವರೊಡನೆ ಯೋಚಿಸಿ ಅದನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡಿದ್ದನು.

೧೨-೧೩. ಕೆಲವು ದಿನಗಳ ಮೇಲೆ ಶಿಡುಬೆದ್ದು ಆ ಸೇನಾಪತಿಯು ಸತ್ತುಹೋದನು. ಹೀಗೆ ಸತ್ತವನು ಕೆಲವು ಕಾಲದಮೇಲೆ ತನ್ನ ಪಾಪಕರ್ಮದಿಂದ ಒಳ್ಳೆಯ ಶಕ್ತವಾದ ಕುದುರೆಯಾಗಿ ಸಿಂಧುದೇಶದಲ್ಲಿ ಹುಟ್ಟಿದನು. ಆಗ ಕುದುರೆಯ ಗುಟ್ಟನ್ನು ಬಲ್ಲ ಒಬ್ಬ ವೈಶ್ಯನು ಅದನ್ನು ಬಹು ಮೂಲ್ಯದಿಂದ

ಬಹುಯತ್ನವತಾ ನೀತಃ ಕೇನಚಿದ್ವೈಶ್ಯಸೂನುನಾ ।
ರಾಜಾಪಿ ಪೌತ್ರನಪ್ತ್ರಾದ್ಯೈಸ್ತಸ್ಯೈವ ಮರಣಾತ್ಪರಂ ॥ ೧೪ ॥

ಕಾಲೇನ ವೃದ್ಧತಾಂ ಪ್ರಾಪ್ತಃ ಸ್ವರಾಜ್ಯಂ ಚಾಪಿ ಪಾಲಯನ್ ।
ಸ ವೈಶ್ಯಸೂನುಸ್ತಂ ಚಾಶ್ವಂ ರಾಜ್ಞೇ ದಾತುಂ ಸಮಾಗತಃ ॥ ೧೫ ॥

ರಾಜ್ಞೋ ದ್ವಾರಸ್ಥಿತಸ್ತತ್ರ ಪ್ರತೀಕ್ಷಂಸ್ತಸ್ಸಮಾಗಮಂ ।
ಜ್ಞಾತಪೂರ್ವೋಽಪಿ ವೈಶ್ಯೋಽಸೌ ಪ್ರತೀಹಾರೇಣದರ್ಶಿತಃ ॥ ೧೬ ॥

ಕಿಮರ್ಥಂ ಬ್ರೂಹಿ ರಾಜ್ಞೇತಿ ಪೃಷ್ಟಃ ಸ್ಪಷ್ಟಮಭಾಷತ ।
ದೇವ ತ್ರಿಜಗತೀರತ್ನಮಿತಿ ಮತ್ವಾ ತುರಂಗಮಃ ॥ ೧೭ ॥

ಮಯಾನೀಯತ ಮೌಲ್ಯೇನ ಬಹುನಾ ಸಾಧುಲಕ್ಷಣಃ ।
ತತೋಽವಲೋಕ್ಯ ವಕ್ತ್ರಾಣಿ ಭೂಪಾಲಃ ಪಾರ್ಶ್ವವರ್ತಿನಾಂ ॥ ೧೮ ॥

ಸಮಾದಿದೇಶ ವಣಿಜಮಶ್ವೋಽತ್ರಾನೀಯತಾಮಿತಿ ।
ಶಿರಾಂಸಿ ಧೂನಯನ್ನ್ಯಾಣಾಮಶ್ವಲಕ್ಷಣವೇದಿನಾಂ ॥ ೧೯ ॥

---

ಕೊಂಡುಕೊಂಡು ತೆಗೆದುಕೊಂಡು ಮನೆಗೆ ಬಂದನು. ಆ ಸೇನಾಪತಿಯು ಸತ್ತಮೇಲೆ ರಾಜನೂ ಕೂಡ ಮಕ್ಕಳು, ಮೊಮ್ಮಕ್ಕಳುಗಳೊಡನೆ ರಾಜ್ಯವಾಳುತ್ತ ಮುದುಕನಾದನು. ಆಗ ಆ ವೈಶ್ಯನು ಆ ಕೊಂಡುಕೊಂಡ ಕುದುರೆಯನ್ನು ರಾಜನಿಗೆ ಮಾರಲು ಇಲ್ಲಿಗೆ ಬಂದನು.

೧೬. ಅವನು ಬಂದು ಅರಮನೆಯ ಬಾಗಿಲಿನಲ್ಲಿ ರಾಜನ ಬರುವಿಕೆಯನ್ನು ಎದುರು ನೋಡುತ್ತಿದ್ದನು. ರಾಜನಿಗೆ ಆ ವೈಶ್ಯನು ತಿಳಿದಿದ್ದರೂ ಬಾಗಿಲು ಕಾಯುವ ಆಳು ಅವನ ಪರಿಚಯವನ್ನು ರಾಜನಿಗೆ ಮಾಡಿಸಿದನು.

೧೭–೨೧. ರಾಜನು ಏತಕ್ಕೆ ಬಂದಿದ್ದೀಯೆ ? ಎಂದು ಕೇಳಲು ವೈಶ್ಯನು ಸ್ಪಷ್ಟವಾಗಿ ಹೇಳಿದನು. ಸ್ವಾಮಿ ಈ ಕುದುರೆಯು ಮೂರು ಲೋಕದಲ್ಲಿಯೂ ಶ್ರೇಷ್ಠವಾದುದೆಂದು ಇದನ್ನು ತಂದಿದ್ದೇನೆ. ಇದು ಬಹು ಬೆಲೆಯುಳ್ಳದ್ದು. ಉತ್ತಮವಾದ ಲಕ್ಷಣಗಳಿಂದ ಕೂಡಿಕೊಂಡಿದೆ. ಎನ್ನಲು ಆಗ ರಾಜನು ಪಕ್ಕದಲ್ಲಿರುವವರ ಮುಖಗಳನ್ನು ನೋಡಿ ಆ ವೈಶ್ಯನಿಗೆ ಕುದುರೆಯನ್ನು ತೆಗೆದುಕೊಂಡು ಬರಲು ಹೇಳಿದನು. ಆ ಕುದುರೆಯ ಲಕ್ಷಣವು ಅಶ್ವಲಕ್ಷಣವನ್ನು ಬಲ್ಲವರು ತಲೆಯನ್ನು

ಶೂರಾಣಾಮಥ ಚೇತಾಂಸಿ ಮುಹುರುತ್ಸಾಹಯನ್ನಹಾ೯ |
ಅಖಂಡಮೇದಿನೀವೇಗಬಹುಸಂಕ್ರಮಣಾರ್ಜಿತಂ ॥ ೨೦ ॥

ಲಾಲಾಫೇನಚ್ಛಲೇನಾಸೌ ವಮ೯ ಶುಭ್ರತರಂ ಯಶಃ |
ಉಚ್ಚೈಶ್ರವಸ್ತುಲಾಂ ಭೇಜೇ ಗುಣಸಾಮ್ಯೇನ ತತ್ವತಃ ॥ ೨೧ ॥

ವಿವೃಣ್ವನ್ನತಿತೇಜಶ್ಚ ಹ್ರಿಯೇವಾನತಕಂಧರಃ |
ಚಾಮರೈರಿಂದುಧವಳೈರ್ವಿಜ್ಯಮಾನೋ ನಿರಂತರಂ ॥ ೨೨ ॥

ದುಗ್ಧಾಂಭೋನಿಧಿಲೋಲೈಃ ಸ್ವೈಃ ಶ್ವಾಸೈರುಚ್ಚೈಶ್ಶ್ರವಾ ಇವ |
ನೀಲಾತಪತ್ರಯುಗಳಘನಚ್ಛಾಯಾತಳಶ್ರಿಯಾ ॥ ೨೩ ॥

ಬಿಭ್ರಾಣೋ ವಾರಿವಾಲೀಢಹಿಮಾದ್ರಿಶಿಖರಶ್ರಿಯಂ |
ಮೇದಿನೀಮಂಡಲಸ್ಪರ್ಶಸಂಕ್ರಾಂತಮಿವ ಪಾವಕಂ ॥ ೨೪ ॥

ಮುಹುರುದ್ಧಾರಯ೯ ಧುಸ್ವ೯ ಬಂಧುರಂ ಕಂಧರಾತಟಂ ।
ಈರಯ೯ ವೈರಿಣಸ್ಸರ್ವಾ೯ ವ್ಯಾಹರನ್ ವೈ ಜಯಶ್ರಿಯಂ ॥ ೨೫ ॥

---

ತೂಗುವಂತೆ ಇದ್ದಿತು. ಶೂರರ ಮನಸ್ಸುಗಳನ್ನು ಉತ್ಸಾಹಪಡಿಸುವಂತಿದ್ದಿತು. ಅಖಂಡವಾದ ಭೂಮಿಯನ್ನೇ ಹಾರುವಂತಹ ವೇಗವನ್ನು ಸಂಪಾದಿಸಿದ್ದಿತು. ಜೊಲ್ಲಿನ ನೊರೆಯೆಂಬ ನೆವದಿಂದ ಬೆಳ್ಳಗಿರುವ ಯಶಸ್ಸನ್ನು ಉಗುಳುತ್ತಿದ್ದಿತು. ಗುಣಗಳ ಸಾಮ್ಯದಿಂದ ಉಚ್ಚೈಶ್ರವಸ್ಸಿಗೆ ಸಮತೆಯನ್ನು ಹೊಂದಿದ್ದಿತು.

೨೨-೨೬. ತನ್ನ ಬಹುವಾದ ತೇಜಸ್ಸನ್ನು ಇತರರು ಹೊಗಳುತ್ತಿದ್ದರೆ ತಾನು ನಾಚಿಕೆಯಿಂದ ಕತ್ತನ್ನು ಬಗ್ಗಿಸಿಕೊಂಡಿದೆಯೋ ಎಂಬಂತಿದ್ದಿತು. ಚಂದ್ರನಂತೆ ಬೆಳ್ಳಗಿರುವ ಚಾಮರಗಳಿಂದ ಅದನ್ನು ಬೀಸುತ್ತಿದ್ದರು. ಕ್ಷೀರಸಮುದ್ರದ ಚಂಚಲವಾದ ಅಲೆಗಳಿಂದ ಕೂಡಿಕೊಂಡಿರುವ ಉಚ್ಚೈಶ್ರವಸ್ಸಿನಂತೆ ಆ ಚಾಮರಗಳನ್ನು ಬೀಸುತ್ತಿದ್ದರೆ ಅದು ಕಾಣುತ್ತಿದ್ದಿತು. ಅದರ ಮೇಲೆ ನೀಲವಾದ ಛತ್ರಿಯನ್ನು ಹಿಡಿದಿದ್ದರು. ಇದನ್ನು ನೋಡಿದರೆ ಹಿಮವತ್ಪರ್ವತವು ಮೇಘವನ್ನು ತಲೆಯ ಮೇಲೆ ಇಟ್ಟುಕೊಂಡಿರುವಂತಿದ್ದಿತು. ನಡೆಯುತ್ತಿದ್ದರೆ ಭೂಮಿಯಿಂದ ಬೆಂಕಿಯು ಬರುತ್ತಿದ್ದಿತು. ಇದನ್ನು ನೋಡಿದರೆ ಭೂಮಿಯಲ್ಲಿನ ಅಗ್ನಿಯನ್ನು ಮೇಲಕ್ಕೆತ್ತುತ್ತದೆಯೋ ಎಂಬಂತಿದ್ದಿತು. ಉದ್ದವಾದ ಕತ್ತನ್ನು ಬಾರಿಬಾರಿಗೂ ಕೊಡವುತ್ತಿದ್ದಿತು. ಎಲ್ಲಾ ವೈರಿಗಳನ್ನೂ ತಿರಸ್ಕರಿಸುತ್ತ ಹೇಷಾರವದಿಂದ ದಿಕ್ಕು

ಹೇಷಾರವೇಣ ಗುರುಣಾ ದಿಕ್ಷು ಪ್ರಖ್ಯಾಪಯನ್ ಯಶಃ ।
ಸತ್ತ್ವಸ್ಯ ರಾಶಿರತ್ಯುಚ್ಚೈರ್ಗತೀನಾಮಿವ ಶೇವಧಿಃ ॥ ೨೬ ॥

ರೂಪಸ್ಯ ನಿಲಯಂ ಸಾಕ್ಷಾಲ್ಲಕ್ಷಣಾನಾಂ ಪಯೋನಿಧಿಃ ।
ಆನೀತೋ ವಣಿಜಾ ವಾಜೀ ರಾಜ್ಞಾ ಚ ಸಮಪೃಶ್ಯತ ॥ ೨೭ ॥

ಬಹುಧಾ ವರ್ಣಿತೋಮಾತ್ಯೈರಶ್ವಲಕ್ಷಣವೇದಿಭಿಃ ।
ಯಥೇಚ್ಛಂ ವಣಿಜೋದೀರ್ಣಂ ಸ್ವರ್ಣಂ ದತ್ವಾ ಮಹೀಪತಿಃ ॥ ೨೮ ॥

ಜಗ್ರಾಹ ತುರಗಂ ವೇಗಾದಸೀಮಾನಂದನಿರ್ಭರಃ ।
ತತೋಶ್ವಪಾಲಮಾಹೂಯ ಭೂಪಾಲಸ್ತಂ ನಿರೂಪ್ಯ ಚ ॥ ೨೯ ॥

ವಿಸರ್ಜಿತಸಭಾಲೋಕೋ ಗೃಹಾನ್ತಮಗಮನ್ನೃಪಃ ।
ಅನೇಕಧಾ ಸಮಾಪೃಷ್ಟೋ ಮಹೀಪಾಲರಣಾಂಗಣೇ ॥ ೩೦ ॥

ಶಸ್ತ್ರವ್ರಣಕಿಣಶ್ರೇಣೀಭೂಷಣಂ ಸತ್ತ್ವಸನ್ನಿಭಂ ।
ಏಕದಾ ಮೃಗಯಾಂ ಖೇಲನ್ ಕುತೂಹಲರಸೋನ್ಮನಾಃ ॥ ೩೧ ॥

---

ದಿಕ್ಕುಗಳಲ್ಲಿ ತನ್ನ ಯಶಸನ್ನು ಹರಡುತ್ತಿರುವಂತಿದ್ದಿತು. ಜಯಶ್ರೀಯನ್ನು ಮಾತನಾಡಿಸುವಂತಿದ್ದಿತು. ಬಲದ ರಾಶಿಯಂತಿದ್ದಿತು. ಗಮನಗಳಿಗೆ ಗಂಟೆಂಬಂತಿದ್ದಿತು.

೨೭. ರೂಪುಗಳಿಗೆ ಮನೆಯು. ಲಕ್ಷಣಗಳಿಗೆ ಸಮುದ್ರವು. ಇಂತಹ ಕುದುರೆಯನ್ನು ಆ ವರ್ತಕನು ತಂದನು. ಅದನ್ನು ರಾಜನು ನೋಡಿದನು.

೨೮. ಕುದುರೆಯ ಲಕ್ಷಣಗಳನ್ನು ಬಲ್ಲ ಮಂತ್ರಿಗಳು ಅನೇಕ ರೀತಿಯಿಂದ ವರ್ಣಿಸಿದರು. ಅಂತಹ ಕುದುರೆಯನ್ನು ವೈಶ್ಯನು ಹೇಳಿದುದಕ್ಕಿಂತಲೂ ಹೆಚ್ಚಾದ ಹಣವನ್ನು ಕೊಟ್ಟು ರಾಜನು ಕೊಂಡುಕೊಂಡನು.

೨೯-೩೭. ಈ ರೀತಿ ಹಣವನ್ನು ಕೊಟ್ಟು ಆ ಕುದುರೆಯನ್ನು ಬಹು ಸಂತೋಷದಿಂದ ಕೊಂಡುಕೊಂಡನು. ಅನಂತರ ಕುದುರೆ ಕಾಪಾಡುವವನನ್ನು ಬರಹೇಳಿ ಸಭೆಯರನ್ನು ಕಳುಹಿಸಿ ಅವನೊಡನೆ ಒಳಕ್ಕೆ ಹೋದನು ಶಸ್ತ್ರಗಳ ಗಾಯದಿಂದ ಜಡ್ಡು ಹಿಡಿದಿರುವ ದೇಹವುಳ್ಳ ಆತನನ್ನು ಕುರಿತು ರಾಜನು ತನ್ನ ಮನೆಯೊಳಗೆ ಅನೇಕ ರೀತಿಯಾಗಿ ಅವರ ವಿಷಯವನ್ನು ಕೇಳಿದನು. ಒಂದು ಸಾರಿ ಆಸೆಯಿಂದ ಬೇಟೆಯಾಡಲು ಅಪೇಕ್ಷಿಸಿ ಆ ಕುದುರೆಯ ಮೇಲೆ

ತಮಾರುಹ್ಯ ಮಹೀಪಾಲೋ ವನಂ ಪ್ರತಿ ವಿಶೇಶ ಹ ।
ವಿಸೃಜ್ಯ ಸೈನಿಕಾನ್ ಪೃಷ್ಠೇ ಧಾವತಃ ಪರಿತೋಖಿಲಾನ್ ॥ ೩೨ ॥

ಆಕೃಷ್ಯಮಾಣೋ ಹರಿಣ್ಯೈಃ ಪಿಪಾಸಾಕುಲಿತೋ ಭವತ್ ।
ತತ ಉತ್ತೀರ್ಯ ತುರಗಾಜ್ಜಲಮನ್ವೇಷಯನ್ನೃಪಃ ॥ ೩೩ ॥

ಬಧ್ವಾಶ್ವಂ ತರುಶಾಖಾಯಾಮಾರುರೋಹ ಶಿಲಾತಲಂ ।
ಗೀತಾಪಂಚದಶಾಧ್ಯಾಯಶ್ಲೋಕಾರ್ಧಂ ಲಿಖಿತಂ ನೃಪಃ ॥ ೩೪ ॥

ಪಾತಿತಂ ಮರುತಾ ತತ್ರ ಪತ್ರಖಂಡೇ ವ್ಯಲೋಕಯತ್ ।
ಪತ್ರಂ ವಾಚಯತೋ ರಾಜ್ಞಃ ಶ್ರುತ್ವಾ ಗೀತಾಕ್ಷರಾವಳೀ ॥ ೩೫ ॥

ತತೋ ಮುಕ್ತಿಪದಂ ಲೇಭೇ ತುರಂಗಸ್ತ್ವರಯಾಪತತ್ ।
ತತೋ ಗ್ರಂಥಿಂ ಸಮಾಚ್ಛಿದ್ಯ ಪಲ್ಯಾಣಮವತಾರ್ಯ ಚ ॥ ೩೬ ॥

ಉತ್ಥಾಪ್ಯಮಾನಸ್ತುರಗೋ ರಾಜ್ಞಾ ನೋತ್ಥಿತವಾನ್ ಭುವಃ ।
ಕಶಾಘಾತೈರ್ಬಹುವಿಧಂ ತಾಡಿತೋಪಿ ಜಡೀಕೃತಃ ॥ ೩೭ ॥

---

ಕುಳಿತುಕೊಂಡು ಕಾಡಿಗೆ ಹೋದನು. ಓಡಿಬರುತ್ತಿರುವ ಸೈನಿಕರನ್ನು ಹಿಂದುಗಡೆಯಲ್ಲಿಯೇ ಬಿಟ್ಟು ಬಂದು ಜಿಂಕೆಯೊಂದನ್ನು ಬೆನ್ನಟ್ಟಿ ಹೋಗುತ್ತ ಕೊನೆಗೆ ಬಾಯಾರಿದವನಾದನು. ಕುದುರೆಯಿಂದ ಕೆಳಕ್ಕೆ ಇಳಿದು ಆ ರಾಜನು ನೀರನ್ನು ಹುಡುಕುತ್ತ ಆ ಕುದುರೆಯನ್ನು ಒಂದು ಗಿಡದ ಕೊಂಬೆಗೆ ಕಟ್ಟಿ ಅಲ್ಲಿದ್ದ ಒಂದು ಬಂಡೆಯ ಮೇಲಕ್ಕೆ ಹತ್ತಿದನು. ಗೀತೆಯ ಹದಿನೈದನೆಯ ಅಧ್ಯಾಯದ ಒಂದು ಶ್ಲೋಕದ ಅರ್ಧವನ್ನು ಬರೆದು ಇದ್ದ ಒಂದು ಎಲೆಯ ಚೂರನ್ನು ಅಲ್ಲಿ ನೋಡಿದನು. ಆಗ ರಾಜನು ಆ ಗೀತೆಯ ಅರ್ಧ ಶ್ಲೋಕವನ್ನು ಅದರಲ್ಲಿ ಓದುತ್ತಿರಲು ಅದನ್ನು ಕೇಳಿ ಆ ಕುದುರೆಯು ಶೀಘ್ರವಾಗಿ ಕೆಳಗೆ ಬಿದ್ದು ಮುಕ್ತಿಯನ್ನು ಹೊಂದಿತು. ಆಗ ಆ ಕುದುರೆಯನ್ನು ಕಟ್ಟಿದ್ದ ಗಂಟನ್ನು ಬಿಚ್ಚಿ ಅದರ ಮೇಲಿದ್ದ ಜೀನನ್ನು ತೆಗೆದು ಅದನ್ನು ಬಹು ರೀತಿಯಿಂದ ರಾಜನು ಮೇಲಕ್ಕೆ ಎಬ್ಬಿಸಿದನು. ಏಳಲೇ ಇಲ್ಲ. ಅನಂತರ ಚಾವಟಿಯಿಂದ ಬಹುವಾಗಿ ಹೊಡೆದರೂ ಏಳದೆ ಜಡವಾಗಿಯೇ ಬಿದ್ದಿದ್ದಿತು.

ತತಸ್ಸರಭಭೇರುಂಡೋ ನೃಪಮಾನಮ್ಯ ಸತ್ವರಂ ।
ದಿವ್ಯಂ ವಿಮಾನಮಾರುಹ್ಯ ಜಗಾಮ ತ್ರಿದಶಾಲಯಂ ॥ ೩೮ ॥

ತತೋ ಗಿರಿಂ ಸಮಾರುಹ್ಯ ದದರ್ಶಾಶ್ರಮಮುತ್ತಮಂ ।
ಪುನ್ನಾಗಕದಳೀಚೂತನಾಳಿಕೇರಸಮನ್ವಿತಂ ॥ ೩೯ ॥

ದ್ರಾಕ್ಷೇಕ್ಷುವಾಟಿಕಾಪೂಗನಾಗಕೇಸರಚಂಪಕಂ ।
ಖೇಲತ್ಕಲಭಸಾರಂಗಂ ನೃತ್ಯತ್ಕೇಕಿಕುಲಂ ನೃಪಃ ॥ ೪೦ ॥

ಪ್ರಣಿಪತ್ಯ ದ್ವಿಜಸ್ಮಾನಮುಟಜಾಭ್ಯನ್ತರ ಸ್ಥಿತಂ ।
ಪಪ್ರಚ್ಛ ಪರಯಾ ಭಕ್ತ್ಯಾ ಮುಕ್ತಸಂಸಾರವಾಸನಂ ॥ ೪೧ ॥

॥ ರಾಜೋವಾಚ ॥

ತುರಗೋ ನಿರಗಾತ್ಸ್ವರ್ಗಂ ಹೇತುನಾ ಕೇನ ಮೇ ವದ ॥ ೪೨ ॥

---

೩೮. ಆಗ ಆ ಶರಭಭೇರುಂಡನು ಅವಸರದಿಂದ ರಾಜನಿಗೆ ನಮಸ್ಕರಿಸಿ ದಿವ್ಯವಾದ ವಿಮಾನವನ್ನು ಹತ್ತಿ ಅದರಲ್ಲಿ ಕುಳಿತು ಸ್ವರ್ಗಕ್ಕೆ ಹೋದನು.

೩೯-೪೦. ಆ ಮೇಲೆ ಅವನು ಬೆಟ್ಟವನ್ನು ಹತ್ತಿ ನೋಡಲು ಒಂದು ಆಶ್ರಮವನ್ನು ನೋಡಿದನು. ಅದು ಪುನ್ನಾಗ, ಬಾಳೆ, ಮಾವು, ತೆಂಗುಗಳಿಂದ ಶೋಭಿಸುತ್ತಿದ್ದಿತು ದ್ರಾಕ್ಷಿ ಕಬ್ಬುಗಳ ತೋಟಗಳಿಂದಲೂ, ಅಡಕೆ, ನಾಗ ಕೇಸರ, ಸಂಪಿಗೆಗಳಿಂದಲೂ ಕೂಡಿದ್ದಿತು. ಆನೆ ಸಾರಗಗಳು ಆಟವಾಡುತ್ತಿದ್ದುವು. ನವಿಲುಗಳು ಕುಣಿಯುತ್ತಿದ್ದುವು.

೪೧. ಆಗ ಅಲ್ಲಿಗೆ ಹೋಗಿ ಪರ್ಣಶಾಲೆಯಲ್ಲಿರುವ ಬ್ರಾಹ್ಮಣನನ್ನು ನೋಡಿ ಅವನಿಗೆ ನಮಸ್ಕರಿಸಿ ಸಂಸಾರದ ವಾಸನೆಯನ್ನೇ ಬಿಟ್ಟಿರುವ ಆತನನ್ನು ಕುರಿತು ಇಂತೆಂದು ಕೇಳಿದನು.

೪೨. ರಾಜನು ಹೇಳಿದನು-ಎಲೈ ಋಷಿಯೇ ! ಯಾವ ಕಾರಣದಿಂದ ಈ ಕುದುರೆಯು ಸ್ವರ್ಗವನ್ನು ಹೊಂದಿತು ?

॥ ಶ್ರೀ ಶಿವ ಉವಾಚ ॥

ಇತ್ಯಾಕರ್ಣ್ಯ ವಚೋ ರಾಜ್ಞೋ ದ್ವಿಜನ್ಮಾ ವಾಚಮೂಚಿವಾನ್ ।
ತ್ರಿಕಾಲದರ್ಶೀ ಮಂತ್ರಜ್ಞೋ ವಿಷ್ಣುಶರ್ಮಾ ಮಹತ್ತರಃ ॥ ೪೩ ॥

॥ ದ್ವಿಜನ್ಮೋವಾಚ ॥

ಆಸೀತ್ಸೇನಾಪತಿಃ ಪೂರ್ವಂ ಭೇರುಂಡಸ್ತವ ಭೂಪತೇ ।
ತ್ವಾಂ ನಿಹತ್ಯ ಸಮಂ ಪುತ್ರೈಃ ಕರ್ತುಂ ರಾಜ್ಯಂ ಸಮುದ್ಯತಃ ॥ ೪೪ ॥

ತಾವದ್ವಿಷೂಚಿಕಾರೋಗಾತ್ ಕಾಲಧರ್ಮಮವಾಪ ಸಃ ।
ಕಾಲೇನ ಬಹುನಾ ಪ್ರೇತ್ಯ ತತ್ಪಾಪಾತ್ತುರಗೋಽಭವತ್ ॥ ೪೫ ॥

ಅಥ ಪಂಚದಶಾಧ್ಯಾಯಶ್ಲೋಕಾರ್ಧಂ ಲಿಖಿತಂ ಕ್ವಚಿತ್ ।
ಮಚ್ಛಿಷ್ಯೇಣ ಮುದಾ ಕ್ವಾಪಿ ಗತೇನ ವನಮಧ್ಯತಃ ॥ ೪೬ ॥

ತ್ವತ್ತೋ ವಾಚಯತಾ ಶ್ರುತ್ವಾ ನಿರಗಾತ್ತುರಗೋ ದಿವಂ ।
ಅನೇಕಜನ್ಮಪಾಪೌಘಾನ್ಮುಕ್ತೋ ಜನ್ಮಕೃತಾದಸೌ ॥ ೪೭ ॥

---

೪೩. ಶ್ರೀ ಶಿವನು ಹೇಳಿದನು-ರಾಜನು ಇಂತೆನ್ನಲು, ಆ ಭೂತಭವಿಷ್ಯ ವ್ವರ್ತಮಾನಗಳನ್ನು ಬಲ್ಲ, ಮಂತ್ರದ ಸ್ವರೂಪತ್ನು ತಿಳಿದಿರುವ ಉತ್ತಮನಾದ ಆ ವಿಷ್ಣುಶರ್ಮನೆಂಬ ಬ್ರಾಹ್ಮಣನು ಅವನಿಗೆ ಇಂತೆಂದನು.

೪೪. ಬ್ರಾಹ್ಮಣನು ಹೇಳಿದನು-ಎಲೈ ದೊರೆಯೇ! ಹಿಂದೆ ನಿನಗೆ ಶರಭ ಭೇರುಂಡನೆಂಬ ಸೇನಾಪತಿಯಿದ್ದನು. ಅವನೇ ಇವನು. ಅವನು ನಿನ್ನನ್ನೂ ನಿನ್ನ ಮಕ್ಕಳನ್ನೂ ಕೊಂದು ರಾಜ್ಯಭಾರ ಮಾಡಬೇಕೆಂದು ಪ್ರಯತ್ನಪಟ್ಟನು.

೪೫. ಅಷ್ಟರಲ್ಲಿಯೇ ಶಿಡುಬಿನ ರೋಗದಿಂದ ಅವನು ಸತ್ತನು. ಅನಂತರ ಆ ಪಾಪದ ಫಲವಾಗಿ ಕುದುರೆಯಾಗಿ ಹುಟ್ಟಿದನು.

೪೬-೪೭. ನನ್ನ ಶಿಷ್ಯನು ಕಾಡಿನಲ್ಲಿ ಎಲ್ಲಿಯೋ ಹೋಗಿದ್ದಾಗ ಗೀತೆಯ ಹದಿನೈದನೆಯ ಅಧ್ಯಾಯದ ಶ್ಲೋಕದ ಅರ್ಧವನ್ನು ಎಲೆಯಲ್ಲಿ ಬರೆದು ಬಿಸಾಡಿದ್ದನು. ಅದು ನಿನ್ನ ಕೈಗೆ ಸಿಕ್ಕಲು ಅದನ್ನು ನೀನು ಓದಿದೆ. ಅದನ್ನು ಕೇಳಿ ಆ ಕುದುರೆಯು ಅನೇಕ ಜನ್ಮದ ಪಾಪಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಹೊಂದಿತು.

॥ ಶ್ರೀ ಶಿವ ಉವಾಚ ॥

ತತಸ್ಸಮಾಗತೈಸ್ತತ್ರ ಪರಿವಾರಜನೈರ್ವೃತಃ ।
ಪ್ರಣಿಪತ್ಯ ದ್ವಿಜನ್ಮಾನಂ ಹೃಷ್ಟೋ ರಾಜಾ ವಿನಿರ್ಗತಃ ॥ ೪೮ ॥

ಪತ್ರಂ ತದೇವ ಲಿಖಿತಂ ಗೀತಾಪಂಚದಶಾಕ್ಷರಂ ।
ವಾಚಯನ್ ಸ ಮಹೀಪಾಲೋ ಹರ್ಷಸಂಫುಲ್ಲಲೋಚನಃ ॥ ೪೯ ॥

ಅಭಿಷಿಚ್ಯ ನಿಜಂ ಪುತ್ರಂ ಮಂತ್ರಿವಿನ್ಮಂತ್ರಿಭಿಸ್ಸಮಂ ।
ಸಿಂಹಾಸನೇ ಸಿಂಹಬಲಂ ಮುಕ್ತಿಮಾಪ ವಿಶುದ್ಧಧೀಃ ॥ ೫೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಗೀತಾ ಮಾಹಾತ್ಮ್ಯೇ ಪಂಚದಶಾಧ್ಯಾಯ ಮಾಹಾತ್ಮ್ಯಂ
ನಾಮ ಪಂಚಾಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೪೮. ಶ್ರೀ ಶಿವನು ಹೇಳಿದನು–ಅಷ್ಟರಲ್ಲಿಯೇ ಅವನ ಪರಿವಾರದ ಜನರು ಅಲ್ಲಿಗೆ ಬಂದರು. ಆಗ ರಾಜನು ಆ ಋಷಿಗೆ ನಮಸ್ಕರಿಸಿ ಸಂತೋಷದಿಂದ ಹೊರಟು ಹೋದನು.

೪೯-೫೦. ಗೀತೆಯ ಹದಿನೈದನೆಯ ಅಧ್ಯಾಯದ ಅಕ್ಷರವನ್ನು ಬರೆದಿದ್ದ ಆ ಪತ್ರವನ್ನೇ ಆ ರಾಜನು ಓದುತ್ತ ಸಂತೋಷಗೊಳ್ಳುತ್ತಿದ್ದನು. ಅನಂತರ ಮಂತ್ರಿಗಳೊಡನೆ ಆಲೋಚಿಸಿ ಪರಾಕ್ರಮಶಾಲಿಯಾದ ತನ್ನ ಮಗನನ್ನು ಸಿಂಹಾಸನದಲ್ಲಿ ಅಭಿಷೇಕ ಮಾಡಿ ಅದನ್ನೇ ಓದುತ್ತಾ ಮುಕ್ತಿಯನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಗೀತಾ ಮಹಿಮೆಯಲ್ಲಿ ಹದಿನೈದನೆಯ ಅಧ್ಯಾಯದ ಮಹಿಮೆ
ಎಂಬ ನೂರ ಎಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಡಶೀತ್ಯಧಿಕಶತತಮೋಽಧ್ಯಾಯಃ ॥



॥ ಈಶ್ವರ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಷೋಡಶಾಧ್ಯಾಯಗೌರವಂ ।**
**ಆಕರ್ಣಯ ಕುರಂಗಾಕ್ಷಿ ಹರ್ಷೋತ್ಕಂಠಪ್ರವರ್ಷಿಣಿ ॥ ೧ ॥**

**ಅಸ್ತಿ ಸೌರಾಷ್ಟ್ರಕಂ ನಾಮ್ನಾ ಪುರಂ ಗುರ್ಜರಮಂಡಲೇ ।**
**ತತ್ರಾಸೀತ್ ಖಡ್ಗಬಾಹುಶ್ಚ ರಾಜಾ ಚೇಂದ್ರ ಇವಾಪರಃ ॥ ೨ ॥**

**ಯದೀಯಕುಸುಮಾಸಾರೇ ಮಾಲಾಸುರಭಿತೋದರೇ ।**
**ವಾರಾಂನಿಧೌ ಹರಿಸ್ಸ್ವಾಸ್ಥ್ಯಾದಶೇತ ಸಹ ಪದ್ಮಯಾ ॥ ೩ ॥**

---

## ನೂರ ಎಂಭತ್ತಾರನೆಯ ಅಧ್ಯಾಯವು



೧. ಈಶ್ವರನು ಹೇಳಿದನು-ಇನ್ನುಮೇಲೆ ಹದಿನಾರನೆಯ ಅಧ್ಯಾಯವ ಗೌರವವನ್ನು ಹೇಳುತ್ತೇನೆ. ಎಲೈ ಹರಿಣಾಕ್ಷಿಯೆ! ಅದರಲ್ಲಿ ನೀನು ಸಂತೋಷ ವನ್ನು ತೋರಿಸುತ್ತಿದ್ದೀಯೆ. ಕೇಳು.

೨. ಗುಜರಾತು ದೇಶದಲ್ಲಿ ಸೌರಾಷ್ಟ್ರಕವೆಂಬ ಊರೊಂದಿರುವುದು. ಅಲ್ಲಿ ಖಡ್ಗಬಾಹುವೆಂಬ ರಾಜನು ಇಂದ್ರನಂತೆ ರಾಜ್ಯವಾಳುತ್ತಿದ್ದನು.

೩. ಆ ಪಟ್ಟಣದಲ್ಲಿ ಬಿಡುತ್ತಿರುವ ಹೂವುಗಳ ವಾಸನೆಯಿಂದಲೂ ಆ ಹೂವಿನ ಮಕರಂದದಿಂದಲೂ ತುಂಬಿರುವ ನದಿಗಳು ಸಮುದ್ರಕ್ಕೆ ಬಿದ್ದು ಅದರಿಂದ ಸುವಾಸನೆಯುಳ್ಳ ಸಮುದ್ರದಲ್ಲಿ ಹರಿಯು ಲಕ್ಷ್ಮಿಯೊಡನೆ ಸುಖವಾಗಿ ಮಲಗಿದ್ದಾನೆ.

ಯದೀಯಕೀರ್ತಿಕರ್ಪೂರಕಣಾ ಭಾಂತಿ ನಭೋಂಗಣೇ ।
ಕೀರ್ಣಾ ವೈರಿಕೃತಶ್ವಾಸಮಾರುತೈಸ್ತಾರಕಾಚ್ಛಲಾತ್ ॥ ೪ ॥

ಯಸ್ಯಾಸಿಧಾರಾತೀರ್ಥೇಷು ಸ್ನಾತಾ ವೈರಿಗಣಾ ಭೃಶಂ ।
ನಾವರ್ತಂತೇ ದಿವೋದ್ಯಾಪಿ ಸ್ವರ್ಗಸ್ತ್ರೀವಾಗ್ವಿಮೋಹಿತಾಃ ॥ ೫ ॥

ತಸ್ಯಾರಿಮರ್ದನೋ ನಾಮ ಮದಹಸ್ತೀ ಮದೋದ್ಧತಃ
ಮದಾಂಬುಧಾರಾಸಲಿಲಗುಂಜದ್ಭ್ರಮರಮಂಡಲಃ ॥ ೬ ॥

ಕಪೋಲಫಲಕೋತ್ತೀರ್ಣಮದಧಾರಾಜಲಾನಿಲಃ ।
ಬಭೌ ಯೋ ನಿರ್ಝರೋಪ್ಯಾಗ್ರೈರಂಜನಾದ್ರಿರಿವೋಜ್ಜ್ವಲೈಃ ॥ ೭ ॥

ಯಸ್ಯಾಂಗೇಷು ವ್ಯರಾಜಂತ ಚಾಮರಾಶ್ಚಂದ್ರಿಕೋಜ್ಜ್ವಲಾಃ ।
ಕಿರಣಾ ಇವ ಶೀತಾಂಶೋಃ ಪತಿತಾಃ ಕಾನನೋದರೇ ॥ ೮ ॥

---

೪. ಆ ರಾಜನ ಕೀರ್ತಿಯೆಂಬ ಕರ್ಪೂರದ ಕಣಗಳು ವೈರಿಗಳ ನಿಟ್ಟುಸಿರಿನ ಗಾಳಿಯಿಂದ ಆಕಾಶದಲ್ಲಿ ನಕ್ಷತ್ರಗಳ ನೆಪದಿಂದ ಹರಡಿರುವಂತೆ ಕಾಣುತ್ತಿವೆ.

೫. ಆ ರಾಜನ ಅಸಿಧಾರೆಯೆಂಬ ತೀರ್ಥದಲ್ಲಿ ಸ್ನಾನಮಾಡಿದ ಶತ್ರುಗಳು ಸ್ವರ್ಗದ ಹೆಂಗಸರ ಮಾತಿಗೆ ಮೋಹಿತರಾಗಿ ಈಗಲೂ ಹಿಂದಿರುಗುವುದೇ ಇಲ್ಲ. (ಇವನು ಯುದ್ಧದಲ್ಲಿ ಕೊಂದ ಶತ್ರುಗಳು ಸ್ವರ್ಗವನ್ನು ಹೊಂದಿರುವರು)

೬. ಅವನ ಬಳಿಯಲ್ಲಿ ಅರಿಮರ್ದನವೆಂಬ ಒಂದು ಮದ್ದಾನೆಯಿದ್ದಿತು ಅದರ ಮದೋದಕಕ್ಕೆ ಆಸೆಪಟ್ಟು ಭ್ರಮರಗಳು ಬಂದು ಕೂಗುತ್ತಲಿದ್ದುವು.

೭. ಅದರ ಕಪೋಲದಲ್ಲಿ ಮದದ ನೀರು ಧಾರಾಕಾರವಾಗಿ ಹರಿಯುತ್ತಿದ್ದಿತು. ಇದನ್ನು ನೋಡಿದರೆ ನೀರಿನ ಝರಿಗಳು ಹರಿಯುತ್ತಿರುವ ಅಂಜನ ಪರ್ವತದಂತೆ ಆ ಆನೆಯು ಪ್ರಕಾಶಿಸುತ್ತಿದ್ದಿತು.

೮. ಅದಕ್ಕೆ ಕಟ್ಟಿದ್ದ ಚಾಮರಗಳು ಅದರ ಅವಯವಗಳಲ್ಲಿ ಚಂದ್ರಿಕೆಯಂತೆ ಪ್ರಕಾಶಿಸುತ್ತಿದ್ದುವು. ಮತ್ತು ಕಾಡಿನ ಮಧ್ಯದಲ್ಲಿ ಹರಡಿಕೊಂಡಿರುವ ಚಂದ್ರಿಕೆಯಂತೆಯೂ ಕಾಣುತ್ತಿದ್ದುವು.

ಸಿಂಧೂರಪಾಂಸುಪಟಲೈಃ ರಾಜತ್ಕುಂಭಸ್ಥಳೋ ಬಭೌ ।
ಯಸ್ಸಂಧ್ಯಾವಾರಿದವ್ಯಾಪ್ತಂ ವಿಯತ್ಖಂಡಮಿವ ಸ್ಫುರನ್ ॥ ೯ ॥

ಕದಾಚಿನ್ಮೋಚಯಿತ್ವಾ ತು ಶೃಂಖಲಾನ್ನಿಗಡಾನಪಿ ।
ಭಂಕ್ತ್ವಾ ಲೋಹದೃಢಂ ಸ್ತಂಭಂ ಪ್ರಸಹ್ಯ ನಿಶಿ ನಿರ್ಗತಃ ॥ ೧೦ ॥

ಆಧೋರಣಗಣಾನ್ ಸರ್ವಾನ್ ಪಾರ್ಶ್ವವಿಸ್ಫೂರ್ಜದಂಕುಶಾನ್ ।
ಕ್ರೋಧಾದವಗಣಯ್ಯೈವ ನಿಜಶಾಲಾಂ ಬಭಂಜ ಸಃ ॥ ೧೧ ॥

ತೀಕ್ಷ್ಣಾಂಕುಶಮುಖೈರ್ವಿಸ್ತ್ವಗ್ಘನ್ಯಮಾನೋಽಪಿ ವೈಣವೈಃ ।
ದಂಡೈಸ್ತ್ರ ತ್ರಾಸಯಾಮಾಸುಃ ಸಾದಿನೋ ನ ಮನಾಗಪಿ ॥ ೧೨ ॥

ತತೋ ರಾಜಾ ಸಮಾಲೋಕ್ಯ ನಿಶಮ್ಯೇದಂ ಕುತೂಹಲಂ ।
ತತ್ರ ಹಸ್ತಿಕಲಾಭಿಜ್ಞೈಃ ಸಮಂ ರಾಜಕುಮಾರಕೈಃ ॥ ೧೩ ॥

---

೯. ಚಂದ್ರವನ್ನು ಹಾಕಿರುವ ಆನೆಯ ಕುಂಭಸ್ಥಳವು ಸಂಧ್ಯಾಕಾಲದ ಮೋಡದಿಂದ ವ್ಯಾಪಿಸಿಕೊಂಡಿರುವ ಅಂತರಿಕ್ಷದ ಚೂರಿನಂತೆ ಪ್ರಕಾಶಿಸುತ್ತಿದ್ದಿತು.

೧೦. ಒಂದುಸಾರಿ ಆ ಆನೆಯು ಕಟ್ಟಿದ್ದ ಸರಪಣಿಯನ್ನೂ ಕಾಲಿಗೆ ಹಾಕಿದ್ದ ಬೇಡಿಯನ್ನೂ ಕಿತ್ತುಹಾಕಿ ಕಬ್ಬಿಣದ ಕಟ್ಟುವ ಕಂಬವನ್ನು ಮುರಿದು ಹಾಕಿ ರಾತ್ರಿಯಲ್ಲಿ ಹೊರಕ್ಕೆ ಹೊರಟಿತು.

೧೧. ಅಕ್ಕ ಪಕ್ಕಗಳಲ್ಲಿ ಅಂಕುಶಗಳನ್ನು ಹಿಡಿದುನಿಂತಿರುವ ಮಾವಟಿಗರ ಗುಂಪನ್ನು ಲೆಕ್ಕಿಸದೆ ಕೋಪದಿಂದ ಗಜಶಾಲೆಯನ್ನೆಲ್ಲಾ ಮುರಿದುಹಾಕಿತು.

೧೨. ಮೊನೆಯಾಗಿರುವ ಅಂಕುಶಗಳಿಂದಲೂ ಬಿದಿರು ದೊಣ್ಣೆಗಳಿಂದಲೂ ಪದೇಪದೆ ಹೊಡೆಯುತ್ತಿದ್ದರೂ ಆ ಮಾವಟಿಗರು ಆ ಆನೆಯನ್ನು ಹೆದರಿಸಲು ಸಾಧ್ಯವಾಗಲೇ ಇಲ್ಲ.

೧೩-೧೪. ಆಗ ಆ ರಾಜನು ಈ ಕುತೂಹಲವನ್ನು ಕೇಳಿ ಆನೆಯ ವಿಷಯವನ್ನು ತಿಳಿದಿರುವವರೊಡನೆಯೂ ರಾಜಕುಮಾರರೊಡನೆಯೂ ಬಂದು

ಅದೃಶ್ಯತ ಸಮಾಗತ್ಯ ರಾಜ್ಞಾ ದಂತಾವಳೋ ಬಲೀ ।
ನೋದಯನ್ನುದ್ಧಟಾಟೋಪೋ ಹೃತಾಟ್ಟಾಲಕಮಾಲಿಕಂ ॥ ೧೪ ॥

ದದೃಶುಸ್ತಂಮಹಾಭೀಮಂ ಪೌರಾ ದೂರತರಂ ಸ್ಥಿತಾಃ ।
ಗೋಪಾಯನ್ತಶ್ಶಿಶೂನ್ ಭೀತ್ವಾ ನಿವೃತ್ತಾನ್ಯಕುತೂಹಲಾಃ ॥ ೧೫ ॥

ರುದ್ಧೇಷು ತತ್ರ ಮಾರ್ಗೇಷು ಪಲಾಯನಪರೈರ್ಜನೈಃ ।
ವಾಸಿತೇಷು ತದೀಯೋಗ್ರದಾನಧಾರಂಬುಸೀಕರೈಃ ॥ ೧೬ ॥

ಸ್ನಾತ್ವಾ ತೇನಾಧ್ವನಾಯಾತಃ ಸರಸಃ ಕಶ್ಚನ ದ್ವಿಜಃ ।
ಗೀತಾನಾಂ ಷೋಡಶೋಧ್ಯಾಯಶ್ಲೋಕಾನ್ ಕತಿಪಯಾನ್ ಜಪನ್ ॥ ೧೭ ॥

ನಿಷಿಧ್ಯಮಾನೋ ಬಹುಧಾ ಪೌರೈರಾಧೋರಣೈರಪಿ ।
ಅಮನ್ಯಮಾನಃ ಕರಿಣೋ ಭೀತೋ ನ ಸ್ಖಲಿತಸ್ತತಃ ॥ ೧೮ ॥

---

ದಂತಗಳಿಂದ ಕೂಡಿದ ಬಲಿಷ್ಠವಾದ ಆ ಆನೆಯನ್ನು ನೋಡಿದನು. ಭಟರ ವೇಗವನ್ನು ತಿರಸ್ಕರಿಸುತ್ತ ಅಟ್ಟಗಳನ್ನು ಕಿತ್ತೊಗೆಯುತ್ತ ಬರುತ್ತಿರುವ ಭಯಂಕರವಾದ ಆ ಆನೆಯನ್ನು ಪುರಜನರು ನೋಡಿ ತಮ್ಮಮಕ್ಕಳನ್ನು ಕಾಪಾಡಿಕೊಳ್ಳುತ್ತ ಹೆದರಿಕೊಂಡು ದೂರದಲ್ಲಿ ನಿಂತು ಅದನ್ನೇ ನೋಡುತ್ತಿದ್ದರು.

೧೬-೧೮. ಓಡಿಹೋಗುತ್ತಿರುವ ಜನರಿಂದ ದಾರಿಯು ಕಟ್ಟಿಕೊಂಡಿರಲು ಮತ್ತು ಆ ಆನೆಯ ಮದೋದಕದಿಂದ ಆ ದಾರಿಯು ವಾಸನೆಯುಳ್ಳದ್ದಾಗಿರಲು ಆ ದಾರಿಯಲ್ಲಿ ಒಂದು ಸರೋವರದಿಂದ ಸ್ನಾನ ಮಾಡಿಕೊಂಡು ಒಬ್ಬ ಬ್ರಾಹ್ಮಣನು ಬಂದನು. ಆತನು ಗೀತೆಯ ಹದಿನಾರನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ಜಪಿಸುತ್ತ ಬರುತ್ತಿದ್ದನು ಹಾಗೆ ದಾರಿಯಲ್ಲಿ ಅವನು ಹೋಗುತ್ತಿರಲು ಜನರೂ ಮಾವಟಿಗರೂ ಬೇಡ ಬೇಡವೆಂದು ತಡೆಯುತ್ತಿದ್ದರೂ ಅದನ್ನು ಲಕ್ಷಿಸದೆ ಆ ಆನೆಗೂ ಹೆದರದೆ ಸ್ವಲ್ಪವೂ ಹಿಂಜರಿಯದೆ ಹೋಗುತ್ತಿದ್ದನು.

ಸ್ಫೂತ್ಕಾರೇಣ ಅನ್ವೃಣ್ವನ್ ಜನಾನ್ವಿಪರಿಮರ್ದಯನ್ ।
ಸ್ಪೃಶ್ಯ ದಾನಾಂಬುಜಂಬಾಲಮಾಯುಷ್ಮಾನ್ನಿರ್ಗತೋ ದ್ವಿಜಃ ॥ ೧೯ ॥

ತತೋ ಮಹಾನಭೂತ್ತತ್ರ ವಿಸ್ಮಯೋ ವಾಗಗೋಚರಃ ।
ಮಾನಸೇ ಭೂಮಿಪಾಲಸ್ಯ ಪೌರಾಣಾಮಪಿ ಪಶ್ಯತಾಂ ॥ ೨೦ ॥

ಸಮಾಹೂಯ ತತೋ ರಾಜಾ ಫುಲ್ಲರಾಜೀವಲೋಚನಃ ।
ತಮಪೃಚ್ಛದ್ದ್ವಿಜಂ ವಾಹಾದವತೀರ್ಯ ಪ್ರಣಮ್ಯ ಚ ॥ ೨೧ ॥

॥ ರಾಜೋವಾಚ ॥

ಅಲೌಕಿಕಮಿದಂ ವಿಪ್ರ ತ್ವಯಾದ್ಯಾಚರಿತಂ ಮಹತ್ ।
ಕೃತಾಂತಕಲ್ಪಾದೇತಸ್ಮಾದ್ಯಸ್ಮಾನ್ನಿರ್ಗತವಾನ್ ಗಜಾತ್ ॥ ೨೨ ॥

ಕಮರ್ಚಯಸಿ ಗೀರ್ವಾಣಂ ಕಂ ಮಂತ್ರಂ ಜಪಸಿ ಪ್ರಭೋ ।
ಕಾ ಚ ಸಿದ್ಧಿಸ್ತವಾಸ್ತೀತಿ ದ್ವಿಜಸ್ಮನ್ಸಮುದೀರಯ ॥ ೨೩ ॥

---

೧೯. ಆ ಬ್ರಾಹ್ಮಣನು ಫೂಫೂ ಎಂದು ಶಬ್ದಮಾಡುತ್ತ ಜನರನ್ನು ಅತ್ತಿತ್ತ ಓಡಿಸುತ್ತ ಹೋಗಿ ಆ ಆನೆಯ ಮದೋದಕದಿಂದ ನೆನೆದಿರುವ ಬಾಲವನ್ನು ಮುಟ್ಟುತ್ತಾ ಹೊರಟು ಹೋದನು.

೨೦. ಆಗ ಆ ರಾಜನ ಮತ್ತು ಅಲ್ಲಿ ನೋಡುವವರ ಮನಸ್ಸಿನಲ್ಲಿ ಹೇಳುವುದಕ್ಕಾಗದಿರುವಷ್ಟು ಒಂದು ದೊಡ್ಡ ಆಶ್ಚರ್ಯವುಂಟಾಯಿತು.

೨೧. ಹರ್ಷದಿಂದ ಕಣ್ಣನ್ನು ಬಿಟ್ಟುಕೊಂಡು ನೋಡುತ್ತಾ ಆ ರಾಜನು ಆ ಬ್ರಾಹ್ಮಣನನ್ನು ಕರೆದು ತಾನು ಕುದುರೆಯಿಂದ ಇಳಿದು ಅವನಿಗೆ ನಮಸ್ಕರಿಸಿ ಇಂತೆಂದು ಕೇಳಿದನು.

೨೨. ರಾಜನು ಹೇಳಿದನು-ಎಲೈ ಬ್ರಾಹ್ಮಣನೆ ! ನೀನು ಮಾಡಿದ ಕೆಲಸವು ಅದ್ಭುತವಾದುದು. ಯಮನಿಗೆ ಸಮವಾದ ಆನೆಯನ್ನು ಮುಟ್ಟಿ ಅಲ್ಲಿಂದ ಬಂದಿರುವೆಯಲ್ಲ !

೨೩. ಎಲೈ ಬ್ರಾಹ್ಮಣನೇ ! ಯಾವ ದೇವರನ್ನು ಪೂಜಿಸುತ್ತೀಯೆ ? ಅಥವಾ ಯಾವ ಮಂತ್ರವನ್ನು ಜಪಿಸುತ್ತೀಯೆ ? ನಿನಗೆ ಯಾವ ಸಿದ್ಧಿಯಿದೆ ? ಹೇಳು.

|| ದ್ವಿಜ ಉವಾಚ ||

ಗೀತಾನಾಂ ಷೋಡಶಾಧ್ಯಾಯಶ್ಲೋಕಾನ್ಕತಿಪಯಾನಹಂ ।
ಜಪಾಮಿ ಪ್ರತ್ಯಹಂ ಭೂಪ ತೇನೈತಾಃ ಸರ್ವಸಿದ್ಧಯಃ　　|| ೨೪ ||

|| ಶ್ರೀ ಶಿವ ಉವಾಚ ||

ತತೋ ವಿಹಾಯ ದ್ವಿರಪಕೌತೂಹಲರಸಂ ನೃಪಃ ।
ಆಜಗಾಮ ದ್ವಿಜನ್ಮಾನಮಾದಾಯ ನಿಜಮಂದಿರಂ　　|| ೨೫ ||

ಶುಭಂ ಮುಹೂರ್ತಸನ್ವೀಕ್ಷ್ಯ ತೋಷಯಿತ್ವಾ ದ್ವಿಜೋತ್ತಮಂ ।
ಸುವರ್ಣೈರ್ಲಕ್ಷಸಂಖ್ಯಾಕೈರ್ಗೀತಾಮಂತ್ರಮುಪಾದದೇ　　|| ೨೬ ||

ಗೀತಾನಾಂ ಷೋಡಶಾಧ್ಯಾಯಶ್ಲೋಕಾನ್ಕತಿಪಯಾನಪಿ ||
ಸಮಭ್ಯಸ್ಯ ತತೋ ರಾಜಾ ಗಜಮೋಕ್ಷಣಕೌತುಕೀ　　|| ೨೭ ||

ಅಥೈಕದಾ ವಿನಿರ್ಗತ್ಯ ಬಾಹ್ಯಾಳೀಂ ಸಹ ಸೈನಿಕೈಃ ।
ತಮೋಚಯದ್ರಾಜಾ ಮತ್ತಮಾಧೋರಣೈರ್ಗಜಂ　　|| ೨೮ ||

---

೨೪　ಬ್ರಾಹ್ಮಣನು ಹೇಳಿದನು-ಭಗವದ್ಗೀತೆಯ ಹದಿನಾರನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ನಾನು ನಿತ್ಯವೂ ಜಪಿಸುತ್ತೇನೆ. ಅದರಿಂದಲೇ ನನಗೆ ಎಲ್ಲಾ ಸಿದ್ಧಿಗಳೂ ಉಂಟಾಗಿವೆ.

೨೫. ಶ್ರೀ ಶಿವನು ಹೇಳಿದನು ಆಗ ಆ ರಾಜನು ಆನೆಯ ವಿಷಯವಾದ ಆಶ್ಚರ್ಯವನ್ನು ಬಿಟ್ಟು ಆ ಬ್ರಾಹ್ಮಣನನ್ನು ಕರೆದುಕೊಂಡು ತನ್ನ ಮನೆಗೆ ಬಂದನು

೨೬. ಆಗ ಒಳ್ಳೆಯ ಮುಹೂರ್ತವನ್ನು ನೋಡಿಕೊಂಡು ಆ ಬ್ರಾಹ್ಮಣನಿಗೆ ಬೇಕಾದುದನ್ನೂ ಲಕ್ಷ ಚಿನ್ನದ ನಾಣ್ಯಗಳನ್ನೂ ಕೊಟ್ಟು ಸಂತೋಷಪಡಿಸಿ ಆಗೀತಾಮಂತ್ರವನ್ನು ಉಪದೇಶಿಸಿಕೊಂಡನು.

೨೭! ಆ ಮೇಲೆ ಆ ಗೀತೆಯ ಹದಿನಾರನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ಆ ಆನೆಯನ್ನು ಸರಿಪಡಿಸುವುದಕ್ಕೆ ಅಭ್ಯಾಸಮಾಡಿದನು.

೨೮. ಒಂದು ಸಾರಿ ಆ ರಾಜನು ಸೈನಿಕರೊಡನೆ ಹೊರಗಡೆಗೆ ಹೋಗಿ ಮಾವಟಿಗರು ಕಷ್ಟಪಟ್ಟು ಸ್ವಾಧೀನದಲ್ಲಿಟ್ಟುಕೊಂಡಿದ್ದ ಆ ಆನೆಯನ್ನು ಆ ದುಷ್ಟತನದಿಂದ ಬಿಡಿಸಿದನು.

ವಿಸ್ಮರ್ಣ ಭೀತಿವಾಕ್ಯಾನಿ ರಾಜ್ಯಸೌಖ್ಯಮವಮಾನಯನ್ ।
ತೃಣವಜ್ಜೀವಿತಂ ರಾಜಾ ಗಜಸ್ಯಾಗ್ರೇವಿಶತ್ತತಃ ॥ ೨೯ ॥

ಆದಾಯಗಂಡಫಲಕಂ ಮದಪಂಕ್ತಿನಿರಂಕುಶಂ ।
ಅಯಯೌ ಮಂತ್ರವಿಶ್ವಾಸಾನ್ನೃಪಃ ಸಾಹಸಿಕಾಗ್ರಣೀಃ ॥ ೩೦ ॥

ರಾಹೋರಿವ ಮುಖಾದಿನ್ದುಃ ಕಾಲಾಸ್ಯಾದಿವ ಧಾರ್ಮಿಕಃ ।
ಸಾಧುಃ ಖಲಸ್ಯ ವದನಾತ್ ನೃಪೋ ನಿರಗಮದ್ಗಜಾತ್ ॥ ೩೧ ॥

ಆಗಶ್ಯ ನಗರಂ ರಾಜಾ ತ್ವಭಿಷಿಚ್ಯ ಕುಮಾರಕಂ ।
ಗೀತಾನಾಂ ಷೋಡಶಾಧ್ಯಾಯಾದವಾಪ ಪರಮಾಂ ಗತಿಂ ॥ ೩೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಷೋಡಶಾಧ್ಯಾಯ ಮಾಹಾತ್ಮ್ಯಂ ನಾಮ ಷಡಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೨೯–೩೧. ಹೆದರಿಕೆಯ ಮಾತುಗಳಿಗೆ ಗಮನಕೊಡದೆ ರಾಜ ಸೌಖ್ಯವನ್ನು ಮನ್ನಿಸದೆ ಜೀವವನ್ನು ಹುಲ್ಲಿಗಿಂತ ಕಡೆಯಾಗಿ ತಿಳಿದು ಆನೆಯ ಮುಂದೆ ಹೋಗಿ ನಿಂತನು. ಸಾಹಸಿಕರಲ್ಲಿ ಮೊದಲನೆಯವನಾದ ಈ ರಾಜನು ಆ ಮಂತ್ರದ ವಿಶ್ವಾಸದಿಂದ ಮದದ ನೀರಿನಿಂದ ಕೂಡಿರುವ ಅದರ ಗಲ್ಲ ಪ್ರದೇಶವನ್ನು ಮುಟ್ಟಿ ಬಂದನು. ರಾಹುವಿನ ಬಾಯಿಂದ ಹೊರಹೊರಟ ಚಂದ್ರನಂತೆಯೂ, ಯಮನ ಬಾಯಿಂದ ಹೊರಟು ಬರುವ ಧರ್ಮಿಷ್ಠನಂತೆಯೂ, ಖಲನ ಬಾಯಿಂದ ಹೊರಗೆ ಬರುವ ಸಾಧುಪುರುಷನಂತೆಯೂ ಆ ಆನೆಯ ಬಾಯಿಂದ ಆ ರಾಜನು ಬಂದನು

೩೨. ಹಾಗೆ ಬಂದ ರಾಜನು ಮಗನನ್ನು ರಾಜ್ಯದಲ್ಲಿ ಅಭಿಷೇಕಮಾಡಿ ಗೀತೆಯ ಹದಿನಾರನೆಯ ಅಧ್ಯಾಯವನ್ನು ಪಠಿಸುತ್ತ ಉತ್ತಮಗತಿಯನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹದಿನಾರನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಾಶೀತ್ಯಧಿಕಶತತಮೋಽಧ್ಯಾಯಃ ||



|| ಈಶ್ವರ ಉವಾಚ ||

**ಷೋಡಶಾಧ್ಯಾಯ ಸಾಮರ್ಥ್ಯಂ ಕಥಿತಂ ಶೃಣು ಸಾಂಪ್ರತಂ |**
**ಸ್ಪಷ್ಟಂ ಸಪ್ತದಶಾಧ್ಯಾಯಮಹಿಮಾಂಭೋನಿಧಿಂ ಶಿವೇ || ೧ ||**

**ಖಡ್ಗಬಾಹೋಸ್ಸುತಸ್ಯೈವ ಭೃತ್ಯೋ ದುಶ್ಶಾಸನೋ ಭವತ್ ।**
**ತಂ ಗಜಂ ಧರ್ತುಮಾಗಮ್ಯ ಗಜಾತ್ ಪ್ರಾಪ್ತೋ ಯಮಕ್ಷಯಂ || ೨ ||**

**ತದ್ವಾಸನಾನಿಬದ್ಧಾತ್ಮಾ ಗಜಯೋನಿಮವಾಪ್ಯ ಚ |**
**ಗೀತಾಸಪ್ತದಶಾಧ್ಯಾಯಂ ಶ್ರುತ್ವಾ ಪ್ರಾಪ್ತಃ ಪರಂ ಪದಂ || ೩ ||**

---

## ನೂರ ಎಂಭತ್ತೇಳನೆಯ ಅಧ್ಯಾಯವು



೧. ಈಶ್ವರನು ಹೇಳಿದನು-ಎಲೈ ಪಾರ್ವತಿಯೇ! ಗೀತೆಯ ಹದಿನಾರನೆಯ ಅಧ್ಯಾಯದ ಮಹಿಮೆಯನ್ನು ಹೇಳಿದೆನು. ಈಗ ಹದಿನೇಳನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ. ಕೇಳು.

೨. ಆ ಖಡ್ಗಬಾಹುವಿನ ಮಗನಿಗೆ ಒಬ್ಬ ಆಳಿದ್ದನು. ಅವನ ಹೆಸರು ದುಶ್ಶಾಸನನು. ಅವನು ಆ ಮದ್ದಾನೆಯನ್ನು ಹಿಡಿಯಲು ಹೋಗಿ ಅದರಿಂದ ಮರಣವನ್ನು ಹೊಂದಿದನು

೩. ಆನೆಯಿಂದ ಸಾಯುವಾಗ ಆ ಆನೆಯನ್ನೇ ಸ್ಮರಿಸುತ್ತಿದ್ದುದರಿಂದ ಅವನೂ ಆನೆಯಾಗಿಯೇ ಜನ್ಮವನ್ನು ತಾಳಿದನು. ಅನಂತರ ಗೀತೆಯ ಹದಿನೇಳನೆಯ ಅಧ್ಯಾವನ್ನು ಕೇಳಿದುದರಿಂದ ಮೋಕ್ಷವನ್ನು ಹೊಂದಿದನು.

॥ ಶ್ರೀ ದೇವ್ಯುವಾಚ ॥

ದುಶ್ಶಾಸನೋ ಗಜತ್ವಂ ಚ ಪ್ರಾಪ್ಯ ಮುಕ್ತ ಇತಿ ಶ್ರುತಂ ।
ತದೇವ ವದ ಕಲ್ಯಾಣ ವಿಸ್ತರೇಣ ಮಮ ಪ್ರಭೋ ॥ ೬ ॥

॥ ಈಶ್ವರ ಉವಾಚ ॥

ಸ್ಥಿತಃ ಕಶ್ಚನ ದುರ್ಮೇಧಾ ಮಾಂಡಲಿಕಕುಮಾರಕೈಃ ।
ಬಹುಮೂಲ್ಯಂ ಪಣಂ ಕೃತ್ವಾ ಗಜಮಾರೂಢವಾಂಸ್ತತಃ ॥ ೫ ॥

ಗತ್ವಾ ಕತಿಪಯಾನ್ಯೇವ ಪದಾನಿ ಜನವಾರಿತಃ ।
ನಾಮ್ನಾ ದುಶ್ಶಾಸನೋ ಮೂಢಃ ಪ್ರೌಢವಾಕ್ಯಮುದೀರಯನ್ ॥ ೬ ॥

ತತೋ ನಿಶಮ್ಯ ತದ್ವಾಕ್ಯಂ ಕ್ರೋಧಾಂಧಃ ಸಿಂಧುರೋಽಭವತ್ ।
ನ್ಯಪತಚ್ಚ ಸ್ಖಲತ್ಪಾದಃ ಕಂಪ್ಯಮಾನಃ ಕುಮಾರಕೈಃ ॥ ೭ ॥

---

೪. ಶ್ರೀ ದೇವಿಯು ಹೇಳಿದಳು-ಎಲೈ ಶಿವನೆ ! ದುಶ್ಶಾಸನನು ಆನೆಯ ಜನ್ಮವನ್ನು ಹೊಂದಿ ಮುಕ್ತಿಯನ್ನು ಹೊಂದಿದನೆಂದು ಹೇಳಿದೆಯಲ್ಲ. ಅದನ್ನೇ ವಿಸ್ತಾರವಾಗಿ ಹೇಳು.

೫. ಈಶ್ವರನು ಹೇಳಿದನು-ಆ ರಾಜನ ಸಾಮಂತ ರಾಜರಲ್ಲಿ ಒಬ್ಬ ಶೂರನಾದ ರಾಜಕುಮಾರನಿದ್ದನು. ಅವನು ಬಹುವಾಗಿ ಪಣವನ್ನು ಕಟ್ಟಿಕೊಂಡು ಆ ಆನೆಯನ್ನು ಹತ್ತಿಕೊಂಡನು.

೬. ಹಾಗೆ ಹತ್ತಿಕೊಂಡು ಕೊಂಚ ದೂರವನ್ನು ಹೋದನು. ಆಗ ಜನಗಳು ಬೇಡವೆಂದು ಹೇಳಿದರು. ಆ ದುಶ್ಶಾಸನನು ಅವರ ಮಾತನ್ನು ಕೇಳಿ ಸುಮ್ಮನಿರದೆ ಹೆಮ್ಮೆಯ ಮಾತುಗಳನ್ನಾಡಿದನು. ಮತ್ತು ಆನೆಯನ್ನು ಬಯ್ಯುತ್ತಿದ್ದನು.

೭. ಆಗ ಆ ಮಾತನ್ನು ಕೇಳಿ ಆನೆಯು ಕೋಪಗೊಂಡಿತು. ಆ ಕೋಪದಿಂದ ಅವನನ್ನು ಮೈಯನ್ನು ನಡುಗಿಸುತ್ತ ಕುಂಟುತ್ತ ಕೆಳಕ್ಕೆ ಕೆಡವಿತು. ಆ ರಾಜಕುಮಾರರೆಲ್ಲರೂ ಭಯಪಟ್ಟು ನಡುಗಿದರು.

ತತೋ ನಿಪತಿತಂ ಕಿಂಚಿದುಚ್ಛ್ವಸಂತಂ ಗಜೋ ರುಷಾ ।
ಊರ್ಧ್ವಮುನ್ಮೂಲಯಾಂಚಕ್ರೇ ಕೃತಾಂತಕನಿರಂಕುಶಃ ॥ ೮ ॥

ಗತಾಸೋರಪಿ ರೋಷೇಣ ತಸ್ಯಾಸ್ಥೀನಾಂ ಗಣಂ ಗಜಃ ।
ವಿಕೀರ್ಣವಾನ್ ಪೃಥಕ್ಕೃತ್ವಾ ಮತ್ತೋ ದಂತಾವಳಸ್ತತಃ ॥ ೯ ॥

ತತಃ ಕಾಲೇನ ಸಂಪ್ರೇತ್ಯ ಗಜಯೋನಿಮವಾಪ್ಯ ಸಃ ।
ಮಹಾಂತಂ ಕಾಲಮನಯತ್ಸಿಂಹಳದ್ವೀಪಭೂಪತೇಃ ॥ ೧೦ ॥

ಮೈತ್ರೀ ಗರೀಯಸೀ ಸಾರ್ಧಂ ಖಡ್ಗಬಾಹುಮಹೀಭುಜಾ ।
ತತೋಽಸೌ ಜಲಮಾರ್ಗೇಣ ಪ್ರಾಪಿತಃ ಸ ತು ವಾರಣಃ ॥ ೧೧ ॥

ಜಯದೇವೇನ ಖಡ್ಗಬಾಹೋಃ ಪ್ರೀತ್ಯಾ ನೀತೊ ಮಹೀಭುಜಾ ।
ಜಾತಿಂ ಸ್ಮರನ್ ಸ್ವಕೀಯಾಂ ಸಃ ಪಶ್ಯನ್ ಬಂಧೂನ್ ಸಹೋದರಾನ್ ॥ ೧೨ ॥

---

೮. ಅವನು ಬಿದ್ದು ಏದುಸಿರನ್ನು ಬಿಡುತ್ತಿರಲು ಆ ಯಮನಿಗೂ ತಡೆಯ ಲಸಾಧ್ಯವಾದ ಕೋಪಗೊಂಡ ಆ ಆನೆಯು ಅವನನ್ನು ಮೇಲಕ್ಕೆ ಹಿಡಿದೆಳೆದು ಕೊಂಡಿತು. ಅವನು ಸತ್ತುಹೋದನು.

೯. ಅವನು ಪ್ರಾಣಬಿಟ್ಟಿದ್ದರೂ ಕೂಡ ಆ ಆನೆಯು ಅವನ ಮೂಳೆಗ ಳನ್ನು ಕಿತ್ತು ಮುರಿದು ಪುಡಿಮಾಡಿ ಸುತ್ತಲೂ ಎಸೆದು ಬಿಟ್ಟಿತು.

೧೦-೧೧. ಸತ್ತ ಆ ದುಶ್ಶಾಸನನು ಆನೆಯಾಗಿ ಹುಟ್ಟಿದನು. ಬಹಳ ಕಾಲ ಬೆಳೆದನು. ಸಿಂಹಳ ರಾಜನಿಗೂ ಖಡ್ಗ ಬಾಹುವಿಗೂ ಬಹುವಾದ ಸ್ನೇಹವಿದ್ದಿತು. ಆದ್ದರಿಂದ ಈ ಆನೆಯನ್ನು ನೀರಿನ ಮೇಲೆ ಸಿಂಹಳ ದ್ವೀಪಕ್ಕೆ ಕಳುಹಿಸಿದನು.

೧೨ ಖಡ್ಗ ಬಾಹುವಿನಲ್ಲಿರುವ ಪ್ರೀತಿಗೋಸ್ಕರ ಸಿಂಹಳಾಧಿಪತಿಯಾದ ಜಯದೇವನು ಅದನ್ನು ತೆಗೆದುಕೊಂಡು ಹೋದನು. ಅದು ಹಿಂದಿನ ಜನ್ಮದ ಜಾತಿಯನ್ನು ಸ್ಮರಿಸಿಕೊಂಡು ಅಲ್ಲಿದ್ದ ತನ್ನ ಬಂಧುಗಳನ್ನೂ ಅಣ್ಣತಮ್ಮಂದಿ ರನ್ನೂ ಸ್ನೇಹಿತರನ್ನೂ ನೋಡುತ್ತಲಿದ್ದಿತು. ಸಿಂಹಳದ್ವೀಪಕ್ಕೆ ಹೋದಮೇಲೆ ಇವರ ವಿರಹದಿಂದ ದುಃಖಿಸುತ್ತ ಕೆಲವು ದಿನಗಳವರೆಗೆ ಇದ್ದಿತು.

ದುಃಖೇನ ಮಹತಾ ಸ್ತೋಕಾನ್ ದಿವಸಾನತ್ಯವಾಹಯತ್ ।
ರಾಜಾ ಕದಾಚಿತ್ಸಂತುಷ್ಟಃ ಸಮಸ್ಯಾಶ್ಲೋಕಪೂರಣೈಃ ॥ ೧೩ ॥

ಕಸ್ಮೈ ಚಿತ್ಕವಯೇ ಪ್ರಾದಾತ್ತಮುಪಾಯನಹಸ್ತಿನಂ ।
ಶತೇನ ತೇನ ಕವಿನಾ ರೋಗೋಪದ್ರವಭೀರುಣಾ ॥ ೧೪ ॥

ಮಾಲವಕ್ಷೋಣಿಪಾಲಸ್ಯ ವಿಕ್ರೀತಶ್ಚೈತ್ಯಕುಂಜರಃ ।
ಕಿಯತ್ಯಪಿ ಗತೇ ಕಾಲೇ ಪಾಲ್ಯಮಾನೋಽಪಿ ಯತ್ನತಃ ॥ ೧೫ ॥

ಮುಮೂರ್ಷುರಭವತ್ತತ್ರ ಕುಂಜರೋ ದುರ್ಜರಜ್ವರಃ ।
ಸ ಜಿಘ್ರತಿ ಪಯಶ್ಶೀತಂ ನಾದತ್ತೇ ಕಬಳಂ ಗಜಃ ॥ ೧೬ ॥

ಸ್ವಪಿತ್ಯಪಿ ನ ಸೌಖ್ಯೇನ ಮುಂಚತ್ಯಶ್ರೂಣಿ ಕೇವಲಂ ।
ದಿವಾ ನಕ್ತಂ ಸ್ಥಾಣುವಚ್ಚ ತಿಷ್ಠತಿ ಭ್ರಷ್ಟಚೇತನಃ ॥ ೧೭ ॥

---

೧೩. ಆ ರಾಜನು ಶ್ಲೋಕಗಳ ಸಮಸ್ಯೆಗಳನ್ನು ಪೂರ್ತಿಮಾಡುತ್ತಿರುವಾಗ ಒಬ್ಬ ಕವಿಯು ಸಮಸ್ಯಾ ಪೂರಣೆಮಾಡಿದುದನ್ನು ನೋಡಿ ಸಂತೋಷಪಟ್ಟು ಆ ಕವಿಗೆ ಆ ಆನೆಯನ್ನು ಬಹುಮಾನವಾಗಿ ಕೊಟ್ಟನು.

೧೪. ಆ ಆನೆಯ ಸೌಖ್ಯಕ್ಕೂ ರೋಗ ರುಜಿನಗಳಿಗೂ ಗಮನಕೊಡ ಲಾರದ ಆ ಕವಿಯು ಮಾಲವ ರಾಜನಿಗೆ ನೂರು ಹಣಗಳಿಗೆ ಅದನ್ನು ಮಾರಿಬಿಟ್ಟನು.

೧೫ ಆ ರಾಜನು ಆ ಆನೆಯನ್ನು ಬಹು ಪ್ರಯತ್ನದಿಂದ ಕಾಪಾಡು ತ್ತಿದ್ದರೂ ಕೆಲವು ಕಾಲದಮೇಲೆ ಬಹುವಾದ ಜ್ವರ ಬಂದು ಸಾಯುವಂತಾಯಿತು.

೧೬-೧೭. ತಣ್ಣೀರನ್ನು ಮೂಸಿಯೂ ನೋಡುತ್ತಿರಲಿಲ್ಲ. ಕಬಳವನ್ನು ತೆಗೆದುಕೊಳ್ಳುವುದೂ ಇಲ್ಲ. ಸುಖವಾಗಿ ನಿದ್ದೆ ಮಾಡುವುದೂ ಇಲ್ಲ. ಸುಮ್ಮನೆ ಕಣ್ಣಿನಿಂದ ನೀರನ್ನು ಸುರಿಸುತ್ತ ಹಗಲೂ ರಾತ್ರಿಯೂ ಮೋಟುಮರದಂತೆ ಅಲುಗಾಡದೆ ನಿಂತಿದ್ದಿತು.

ಇತ್ಥಂ ತೈರ್ಹಸ್ತಿಪೈರ್ದೃಷ್ಟೋ ದುರ್ವ್ಯವಸ್ಥೋ ಗಜಾಧಿಪಃ ।
ಸತ್ವರಂ ಕಥಯಾಮಾಸೂ ರಾಜ್ಞೋ ಗಜಹಿತಾಯ ತೇ　　　　॥ ೧೮ ॥

॥ ಹಸ್ತಿಪಾ ಊಚುಃ ॥

ಮಹೀಪಾಲ ನ ಜಾನೀಮೋ ಗಜಸ್ತೇಽಸ್ವಸ್ಥಮಾನಸಃ ।
ನ ಖಾದತಿ ನ ಪಿಬತಿ ನ ಸ್ವಪಿತ್ಯಪಿ ನೈ ತಥಾ　　　　॥ ೧೯ ॥

ಸ್ವಕರೇಣ ರಜೋ ಭೂಮೇರ್ನ ಸ್ವಪೃಷ್ಠೇ ನಿಷಿಂಚತಿ ।
ಅಶ್ರುಪಾತಂ ಬಹುವಿಧಂ ಕರೋತಿ ದೃಶ್ಯತಾಮಿತಿ　　　　॥ ೨೦ ॥

॥ ಶ್ರೀ ಶಿವ ಉವಾಚ ॥

ತಚ್ಛ್ರುತ್ವಾ ತಸ್ಯ ವೃತ್ತಾಂತಂ ರಾಜಾ ದ್ರಷ್ಟುಮುಗಾತ್ಸ್ವಯಂ ।
ಮಂತ್ರಿಭಿರ್ಭೇಷಜೇ ದಕ್ಷೈರ್ಗಜರೋಗಕವೇದಿಭಿಃ　　　　॥ ೨೧ ॥

---

೧೮. ಆನೆಯನ್ನು ಕಾಪಾಡುವವರು ಇದನ್ನು ನೋಡಿ ಬದುಕುವುದು ಬಹು ಕಷ್ಟವೆಂದು ತಿಳಿದು ರಾಜನ ಬಳಿಗೆ ಹೋಗಿ ಆನೆಗೆ ಏನಾದರೂ ಔಷಧ ವನ್ನು ಕೊಡಿಸಬೇಕೆಂದರು.

೧೯. ಆನೆ ಸಾಕುವವರು ಹೇಳಿದರು-ಎಲೈ ದೊರೆಯೆ ! ಆನೆಯು ರೋಗ ವನ್ನು ಹೊಂದಿದೆ. ಅದೇನೆಂದು ನಮಗೆ ಗೊತ್ತಾಗುವುದಿಲ್ಲ. ಆಹಾರವನ್ನು ತಿನ್ನುವುದಿಲ್ಲ ನೀರನ್ನು ಕುಡಿಯುವುದಿಲ್ಲ. ನಿದ್ದೆಯನ್ನು ಮಾಡುವುದಿಲ್ಲ.

೨೦. ನೆಲದ ಧೂಳನ್ನು ಸೊಂಡಿಲಿನಿಂದ ತೆಗೆದುಕೊಂಡು ತನ್ನ ಬೆನ್ನಿನ ಮೇಲೆ ಹಾಕಿಕೊಳ್ಳುವುದೂ ಇಲ್ಲ. ಬಹುವಾಗಿ ಕಣ್ಣೀರನ್ನು ಸುರಿಸುತ್ತಿರುವುದು. ಬಂದು ನೋಡು.

೨೧. ಶ್ರೀ ಶಿವನು ಹೇಳಿದನು-ಆಗ ಆ ಆನೆಯ ವಿಷಯವನ್ನು ಕೇಳಿ ರಾಜನು ಆನೆಯ ರೋಗಕ್ಕೆ ಔಷಧಿಯನ್ನು ಮಾಡುವವರೊಡನೆಯೂ ಮಂತ್ರಿಗಳೊಡನೆಯೂ ಅಲ್ಲಿಗೆ ಹೊರಟನು.

ತತೋ ಹಸ್ತಿಪಕಾಖ್ಯಾತಂ ವೃತ್ತಾಂತಮವನೀಪತಿಃ ।
ಆಕರ್ಣ್ಯ ಸ ಸಮಾಯಾತೋ ಯತ್ರಾಸ್ತೇ ಜ್ವರಿತೋ ಗಜಃ ॥ ೨೨ ॥

ಸ ಚಾಲೋಕ್ಯ ಚ ಭೂಪಾಲಂ ಜಗದ್ವಿಸ್ಮಯಕಾರಿಣೀಂ ।
ವಾಚಮೂಚೇ ಗಜಸ್ಸಮ್ಯಕ್ ವಿಸೃಷ್ಟಜ್ವರವೇದನಃ ॥ ೨೩ ॥

॥ ಗಜ ಉವಾಚ ॥

ರಾಜನ್ನಶೇಷಶಾಸ್ತ್ರಜ್ಞ ರಾಜನೀತಿಪಯೋನಿಧೇ ।
ನಿರ್ಜಿತಾರಾತಿಸಂಘಾತ ಮುರಾರಿಚರಣಪ್ರಿಯ ॥ ೨೪ ॥

ಕಿಮೌಷಧೈರಲಂ ವೈದ್ಯೈಃ ಕಿಂ ದಾನೈಃ ಕಿಂ ತು ಜಾಪಕೈಃ ।
ಗೀತಾಸಪ್ತದಶಾಧ್ಯಾಯಜಾಪಕಂ ದ್ವಿಜಮಾನಯ ।
ತೇನಾಯಂ ಮಾಮಕೋ ರೋಗಃ ಶಾಮ್ಯತ್ಯತ್ರ ನ ಸಂಶಯಃ ॥ ೨೫ ॥

---

೨೨. ಆ ರಾಜನು ಆ ಸಮಾಚಾರವನ್ನು ಆನೆಕಾಪಾಡುವವನಿಂದ ಕೇಳಿದೊಡನೆಯೇ ಆ ರೋಗ ಪೀಡಿತವಾಗಿದ್ದ ಆನೆಯ ಬಳಿಗೆ ಬಂದನು.

೨೩. ಆ ಆನೆಯು ಅಲ್ಲಿಗೆ ಬಂದ ರಾಜನನ್ನು ನೋಡಿ ಪ್ರಪಂಚಕ್ಕೆ ಆಶ್ಚರ್ಯವಾಗುವಂತೆ ಜ್ವರದ ವೇದನೆಯನ್ನು ಕೂಡ ಬಿಟ್ಟು ಮಾತನ್ನಾಡಿತು.

೨೪. ಆನೆಯು ಹೇಳಿತು-ಎಲ್ಲಾ ಶಾಸ್ತ್ರವನ್ನೂ ಬಲ್ಲ, ರಾಜನೀತಿಗೆ ಸಮುದ್ರದಂತಿರುವ, ಶತ್ರುಗಳನ್ನೆಲ್ಲಾ ನಾಶಮಾಡಿರುವ ಶ್ರೀಹರಿಯ ಚರಣದಲ್ಲಿ ಭಕ್ತಿಯುಳ್ಳ ಎಲೈ ರಾಜನೆ ! ಕೇಳು.

೨೫. ಔಷಧಿಗಳಿಂದ ಪ್ರಯೋಜನವಿಲ್ಲ. ವೈದ್ಯರು ಬೇಡ ದಾನ ಜಪಗಳು ಬೇಕಿಲ್ಲ ಗೀತೆಯ ಹದಿನೇಳನೆಯ ಅಧ್ಯಾಯವನ್ನು ಜಪಿಸುತ್ತಿರುವ ಒಬ್ಬ ಬ್ರಾಹ್ಮಣನನ್ನು ಕರೆದುಕೊಂಡು ಬಾ. ಅವನಿಂದ ನನ್ನ ಈ ಜ್ವರದ ವೇಗವು ನಾಶವಾಗುತ್ತದೆ. ಸಂಶಯವಿಲ್ಲ.

|| ಶ್ರೀ ಶಿವ ಉವಾಚ ||

ಯಥಾದಿಷ್ಟಂ ಗಜೇನಾದ್ ತಥಾ ಚಕ್ರೇ ನರಾಧಿಪಃ ।
ತತೋ ಗಜತ್ವಮುತ್ಸೃಜ್ಯ ಮುಕ್ತೋ ದುಶ್ಶಾಸನೋಽಭವತ್ || ೨೬ ||

ತೇನ ವಿಪ್ರೇಣಾಭಿಮಂತ್ರ್ಯ ಜಲೇ ಕ್ಷಿಪ್ತೇ ತದುತ್ತಮೇ ।
ಅಥ ದಿವ್ಯಂ ಸಮಾರೂಢಂ ವಿಮಾನಮುಪನೀಪತಿಃ ।
ತಂ ದುಶ್ಶಾಸನಮದ್ರಾಕ್ಷೀತ್ಪಾಕಶಾಸನತೇಜಸಂ || ೨೭ ||

|| ರಾಜೋವಾಚ ||

ಕಿಂ ಜಾತೀಯಃ ಕಿಮಾತ್ಮಾ ತ್ವಂ ಕಿಂ ವೃತ್ತ ಇತಿ ಮೇ ವದ ।
ಕೇನ ವಾ ಕರ್ಮಣಾ ಜಾತೋ ಗಜಃ ಕಥಮಿಹಾಗತಃ || ೨೮ ||

|| ಶ್ರೀ ಶಿವ ಉವಾಚ ||

ಪೃಷ್ಟೋ ರಾಜ್ಞಾ ವಿಮುಕ್ತೋಽಸೌ ವಿಮಾನಸ್ಥಃ ಸ್ಥಿರಾಕ್ಷರಂ ।
ವೃತ್ತಂ ಯಥಾವದಾಚಖ್ಯೌ ನಿಜಂ ದುಶ್ಶಾಸನಃ ಕ್ರಮಾತ್ || ೨೯ ||

---

೨೬-೨೭. ಶ್ರೀ ಶಿವನು ಹೇಳಿದನು-ಆ ರಾಜನು ಆನೆಯು ಹೇಳಿದಂತೆ ಮೊದಲು ಮಾಡಿಸಿದನು. ಅತನು ಆ ಹದಿನೇಳನೆಯ ಅಧ್ಯಾಯದಿಂದ ಮಂತ್ರಿಸಿದ ನೀರನ್ನು ಆ ಆನೆಯ ತಲೆಯಮೇಲೆ ಹಾಕಿದನು. ಆಗ ಆ ದುಶ್ಶ್ಯಾಸನನು ಆನೆಯ ಜನ್ಮವನ್ನು ಬಿಟ್ಟು ಮುಕ್ತನಾದನು. ಆಗ ಆ ರಾಜನು ದಿವ್ಯವಾದ ವಿಮಾನದಲ್ಲಿ ಕುಳಿತುಕೊಂಡಿರುವ ಇಂದ್ರನ ಕಾಂತಿಯುಳ್ಳ ದುಶ್ಶ್ಯಾಸನನನ್ನು ನೋಡಿದನು.

೨೮. ರಾಜನು ಹೇಳಿದನು-ನೀನು ಯಾವ ಜಾತಿಯವನು ? ನಿನ್ನ ಆತ್ಮವು ಯಾವುದು ? ನಿನ್ನ ಚರಿತ್ರೆಯೇನು ? ನೀನು ಯಾವ ರೀತಿಯಾದ ಕರ್ಮದಿಂದ ಆನೆಯಾಗಿ ಹುಟ್ಟಿ ಇಲ್ಲಿಗೆ ಬಂದಿದ್ದೀಯೆ? ಅದೆಲ್ಲವನ್ನೂ ಹೇಳು.

೨೯. ಶ್ರೀ ಶಿವನು ಹೇಳಿದನು-ರಾಜನು ಹೀಗೆಂದು ಕೇಳಲು ಮುಕ್ತಿಯನ್ನು ಹೊಂದಿ ವಿಮಾನದಲ್ಲಿದ್ದ ಆ ದುಶ್ಶ್ಯಾಸನನು ಸ್ಪಷ್ಟವಾದ ಮಾತುಗಳಿಂದ ತನ್ನ ವಿಷಯಗಳೆಲ್ಲವನ್ನೂ ಹೇಳಿದನು.

ಗೀತಾಸಪ್ತದಶಾಧ್ಯಾಯಂ ಜಪನ್ಮಾಲವಭೂಪತಿಃ ।
ನರವರ್ಯೋಽಭವನ್ಮುಕ್ತಃ ಕಾಲೇನಾಲ್ಪೀಯಸಾ ತತಃ ॥ ೩೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಸಪ್ತದಶಾಧ್ಯಾಯ ಮಾಹಾತ್ಮ್ಯಂ ನಾಮ ಸಪ್ತಾಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

---

೩೦. ಆಗ ಆ ಮಾಲವರಾಜನೂ ಕೂಡ ಆ ಗೀತೆಯ ಹದಿನೇಳನೆಯ ಅಧ್ಯಾಯವನ್ನು ಜಪಿಸುತ್ತ ಇದ್ದು ಕೆಲವು ಕಾಲದಮೇಲೆ ಮುಕ್ತಿಯನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹದಿನೇಳನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

—X—

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾಶೀತ್ಯಧಿಕಶತತಮೋಽಧ್ಯಾಯಃ ॥



॥ ಶ್ರೀ ಪಾರ್ವತ್ಯುವಾಚ ॥

**ಉಕ್ತಂ ಸಪ್ತದಶಾಧ್ಯಾಯಗೌರವಂ ಭವತಾ ಶಿವ ।**
**ಸ ತ್ವಮಷ್ಟಾದಶಾಧ್ಯಾಯಮಹಿಮಾನಮುದೀರಯ ॥ ೧ ॥**

॥ ಈಶ್ವರ ಉವಾಚ ॥

**ಆಕರ್ಣಯ ಚಿದಾನಂದನಿಷ್ಯಂದಿನಿಗಮೋತ್ತಮಂ ।**
**ಪುಣ್ಯಮಷ್ಟಾದಶಾಧ್ಯಾಯಮಾಹಾತ್ಮ್ಯಂ ಗಿರಿನಂದಿನಿ ॥ ೨ ॥**

**ಸಮಸ್ತಶಾಸ್ತ್ರಸರ್ವಸ್ವಂ ಶ್ರೋತ್ರಪಾತ್ರರಸಾಯನಂ ।**
**ಸಂಸಾರಯಾತನಾಜಾಲವಿದಾರಣಪರಾಯಣಂ ॥ ೩ ॥**

---

## ನೂರ ಎಂಭತ್ತೆಂಟನೆಯ ಅಧ್ಯಾಯವು



೧ ಶ್ರೀ ಪಾರ್ವತಿಯು ಹೇಳಿದಳು-ಎಲೈ ಶಿವನೇ ! ಹದಿನೇಳನೆಯ ಅಧ್ಯಾಯದ ಮಹಿಮೆಯನ್ನು ಹೇಳಿದೆಯಷ್ಟೆ ! ಅದೇ ನೀನು ಹದಿನೆಂಟನೆಯ ಅಧ್ಯಾಯದ ಮಹಿಮೆಯನ್ನೂ ಹೇಳು.

೨. ಈಶ್ವರನು ಹೇಳಿದನು-ಎಲೈ ಗಿರಿನಂದಿನಿಯೆ ! ಚಿತ್‌ಸ್ವರೂಪವಾದ ಆನಂದವನ್ನು ಸುರಿಸುತ್ತ ವೇದಕ್ಕೇನೇ ಉತ್ತಮಪ್ರಾಯವಾಗಿರುವ ಪುಣ್ಯರೂಪವಾದ ಹದಿನೆಂಟನೆಯ ಅಧ್ಯಾಯದ ಮಹಿಮೆಯನ್ನು ಕೇಳು.

೩. ಆ ಅಧ್ಯಾಯವು ಎಲ್ಲಾ ಶಾಸ್ತ್ರಗಳ ಸರ್ವಸ್ವವಾದುದು. ಕಿವಿಗೆ ರಸಾಯನ ರೂಪವಾದುದು. ಸಂಸಾರದ ಯಾತನೆಯ ಗುಂಪನ್ನು ನಾಶ ಮಾಡುವುದರಲ್ಲಿ ಬಹು ಶಕ್ತವಾದುದು.

ಪರಂ ರಹಸ್ಯಂ ಸಿದ್ಧಾನಾಮವಿದ್ಯೋನ್ಮೂಲನಕ್ಷಮಂ ।
ಚೈತನ್ಯಂ ಕೈಟಭಾರಾತೇರಗ್ರ್ಯಗಣ್ಯಂ ಪರಂ ವರಂ ॥ ೪ ॥

ವಿವೇಕವಲ್ಲರೀಮೂಲಂ ಕಾಮಕ್ರೋಧಮದಾಪಹಂ ।
ಪುರಂದರಾದಿಗೀರ್ವಾಣಚಿತ್ರವಿಶ್ರಾಮಮಂದಿರಂ ॥ ೫ ॥

ಸನಕಾದಿಮಹಾಯೋಗಿಮನೋರಂಜನಕಾನನಂ ।
ಪಾಠಮಾತ್ರಪರಾಭೂತಕಾಲಕಿಂಕರಗರ್ಜಿತಂ ॥ ೬ ॥

ಅಷ್ಟೋತ್ತರಶತವ್ಯಾಧಿಮೂಲೋನ್ಮೂಲನಕಾರಕಂ ।
ನಾತಃ ಪರತರಂ ಕಿಂಚಿದ್ರಹಸ್ಯಂ ಹಂಸಗಾಮಿನಿ ॥ ೭ ॥

ತಾಪಿತಾಪತ್ರಯಹರಂ ಮಹಾಪಾತಕನಾಶನಂ ।
ಯಥಾ ದಿವೌಕಸಾಂ ಶಕ್ರೋ ಗುರುಃ ಶಕ್ರಾದ್ಯಥಾ ವರಃ ॥ ೮ ॥

---

೪ ಇದು ಸಿದ್ಧರಿಗೆ ಬಹು ರಹಸ್ಯವಾದುದು. ಮಾಯೆಯನ್ನು ನಾಶಮಾಡುವುದರಲ್ಲಿ ಶಕ್ತವಾದುದು. ಕೈಟಭ ಶತ್ರುವಾದ ಶ್ರೀಕೃಷ್ಣನಿಗೆ ಜೀವಸ್ವರೂಪವಾದುದು. ಎಲ್ಲಕ್ಕೂ ಮುಖ್ಯವಾದುದು. ಪರಮಪದರೂಪ ವಾದುದು.

೫. ವಿವೇಕವೆಂಬ ಗಿಡಕ್ಕೆ ಬುಡವಾದುದು. ಕಾಮಕ್ರೋಧ ಮದಗಳನ್ನು ನಾಶಮಾಡತಕ್ಕದ್ದು. ಇಂದ್ರನೇ ಮುಂತಾದ ದೇವತೆಗಳ ಚಿತ್ತಕ್ಕೆ ಸುಖವನ್ನು ಕೊಡುವ ಮನೆಯು

೬. ಸನಕನೇ ಮುಂತಾದ ಮಹಾಯೋಗಿಗಳ ಮನಸ್ಸುಗಳನ್ನು ಸಂತೋಷಪಡಿಸುವ ಉದ್ಯಾನವನವು. ಅದನ್ನು ಓದುವುದರಿಂದಲೇ ಯಮನನ್ನು ಆಳಾಗಿ ಮಾಡಿಕೊಟ್ಟು ಗರ್ಜಿಸುವಂತಹದು.

೭. ಎಲೈ ಹಂಸಗಾಮಿನಿಯೆ! ನೂರೆಂಟು ರೋಗಗಳ ಮೂಲವನ್ನು ಕಿತ್ತೊಗೆಯುವಂತಹದು. ಇದಕ್ಕಿಂತಲೂ ರಹಸ್ಯವು ಮತ್ತೊಂದಿಲ್ಲವೇ ಇಲ್ಲ

೮-೯. ತೊಂದರೆ ಪಡಿಸುವಂತಹ ತಾಪತ್ರಯ (ಆಧ್ಯಾತ್ಮಿಕ, ಆಧಿಭೌತಿಕ ಆಧಿವ್ಯಾಧಿಕ) ಗಳನ್ನು ನಾಶಮಾಡತಕ್ಕದ್ದು. ಮಹಾಪಾಪಗಳನ್ನೂ ನಾಶ ಮಾಡುತ್ತದೆ. ದೇವತೆಗಳೊಳಗೆ ಇಂದ್ರನು ಹೇಗೆ ಶ್ರೇಷ್ಠನೋ ಬ್ರಹಸ್ಪತಿಯು ಇಂದ್ರನಿಗಿಂತಲೂ ಹೇಗೆ ಶ್ರೇಷ್ಠನೋ ರಸಗಳೊಳಗೆ ಅಮೃತವು ಹೇಗೆ ಶ್ರೇಷ್ಠವೋ

ಯಥಾ ರಸಾನಾಂ ಪೀಯೂಷಮುತ್ತಮಂ ವಿಶ್ವವಿಶ್ರುತಂ ।
ಯಥಾ ಗಿರೀಣಾಂ ಕೈಲಾಸೋ ಯಥಾ ಚಂದ್ರೋ ದಿವೌಕಸಾಂ ॥ ೯ ॥

ತೀರ್ಥಾನಾಂ ಪುಷ್ಕರಂ ತೀರ್ಥಂ ಯಥಾ ಪುಷ್ಪೇಷು ಪಂಕಜಂ ।
ಪತಿವ್ರತಾ ಸುನಾರೀಷು ಯಥಾ ಲೋಕೇಷ್ವರುಂಧತೀ ॥ ೧೦ ॥

ಯಥಾ ಮಖೇಷ್ವಶ್ವಮೇಧೋ ಯಥೋದ್ಯಾನೇಷು ನಂದನಂ ।
ಯಥಾ ರುದ್ರೇಷು ಸರ್ವೇಷು ವೀರಭದ್ರೋ ಮಮಾನುಗಃ ॥ ೧೧ ॥

ಯಥಾ ಕಾಲೇಷ್ವಹಂ ನಿತ್ಯೋ ಯಥಾ ಪಶುಷು ಕಾಮಧುಕ್ ।
ಯಥಾ ವ್ಯಾಸೋ ಮುನೀಂದ್ರೇಷು ವ್ಯಾಸೇಷು ಬ್ರಹ್ಮವಿತ್ತಮಃ ॥ ೧೨ ॥

ಯಥಾ ದಾನೇಷು ಭೂದಾನಂ ಯಥಾ ಸಿಂಧುಷು ಗೌತಮೀ ।
ಯಥಾ ಲೋಕೇ ಹರಿಕ್ಷೇತ್ರಂ ಪ್ರಶಸ್ತಂ ಧರ್ಮಕರ್ಮಸು ॥ ೧೩ ॥

---

ಪರ್ವತಗಳೊಳಗೆ ಕೈಲಾಸವು ಹೇಗೆ ಉತ್ತಮವಾದುದೋ ದೇವತೆಗಳೊಳಗೆ ಚಂದ್ರನು ಹೇಗೆ ಉತ್ತಮನೋ ಹಾಗೆ ಎಲ್ಲಾ ಅಧ್ಯಾಯಗಳಿಗಿಂತಲೂ ಈ ಹದಿನೆಂಟನೆಯ ಅಧ್ಯಾಯವು ಬಹು ಶ್ರೇಷ್ಠವಾದುದು.

೧೦-೧೧. ತೀರ್ಥಗಳಲ್ಲಿ ಪುಷ್ಕರದಂತೆಯೂ, ಹೂವುಗಳಲ್ಲಿ ಕಮಲದಂತೆಯೂ, ಪತಿವ್ರತೆಯರಾದ ಹೆಂಗಸರಲ್ಲಿ ಅರುಂಧತಿಯಂತೆಯೂ, ಯಾಗಗಳಲ್ಲಿ ಅಶ್ವಮೇಧದಂತೆಯೂ, ಉದ್ಯಾನಗಳಲ್ಲಿ ನಂದನದಂತೆಯೂ, ರುದ್ರರಲ್ಲಿ ವೀರಭದ್ರರಂತೆಯೂ ಈ ಅಧ್ಯಾಯವು ಉತ್ತಮವಾದುದು.

೧೨-೧೩. ಕಾಲರಲ್ಲಿ ನನ್ನಂತೆಯೂ, ಪಶುಗಳಲ್ಲಿ ಕಾಮಧೇನುವಿನಂತೆಯೂ, ಮುನಿಗಳಲ್ಲಿ ವ್ಯಾಸನಂತೆಯೂ, ವ್ಯಾಸರಲ್ಲಿ ಬ್ರಹ್ಮತತ್ವ ಬಲ್ಲವನಂತೆಯೂ, ದಾನಗಳಲ್ಲಿ ಭೂದಾನದಂತೆಯೂ, ನದಿಗಳಲ್ಲಿ ಗಂಗೆಯಂತೆಯೂ, ಕ್ಷೇತ್ರಗಳಲ್ಲಿ ಹರಿಕ್ಷೇತ್ರದಂತೆಯೂ ಈ ಅಧ್ಯಾಯವು ಪ್ರಶಸ್ತವೂ ಉತ್ತಮವೂ ಆದುದು. ಎಲ್ಲಾ ಕೆಲಸಗಳಲ್ಲಿಯೂ ಪ್ರಶಸ್ತವಾದುದು.

ಯಥಾ ಲಕ್ಷ್ಮೀಪತೇರ್ಜನ್ಮಸ್ಥಾನಂ ಮಧುವನಂ ಸ್ಮೃತಂ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವತೀರ್ಥನಮಸ್ಕೃತಂ । ॥ ೧೪ ॥

ತಥಾ ಹ್ಯಷ್ಟಾದಶಾಧ್ಯಾಯಮಾಹಾತ್ಮ್ಯಂ ಭುವನೋತ್ತರಂ ।
ಅತ್ರಾಖ್ಯಾನಮಿದಂ ಪುಣ್ಯಂ ಭಕ್ತ್ಯಾಕರ್ಣಯ ಪಾರ್ವತಿ ॥ ೧೫ ॥

ಯದಾಕರ್ಣನಮಾತ್ರೇಣ ಜನ್ತುಃ ಪಾಪೈಃ ಪ್ರಮುಚ್ಯತೇ ।
ಅಸ್ತಿ ಮೇರುಗಿರೇಶ್ಶೃಂಗೇ ಪುರೀ ರಮ್ಯಾಮರಾವತೀ ॥ ೧೬ ॥

ಪುರಾ ಮಮ ವಿನೋದಾಯ ನಿರ್ಮಿತಾ ವಿಶ್ವಕರ್ಮಣಾ ।
ನಿರಂತರಗುಣಯುತಾ ಕೋಟಿಗೀರ್ವಾಣಸೇವಿತಾ ॥ ೧೭ ॥

ತೇಜಃಪುಂಜವತೀ ಸಾಕ್ಷಾದ್ಬ್ರಹ್ಮವಿದ್ಯೇವ ವಿಶ್ರುತಾ ।
ಚಿಂತಾಮಣಿಶಿಲಾಬದ್ಧಾಃ ಪ್ರಾಸಾದಾ ಯತ್ರ ಕಾಮದಾಃ ॥ ೧೮ ॥

---

೧೪-೧೬. ಲಕ್ಷ್ಮೀಪತಿಯಾದ ವಿಷ್ಣುವಿಗೆ ಮಧುವನವು (ಮಧುರೆಯು) ಹೇಗೆ ಜನ್ಮಸ್ಥಾನವೋ ಹಾಗೆ ಇದು ಆತನಿಗೆ ಜನ್ಮಸ್ಥಾನವು. ಸರ್ವ ತೀರ್ಥಗಳಲ್ಲಿಯೂ ಯಾವ ಪುಣ್ಯವು ಬರುವುದೋ ಅದು ಇದರಲ್ಲಿ ಬರುತ್ತದೆ. ಸರ್ವ ತೀರ್ಥಗಳು ಹೇಗೆ ನಮಸ್ಕರಿಸಲು ಯೋಗ್ಯವೋ ಹಾಗೆ ಇದು ನಮಸ್ಕರಿಸಲು ಯೋಗ್ಯವಾದುದು ಈ ಹದಿನೆಂಟನೆಯ ಅಧ್ಯಾಯದ ಮಹಿಮೆಯು ಲೋಕೋತ್ತರವಾದುದು. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಹೇಳುತ್ತೇನೆ. ಕೇಳು. ಅದನ್ನು ಕೇಳುವುದರಿಂದಲೇ ಪ್ರಾಣಿಯ ಪಾಪಗಳೆಲ್ಲವೂ ನಾಶವಾಗುತ್ತವೆ. ಮೇರುಪರ್ವತದ ಶಿಖರದಲ್ಲಿ ಸುಂದರವಾದ ಅಮರಾವತಿಯೆಂಬ ಪಟ್ಟಣವೊಂದಿರುವುದು.

೧೭. ಪೂರ್ವದಲ್ಲಿ ವಿಶ್ವಕರ್ಮನು ನನ್ನ ಸಂತೋಷಕ್ಕೆಂದೇ ಅದನ್ನು ಸೃಷ್ಟಿಸಿದನು. ಯಾವಾಗಲೂ ಗುಣಗಳಿಂದಲೇ ಕೂಡಿಕೊಂಡಿದೆ. ಕೋಟ್ಯಂತರ ದೇವತೆಗಳು ಅದರಲ್ಲಿ ಸುಖದಿಂದಿರುತ್ತಿರುವರು.

೧೮. ಅದು ಬಹುವಾದ ತೇಜಸ್ಸಿನಿಂದ ಕೂಡಿಕೊಂಡಿದೆ. ಬ್ರಹ್ಮವಿದ್ಯೆಯಂತೆ ಪ್ರಸಿದ್ಧವಾದುದು. ಆ ಪಟ್ಟಣದಲ್ಲಿರುವ ಮಹಡಿಯ ಮನೆಗಳಲ್ಲಿ ಚಿಂತಾಮಣಿಕಲ್ಲುಗಳನ್ನೇ ಹಾಕಿರುವುದರಿಂದ ಅವು ಯಾವಾಗಲೂ ಬೇಕಾದುದನ್ನು ಕೊಡುತ್ತವೆ.

ಜಯಂತಿ ಮೇರುಶಿಖರೇ ಚತುರ್ಮುಖಪುರಾವಧಿ ।
ಯತ್ರ ಕಲ್ಪದ್ರುಮಚ್ಛಾಯಾಸುಖಾಸೀನಾ ಪುಲೋಮಜಾ ॥ ೧೯ ॥

ಶೃಣೋತಿ ಶ್ಯಾಮಲಾ ಗೀರ್ಭಿರ್ಗೀತಿಂ ಗಂಧರ್ವಯೋಷಿತಾಂ ।
ಯತ್ರಾಸ್ತೇ ಸ ಬಲಾರಾತಿರ್ದಂಭೋಳಿದಲಿತಾಯುಷಾಂ ॥ ೨೦ ॥

ದೈತ್ಯಾನಾಂ ರಕ್ತಕಲ್ಲೋಲೈಸ್ತತ್ರ ಭೂಃ ಶೋಣತಾಂ ಗತಾ ।
ಪುರಾತನಸುಧಾಸ್ವಾದಂ ಸ್ಮಾರಂ ಸ್ಮಾರಂ ದಿವೌಕಸಃ ॥ ೨೧ ॥

ಧಯನ್ತಿ ಯತ್ರ ಕ್ಷುತ್‍ಕ್ಷಾಮಾಃ ಕಲಾಂ ಪ್ರತ್ಯಹಮೈಂದವೀಂ ।
ತಸ್ಯಾಂ ಕೈವಲ್ಯಕಲ್ಪಾಯಾಮಾಸೀತ್ಪೂರ್ವಂ ಶತಕ್ರತುಃ ॥ ೨೨ ॥

ಶಚೀಸಮನ್ವಿತಃ ಶ್ರೀಮಾನ್ ಗೀರ್ವಾಣಗಣಸೇವಿತಃ ।
ಸ ಕದಾಚಿತ್ಸುಖಾಸೀನೋ ವಿಷ್ಣುದೂತೈರಧಿಶ್ರಿತಂ ॥ ೨೩ ॥

ಸಹಸ್ರನೇತ್ರಮಾಯಾನ್ತಮಪಶ್ಯತ್ಪುರುಷಂ ಪರಂ ।
ತತಸ್ತದೀಯೈಸ್ತೇಜೋಭಿರಭಿಭೂತಃ ಪುರಂದರಃ ॥ ೨೪ ॥

---

೧೯-೨೪. ಮೇರುವಿನ ಶಿಖರದಲ್ಲಿ ಆ ಪಟ್ಟಣವು ಬ್ರಹ್ಮಲೋಕದವರೆಗೂ ಪ್ರಸಿದ್ಧವಾಗಿದೆ. ಆ ಜಾಗದಲ್ಲಿ ಕಲ್ಪವೃಕ್ಷದ ಕೆಳಗೆ ಶಚೀದೇವಿಯು ಸುಖವಾಗಿ ಕುಳಿತುಕೊಂಡು ಗಂಧರ್ವ ಸ್ತ್ರೀಯರಿಂದ ಮನೋಹರವಾದ ವಾಕ್ಯದ ಗೀತೆಗಳನ್ನು ಕೇಳುತ್ತಿರುತ್ತಾಳೆ. ಅಲ್ಲಿನ ಭೂಮಿಯು ಇಂದ್ರನ ವಜ್ರಾಯುಧದಿಂದ ಆಯುಸ್ಸನ್ನು ಕಳೆದುಕೊಂಡು ದೈತ್ಯರ ರಕ್ತಪಾತದಿಂದ ಕೆಂಪನ್ನು ಹೊಂದಿರುತ್ತದೆ. ದೇವತೆಗಳು ಪೂರ್ವದಲ್ಲಿ ಕುಡಿದ ಅಮೃತದ ರುಚಿಯನ್ನು ಸ್ಮರಿಸಿಕೊಳ್ಳುತ್ತ ಹಸಿವುಗೊಂಡವರಾಗಿ ಚಂದ್ರನ ತಲೆಯ ಅಮೃತವನ್ನು ಪ್ರತಿದಿನವೂ ಕುಡಿಯುತ್ತಿರುವರು. ಕೈವಲ್ಯಕ್ಕೆ ಸಮವಾಗಿರುವ ಆ ಪಟ್ಟಣದಲ್ಲಿ ಪೂರ್ವದಲ್ಲಿ ದೇವತೆಗಳಿಂದ ಸೇವಿಸಲ್ಪಡುತ್ತ ಶಚಿಯೊಡನೆ ಇಂದ್ರನು ಸುಖಾಸೀನನಾಗಿದ್ದನು ಆ ಸಹಸ್ರಾಕ್ಷನಾದ ಇಂದ್ರನು ಸುಖದಿಂದ ಸಿಂಹಾಸನದಲ್ಲಿ ಕುಳಿತಿರಲು ವಿಷ್ಣುದೂತರಿಂದ ಕೂಡಿಕೊಂಡು ಬರುತ್ತಿರುವ ಸಾವಿರ ಕಣ್ಣುಗಳುಳ್ಳ ಒಬ್ಬ ಉತ್ತಮೋತ್ತಮನಾದ ಪುರುಷನನ್ನು ನೋಡಿದನು. ಅವನು ಬರಲು ಅವನ ತೇಜಸ್ಸಿನಿಂದ ತಿರಸ್ಕೃತನಾಗಿ ಆ ಇಂದ್ರನು ಸಿಂಹಾಸನದಿಂದ ಆ ಸಭಾಮಂಟಪದಲ್ಲಿ ಸರ್‍ರನೆ ಕೆಳಗೆ ಬಿದ್ದನು.

ಮಣಿಸಿಂಹಾಸನಾತ್ತೂರ್ಣಂ ಪತಿತಃ ಸ್ಥಾನಮಂಡಪೇ ।
ಸಿಂಹಾಸನಾತ್ಪ್ರಯಾತಸ್ಯ ತತಸ್ತಸ್ಯ ಹರೇರ್ಭಟಾಃ ॥ ೨೫ ॥

ಗೀರ್ವಾಣಗಣಸಾಮ್ರಾಜ್ಯಪಟ್ಟಬಂಧಂ ವಿತೇನಿರೇ ।
ಅಥ ತಸ್ಯಾಭಿಷಿಕ್ತಸ್ಯ ಮಹೇಂದ್ರಸ್ಯ ಪುಲೋಮಜಾ ॥ ೨೬ ॥

ವಾಮಾಂಕಮಾರುರೋಹಾಶು ದಿವ್ಯದುಂದುಭಿನಿಸ್ಸ್ವನೈಃ ।
ಅಥ ತ್ರಿದಿವಸಂಗೀತಗೀರ್ವಾಣಪ್ರಮುದಾನ್ವಿತಾಃ ॥ ೨೭ ॥

ಸುರಾ ನೀರಾಜಯಾಮಾಸುರ್ದಿವ್ಯೈಃ ರತ್ನೈಸ್ಸುರಸ್ತ್ರಿಯಃ ।
ತತೋ ವೈ ಋಷಯೋ ವೇದೈರಾಶೀರ್ವಾದಾಂಸ್ತತೋ ದದುಃ ॥ ೨೮ ॥

ರಂಭಾದ್ಯಾ ನನೃತುಸ್ತಸ್ಯ ಪುರಸ್ತಾದಪ್ಸರೋಗಣಾಃ ।
ಗಂಧರ್ವಾ ಲಲಿತಾಲಾಪಾ ಜಗುರ್ಮಂಗಳಕೌತುಕಂ ॥ ೨೯ ॥

ಏವಂ ನೂತನಮಿಂದ್ರಂ ತಂ ಜುಷ್ಟಂ ಬಹುಭಿರುತ್ಸವೈಃ ।
ವಿನಾ ಕ್ರತುಶತಂ ದೃಷ್ಟ್ವಾ ಶಕ್ರೋ ವಿಸ್ಮಯಮಾಯಯೌ ॥ ೩೦ ॥

---

೨೫-೨೮ ಆತನು ಸಿಂಹಾಸನದಿಂದ ಬಿದ್ದಮೇಲೆ ಇತ್ತ ಈ ಸಾವಿರ ಕಣ್ಣಿನವನ ಜೊತೆಯಲ್ಲಿ ಬಂದಿದ್ದ ಹರಿಯ ಭಟರು ಈ ಹೊಸ ಸಹಸ್ರಾಕ್ಷನನ್ನು ಕೂರಿಸಿ ಅವನಿಗೆ ದೇವತೆಗಳ ಸಾಮ್ರಾಜ್ಯದ ಪಟ್ಟವನ್ನು ಕಟ್ಟಿದರು. ಆ ಹೊಸ ಇಂದ್ರನನ್ನು ಅವರೆಲ್ಲರೂ ಸಿಂಹಾಸನದಲ್ಲಿ ಕೂರಿಸಿ ಅಭಿಷೇಕ ಮಾಡಿದೊಡನೆಯೇ ಶಚೀದೇವಿಯು ಅವನ ತೊಡೆಯಮೇಲೆ ದುಂದುಭಿ ವಾದ್ಯಗಳು ಮೊಳಗುತ್ತಿರಲು ಹೋಗಿ ಕೂತಳು. ಆಮೇಲೆ ಸ್ವರ್ಗದ ಗಂಧರ್ವರು ಹಾಡುತ್ತಿರಲು ದೇವತೆಗಳ ಹೆಂಗಸರು ದಿವ್ಯವಾದ ರತ್ನಗಳಿಂದ ಆರತಿಯನ್ನು ಎತ್ತಿದರು. ಆಮೇಲೆ ಋಷಿಗಳು ವೇದಗಳನ್ನು ಹೇಳುತ್ತಾ ಆಶೀರ್ವದಿಸಿದರು.

೨೯. ರಂಭೆಯೇ ಮುಂತಾದ ಅಪ್ಸರಸ್ತ್ರೀಯರು ಅವನೆದುರಿಗೆ ಕುಣಿದರು. ಗಂಧರ್ವರು ಒಳ್ಳೆಯದೂ ಆಶ್ಚರ್ಯವೂ ಮಂಗಳಕರವೂ ಆದ ಗಾನಗಳನ್ನು ಹಾಡಿದರು.

೩೦. ಅನೇಕವಾದ ಉತ್ಸವಗಳಿಂದ ಕೂಡಿದ ಹೊಸ ಇಂದ್ರನನ್ನು ಹಳೆಯ ಇಂದ್ರನು ನೋಡಿ ನೂರು ಯಾಗಗಳನ್ನು ಮಾಡದಿದ್ದರೂ ಇಂದ್ರ ಪದವಿಯನ್ನು ಹೊಂದಿದುದಕ್ಕೆ ಆಶ್ಚರ್ಯಪಡುತ್ತಿದ್ದನು.

ನ ಪ್ರಪಾ ವಿಹಿತಾ ಮಾರ್ಗೇ ತಟಾಗಾ ನ ವಿನಿರ್ಮಿತಾಃ ।
ನಾರೋಪಿತಾ ಮಹಾವೃಕ್ಷಾಃ ಪಾಂಥವಿಶ್ರಾಂತಿಕಾರಕಾಃ ॥ ೩೧ ॥

ನ ಕದಾಚಿದಹೋ ದೃಷ್ಟೋ ದೇವಸ್ತ್ರಿಪುರಭೈರವಃ ।
ನಿಧಿವಾಸಸ್ಥಿತಾ ದೇವೀ ಪೂಜಿತಾ ನ ಮದಾಲಸಾ ॥ ೩೨ ॥

ಮೇಘಂಕರಸ್ಥಿತಃ ಶಾರ್ಙ್ಗಧರೋ ನೈವ ನಿರೀಕ್ಷಿತಃ ।
ನ ಕೃತಂ ವಿರಜೇ ಸ್ನಾನಂ ನೈವ ಕಾಶೀಪುರಂ ಗತಃ ॥ ೩೩ ॥

ನ ದೇವವಾಟಿಕಾವಾಸೀ ದೃಷ್ಟೋ ನರಹರಿಸ್ಸ್ವಯಂ ।
ಏರಂಡವಿಷ್ಣುರ್ಹೇರಂಬೋ ನ ಜಾತು ಪರಿಶೀಲಿತಃ ॥ ೩೪ ॥

ರೇಣುಕಾ ನೇಕ್ಷಿತಾ ಜಾತು ಮಾತಾಪುರನಿವಾಸಿನೀ ।
ನಾಗದಂತಪುರೇ ಖ್ಯಾತೋ ನಾಗನಾಥೋ ನ ವೀಕ್ಷಿತಃ ॥ ೩೫ ॥

---

೩೧. ಇವನು ಜನಗಳು ಓಡಾಡುವ ದಾರಿಯಲ್ಲಿ ಅರವಟ್ಟಿಗೆಯನ್ನು ಹಾಕಿಸಿರಲಿಲ್ಲ. ಕೆರೆಕಟ್ಟೆ ಮುಂತಾದುವುಗಳನ್ನು ಕಟ್ಟಿಸಲಿಲ್ಲ. ದಾರಿಗರು ನೆರಳಿನಲ್ಲಿ ಕುಳಿತುಕೊಂಡು ವಿಶ್ರಾಂತಿಯನ್ನು ಹೊಂದುವಂತೆ ದೊಡ್ಡ ದೊಡ್ಡ ಮರಗಳನ್ನು ಎಬ್ಬಿಸಲಿಲ್ಲ.

೩೨. ಇವನು ತ್ರಿಪುರಭೈರವನಾದ ಈಶ್ವರನನ್ನು ಒಂದುಬಾರಿಯಾದರೂ ದರ್ಶನಮಾಡಲಿಲ್ಲ. ನಿಧಿಯಮೇಲೆ ಕುಳಿತಿರುವ ಮದಾಲಸೆಯಾದ ಪಾರ್ವತಿದೇವಿಯನ್ನು ಪೂಜಿಸಲೂ ಇಲ್ಲ.

೩೩. ಇವನು ಮೇಘಶ್ಯಾಮಲನೂ ಶಾರ್ಙ್ಗವನ್ನು ಹಿಡಿದಿರುವವನೂ ಆದ ವಿಷ್ಣುವನ್ನು ದರ್ಶನಮಾಡಿಯೇ ಇಲ್ಲ. ವಿರಜೆಯಾದ ಗಂಗೆಯಲ್ಲಿ ಸ್ನಾನ ಮಾಡಿಯೂ ಇಲ್ಲ. ಕಾಶೀಪುರಕ್ಕೆ ಹೋಗಲೇ ಇಲ್ಲ.

೩೪. ಇವನು ದೇವಸ್ಥಾನಗಳ ಹತ್ತಿರ ಇರಲೇ ಇಲ್ಲ. ದೇವವಾಟಿಕೆಯಲ್ಲಿ ನರಸಿಂಹನ ದರ್ಶನವನ್ನು ಮಾಡಲೇ ಇಲ್ಲ. ಏರಂಡ ವಿಷ್ಣು ಹೇರಂಬರನ್ನು ದರ್ಶನ ಮಾಡಿ ಪೂಜಿಸಿಯೂ ಇಲ್ಲ. ಅವರುಗಳು ಯಾರೆಂಬುದೇ ಇವನಿಗೆ ತಿಳಿಯದು.

೩೫. ಮಾದಾಪುರದಲ್ಲಿ ವಾಸಿಸುವ ರೇಣುಕೆಯನ್ನು ನೋಡಿಯೇ ಇಲ್ಲ. ನಾಗದಂತಪುರದಲ್ಲಿರುವ ನಾಗದಂತನನ್ನು ದರ್ಶನಮಾಡಿಲ್ಲ.

ರೇವಾಪುರಸ್ಥಿತೋ ದೇವೋ ಘುಸೃಣೇಶೋ ನ ವೀಕ್ಷಿತಃ ।
ನ ಭಕ್ತ್ಯಾ ಪೂಜಿತಾ ದೇವೀ ದಾನಾಪುರನಿವಾಸಿನೀ ॥ ೩೬ ॥

ನ ಭಕ್ತ್ಯಾ ತ್ರಿಪುರೇ ದೃಷ್ಟಃ ತ್ರಿಲಿಂಗಸ್ತ್ರ್ಯಂಬಕಸ್ಸ್ವಯಂ ।
ನ ಶಾರ್ದೂಲತಟಾಗಸ್ಥೋ ವೀಕ್ಷಿತಸ್ಸೋಮನಾಥಕಃ ॥ ೩೭ ॥

ಆರ್ಣಗ್ರಾಮಸ್ಥಿತೋ ದೃಷ್ಟೋ ನ ಮಹಾಸಮೃತೇಶ್ವರಃ ।
ನ ತುಂಗಭದ್ರಾತೀರಸ್ಥೋ ದೃಷ್ಟೋ ಹರಿಹರಸ್ಸ್ವಯಂ ॥ ೩೮ ॥

ಕಾವೇರೀಕರ್ಣಿಕಾತೀರೇ ಶ್ರೀರಂಗೋ ನೈವ ವೀಕ್ಷಿತಃ ।
ದೀನಾಸ್ತ್ವನಾಥಾಃ ಕ್ಲೇಶನ್ತಃ ಕಾರಾಗಾರನ್ನ ಮೋಚಿತಾಃ ॥ ೩೯ ॥

ಅನ್ನದಾನೋ ನ ದುರ್ಭಿಕ್ಷೇ ಪ್ರಾಣಿನೋ ನೈವ ಪೂಜಿತಾಃ ।
ರಾತ್ರೌ ರಾತ್ರೌ ಕೃತಾ ಕ್ವಾಪಿ ನಿರ್ಜಲೇ ನೋದಕಪ್ರಪಾ ॥ ೪೦ ॥

ನ ಗೌತಮ್ಯಾಂ ಕೃತಂ ಸ್ನಾನಂ ನ ದೃಷ್ಟೋಃ ಹರಿಣೇಶ್ವರಃ ।
ದತ್ತಂ ನ ಭೂಖಂಡಮಪಿ ಕವಯೊ ನೈವ ಪೂಜಿತಾಃ ॥ ೪೧ ॥

---

೩೬-೩೭. ರೇವಾ ಪುರದಲ್ಲಿರುವ ಘುಸೃಣೇಶನ ದರ್ಶನವನ್ನು ಮಾಡಿಲ್ಲ ದಾನಾಪುರದಲ್ಲಿ ವಾಸವಾಗಿರುವ ದೇವಿಯನ್ನು ಭಕ್ತಿಯಿಂದ ಪೂಜಿಸಿಲ್ಲ. ತ್ರಿಪುರದಲ್ಲಿರುವ ತ್ರಿಲಿಂಗೇಶ್ವರನನ್ನು ಭಕ್ತಿಯಿಂದ ಪೂಜಿಸಲಿಲ್ಲ ಶಾರ್ದೂಲ ತಟಾಕದಲ್ಲಿರುವ (ಹುಲಿಕೆರೆಯ) ಸೋಮನಾಥನನ್ನು ನೋಡಲೇ ಇಲ್ಲ.

೩೮. ಆರ್ಣ ಗ್ರಾಮದಲ್ಲಿರುವ ಅಮೃತೇಶ್ವರನನ್ನು ದರ್ಶನಮಾಡಿಲ್ಲ. ತುಂಗಭದ್ರಾ ತೀರದಲ್ಲಿರುವ ಹರಿಹರೇಶ್ವರನನ್ನು ಪೂಜಿಸಿಲ್ಲ.

೩೯. ಕಾವೇರಿಯ ಮಧ್ಯದಲ್ಲಿರುವ ಶ್ರೀರಂಗನನ್ನು ನೋಡಲಿಲ್ಲ. ದೀನರು, ಅನಾಥರು, ದುಃಖಿತರು, ಇವರನ್ನು ಪಾರುಗಾಣಿಸಲಿಲ್ಲ. ಕಾರಾಗೃಹ ದಲ್ಲಿರುವವರನ್ನು ಬಿಡಿಸಿಲ್ಲ.

೪೦. ದುರ್ಭಿಕ್ಷದಲ್ಲಿ ಪ್ರಾಣಿಗಳಿಗೆ ಅನ್ನದಾನಮಾಡಿ ತೃಪ್ತಿಹೊಂದಿಸಲಿಲ್ಲ. ನೀರಿಲ್ಲದ ಜಾಗಗಳಲ್ಲಿ ನೀರಿರುವಂತಾಗಲಿ ಅರವಟ್ಟಿಗೆಯನ್ನಾಗಲಿ ಕಲ್ಪಿಸಲಿಲ್ಲ.

೪೧. ಗೌತಮಿಯಲ್ಲಿ ಸ್ನಾನಮಾಡಲಿಲ್ಲ. ಹರಿಣೇಶ್ವರನನ್ನು ದರ್ಶನ ಮಾಡಲಿಲ್ಲ. ಭೂಮಿಯನ್ನು ಒಂದು ಸ್ವಲ್ಪವೂ ದಾನಮಾಡಲಿಲ್ಲ. ಜ್ಞಾನಿಗಳನ್ನು ಪೂಜಿಸಿಲ್ಲ.

ನ ತೀರ್ಥೇಷು ಕೃತಂ ಸತ್ರಂ ನ ಗ್ರಾಮೇಷು ಕೃತಾ ಮಖಾಃ ।
ನ ವಿಹಿತಾ ಪುಷ್ಕರಿಣ್ಯೋ ಮಾರ್ಗಮಧ್ಯೇ ಬಹೂದಕಾಃ ॥ ೪೨ ॥

ನ ಪ್ರಾಸಾದಃ ಕೃತಃ ಕ್ವಾಪಿ ಬ್ರಹ್ಮವಿಷ್ಣುಪಿನಾಕಿನಾಂ ।
ನ ಜಾತುಚಿದ್ಭಯಾಕ್ರಾನ್ತಾ ರಕ್ಷಿತಾಶ್ಶರಣಾಗತಾಃ ॥ ೪೩ ॥

ಕಥಮೇತೇನ ಪಾಪೇನ ದೈವದತ್ತಮಿಹಾರ್ಜಿತಂ ।
ಇತಿ ಚಿಂತಾಕುಲೋ ಭೂತ್ವಾ ಹರಿಂ ದ್ರಷ್ಟುಂ ಪುರಂದರಃ ॥ ೪೪ ॥

ಯಯೌ ಸರಭಸಂ ಖಿನ್ನಃ ಕ್ಷೀರಾಕೂಪಾರಗಹ್ವರಂ ।
ತತ್ರ ಪ್ರವಿಶ್ಯ ಗೋವಿಂದಂ ಕೃತನಿದ್ರಂ ಸ ವಾಸವಃ ।
ಅಕಸ್ಮಾನ್ನಿಜಸಾಮ್ರಾಜ್ಯಭ್ರಂಶದುಃಖಮುವಾಚ ಹ ॥ ೪೫ ॥

॥ ಇಂದ್ರ ಉವಾಚ ॥

ರಮಾಕಾಂತ ಭವತ್ಪ್ರೀತ್ಯೈ ಕೃತಂ ಕ್ರತುಶತಂ ಪುರಾ ।
ತೇನ ಪುಣ್ಯೇನ ಸಂಪ್ರಾಪ್ತಂ ಮಯಾ ಪೌರಂದರಂ ಪದಂ ॥ ೪೬ ॥

---

೪೨. ತೀರ್ಥಜಾಗಗಳಲ್ಲಿ ಸತ್ರಗಳನ್ನು ಮಾಡಿಸಿಲ್ಲ. ಗ್ರಾಮಗಳಲ್ಲಿ ಯಜ್ಞಗಳನ್ನು ಮಾಡಿಲ್ಲ. ಮಾರ್ಗದ ಮಧ್ಯದಲ್ಲಿ ಬಹುವಾದ ನೀರಿರುವ ಕೊಳಗಳನ್ನು ಕಟ್ಟಿಸಲಿಲ್ಲ.

೪೩-೪೪. ಬ್ರಹ್ಮ, ವಿಷ್ಣು, ಶಿವರಿಗೆ ದೇವಸ್ಥಾನಗಳನ್ನು ಎಲ್ಲಿಯೂ ಕಟ್ಟಿಸಲಿಲ್ಲ. ಭಯಗೊಂಡ ಶರಣಾಗತರನ್ನು ಒಂದುಸಾರಿಯೂ ಕಾಪಾಡಲೇ ಇಲ್ಲ. ಹೀಗಿರುವಲ್ಲಿ ಪಾಪಿಯಾದ ಇವನು ನಾನು ಕಷ್ಟದಿಂದ ಸಂಪಾದಿಸಿರುವ ಈ ಆಸನವನ್ನು ಹೇಗೆ ಹೊಂದಿದನು ? ಎಂದು ಯೋಚನೆಗೊಳಗಾಗಿ ಇಂದ್ರನು ಹರಿಯನ್ನು ನೋಡಲು ಹೋದನು.

೪೫. ಹೀಗೆ ಯೋಚಿಸುತ್ತ ಇಂದ್ರನು ಕ್ಷೀರಸಮುದ್ರದ ಮಧ್ಯಕ್ಕೆ ಹೋಗಿ ಅಲ್ಲಿ ಆಗತಾನೆ ನಿದ್ದೆಯಿಂದದ್ದಿರುವ ಆ ಗೋವಿಂದನನ್ನು ನೋಡಿ ಆವನಿಗೆ ತಾನು ಸಾಮ್ರಾಜ್ಯದಿಂದ ಚ್ಯುತನಾಗಿರುವುದನ್ನು ಅರಿಕೆ ಮಾಡಿಕೊಂಡನು.

೪೬. ಇಂದ್ರನು ಹೇಳಿದನು—ಎಲೈ ರಮಾಕಾಂತನೆ! ನಿನ್ನ ಪ್ರೀತಿಗೋಸ್ಕರ ನೂರು ಯಾಗಗಳನ್ನು ಮಾಡಿದೆನು. ಆ ಪುಣ್ಯದಿಂದ ನನಗೆ ಈ ಇಂದ್ರ ಪದವಿಯು ಸಿಕ್ಕಿತು.

ಇದಾನೀಂ ನೂತನಃ ಕೋಪಿ ಜಾತೋ ದಿವಿ ಪುರಂದರಃ ।
ನ ತೇನ ಧರ್ಮೋ ವಿಹಿತೋ ನ ತೇನ ಕ್ರತವಃ ಕೃತಾಃ ।
ಮಮ ಸಿಂಹಾಸನಂ ದಿವ್ಯಂ ಕಥಮಾಕ್ರಾನ್ತಮಚ್ಯುತ ॥ ೪೭ ॥

॥ ಶ್ರೀ ಮಹಾದೇವ ಉವಾಚ ॥

ಇತ್ಯೇವಂ ವದತಸ್ತಸ್ಯ ಶ್ರುತ್ವಾ ವಾಚಂ ರಮಾಪತಿಃ ।
ಕಿಂಚಿದುನ್ಮೀಲಿತಾಕ್ಷೋಽಸಾವುವಾಚ ಮಧುರಂ ವಚಃ ॥ ೪೮ ॥

॥ ಶ್ರೀ ಭಗವಾನುವಾಚ ॥

ಕಿಂ ದಾನೈರಲ್ಪಫಲದೈಃ ಕಿಂ ತಪೋಭಿಃ ಕಿಮಧ್ವರೈಃ ।
ವರ್ತಮಾನಃ ಕ್ಷಿತಿತಲೇ ಸ ಮಾಂ ಪ್ರೀಣಿತವಾನ್ ಪುರಾ ॥ ೪೯ ॥

॥ ಇಂದ್ರ ಉವಾಚ ॥

ಭಗವನ್ ಕರ್ಮಣಾ ಕೇನ ಸ ತ್ವಾಂ ಪ್ರೀಣಿತವಾನ್ ದ್ವಿಜಃ ।
ಯತ್ಪ್ರೀತ್ಯಾ ಚ ಭವಾನ್ಪ್ರಾದಾತ್ತಸ್ಮೈ ಪೌರಂದರಂ ಪದಂ ॥ ೫೦ ॥

---

೪೭. ಈಗ ಮತ್ತೊಬ್ಬ ಇಂದ್ರನು ಸ್ವರ್ಗಕ್ಕೆ ಬಂದಿದ್ದಾನೆ. ಅವನು ಯಾವ ಧರ್ಮವನ್ನೂ ಮಾಡಿಲ್ಲ. ಯಾವ ಯಾಗವನ್ನೂ ಮಾಡಿಲ್ಲ. ಆದರೂ ನನ್ನ ಸಿಂಹಾಸನವನ್ನು ಆತನು ಆಕ್ರಮಿಸಿಕೊಳ್ಳಲು ಕಾರಣವೇನು ? ಎಲೈ ಅಚ್ಯುತನೆ ! ಇದನ್ನು ದಯವಿಟ್ಟು ತಿಳಿಸು.

೪೮. ಮಹಾದೇವನು ಹೇಳಿದನು-ಇಂದ್ರನು ಹೀಗೆ ಹೇಳಿದುವನ್ನೆಲ್ಲಾ ಕೇಳಿ ರಮಾಪತಿಯಾದ ವಿಷ್ಣುವು ಸ್ವಲ್ಪ ಯೋಚಿಸಿ ನಕ್ಕು ಒಳ್ಳೆಯ ಮಾತಿನಿಂದ ಇಂತೆಂದನು.

೪೯. ಶ್ರೀ ಭಗವಂತನು ಹೇಳಿದನು-ಅಲ್ಪವಾದ ಫಲಗಳನ್ನು ಕೊಡುವ ದಾನಗಳಿಂದಾಗಲಿ, ತಪಸ್ಸುಗಳಿಂದಾಗಲಿ, ಯಾಗಗಳಿಂದಾಗಲಿ, ಪ್ರಯೋಜನವೇನಿರುವುದು ? ಈತನು ಭೂಲೋಕದಲ್ಲಿದ್ದಾಗ ಪೂರ್ವದಲ್ಲಿ ನನ್ನನ್ನು ಸಂತೋಷಪಡಿಸಿದನು.

೫೦. ಇಂದ್ರನು ಹೇಳಿದನು-ಎಲೈ ಭಗವಂತನೆ! ಆ ಬ್ರಾಹ್ಮಣನು ಯಾವ ಕೆಲಸದಿಂದ ನಿನ್ನನ್ನು ಸಂತೋಷಪಡಿಸಿದನು ? ಯಾವುದಕ್ಕೆ ಸಂತೋಷಪಟ್ಟು ಅವನಿಗೆ ನೀನು ಆ ಇಂದ್ರ ಪದವಿಯನ್ನು ಕೊಟ್ಟೆ ?

॥ ಶ್ರೀ ಭಗವಾನುವಾಚ ॥

ಜಪತ್ಯಷ್ಟಾದಶಾಧ್ಯಾಯೇ ಗೀತಾನಾಂ ಶ್ಲೋಕಪಂಚಕಂ ।
ತೇನ ಪುಣ್ಯೇನ ಸಂಪ್ರಾಪ್ತಂ ತವ ಸಾಮ್ರಾಜ್ಯಮುತ್ತಮಂ
ಸರ್ವಪುಣ್ಯಶಿರೋರತ್ನಭೂತೇನ ತ್ವಂ ಸ್ಥಿರೋ ಭವ　　॥ ೫೧ ॥

॥ ಶ್ರೀ ಶಿವ ಉವಾಚ ॥

ಇತಿ ವಿಷ್ಣೋರ್ವಚಶ್ಶ್ರುತ್ವಾ ಜ್ಞಾತ್ವೋಪಾಯಂ ಪುರಂದರಃ ।
ವಿಪ್ರವೇಷಧರೋ ಭೂತ್ವಾ ಗತೋ ಗೋದಾವರೀತಟಂ　　॥ ೫೨ ॥

ತತ್ರಾಪಶ್ಯತ್ಪುರಂ ಪುಣ್ಯಂ ಕಾಲಿಕಾಗ್ರಾಮಮುತ್ತಮಂ ।
ಯತ್ರ ಕಾಲೇಶ್ವರೋ ದೇವೋ ವರ್ತತೇ ಕಾಲಮರ್ದನಃ　　॥ ೫೩ ॥

ತತ್ರ ಗೋದಾವರೀತೀರೇ ಸ್ಥಿತಂ ಪರಮಧಾರ್ಮಿಕಂ ।
ಅಪಶ್ಯತ್ಕರುಣಾವಂತಂ ಬ್ರಾಹ್ಮಣಂ ವೇದಪಾರಗಂ　　॥ ೫೪ ॥

---

೫೧. ಶ್ರೀ ಭಗವಂತನು ಹೇಳಿದನು—ಎಲೈ ಇಂದ್ರನೇ! ಅವನು ಗೀತೆಯ ಹದಿನೆಂಟನೆಯ ಅಧ್ಯಾಯದಲ್ಲಿ ಐದು ಶ್ಲೋಕಗಳನ್ನು ಜಪಿಸುತ್ತಿರುವನು. ಆ ಪುಣ್ಯದಿಂದ ಅವನು ನಿನ್ನ ಸಾಮ್ರಾಜ್ಯವನ್ನು ಹೊಂದಿದನು. ಅವನು ಎಲ್ಲಾ ಪುಣ್ಯವಂತರಿಗಿಂತಲೂ ಹೆಚ್ಚು ಪುಣ್ಯವನ್ನು ಮಾಡಿರುವನು. ನೀನು ಸುಮ್ಮನಿರು.

೫೨. ಶ್ರೀ ಶಿವನು ಹೇಳಿದನು-ಇಂದ್ರನು ವಿಷ್ಣುವು ಹೇಳಿದುದನ್ನು ಕೇಳಿ ಆದರ ಉಪಾಯವನ್ನು ತಿಳಿದು ಬ್ರಾಹ್ಮಣನ ವೇಷವನ್ನು ಹಾಕಿಕೊಂಡು ಗೋದಾವರಿ ನದಿಯ ದಡಕ್ಕೆ ಹೋದನು.

೫೩. ಅಲ್ಲಿ ಪುಣ್ಯರೂಪವೂ ಉತ್ತಮವೂ ಆದ ಕಾಳಿಪುರವೆಂಬ ಊರೊಂದಿದ್ದಿತು. ಅಲ್ಲಿ ಯಮನನ್ನೂ ನಾಶಮಾಡುವ ಕಾಲೇಶ್ವರನೆಂಬ ದೇವರಿರುವನು.

೫೪. ಅದೇ ಗೋದಾವರಿಯ ತೀರದಲ್ಲಿ ಬಹಳ ಧರ್ಮಿಷ್ಠನಾದ, ಕರುಣಾವಂತನಾದ, ವೇದಗಳನ್ನು ಚೆನ್ನಾಗಿ ಬಲ್ಲ ಒಬ್ಬ ಬ್ರಾಹ್ಮಣನನ್ನು ನೋಡಿದನು.

ನಿತ್ಯಮಷ್ಟಾದಶಾಧ್ಯಾಯಂ ಜಪಂತಂ ದಾಂತಚೇತಸಂ ।
ತತಸ್ತಚ್ಚರಣದ್ವಂದ್ವೇ ಲುಠಿತ್ವಾ ಪರಯಾ ಮುದಾ ॥ ೫೫ ॥

ಸ ತಮಷ್ಟಾದಶಾಧ್ಯಾಯಮುಪಶತ್ರೇನ ಶಿಕ್ಷಿತಂ ।
ಅಥ ಪುಣ್ಯೇನ ತೇನಾಸೌ ವಿಷ್ಣೋಸ್ಸಾಯುಜ್ಯಮಾಯಯೌ ॥ ೫೬ ॥

ಹಿತ್ವಾ ಪುರಂದರಾದೀನಾಂ ದೇವಾನಾಂ ಪದಮಲ್ಪಕಂ ।
ಜ್ಞಾತ್ವಾತೀವ ಮುದಾ ಯುಕ್ತೋ ವೈಕುಂಠಮಗಮತ್ಪರಂ ॥ ೫೭ ॥

ಅತ ಏವಂ ಪರಂ ತತ್ವಂ ಮುನೀನಾಮಿದಮುತ್ತಮಂ ।
ದಿವ್ಯಮಷ್ಟಾದಶಾಧ್ಯಾಯಮಾಹಾತ್ಮ್ಯಂ ಕಥಿತಂ ಮಯಾ ॥ ೫೮ ॥

ಯಸ್ಯ ಶ್ರವಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ಇತ್ಯೇವಂ ಗೀತಮಾಹಾತ್ಮ್ಯಂ ಕಥಿತಂ ಪಾಪನಾಶನಂ ॥ ೫೯ ॥

---

೫೫. ಅಲ್ಲಿ ಆ ಬ್ರಾಹ್ಮಣನು ದಿನವೂ ಹದಿನೆಂಟನೆಯ ಅಧ್ಯಾಯವನ್ನು ಜಪಿಸುತ್ತಿದ್ದನು. ಜಿತೇಂದ್ರಿಯನು. ಅವನನ್ನು ನೋಡಿ ಅವನ ಪಾದಕಮಲಗಳಿಗೆ ಈ ಇಂದ್ರನು ಬಹುವಾದ ಸಂತೋಷದಿಂದ ನಮಸ್ಕರಿಸಿದನು.

೫೬. ಆತನು ಆ ಭ್ರಷ್ಟ ಇಂದ್ರನಿಗೆ ಹದಿನೆಂಟನೆಯ ಅಧ್ಯಾಯವನ್ನು ಕಲಿಸಿಕೊಟ್ಟನು. ಈತನೂ ಅದನ್ನು ಜಪಿಸಿ ಆ ಪುಣ್ಯದಿಂದ ವಿಷ್ಣುವಿನ ಸಾಯುಜ್ಯವನ್ನು ಹೊಂದಿದನು.

೫೭. ಈ ಪುರಂದರನೇ ಮುಂತಾದ ದೇವತೆಗಳ ಸ್ಥಾನವು ತುಚ್ಛವಾದುದೆಂದು ತಿಳಿದು ಬಹು ಸಂತೋಷದಿಂದ ಉತ್ತಮೋತ್ತಮವಾದ ವೈಕುಂಠವನ್ನು ಆ ಇಂದ್ರನು ಹೊಂದಿದನು.

೫೮. ಆದ್ದರಿಂದಲೇ ಈ ಅಧ್ಯಾಯವು ಉತ್ತಮವಾದ ತತ್ವಕ್ಕೆ ಸೇರಿದುದು. ಮುನಿಗಳಿಗೆ ಇದು ಉತ್ತಮವಾದುದು. ಈ ದಿವ್ಯವಾದ ಹದಿನೆಂಟನೆಯ ಅಧ್ಯಾಯದ ಮಹಿಮೆಯನ್ನು ನಿನಗೆ ಹೇಳಿದ್ದೇನೆ.

೫೯. ಈ ಅಧ್ಯಾಯವನ್ನು ಕೇಳುವುದರಿಂದ ಎಲ್ಲಾ ಪಾಪಗಳೂ ಹೋಗುತ್ತವೆ. ಈ ರೀತಿಯಾಗಿ ಗೀತೆಯ ಮಹಿಮೆಯನ್ನು ಹೇಳಿದ್ದೇನೆ. ಅದು ಪಾಪನಾಶಕವಾದುದು.

ಪುಣ್ಯಂ ಪವಿತ್ರಮಾಯುಷ್ಯಂ ಸ್ವರ್ಗ್ಯಂ ಸ್ವಸ್ತ್ಯಯನಂ ಮದತ್ ।
ಯಶ್ಶೃಣೋತಿ ಮಹಾಭಾಗೇ ಶ್ರದ್ಧಯಾ ಸಂಯುತಃ ಪುಮಾ
ಸರ್ವಯಜ್ಞಫಲಂ ಪ್ರಾಪ್ಯ ವಿಷ್ಣೋಸ್ಸಾಯುಜ್ಯಮಾಪ್ನುಯಾತ್ ॥ ೬೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಗೀತಾ ಮಾಹಾತ್ಮ್ಯೇ ಅಷ್ಟಾದಶಾಧ್ಯಾಯ ಮಾಹಾತ್ಮ್ಯಂ ನಾಮ ಅಷ್ಟಾಶೀತ್ಯಧಿಕಶತತಮೋಽಧ್ಯಾಯಸ್ಸಮಾಪ್ತಃ

॥ ಸಮಾಪ್ತಮಿದಂ ಗೀತಾಮಾಹಾತ್ಮ್ಯಂ ॥

---

೬೦. ಪುಣ್ಯಕರವಾದ, ಪವಿತ್ರವಾದ, ಆಯುಷ್ಕರವಾದ ಸ್ವರ್ಗವನ್ನು ಕೊಡುವ, ಮಂಗಳಕರವಾದ, ಈ ಅಧ್ಯಾಯವನ್ನು ಶ್ರದ್ಧೆಯಿಂದ ಯಾವನು ಕೇಳುತ್ತಾನೆಯೋ ಅವನಿಗೆ ಎಲ್ಲಾ ಯಾಗಗಳ ಫಲವೂ ಬರುತ್ತದೆ. ಮತ್ತು ಅದರಿಂದ ವಿಷ್ಣುವಿನ ಸಾಯುಜ್ಯವನ್ನೂ ಹೊಂದುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಗೀತಾ ಮಹಿಮೆಯಲ್ಲಿ ಹದಿನೆಂಟನೆಯ ಅಧ್ಯಾಯದ ಮಹಿಮೆ ಎಂಬ ನೂರ ಎಂಭತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಗೀತೆಯ ಮಹಿಮೆಯು ಮುಗಿದುದು ॥

